# ಹೆಚ್.ಕೆ. ವೀರಣ್ಣಗೌಡರ ಬದುಕು ಮತ್ತು ಸಾಹಿತ್ಯ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

**ಮಹಾಪ್ರಬಂಧ**


ಸಂಶೋಧಕರು

**ಟಿ. ಪದ್ಮ**

ಮಾರ್ಗದರ್ಶಕರು

**ಡಾ. ಕರೀಗೌಡ ಬೀಚನಹಳ್ಳಿ**

ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ





ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ

# ಹೆಚ್.ಕೆ. ವೀರಣ್ಣಗೌಡರ ಬದುಕು ಮತ್ತು ಸಾಹಿತ್ಯ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು
**ಟಿ. ಪದ್ಮ**

ಮಾರ್ಗದರ್ಶಕರು
**ಡಾ. ಕರೀಗೌಡ ಬೀಚನಹಳ್ಳಿ**
ಪ್ರಾಧ್ಯಾಪಕರು, ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ



**ಭಾಷಾಂತರ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ

## ದೃಢೀಕರಣ ಪತ್ರ

ಕುಮಾರಿ ಟಿ.ಪದ್ಮ ಇವರು 'ಹೆಚ್.ಕೆ.ವೀರಣ್ಣಗೌಡರ ಬದುಕು ಮತ್ತು ಸಾಹಿತ್ಯ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಡಾ. ಕರೀಗೌಡ ಬೀಚನಹಳ್ಳಿ
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 24.8.07
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

'ಹೆಚ್.ಕೆ. ವೀರಣ್ಣಗೌಡರ ಬದುಕು ಮತ್ತು ಸಾಹಿತ್ಯ' ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಡಾ. ಕರೀಗೌಡ ಬೀಚನಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಭಾಷಾಂತರ ಅಧ್ಯಯನ ವಿಭಾಗದ ಮೂಲಕ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನದೇ ಪರಿಶ್ರಮದ ಫಲವಾಗಿದ್ದು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Padma T.

ಟಿ. ಪದ್ಮ
ಸಂಶೋಧನಾ ವಿದ್ಯಾರ್ಥಿನಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 30/8/04
ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

ಕೆಳವರ್ಗದಲ್ಲಿ ಹುಟ್ಟಿದ ಹಲವು ಮಹಾನೀಯರು ತಮ್ಮ ನಿಸ್ವಾರ್ಥ ಸೇವೆಗೆ ತಕ್ಕ ಮಾನ್ಯತೆಯನ್ನು ಪಡೆಯದೇ ಇರುವುದರ ಬಗ್ಗೆ ಹೈಸ್ಕೂಲ್ ವಿದ್ಯಾರ್ಥಿ ದೆಸೆಯಿಂದಲೂ ವಿಷಾದ ಕಾಡುತ್ತಿತ್ತು. ನಂತರ ಸ್ನಾತಕೋತ್ತರ ಅಧ್ಯಯನದಲ್ಲಿ ರಾಜ್ಯಶಾಸ್ತ್ರವನ್ನು ಆರಿಸಿಕೊಂಡಾಗ ಅಲ್ಲಿ ಕರ್ನಾಟಕ ರಾಜಕಾರಣದಲ್ಲಿ ಶ್ರದ್ಧೆಯಿಂದ ತಮ್ಮನ್ನು ತೊಡಗಿಸಿಕೊಂಡು ಜನಮುಖಿಗಳಾಗಿ ದುಡಿದ ಹಲವು ಮಂದಿ ರಾಜಕಾರಣಿಗಳು ನನ್ನ ಗಮನ ಸೆಳೆದರು. ಇವರಲ್ಲಿ ಸಕ್ರಿಯವಾಗಿ ದುಡಿದರೂ ಅಷ್ಟಾಗಿ ಪ್ರಚಾರಕ್ಕೆ ಬರದ ಶ್ರೀಯುತ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಆಸಕ್ತಿ ಮೂಡಿತು. ರೈತ ಚಳುವಳಿಗಳ ಇತಿಹಾಸದಲ್ಲಿ ಇವರ ಬಗೆಗೆ ಕಿವಿಗೆ ಬೀಳುತ್ತಿದ್ದ ಅನೇಕ ಸಂಗತಿಗಳು ಅವರನ್ನು ಇನ್ನಷ್ಟು ಅರಿಯಬೇಕೆಂಬ ಆಸೆಯನ್ನು ಮೂಡಿಸಿ ಆದಷ್ಟು ಸಮಗ್ರವಾಗಿ ಅಧ್ಯಯನ ಮಾಡಬೇಕೆಂಬ ದೃಷ್ಟಿಯಿಂದ ನನ್ನನ್ನು ಈ ನಿಟ್ಟಿನಲ್ಲಿ ತೊಡಗಿಸಿಕೊಂಡೆನು. ಈ ಸಂಶೋಧನೆಗೆ ದಾರಿ ತೋರಿದವರು ನನ್ನ ನೆಚ್ಚಿನ ಗುರುಗಳಾದ ದಿ.ಸಿ.ಜಿ.ಕೃಷ್ಣಸ್ವಾಮಿಯವರು. ಇವರು ನನ್ನ ಸಂಶೋಧನ ಅಧ್ಯಯನಕ್ಕೆ ನನ್ನ ಅನಾರೋಗ್ಯದ ಕಾರಣ ಕೆಲ ತೊಂದರೆಗಳುಂಟಾದಾಗ ನನ್ನ ಬೆನ್ನೆಲುಬಾಗಿ ನಿಂತವರು. ಇವರೊಂದಿಗೆ ನನ್ನ ಅಧ್ಯಯನಕ್ಕೆ ಪ್ರೋತ್ಸಾಹಿಸಿದವರು ನನ್ನ ಎಂ.ಎ.ತರಗತಿಯ ಗುರುಗಳಾದ ಡಾ.ಎಂ.ಜಿ.ಕೃಷ್ಣನ್‌ರವರು ಇವರಿಗೆ ನನ್ನ ಕೃತಜ್ಞತೆಗಳು.

ಇದಕ್ಕೊಂದು ಅಧಿಕೃತತೆ ಸಾಧ್ಯವಾಗಲು, ತನ್ಮೂಲಕ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲು ಅನುವು ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಉಪಕುಲಪತಿಗಳು (ನನ್ನ ನೊಂದಣಿಯ ವರ್ಷದಿಂದ ಇದುವರೆಗಿನ) ಪ್ರೊ.ಲಕ್ಕಪ್ಪಗೌಡರು, ಡಾ.ವಿವೇಕ ರೈ, ಮತ್ತು ಶ್ರಿಕೆ.ವಿ. ನಾರಾಯಣರವರಿಗೂ, ಆಡಳಿತ ವರ್ಗಕ್ಕೂ ನನ್ನ ಕೃತಜ್ಞತೆಗಳು.

ಸಿ.ಜಿ.ಕೆ.ಯವರ ಮುಖಾಂತರ ಪರಿಚಿತರಾದ ಪ್ರೊ.ಕರೀಗೌಡ ಬೀಚನಹಳ್ಳಿಯವರು ಅತಂತ್ರ ಸ್ಥಿತಿಯಲ್ಲಿದ್ದ ನನಗೆ ಮಾರ್ಗದರ್ಶಕರಾಗಿರಲು ಒಪ್ಪಿಗೆ ನೀಡಿ ಸಂಶೋಧಿತ ಸಂಗತಿಯ ಬಗ್ಗೆ ನನಗಿದ್ದ ಎಲ್ಲಾ ಗೊಂದಲಗಳನ್ನು ಪರಿಹರಿಸಿ ಸಾರ್ಥಕ ರೀತಿಯಲ್ಲಿ ದಾರಿ ತೋರಿ ಸಕಾಲದಲ್ಲಿ ಸಹಾಯ ಸಹಕಾರ ನೀಡಿ ನೆರವಾದರು. ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಹಾಗೆಯೇ ಭಾಷಾಂತರ ಅಧ್ಯಯನ ವಿಭಾಗದ ಅಧ್ಯಾಪಕರುಗಳಾದ ಡಾ.ತಾರಕೇಶ್ವರ್, ಡಾ.ಮೋಹನ್ ಕುಂಟಾರ್, ಡಾ.ವಿಠಲ್ ರಾವ್ ಗಾಯ್ಕ್‌ವಾಡ್, ಡಾ.ಉಷಾರವರಿಗೆ ಹಾಗು ಬುಡಕಟ್ಟು ವಿಭಾಗದ ಹೀ.ಚಿ.ಬೋರಲಿಂಗಯ್ಯನವರಿಗೆ ನನ್ನ ಕೃತಜ್ಞತೆಗಳು.

ಸಂಶೋಧನೆಯ ಅಂತಿಮ ಘಟ್ಟದಲ್ಲಿ ನನ್ನ ಮೇಲಿನ ಪ್ರೀತಿ ವಿಶ್ವಾಸದಿಂದ ಹೆಚ್ಚು ಆಸಕ್ತಿ ವಹಿಸಿ ನನ್ನ ಬರವಣಿಗೆಯನ್ನು ತಿದ್ದಿಕೊಟ್ಟು ನನ್ನನ್ನು ಈ ಅಂತಿಮ ಘಟ್ಟಕ್ಕೆ ಮುಟ್ಟಿಸಿದ ಪ್ರೀತಿಯ ಡಾ.ಸಿದ್ದಗಂಗಮ್ಮ ಮೇಡಂರವರಿಗೆ ನಾನು ಅಭಾರಿಯಾಗಿದ್ದೇನೆ. ಹಾಗೆಯೇ ಸಂಶೋಧನಾ ಅಧ್ಯಯನದ ಹಾದಿಯಲ್ಲಿ ಜೊತೆಯಾಗಿ ನನ್ನ ಒಡಹುಟ್ಟಿದವರಿಗಿಂತಲೂ ಹೆಚ್ಚು ಪ್ರೀತಿಯಿಂದ ಕಂಡ ನನ್ನೆಲ್ಲಾ ಕೆಲಸಗಳಿಗೆ ಬೆನ್ನೆಲುಬಾಗಿ ನಿಂತ ಶ್ರೀಮತಿ ಅನ್ನಪೂರ್ಣಮ್ಮ ದಂಪತಿಗಳನ್ನು ಸ್ಮರಿಸುತ್ತೇನೆ.

ಕ್ಷೇತ್ರಕಾರ್ಯದಲ್ಲಿ ಜೊತೆ ನೀಡಿ ಸಹಕರಿಸಿದ ನನ್ನ ಸ್ನೇಹಿತರಾದ ಪ್ರವೀಣ್ ಮತ್ತು ಕೆ.ಎನ್.ಭಾಸ್ಕರ್, ಕೀರ್ತಿ ಇವರನ್ನು ಸ್ಮರಿಸುತ್ತೇನೆ. ಸಂಶೋಧನಾ ಕಾರ್ಯಕ್ಕೆ ಸಹಕರಿಸಿದ ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕರು ಡಾ.ಡಿ.ಜೀವನ್ ಕುಮಾರ್ ರವರಿಗೆ ಮತ್ತು ನನ್ನ ಸಹೋದ್ಯೋಗಿ ಎನ್.ಚಿಕ್ಕಣ್ಣನವರಿಗೆ ನನ್ನ ಕೃತಜ್ಞತೆಗಳು.

ಅಕ್ಷರ ಲೋಕಕ್ಕೆ ನಾನು ಅಡಿಯಿರಿಸುವಂತೆ ಮಾಡಿ ನನ್ನ ಅಧ್ಯಯನಕ್ಕೆ ಪ್ರೋತ್ಸಾಹದ ನೆರಳು ನೀಡಿದ ನನ್ನ ತಂದೆ ತಿಮ್ಮಯ್ಯ ಮತ್ತು ತಾಯಿ ಗಂಗಮ್ಮ ಹಾಗು ಸದಾ ನನ್ನ ಶ್ರೇಯಸ್ಸನ್ನು ಬಯಸುವ ಸಹೋದರಿಯರಾದ ಭಾಗ್ಯ ಮತ್ತು ಅನುಸೂಯ, ತಂಗಿ ಸರಸ್ವತಿ ಇವರ ಸಹಕಾರವನ್ನು ನೆನೆಯಲೇ ಬೇಕು. ನನ್ನ ಕೆಲಸಕ್ಕೆ ತೊಂದರೆಕೊಡದೆ ಸಹಕರಿಸಿದ ನಮ್ಮ ಮನೆಯ ಪುಟಾಣಿಗಳಾದ ವರ್ಷಿಣಿ ಮತ್ತು ಅಪೂರ್ವ ಇವರಿಗೆ ನನ್ನ ನೆನಕೆಗಳು.

ನನ್ನ ಈ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನೆರವು ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

# ಪರಿವಿಡಿ

# ಅಧ್ಯಾಯ -೧

## ಅಧ್ಯಯನದ ಉದ್ದೇಶ, ಮಹತ್ವ ಮತ್ತು ವಿಧಾನ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವಿಧಾನ

## ೧.೧ ಪ್ರಸ್ತಾವನೆ :

ವ್ಯಕ್ತಿಯು ಕುಟುಂಬದ ಸದಸ್ಯ. ಕುಟುಂಬವು ಸಮಾಜದ ಪ್ರಾಥಮಿಕ ಘಟಕ ಅಥವಾ ಒಂದು ಭಾಗ. ಹೀಗಾಗಿ ವ್ಯಕ್ತಿಯು ಒಟ್ಟಾರೆ ಸಮಾಜದ ಪ್ರತಿಬಿಂಬವಾಗಿ ರೂಪುಗೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ದೇಶದ ಚರಿತ್ರೆ ಸಮಗ್ರ ಜನಜೀವನದ ಪ್ರತಿಬಿಂಬವಾದರೆ ವ್ಯಕ್ತಿ ಚರಿತ್ರೆಯು ಜನಜೀವನದ ಮೂಲಾಂಕುರ ಪ್ರಾಯಗಳಾದ ಮಹಾ ಪುರುಷರ ಪ್ರತಿಬಿಂಬವಾಗುತ್ತದೆ. ಸಮಾಜದಲ್ಲಿ ಆಗಿಂದಾಗ್ಗೆ ರೂಪುಗೊಳ್ಳುವ ಹೊಸ ಅಭಿಪ್ರಾಯಗಳು, ಸಿದ್ಧಾಂತಗಳು, ಹೊಸ ಸಂಸ್ಥೆಗಳು, ಹೊಸ ಕಾರ್ಯ ಚಟುವಟಿಕೆಗಳಿಗೆಲ್ಲಾ ಪ್ರಥಮ ಕಾರಣರಾದವರು ಜನ ಜೀವನದ ಆ ವ್ಯವಸ್ಥೆಯ ಮೂಲ ಪುರುಷರು. ಅವರ ಬೋಧನೆಯಂತೆ, ಅವರು ಮಾಡಿದ ವಾದ ಪ್ರಚಾರದಂತೆ, ಅವರು ಅನುಸರಿಸಿದ ಸಂಪ್ರದಾಯದಂತೆ, ಅವರು ನಡೆದ ನಡವಳಿಕೆಯಂತೆ ಜನಸಾಮಾನ್ಯ ನಡೆಯುತ್ತದೆ. ಆದಕಾರಣ ವ್ಯಕ್ತಿ ಚರಿತ್ರೆಯ ಸಂಶೋಧನೆ ಸಮಾಜ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ. ಚರಿತ್ರೆಯನ್ನು ಒಳಹೊಕ್ಕು ವಿಮರ್ಶಿಸಿದರೆ ಹಿಂದೆ ಮಾಡಿದ ತಪ್ಪೇನು ಎಂದು ನಮಗೆ ಎಚ್ಚರಿಕೆ ದೊರೆಯುತ್ತದೆ. ಈಗ ನಾವು ಅಂಥ ತಪ್ಪನ್ನು ಮಾಡದಿರಲು ಯಾವ ಎಚ್ಚರಿಕೆ ಅವಶ್ಯ, ನಾವು ಯಾವ ಹೊಸ ನೀತಿಯನ್ನು ಅವಲಂಬಿಸಿದರೆ ಹಳೆಯ ಅಪಾಯ ನಮಗೆ ತಪ್ಪುತ್ತದೆ, ಈ ವಿಧವಾದ ಜಾಗ್ರತೆ ಮತ್ತು ಬೋಧನೆ, ಮಾರ್ಗದರ್ಶನ ಚರಿತ್ರೆಯ ವಿಮರ್ಶೆಯಿಂದ ನಮಗೆ ಆಗಬಹುದಾದ ಅನುಕೂಲ. ಈ ಹಿನ್ನೆಲೆಯಲ್ಲಿ ವ್ಯಕ್ತಿಗಳ ಬಗೆಗೆ ಸಂಶೋಧನೆಯು ಅಗತ್ಯವಾದುದಾಗಿದೆ.

ಯಾವುದೇ ವಿಷಯ, ವಸ್ತು, ವ್ಯಕ್ತಿಯಾಗಲಿ ಅಧ್ಯಯನ ಯೋಗ್ಯವಾಗುವಂತಹ ವಿಶಿಷ್ಟಗುಣಗಳನ್ನು ಹೊಂದಿರಬೇಕು. ಅಂದರೆ ಸಮಾಜ ಜೀವನದ ಮೇಲೆ ಬೆಳಕು ಚೆಲ್ಲುವ ಅಂಶಗಳನ್ನು ಒಳಗೊಂಡಿರಬೆಕು. ಯಾರು ತಮ್ಮ ಆಲೋಚನೆ ಅಭಿಪ್ರಾಯಗಳ ಪ್ರಭಾವದಿಂದಲಾಗಲಿ ಅಥವಾ ತಮ್ಮ ಸೌಶೀಲ್ಯ–ಸೌಜನ್ಯಗಳ ಪ್ರಭಾವದಿಂದಲಾಗಲಿ, ತಮ್ಮ ಕಾರ್ಯಗಳಿಂದಲಾಗಲಿ ಜನತೆಯ ಮೇಲೆ ಅಷ್ಟಿಷ್ಟು ಪರಿಣಾಮವನ್ನು ಉಂಟುಮಾಡಿರುತ್ತಾರೋ ಅಂಥವರು ಸಂಶೋಧನೆಗೆ ಯೋಗ್ಯರಾಗಿ ಕಂಡು ಬರುತ್ತಾರೆ.

ಸಮಾಜದಲ್ಲಿ ಯಾವ ವ್ಯಕ್ತಿಯಾಗಲಿ ಸಮಾಜ ಸುಧಾರಕನಾಗಿ, ಜನಪ್ರತಿನಿಧಿಯಾಗಿ ಅಥವಾ ಆಸಕ್ತಿಯುತ ಕ್ಷೇತ್ರದಲ್ಲಿನ ಕಾರ್ಯದ ಮೂಲಕ ತನ್ನ ಪ್ರತಿಭೆಯನ್ನು ಪಡಿಮೂಡಿಸುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಆದರ್ಶ ಅಧ್ಯಾಪಕರಾಗಿ, ಪತ್ರಿಕಾ ಸಂಪಾದಕರಾಗಿ, ಸಾಹಿತಿಯಾಗಿ, ಸಮಾಜ ಸುಧಾರಕನಾಗಿ, ರೈತನಾಯಕನಾಗಿ, ರಾಜಕೀಯ ಧುರೀಣರಾಗಿ ಕೆಲಸ ಮಾಡಿದಂತಹ ಪ್ರಜ್ಞಾಪೂರ್ಣ ವ್ಯಕ್ತಿ.

ನಮ್ಮ ದೇಶದ ಇತಿಹಾಸ ಅನೇಕ ರೋಮಾಂಚಕಾರಿ ಸನ್ನಿವೇಶಗಳು ಹಾಗೂ ಘಟನೆಗಳಿಂದ ಕೂಡಿದುದಾಗಿದೆ. ಹಲವಾರು ಮಹಾನ್ ವ್ಯಕ್ತಿತ್ವಗಳು ಹುಟ್ಟಿ ಬಂದು ಜನ ಸೇವೆಗೆ ತಮ್ಮ ಜೀವನವನ್ನು ಮುಡುಪಾಗಿಟ್ಟು ಹುತಾತ್ಮರಾಗಿದ್ದಾರೆ. ರಾಜಕಾರಣ, ಸಾಮಾಜಿಕ, ಶೈಕ್ಷಣಿಕ, ಕಲೆ, ಸಾಹಿತ್ಯ, ವಿಜ್ಞಾನ ಹೀಗೆ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಆಸಕ್ತಿಗನುಗುಣವಾಗಿ ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಸೇವೆ ಸಲ್ಲಿಸಿ

ತಮ್ಮ ಸಿದ್ಧಾಂತ ಹಾಗು ತತ್ವಗಳಿಗೆ ಬದ್ಧರಾಗಿ ನುಡಿದಂತೆ ನಡೆದುಕೊಂಡು ಚರಿತ್ರಾರ್ಹ ವ್ಯಕ್ತಿಗಳೆನಿಸಿದ್ದಾರೆ. ಅಂತಹ ವ್ಯಕ್ತಿಗಳಲ್ಲಿ ಮೈಸೂರು ಕಾಂಗ್ರೆಸ್ಸನ್ನು ಕಟ್ಟಿ ರಾಜ್ಯದ ರಾಜಕೀಯ ಇತಿಹಾಸದಲ್ಲಿ ಅಚ್ಚಳಿಯದ ಛಾಪು ಮೂಡಿಸಿದ ನಾಯಕರಲ್ಲಿ ಶ್ರೀಯುತ ಹೆಚ್.ಕೆ.ವೀರಣ್ಣಗೌಡರು ಪ್ರಮುಖರಾಗಿದ್ದಾರೆ.

"ಹೆಚ್.ಕೆ.ವೀರಣ್ಣಗೌಡರ ಹೆಸರು ಕನ್ನಡ ನಾಡಿನಲ್ಲಿ ಪತ್ರಿಕಾ ಪ್ರಕಾಶಕರಾಗಿ, ಸಂಪಾದಕರಾಗಿ, ರೈತ ಮುಖಂಡರಾಗಿ, ಸಮಾಜಸೇವಾ ಕೆಲಸಗಾರರಾಗಿ, ಕಾಂಗ್ರೆಸ್ ಮುಖಂಡರಾಗಿ, ರಾಜಕೀಯ ಧುರೀಣರಾಗಿ, ದಕ್ಷ ಆಡಳಿತಗಾರರಾಗಿ ಕೇಳಿ ಬರುತ್ತಿದೆ. ದೇಶಾಭ್ಯುದಯದ ಎಲ್ಲ ಕ್ಷೇತ್ರಗಳಲ್ಲಿಯೂ ಅವರು ಈ ಐವತ್ತು ವರ್ಷಗಳ ಕಾಲದಲ್ಲಿ ನಿಸ್ವಾರ್ಥತೆಯಿಂದ ದುಡಿದು ಕನ್ನಡ ನಾಡಿನ ಜನತೆಯ ಪ್ರೀತಿಗೂ ಗೌರವಕ್ಕೂ ಪಾತ್ರರಾಗಿದ್ದವರು. ಅವರ ಜೀವಿತದ ಪ್ರತಿಯೊಂದು ಕ್ಷಣವನ್ನು ನಾಡ ಏಳಿಗೆಗಾಗಿಯೇ ವಿನಿಯೋಗಿಸಿರುವರು"[೧] ಎಂದು ಗೋರೂರು ರಾಮಸ್ವಾಮಿ ಅಯ್ಯಂಗಾರರು ತಮ್ಮ ಅನುಭವವನ್ನು ಹೇಳಿಕೊಂಡಿದ್ದಾರೆ.

ಇಂತಹ ವಿಭಿನ್ನ ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿರುವ ಹೆಚ್.ಕೆ.ವೀರಣ್ಣಗೌಡರು ಚನ್ನಪಟ್ಟಣ ತಾಲ್ಲೂಕಿನ ಸಾದಹಳ್ಳಿ ಎಂಬ ಗ್ರಾಮದಲ್ಲಿ ಹುಟ್ಟಿದವರು. ಬಾಲ್ಯದಲ್ಲಿಯೇ ಓದಿನ ಬಗ್ಗೆ ಹೆಚ್ಚು ಆಸಕ್ತಿ ಇತ್ತು. ಮನೆತನದ ಹಿರಿಮೆ ಗರಿಮೆಗಳು, ತಂದೆ-ತಾಯಿಗಳ, ಗುರು-ಹಿರಿಯರ ಪ್ರಭಾವ, ಮಾರ್ಗದರ್ಶನ ಹೆಚ್.ಕೆ.ವೀರಣ್ಣಗೌಡರ ವ್ಯಕ್ತಿತ್ವ ಉತ್ತಮವಾಗಿ ರೂಪುಗೊಳ್ಳಲು ಕಾರಣವಾದವು. ವಿದ್ಯಾರ್ಥಿದೆಸೆಯಲ್ಲಿಯೇ ಬುದ್ಧಿವಂತ ಹುಡುಗನೆಂದು ಉಪಾಧ್ಯಾಯರ ಮಧ್ಯೆ ಗುರುತಿಸಿಕೊಂಡರು. ಶೈಕ್ಷಣಿಕೇತರ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿಸಿಕೊಳ್ಳುವ ಮೂಲಕ ಇತರ ವಿದ್ಯಾರ್ಥಿಗಳಿಗೆ ಮಾದರಿಯಾದರು. ಸ್ಕೌಟ್ ತರಬೇತಿ ಹೆಚ್.ಕೆ.ವೀರಣ್ಣಗೌಡರಲ್ಲಿ ಶಿಸ್ತುಬದ್ಧ ಜೀವನವನ್ನು ಹಾಗೂ ದೇಶಾಭಿಮಾನ, ಸೇವಾ ಮನೋಭಾವವನ್ನು ರೂಢಿಸಿತು. ಥಿಯೋಸಾಫಿಕಲ್ ಸೊಸೈಟಿಯಂತಹ ಸಂಸ್ಥೆಯ ಸಂಪರ್ಕದಿಂದ ಅನೇಕ ಗಣ್ಯರ ಪರಿಚಯ, ಪ್ರಭಾವ ಗೌಡರನ್ನು ಸಾರ್ವಜನಿಕ ಚಟುವಟಿಕೆಗಳಲ್ಲಿ ಮತ್ತಷ್ಟು ತೊಡಗಿಸಿಕೊಳ್ಳಲು ಕಾರಣವಾಯಿತು. ಪರಿಣಾಮ ವಿದ್ಯಾಭ್ಯಾಸ ಕುಂಠಿತಗೊಂಡಿತು. ಮನೆಯ ವಾತಾವರಣ ಕುಲಕಸುಬಿನ ಕಡೆ ಗೌಡರನ್ನು ಸೆಳೆಯಿತು. ನಂತರ ಉಪಾಧ್ಯಾಯ ವೃತ್ತಿಗೆ ಅಡಿಯಿಟ್ಟು ವಿದ್ಯಾರ್ಥಿ, ಪೋಷಕರಿಗೆ ತಮ್ಮ ಪ್ರಗತಿದಾಯಕ ಯೋಚನೆಗಳಿಂದ ಮೆಚ್ಚಿನವರಾಗಿದ್ದರು. ಹೀಗೆ ಉದಯೋನ್ಮುಖ ಅಧ್ಯಾಪಕರಾಗಿ ರೂಪುಗೊಳ್ಳುತ್ತಿರುವಾಗಲೇ ಪತ್ರಿಕಾ ರಂಗಕ್ಕೆ ಪ್ರವೇಶಿದರು. ಒಕ್ಕಲಿಗರಪತ್ರಿಕೆ, ಚಿತ್ರಗುಪ್ತಪತ್ರಿಕೆ, ವಾರ್ತಾಪತ್ರಿಕೆಗಳ ಮಾದ್ಯಮದ ಮೂಲಕ ಜನಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆರ್ಥಿಕ ಮುಗ್ಗಟ್ಟು, ಸರ್ಕಾರದ ದಮನಕಾರಿ ನೀತಿ ಇವರನ್ನು ಪತ್ರಿಕೋದ್ಯಮದಿಂದ ಕಾಲ್ತೆಗೆಯುವಂತೆ ಮಾಡಿತು.

ಬಾಲವಿಧವೆ ತಾಯಮ್ಮನವರನ್ನು ವಿವಾಹವಾಗುವ ಮೂಲಕ ಸಮಾಜ ಸುಧಾರಕರಾದರು. ಇರ್ವಿನ್ ನಾಲಾ ರೈತ ಚಳುವಳಿಯನ್ನು ಮುನ್ನೆಡೆಸುವ ಮೂಲಕ ರೈತ ಮುಖಂಡರಾದರು. ಕ್ರಾಂತಿಕಾರಿ ಚಳವಳಿಗಾರರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಶಿವಪುರ ಧ್ವಜ ಸತ್ಯಾಗ್ರಹದಲ್ಲಿ

---

[೧] ಚಿತ್ರಗುಪ್ತ ಸ್ಮರಣೆ. ಪುಟ-೪೫.

ಕಾರ್ಯದರ್ಶಿಯಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದರು. ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷ ಕಟ್ಟಿದವರಲ್ಲಿ ಒಬ್ಬರಾಗಿ ಅದರ ಬೆಳವಣಿಗೆಗೆ ಸತತವಾಗಿ ಶ್ರಮಿಸಿದರು. ಜೈಲುವಾಸವನ್ನು ಕಂಡರು. ಜವಾಬ್ದಾರಿ ಸರ್ಕಾರ ಸ್ಥಾಪನೆಯ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಕರ್ನಾಟಕದ ಏಕೀಕರಣಕ್ಕೆ ವಿರೋಧ ವ್ಯಕ್ತಪಡಿಸಿದರು. ಗೌಡರು ವಿರೋಧಕ್ಕೆ ನೀಡಿದ ಕಾರಣಗಳು ದೂರದೃಷ್ಟಿಯಿಂದ ಕೂಡಿದ್ದವು. ನಂತರ ಜನಪ್ರತಿನಿಧಿಯಾಗಿ ಶಾಸನಸಭೆ ಪ್ರವೇಶಿಸಿದರು. ಲೋಕೋಪಯೋಗಿ ಸಚಿವರಾಗಿ ಸೇವೆ ಸಲ್ಲಿಸಿದರು. ಚುನಾವಣೆಗಳಲ್ಲಿ ಸತ್ಯ, ಪ್ರಾಮಾಣಿಕತೆಗೆ ಹೆಚ್ಚು ಆದ್ಯತೆ ನೀಡಿದ್ದರು. ಸಾಹಿತ್ಯದಲ್ಲಿ ಅಭಿರುಚಿ ಇದ್ದ ಗೌಡರು ತಮ್ಮ ರಾಜಕೀಯ ಚಟುವಟಿಕೆಗಳ ನಡುವೆಯೂ ನಾಟಕ, ಕತೆ, ಆತ್ಮಕಥೆ, ಲೇಖನಗಳು, ದೇಶದಲ್ಲಿ ನಡೆದ, ನಡೆಯಬೇಕಾಗಿದ್ದ ಚಳುವಳಿಗಳ ಬಗ್ಗೆ ಕಿರುಹೊತ್ತಿಗೆಗಳನ್ನು ಬರೆದಿದ್ದಾರೆ. ಸಮಾಜಸೇವೆಯಲ್ಲೂ ಹಿಂದೆ ಬೀಳದ ಗೌಡರು ಶಿಕ್ಷಣವೇ ದೇಶದ ಪ್ರಗತಿಗೆ ಮೂಲಾಧಾರವೆಂದು ಭಾವಿಸಿದ್ದರು. ಹಲವು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಶೈಕ್ಷಣಿಕ ಕೊಡುಗೆ ನೀಡಿದ್ದಾರೆ. ರೈತಪರ ಸಂಸ್ಥೆಗಳಲ್ಲಿ ದುಡಿದರು.

### ೧.೨ ಅಧ್ಯಯನದ ಉದ್ದೇಶ;

ನಾನು ಮೂಲತಃ ರಾಜ್ಯಶಾಸ್ತ್ರ ಪಧವಿಧರೆಯಾಗಿದ್ದು, ಒಮ್ಮೆ ನನ್ನ ಆಯ್ಕೆಯ ವಿಷಯ ಕರ್ನಾಟಕ ರಾಜಕಾರಣದ ತರಗತಿಯಲ್ಲಿ ಉಪನ್ಯಾಸಕರು ಮೈಸೂರು ರಾಜಕಾರಣದಲ್ಲಿ ದುಡಿದವರ ಬಗ್ಗೆ ಮಾತನಾಡುವಾಗ 'ಪ್ರಾಮಾಣಿಕ ಸೇವೆ ಸಲ್ಲಿಸಿದವರ ಬಗ್ಗೆ ಅದರಲ್ಲೂ ಕೆಳವರ್ಗಕ್ಕೆ ಸೇರಿದವರ ಬಗ್ಗೆ ಹೆಚ್ಚು ಮಾಹಿತಿಗಳು ಇಲ್ಲದಿರುವ ಬಗ್ಗೆ ಪ್ರಸ್ತಾಪಿಸಿದರು. ಕಾರಣ ಮೇಲ್ವರ್ಗದವರು ಸಂಖ್ಯೆಯಲ್ಲಿ ವಿರಳವಾಗಿದ್ದರೂ ಶೈಕ್ಷಣಿಕವಾಗಿ ಹೆಚ್ಚು ಮುಂದುವರಿದಿದ್ದರಿಂದ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿದ್ದರು. ಹೀಗಾಗಿ ಇತಿಹಾಸದ ದಾಖಲಾತಿಯನ್ನು ಕೈಗೊಂಡವರಲ್ಲಿ ಇವರೇ ಪ್ರಮುಖರಾಗಿದ್ದರಿಂದ ಸಾಮಾನ್ಯವಾಗಿ ಎಲ್ಲಾದರಲ್ಲೂ ಮುಂಚೂಣಿಯಲ್ಲಿದ್ದ ತಮ್ಮ ವರ್ಗದವರನ್ನೇ ಪ್ರಮುಖವಾಗಿಸುತ್ತಾ ಹೋದರು. ಹಾಗಾಗಿ ಕೆಳವರ್ಗದ ಎಷ್ಟೋ ಜನರು ಪ್ರಾಮಾಣಿಕವಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಕಾರ್ಯನಿರ್ವಹಿಸಿದ್ದರೂ ಅವರಿಗೆ ಪ್ರಾಮುಖ್ಯತೆ ದೊರೆಯದೆ ಹೋಯಿತು. ಈ ನಿಟ್ಟಿನಲ್ಲಿ ರಾಜ್ಯ ರಾಜಕಾರಣದಲ್ಲಿ ನಿಷ್ಠೆಯಿಂದ ಸೇವೆಯ ದೃಷ್ಟಿಯಿಂದ ಕಾಂಗ್ರೆಸ್ ಪಕ್ಷಕ್ಕಾಗಿ ದುಡಿದವರಲ್ಲಿ ಎಷ್ಟೋ ಮಂದಿ ಇಂದಿಗೂ ಅಮುಖ್ಯರಾಗಿಯೇ ಉಳಿದಿದ್ದಾರೆ, ಅವರಲ್ಲಿ ಹೆಚ್.ಕೆ.ವೀರಣ್ಣಗೌಡರು ಒಬ್ಬರು'ಎಂದು ವಿವರಿಸುತ್ತಾ ಹೋದರು. ಈ ವಿಚಾರವಾಗಿ ಯೋಚಿಸಿದ ನಾನು ನನ್ನ ಸಂಶೋಧನಾ ವಿಷಯಕ್ಕೆ ಇಂತಹವರನ್ನೇ ಏಕೆ ಆಯ್ಕೆ ಮಾಡಿಕೊಳ್ಳಬಾರೆಂದು ನಿರ್ಧರಿಸಿಕೊಂಡೆ. ಹೀಗಾಗಿ ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷ ಹುಟ್ಟು ಹಾಕಿದವರಲ್ಲಿ ಒಬ್ಬರಾಗಿ, ಅದರ ಬೆಳವಣಿಗೆಗೆ ಸತತವಾಗಿ ಶ್ರಮಿಸಿದ, ಹಾಗು ತಮ್ಮ ಪತ್ರಿಕಾರಂಗದ ಮೂಲಕ ಜನರಲ್ಲಿ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಜನಜಾಗೃತಿಯನ್ನುಂಟು ಮಾಡಿ ಜನತೆ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿದ, ಹಾಗೇ ಸರ್ಕಾರದ ದಮನಕಾರಿ ನೀತಿಯ ವಿರುದ್ಧ ಪತ್ರಿಕೋದ್ಯಮದ ಮೂಲಕ ಹೋರಾಡಿದ, ಉತ್ತಮ ಶಿಕ್ಷಕರಾಗಿ ಸೇವೆ

ಸಲ್ಲಿಸಿದ, ಜನತೆಯ ಸೇವೆಯೇ ಜನಾರ್ಧನನ ಸೇವೆಯೆಂದು ನಂಬಿ ಜನಪ್ರತಿನಿಧಿಯಾಗಿ ದುಡಿದ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಸಂಶೋಧನಾ ಅಧ್ಯಯನಕ್ಕೆ ಮುಂದಾದೆನು.

ನಮ್ಮ ಜನತೆಯಲ್ಲಿ ಸಕಾರಾತ್ಮಕ ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸಲು ಮತ್ತು ಇಂದಿನ ರಾಜಕೀಯ ತತ್ವಸಹಿತ ರಾಜಕಾರಣಿಗಳನ್ನಾಗಿ ಮಾರ್ಪಡಿಸಲು ಹೆಚ್.ಕೆ.ವೀರಣ್ಣಗೌಡರಂತಹ ಅನೇಕ ಪ್ರಾಮಾಣಿಕ ವ್ಯಕ್ತಿಗಳ ಆದರ್ಶ, ಸಿದ್ಧಾಂತಗಳನ್ನು ಮಾದರಿಯನ್ನಾಗಿ ರೂಪಿಸಿಕೊಳ್ಳಬೇಕಾಗಿದೆ. ಹೆಚ್.ಕೆ.ವೀರಣ್ಣಗೌಡರದು ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ರಾಜ್ಯದ ಆಗುಹೋಗುಗಳಲ್ಲಿ ಅಗ್ರಮಾನ್ಯ ಪಾತ್ರವಾಗಿದೆ. ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ರಾಜ್ಯಕ್ಕೆ ರಾಜಕೀಯ ಮುಖಂಡರುಗಳಿಗೆ ನೀಡಿದ ಧೀಮಂತ ನಾಯಕತ್ವ ಇವರದ್ದಾಗಿತ್ತು. ಪ್ರಜಾಸತ್ತಾತ್ಮಕವಾದ ಉತ್ತಮ ಸಮಾಜ ನಿರ್ಮಾಣದ ದಿಸೆಯಲ್ಲಿ ನಿಷ್ಠೆಯಿಂದ ಹೋರಾಡಿದ ವ್ಯಕ್ತಿ ಇವರಾಗಿದ್ದಾರೆ. ಪ್ರಸ್ತುತ ಸಮಾಜದಲ್ಲಿ ವ್ಯಕ್ತಿಯ ನೈತಿಕಮಟ್ಟ ಕುಸಿಯಲು, ರಾಜಕೀಯ ಪಕ್ಷ ಮತ್ತು ರಾಜಕೀಯ ನಾಯಕರುಗಳ ಘನತೆ, ಗೌರವ ತೀರ ಕೆಳಮಟ್ಟಕ್ಕೆ ಇಳಿಯಲು ತತ್ವರಹಿತ ರಾಜಕಾರಣದಲ್ಲಿ, ಸ್ವಾರ್ಥಪರ ನಿಲುವಿನಲ್ಲಿ ಆಸಕ್ತಿ ಹೊಂದಿರುವುದೇ ಮೂಲ ಕಾರಣವಾಗಿದೆ. ಅಂತಹ ಹಲವಾರು ಕಾರಣಗಳಿಗೆ ಪ್ರತ್ಯುತ್ತರವಾಗಿ ಹೆಚ್.ಕೆ.ವೀರಣ್ಣಗೌಡರು ಪ್ರಜಾಪ್ರಭುತ್ವ ಸಿದ್ಧಾಂತದಲ್ಲಿ ನಂಬಿಕೆಯಿಟ್ಟು, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ್, ಮಹಾತ್ಮಗಾಂಧೀಜಿಯವರಂತಹ ಮಹಾನ್ ಚೇತನಗಳನ್ನು ಗುರುವಾಗಿ ಸ್ವೀಕರಿಸಿ ನಡೆದು ಬಂದ ಹಾದಿಯನ್ನು ಗಮನಿಸಬೇಕಾಗಿದೆ.

ಹೆಚ್.ಕೆ.ವೀರಣ್ಣಗೌಡರು ತಮ್ಮ ಜೀವನದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ ಸಂಕಷ್ಟಗಳನ್ನು ಎದುರಿಸಬೇಕಾಯಿತು. ಅದರಲ್ಲೂ ರೈತರ ಮತ್ತು ಸಾಮಾನ್ಯ ಜನತೆಯ, ಕಷ್ಟಗಳನ್ನು ಕಂಡು ಅವರ ಜೀವನದಲ್ಲಿ ಬದಲಾವಣೆ ತರಲು ಗೌಡರು ಧೃತಿಗೆಡದೆ ಮುನ್ನುಗ್ಗಿದ್ದರು ಎಂಬುದು ಸಂಶೋಧನಾ ಸನ್ನಿವೇಶದಲ್ಲಿ ಕ್ಷೇತ್ರ ಕಾರ್ಯದಿಂದ ತಿಳಿದು ಬಂದ ಸಂಗತಿಯಾಗಿದೆ. ಅದರಲ್ಲೂ ಗೋಖಲೆಯವರನ್ನು ಗಾಂಧೀಜಿಯವರು ತಮ್ಮ ರಾಜಕೀಯ ಗುರುವೆಂದು ಭಾವಿಸಿದ್ದಂತೆ ಹೆಚ್.ಕೆ.ವೀರಣ್ಣಗೌಡರೂ ಸಹ ಗೋಖಲೆಯವರನ್ನು ತಮ್ಮ ಗುರುವೆಂದು ಭಾವಿಸಿ ಪೂಜಿಸುತ್ತಿದ್ದರು. ಗೋಖಲೆಯವರ ಭಾವಚಿತ್ರವನ್ನು ತಮ್ಮ ಪೆಟ್ಟಿಗೆಯ ಮೇಲೆ ಅಂಟಿಸಿಕೊಂಡು ಪ್ರತಿನಿತ್ಯ ಅವರ ದರ್ಶನವನ್ನು ಪಡೆದುಕೊಳ್ಳುತ್ತಿದ್ದರೆಂಬುದು ಅವರ ಆತ್ಮಕಥೆಯಿಂದ ತಿಳಿದುಬರುತ್ತದೆ. ಇಡೀ ರಾಷ್ಟ್ರದ ಜ್ಯೋತಿಯಾಗಿದ್ದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರಂತಹ ನಾಯಕರ ಮಾರ್ಗದರ್ಶನ ಇವರ ಪಾಲಿಗೆ ವರದಾನವಾಯಿತು.

ಹೆಚ್,ಕೆ.ವೀರಣ್ಣಗೌಡರು ನಿಜ ಜೀವನದಲ್ಲಿ ನುಡಿದಂತೆ ನಡೆದು ಬಾಳಿ ಬದುಕಿದವರಾಗಿದ್ದಾರೆ. ಅವರ ಸರಳ, ಪ್ರಾಮಾಣಿಕ ಜೀವನವನ್ನು ಅವರ ಅನೇಕ ಸ್ನೇಹಿತರು, ಬಂಧುಗಳು ಹಲವಾರು ವಿವರಣೆಗಳೊಂದಿಗೆ ಅವರ ಹೃದಯ ಸ್ಪರ್ಶಿ ಸಂಬಂಧಗಳನ್ನು ತಿಳಿಸಿದ್ದಾರೆ. ಬಲಗೈ ಕೊಟ್ಟ ದಾನ ಎಡಗೈಗೆ ಗೊತ್ತಾಗಬಾರದೆಂಬ ನಾಣ್ನುಡಿಯಂತೆ ಕಷ್ಟ ಎಂದು ಬಂದವರಿಗೆ ವೀರಣ್ಣಗೌಡರು ನಿಷ್ಠೂರವಾಗಿ ಕಂಡರೂ ಮನೆಯವರಿಗೆ ಸಹಾಯ ಮಾಡುವಂತೆ ಹೇಳುತ್ತಿದ್ದರು. ಹೊರಗೆ ಒರಟಾಗಿ ಕಂಡರೂ ಆಂತರ್ಯದಲ್ಲಿ ಮೃದು ಸ್ವಭಾವ ಹೊಂದಿದ್ದರು ಎಂದು ಗೌಡರ ಸಂಬಂಧಿ ಶ್ರೀ ಕೆ.ಟಿ.ಚಂದು

ಅವರು ನೆನಪಿಸಿಕೊಳ್ಳುತ್ತಾರೆ. ಗೌಡರಿಗೆ ಆರ್ಥಿಕವಾಗಿ ಹಿಂದುಳಿದ ಬಡಬಗ್ಗರ ಬಗ್ಗೆ ಅಪಾರ ಕಾಳಜಿ ಇತ್ತೆನ್ನಬಹುದು. ಆಡಳಿತದಲ್ಲಿದ್ದಾಗಲೂ ಅಷ್ಟೆ, ಯಾರಾದರೂ ಏನನ್ನಾದರು ಯಾಚಿಸಿ ಬಂದರೆ ರೇಗಿ ಹತ್ತಿರ ಸೇರಿಸದೆ ಕಳುಹಿಸುವುದು. ನಂತರ ಹಿಂದಿನಿಂದ ಆ ಕೆಲಸ ಸರಿಯೆಂದು ಕಂಡುಬಂದಲ್ಲಿ ಅದನ್ನು ಮಾಡಿಯೇ ಮಾಡುವುದು. ಯಾಚಿಸಿ ಬಂದವರಿಗೆ ಇವರು ಕೆಲಸ ಮಾಡಿಕೊಟ್ಟರೆಂಬುದು ತಿಳಿಯುವುದೇ ಇಲ್ಲ. ಹತ್ತಿರ ಸೇರಿಸಲಿಲ್ಲ ಎನ್ನುವ ನಂಜು ಉಳಿದೇ ಹೋಗುತ್ತಿತ್ತು. ಹೀಗೆ ಎಲೆ ಮರೆಯ ಕಾಯಿಯಂತೆ ಸೇವೆಗೆ ಮುಂದಾಗುತ್ತಿದ್ದರು. ಪ್ರಚಾರಕ್ಕಾಗಿ ಕೆಲಸ ಮಾಡಿದವರಲ್ಲ. ತಮ್ಮ ಕರ್ತವ್ಯವೆಂದು ಮಾಡುತ್ತಿದ್ದರು. ಅದಕ್ಕೆ ಗೌಡರು ಕೊಡುತ್ತಿದ್ದ ಉತ್ತರ 'ನಾನೊಂದು ವೇಳೆ ಮೃದುವಾಗಿ ಮಾತನಾಡಿ ಕೆಲಸ ಮಾಡಿಕೊಟ್ಟಿದ್ದರೆ, ಮತ್ತಷ್ಟು ಬೇರೆ ಜನ ಈ ರೀತಿಯ ಕೆಲಸಗಳಿಗೆ ಮುಗಿಬಿದ್ದು ದಿನನಿತ್ಯದ ಕೆಲಸಗಳಿಗೆ ಅಡ್ಡಿಯಾಗುತ್ತಾರೆ. ಆದುದರಿಂದ ಅವರು ಕೇಳಿದ ಕೆಲಸ ಸರಿಯಾದುದಾಗಿದ್ದರೆ ಹಿಂದಿನಿಂದ ಮಾಡುವುದೇ ಒಳ್ಳೆಯದು' ಎಂದು ಹೇಳುತ್ತಿದ್ದರು.

ಪ್ರಾಮಾಣಿಕತೆ, ಸಜ್ಜನಿಕೆ ಅವರ ಮಂತ್ರವಾಗಿದೆ. ನೈತಿಕ ಧೈರ್ಯ, ನಿರ್ದಾಕ್ಷಿಣ್ಯ ಪ್ರವೃತ್ತಿ ಹಾಗೂ ಅಪರೂಪದ ಸದಭಿರುಚಿಯ ಪ್ರಜ್ಞೆ ಅವರ ಅಸ್ತ್ರವಾಗಿತ್ತೆಂದು ತಿಳಿದು ಬರುತ್ತದೆ. ಹೆಚ್.ಕೆ.ವೀರಣ್ಣಗೌಡರನ್ನು ವಿರೋಧಿಸಿದಂತಹ ಹಲವಾರು ಮುಖಂಡರುಗಳು ಅವರ ನೇರ ನಡೆ ನುಡಿ ಧೈರ್ಯವನ್ನು ತುಂಬು ಹೃದಯದಿಂದ ಗೌರವಿಸುತ್ತಾರೆ. ಹೆಚ್.ಕೆ.ವೀರಣ್ಣಗೌಡರು ಶಾಸನ ಸಭೆಯಲ್ಲಿ ಮಂಡಿಸುತ್ತಿದ್ದ ವಾದದ ರೀತಿ ಅವರ ಚಾರಿತ್ರಿಕ ಹಿನ್ನೆಲೆ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು, ತಾತ್ವಿಕ ದೃಷ್ಟಿಕೋನದಿಂದ ಅಳೆಯಬಹುದಾಗಿದೆ. ಅವರ ಧೈರ್ಯ, ಎದೆಗಾರಿಕೆಯಿಂದ ಅಧಿಕಾರಶಾಹಿಯ ದರ್ಪಮನೋಭಾವವನ್ನು ಖಂಡಿಸುತ್ತಾ ದೀನದಲಿತರ ಸೇವೆಗೆ ಸದಾ ಶ್ರಮಿಸಿದವರಾಗಿದ್ದಾರೆ. ಹೆಚ್.ಕೆ. ವೀರಣ್ಣಗೌಡರು ಕರ್ತವ್ಯಭ್ರಷ್ಟ ಅಧಿಕಾರಿ ವೃಂದಕ್ಕೆ ಸಿಂಹಸ್ವಪ್ನವಾಗಿದ್ದರು.

ಜೀವನದಲ್ಲಿ ಗುರಿ ಇರಬೇಕು ಮತ್ತು ಅದಕ್ಕೆ ಸೂಕ್ತ ಗುರು ಇರಬೇಕು ಆದರೆ ಇಂದು ರಾಜಕಾರಣದ ಯುವ ಮುಂದಾಳುಗಳಿಗೆ ಗುರಿ ಮತ್ತು ಗುರು ಎರಡೂ ಇಲ್ಲದೆ ದಾರಿ ತಪ್ಪುವ ಗೊಂದಲದ ಸ್ಥಿತಿ ಉಂಟಾಗಿದೆ. ಗೌಡರ ರಾಜಕೀಯ ಹೋರಾಟದ ಸಂದರ್ಭದಲ್ಲಿ ಅವರಿಗೆ ಗುರು ಮತ್ತು ಗುರಿ ಬದುಕಿನ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಜನಸೇವೆಗೆ, ನಾಡುನುಡಿಗೆ ಗೌಡರು ಸಲ್ಲಿಸಿದ ಸೇವೆಯನ್ನು ಸ್ಮರಿಸುವಂತಹ ಸನ್ನಿವೇಶಗಳು ಸಾಕಷ್ಟಿವೆ. ಸಾಹಿತಿಗಳು, ಬುದ್ಧಿಜೀವಿಗಳು, ಹಿರಿಯ ರಾಜಕಾರಣಿಗಳು ಭವಿಷ್ಯತ್ತಿನ ಬಯಕೆಯನ್ನು ಇಟ್ಟುಕೊಂಡು ಯುವ ನಾಯಕರಿಗೆ ಮಾರ್ಗದರ್ಶನ ನೀಡಬೇಕಾದುದು ಇಂದಿನ ಸಂದರ್ಭದಲ್ಲಿ ಅತ್ಯಗತ್ಯವಾಗಿದೆ.

ಹೆಚ್.ಕೆ.ವೀರಣ್ಣಗೌಡರ ವ್ಯಕ್ತಿತ್ವ ಒಂದೇ ಒಂದು ಕ್ಷೇತ್ರಕ್ಕೆ ಮಾತ್ರ ಮೀಸಲಾಗಿರದೆ ಸಮಾಜದ ಇನ್ನಿತರ ಕ್ಷೇತ್ರಗಳಲ್ಲೂ ಹಬ್ಬಿತ್ತು. ಅವರು ತೆಗೆದುಕೊಳ್ಳುತ್ತಿದ್ದ ತೀರ್ಮಾನಗಳಲ್ಲಿ ಬಡವರ ಬಗ್ಗೆ ಇದ್ದ ಕಾಳಜಿ ಕಂಡು ಬರುತ್ತಿತ್ತು. ಅನೇಕ ವೇಳೆ ಸಹಪಾಠಿಗಳಿಗೆ ಮತ್ತು ಅವರ ಬೆಂಬಲಿಗರಿಗೆ ದಿಗ್ಭ್ರಮೆಯಾಗುವಂತಹ ವಾದವನ್ನು ಮಂಡಿಸಿ ವಿರೋಧಿಗಳು ಎಚ್ಚೆತ್ತುಕೊಳ್ಳುವಂತೆ ಮಾಡುತ್ತಿದ್ದರು. ದೀನದಲಿತರ ಬಗ್ಗೆ ಅವರು ಹೊಂದಿದ್ದಂತಹ ಕಾಳಜಿ ಅಪಾರ. ದೀನದಲಿತರ ಉದ್ಧಾರಕ್ಕೆ

ಅಡ್ಡಿಯಾಗುವಂತಹ ಯಾವುದೇ ಕಟ್ಟುಪಾಡು ಅಥವಾ ಶಾಸನಗಳಿದ್ದರೂ ಅವುಗಳನ್ನು ಬದಲಿಸುವ ಪ್ರಯತ್ನ ಮಾಡುತ್ತಿದ್ದರು.

ಹೆಚ್.ಕೆ.ವೀರಣ್ಣಗೌಡರನ್ನು ಕುರಿತು ಸಂಶೋಧನೆ ಮಾಡುವ ಉದ್ದೇಶವೇನೆಂದರೆ ಮಹಾತ್ಮ ಗಾಂಧೀಜಿಯವರ ಆದರ್ಶವನ್ನು ಅಳವಡಿಸಿಕೊಂಡಿದ್ದ ಗೌಡರು ಸತ್ಯ, ಪ್ರಾಮಾಣಿಕತೆ, ಅಹಿಂಸೆಯ ತತ್ವಗಳಿಗೆ ಬದ್ಧರಾಗಿದ್ದು, ಸಮಾಜದ ಶ್ರಮಜೀವಿಗಳ ಪರವಾಗಿ ಹಲವಾರು ಹೋರಾಟಗಳನ್ನು ನಡೆಸಿದ್ದಾರೆ. ಉದಾಹರಣೆಗೆ ಭಾರತದ ಬೆನ್ನೆಲುಬೇ ಗ್ರಾಮಗಳು. ಇಲ್ಲಿಯ ಕಾಯಕ ಜೀವಿಗಳ ಉದ್ಧಾರವಾದಾಗ ಮಾತ್ರ ದೇಶ ಅಭಿವೃದ್ಧಿ ಸಾಧ್ಯ ಎಂದು ಅರಿತು ಗೌಡರು ಮಾಡಿದ ಪ್ರಯತ್ನಗಳು ಅನೇಕ. ಇರ್ವಿನ್ ನಾಲಾ ರೈತ ಚಳವಳಿ, ರಾಜಶಾಹಿ ವಿರೋಧಿ ನೆಲೆಗಳು, ಭೂ ಸುಧಾರಣ ಚಳವಳಿ, ಕರ್ನಾಟಕ ಏಕೀಕರಣ ವಿರೋಧಿ ಚಳುವಳಿ, ಮೈಸೂರು ಜವಾಬ್ದಾರಿ ಸರ್ಕಾರದ ಹೋರಾಟ – ಹೀಗೆ ಹಲವಾರು ವಿಚಾರಗಳಿಗೆ ಸಂಬಂಧಿಸಿದಂತೆ ಹೋರಾಟ ನಡೆಸಿದವರಾಗಿದ್ದಾರೆ. ರಾಜಕಾರಣದಲ್ಲಿ ಮತ್ತು ಸಾಮಾಜಿಕ ಸೇವೆಯಲ್ಲಿ ಗೌಡರು ತಮ್ಮನ್ನು ತಾವು ಎಷ್ಟರ ಮಟ್ಟಿಗೆ ತೊಡಗಿಸಿ ಕೊಂಡಿದ್ದರು ಎಂಬುದನ್ನು ಅರ್ಥಮಾಡಿಕೊಳ್ಳುವುದರ ಮೂಲಕ ಅಂದಿನ ಕರ್ನಾಟಕದ ರಾಜಕಾರಣದಲ್ಲಿ ಗೌಡರ ರಾಜಕೀಯ ಕೊಡುಗೆಯ ಬಗ್ಗೆ ಹೆಚ್ಚು ಗಮನ ಹರಿಸಿ, ಸಾಹಿತ್ಯ, ಶಿಕ್ಷಣ, ಪತ್ರಿಕೋದ್ಯಮ, ಕ್ಷೇತ್ರಗಳಿಗೆ ವೀರಣ್ಣಗೌಡರ ಕೊಡುಗೆಯನ್ನು ಗಮನಿಸುವುದಾಗಿದೆ.

ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ವೈಯಕ್ತಿಕ ಜೀವನ, ಅಧ್ಯಾಪಕ ಜೀವನ, ಪತ್ರಿಕಾ ಮತ್ತು ಸಾಹಿತ್ಯಿಕ ಜೀವನ, ರಾಜಕೀಯ ಚಟುವಟಿಕೆಗಳನ್ನೊಳಗೊಂಡ ಚಿತ್ರಣವನ್ನು ನೀಡುವುದರ ಮೂಲಕ ಅಂದಿನ ಸಾಮಾಜಿಕ, ರಾಜಕೀಯ ಪರಿಸ್ಥಿತಿ, ಸನ್ನಿವೇಶಗಳನ್ನು ಮತ್ತೊಮ್ಮೆ ಅವಲೋಕಿಸುವುದು ಈ ನಿಬಂಧದ ಉದ್ದೇಶ.

## ೧.೩ ಅಧ್ಯಯನದ ಮಹತ್ವ:

ನಮ್ಮ ದೇಶದಲ್ಲಿ ಸಾರ್ವಜನಿಕ ವಿಚಾರಗಳಲ್ಲಿ ನಡೆಯುತ್ತಿರುವ ಪ್ರಮಾದಗಳಿಗೆ ಚರಿತ್ರೆಯ ಪರಿಚಯ ಸರಿಯಾಗಿ ಆಗಿಲ್ಲದಿರುವುದೇ ಮುಖ್ಯ ಕಾರಣವೆಂದು ಹೇಳಬಹುದು. ಚರಿತ್ರೆಯೆಂದರೆ ಒಂದು ಪ್ರಶ್ನೆಯ ಹಿನ್ನೆಲೆ, ಆ ಪ್ರಶ್ನೆ ಹೇಗೆ ಹುಟ್ಟಿತು? ಹಿಂದಿನವರು ಆ ಪ್ರಶ್ನೆಯನ್ನು ಹೇಗೆ ಎದುರಿಸಿದರು? ಅವರ ನಡವಳಿಕೆಯಲ್ಲಿ ಇದ್ದ ಮನೋಗತವೇನು?, ಆ ನಡವಳಿಕೆ ವ್ಯರ್ಥವಾದದ್ದಕ್ಕೆ ಕಾರಣಗಳೇನು? ಇಂಥ ಅನುಭವ ಪರೀಕ್ಷೆಯೇ ಚರಿತ್ರೆ. ಹೀಗೆ ದೇಶದ ಬಾಹ್ಯ ಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದು ಬಂದ ಮೇಲೆ ಜನತೆಯ ಸದ್ಯದ ಪರಿಸ್ಥಿತಿಯಲ್ಲಿ ಇರುವ ಗುಣಾವಗುಣಗಳನ್ನು ಬಲಾಬಲಗಳನ್ನು ಕಂಡುಕೊಳ್ಳಲು ನಾವು ಸಮರ್ಥರಾಗುತ್ತೇವೆ. ಆ ತಿಳುವಳಿಕೆಯಿಂದ ನಮಗೆ ಆಗಬೇಕಾಗಿರುವ ಪರಿಷ್ಕಾರದ ಸ್ವರೂಪವು ನಿಶ್ಚಿತವಾಗುತ್ತದೆ. ಹೀಗೆ ಜೀವನ ಚರಿತ್ರೆಯು ದೇಶ ಚರಿತ್ರೆಯ ಒಂದು ಅಂಗ.

ಹಾಗಾಗಿ ಒಬ್ಬ ಜನನಾಯಕನ, ಒಬ್ಬ ರಾಜ್ಯಕುಶಲನ ಅಥವಾ ಒಬ್ಬ ನವ ಸಂಪ್ರದಾಯ ಸ್ಥಾಪಕನ ವೃತ್ತಾಂತವು ದೇಶ ಚರಿತ್ರೆಯ ಒಳಭಾಗವಾಗುತ್ತದೆ. ಗೋಖಲೆ, ತಿಲಕ್, ಮಹಾತ್ಮ ಗಾಂಧೀಜಿ, ಸರದಾರ್ ವಲ್ಲಭಾಯಿ ಪಟೇಲ್, ಜಯಪ್ರಕಾಶ್ ನಾರಾಯಣ್, ಡಾ.ಬಿ.ಆರ್.ಅಂಬೇಡ್ಕರ್ ಇನ್ನು ಮುಂತಾದ ನಾಯಕರ ಜೀವನ ಚರಿತ್ರೆಯು ಅವರ ಜೀವಿತದ ದಿನಗಳಲ್ಲಿ ಅವರು ಅನುಸರಿಸಿದ ತತ್ವ,

ಸಿದ್ಧಾಂತ, ಕಾರ್ಯಗಳು ಎಂಥಹ ಪರಿಸ್ಥಿತಿಯಲ್ಲಿ ಉದ್ಭವಿಸಿದವು. ಅವುಗಳ ಮೂಲಕ ಅವರು ಸಮಾಜದಲ್ಲಿ ತಂದಂಥ ಬದಲಾವಣೆಗಳೇನು? ಎಂಬುದನ್ನು ಗಮನಿಸುವುದಾದರೆ ಇಂದಿನ ಪರಿಸ್ಥಿತಿಗಳಿಗೆ ಎಂಥಹ ಸೂತ್ರಗಳನ್ನು ಅಳವಡಿಸಿಕೊಳ್ಳಬೇಕು, ಎಂಥಹ ಸಿದ್ಧಾಂತಗಳ ಹಾದಿಯಲ್ಲಿ ನಡೆಯಬೇಕೆಂಬ ಅರಿವು ಮೂಡುತ್ತದೆ. ಹಾಗಾಗಿ ಈ ಮಹಾ ನಾಯಕರ ಅಂತರಂಗವನ್ನು ನಾವು ಕಂಡುಕೊಂಡಿದ್ದಾದರೆ ಜನಜೀವನದ ಬಹಿರಂಗದ ಅನೇಕ ಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದು ಬರುತ್ತದೆ.

ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಬದುಕನ್ನು ಅಧ್ಯಯನ ಮಾಡುವುದರಿಂದ ಪ್ರಸ್ತುತ ರಾಜಕೀಯ ಕ್ಷೇತ್ರದಲ್ಲಿನ ನಾಯಕರಿಗೆ ಮತ್ತು ಯುವ ಪೀಳಿಗೆಗೆ ಅವರ ತತ್ವ, ನಿಷ್ಠೆ, ಪ್ರಾಮಾಣಿಕ ಜನಸೇವೆಯನ್ನು ಮನದಟ್ಟು ಮಾಡಿಕೊಡುವ ಮೂಲಕ ಅವರ ಜೀವನ ಎಷ್ಟರಮಟ್ಟಿಗೆ ಉಪಯುಕ್ತ ಮಾರ್ಗದರ್ಶಕವಾಗಿದೆ ಎಂಬುದನ್ನು ತಿಳಿಸಿಕೊಟ್ಟಂತಾಗುತ್ತದೆ.

ಹೆಚ್.ಕೆ.ವೀರಣ್ಣಗೌಡರು ಚನ್ನಪಟ್ಟಣ ತಾಲ್ಲೂಕಿನ ಸಾದಹಳ್ಳಿ ಗ್ರಾಮವೊಂದರಲ್ಲಿ ಹುಟ್ಟಿದವರು. ಶೈಶವದಲ್ಲಿ ಸುಸಂಸ್ಕೃತ ವಾತಾವರಣ ದೊರಕಿದ್ದು ಅವರ ಪುಣ್ಯ. 'ಗೋಸೇವಾ ಧುರೀಣ', 'ಗುರುಭಕ್ತ ತಿಲಕ' ಎಂಬ ಬಿರುದುಗಳ ಪಡೆದು ಅನೇಕ ಜನಸೇವಾ ಕಾರ್ಯಗಳನ್ನು ಮಾಡಿದ್ದರೂ ಮೈಸೂರು ಕಾಂಗ್ರೆಸ್ ಕಟ್ಟುವಲ್ಲಿ ಶ್ರಮಿಸಿದ ನಾಯಕರಲ್ಲಿ ಒಬ್ಬರಾದ ಇವರನ್ನು ಕುರಿತು ಅಭ್ಯಾಸ ಪೂರ್ಣವಾದ ಪ್ರೌಢ ಗ್ರಂಥ ಈವರೆವಿಗೂ ಪ್ರಕಟವಾಗಿಲ್ಲ. ಆದ್ದರಿಂದ ಈ ವಿಷಯವನ್ನೇ ಸಂಶೋಧನೆಗೆ ಆರಿಸಿಕೊಳ್ಳಲಾಯಿತು. ಹೆಚ್.ಕೆ.ವೀರಣ್ಣಗೌಡರು ವಿದ್ಯಾರ್ಥಿ ದೆಸೆಯಲ್ಲಿಯೇ 'ಕರ್ನಾಟಕ ವಿದ್ಯಾರ್ಥಿ' ಎಂಬ ದ್ವೈಮಾಸಿಕ ಪತ್ರಿಕೆಯ ಸಂಪಾದಕರಾಗಿದ್ದವರು. ಹಾಗೆಯೇ ಸ್ವಾತಂತ್ರ್ಯ ನಂತರದ ಎಸ್.ನಿಜಲಿಂಗಪ್ಪನವರ ಮಂತ್ರಿಮಂಡಲದ ಲೋಕೋಪಯೋಗಿ ಮಂತ್ರಿಗಳಾಗಿ ಜನಸೇವೆ ಮಾಡಿದುದರ ಜೊತೆಗೆ ಸಾಹಿತಿ ಕ್ಷೇತ್ರದಲ್ಲಿ ಸಾಕಷ್ಟು ಮಟ್ಟಿಗೆ ತಮ್ಮ ಸೇವೆ ಸಲ್ಲಿಸಿದ್ದಾರೆ. ಇಂತಹ ಬಹುಮುಖ ಪ್ರತಿಭೆಯುಳ್ಳ ಹೆಚ್.ಕೆ.ವೀರಣ್ಣಗೌಡರನ್ನು ಕುರಿತು ಆಳವಾದ ಅಧ್ಯಯನ(ಸಂಶೋಧನೆ) ಈವರೆವಿಗೂ ನಡೆಯದೇ ಇರುವುದು ಒಂದು ಕೊರತೆಯೇ ಹೌದು. ಹೀಗಾಗಿ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಅಧ್ಯಯನ ಮಾಡುವ ಮೂಲಕ ಮೈಸೂರು ರಾಜ್ಯದ ಅಂದಿನ ರಾಜಕೀಯ ಚರಿತ್ರೆಯನ್ನು ಮತ್ತೊಮ್ಮೆ ಅವಲೋಕಿಸುವುದು ಔಚಿತ್ಯ ಪೂರ್ಣವಾಗಿದೆ.

ಮಂಡ್ಯ ಜಿಲ್ಲೆಯ ರಾಜಕೀಯ ಧುರೀಣರ ಸಾಲಿನಲ್ಲಿ ಮೊದಲು ಸ್ಮರಣೆಗೆ ಬರುವ ನಾಯಕರಲ್ಲಿ ಹೆಚ್.ಕೆ.ವೀರಣ್ಣಗೌಡರು ಒಬ್ಬರು. ಮಂಡ್ಯ ಜಿಲ್ಲೆಯ ಮದ್ದೂರು ಕ್ಷೇತ್ರದ ಯಶಸ್ವಿ ಜನನಾಯಕರಲ್ಲಿ ಹೆಚ್.ಕೆ.ವೀರಣ್ಣಗೌಡರು ಮತ್ತು ಕೆ.ವಿ.ಶಂಕರೇಗೌಡರ ಹೆಸರು ಮನೆಮಾತು. ಮೈಸೂರು ಕಾಂಗ್ರೆಸ್ ಸ್ಥಾಪಕ ಸಂಘಟಕರಲ್ಲಿ ಒಬ್ಬರು ಹೆಚ್.ಕೆ.ವೀರಣ್ಣಗೌಡರು. ಹೀಗೆ ಕನ್ನಡನಾಡಿನ ಹೋರಾಟದ ಚರಿತ್ರೆಯಲ್ಲಿ ಶಾಶ್ವತ ಹೆಸರು ಗಳಿಸಿದ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ವ್ಯವಸ್ಥಿತವಾದ ಸಂಶೋಧನೆ ನಡೆಸಿ ಅಧ್ಯಯನ ಪೂರ್ಣವಾದ ಪ್ರೌಢ ಪ್ರಬಂಧ ರಚಿಸುವುದು ತುಂಬಾ ಅಗತ್ಯವಾಗಿದೆ.

### ೧.೪ ಅಧ್ಯಯನದ ವಿಧಾನ:

ವ್ಯಕ್ತಿ ಚರಿತ್ರೆಯು ದೇಶ ಚರಿತ್ರೆಯ ಒಂದು ಪ್ರತಿಬಿಂಬವಾಗಿ ಕಂಡುಬರುತ್ತದೆ. ಹಾಗಾಗಿ ವ್ಯಕ್ತಿಚರಿತ್ರೆಯನ್ನು ಅಥವಾ ದೇಶ ಚರಿತ್ರೆಯನ್ನು ಒಳಹೊಕ್ಕು ವಿಮರ್ಶಿಸಿದರೆ ಹಿಂದೆ ಮಾಡಿದ ತಪ್ಪೇನು ಎಂಬುದರ ಬಗ್ಗೆ ನಮಗೆ ಅರಿವುಂಟಾಗುತ್ತದೆ. ಈಗ ನಾವು ಅಂಥ ತಪ್ಪನ್ನು ಮಾಡದಿರಲು ಯಾವ ಎಚ್ಚರಿಕೆ ಅವಶ್ಯಕ, ನಾವು ಯಾವ ಹೊಸ ನೀತಿಯನ್ನು ಅವಲಂಬಿಸಿದರೆ ಹಳೆಯ ಅಪಾಯ ನಮಗೆ ತಪ್ಪುತ್ತದೆ ಎಂಬ ಈ ವಿಧವಾದ ಜಾಗ್ರತೆ ಮತ್ತು ಬೋಧನೆ ನಮಗೆ ಚರಿತ್ರೆಯ ವಿಮರ್ಶನೆಯಿಂದ ತಿಳಿದು ಬರುತ್ತದೆ. ಹಾಗಾಗಿ ಈ ರೀತಿಯ ಪ್ರಯೋಜನವನ್ನು ಪಡೆಯುವ ಸಲುವಾಗಿ ವ್ಯಕ್ತಿ ಚರಿತ್ರೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಆರಿಸಿಕೊಂಡು, ಅವರು ನಾಡಿಗೆ ನೀಡಿರುವ ಮುಖ್ಯವಾಗಿ ರಾಜಕೀಯ ಕ್ಷೇತ್ರದಲ್ಲಿನ ಅವರ ಕೊಡುಗೆಯನ್ನು ಜೊತೆಗೆ ಶಿಕ್ಷಣ, ಪತ್ರಿಕಾರಂಗ, ಸಾಹಿತ್ಯ, ಸಾಮಾಜಿಕ ಕ್ಷೇತ್ರಗಳಲ್ಲಿನ ಸೇವೆಯನ್ನು ಗುರುತಿಸುವುದಾಗಿದೆ. ಈ ನಿಟ್ಟಿನಲ್ಲಿ ಹೆಚ್.ಕೆ.ವೀರಣ್ಣಗೌಡರು ಹುಟ್ಟಿ ಬೆಳೆದ ಪರಿಸರ, ಅವರ ಕಾರ್ಯವ್ಯಾಪ್ತಿಯ ಮದ್ದೂರು, ಮಂಡ್ಯ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಅವರಿಗೆ ಸಂಬಂಧಿಸಿದಂತಹ ವಿಚಾರಗಳ ಬಗ್ಗೆ ತಿಳುವಳಿಕೆ ಹೊಂದಿರುವ ವ್ಯಕ್ತಿಗಳನ್ನು ಸಂದರ್ಶನ ಮಾಡಿ ವಿವರಗಳನ್ನು ಪಡೆದುಕೊಳ್ಳುವುದರ ಮೂಲಕ ಮತ್ತು ಅವರ ಬಗ್ಗೆ ಇತರರು ಬರೆದಿರುವ ಕೃತಿ ಲೇಖನಗಳನ್ನು, ಚರಿತ್ರೆಯಿಂದ ಅಂದಿನ ದೇಶದ ಮತ್ತು ಕರ್ನಾಟಕದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ ವಿಷಯ ಸಂಗ್ರಹಣೆ ಮಾಡಿದ್ದೇನೆ. ಅದಕ್ಕೆ ಪೂರಕವಾಗಿ ಛಾಯಾಚಿತ್ರಗಳನ್ನು ತೆಗೆದುಕೊಳ್ಳುವುದರ ಮೂಲಕ ಸಂಗ್ರಹಿತ ವಿಷಯ ಕುರಿತು ವಿಶ್ಲೇಷಣೆ ಮಾಡುವುದು ನನ್ನ ಅಧ್ಯಯನದ ವಿಧಾನವಾಗಿದೆ. ಹಾಗೆಯೇ ರಾಜಕಾರಣ ಮತ್ತು ಸಾಹಿತ್ಯ ಮೇಳೈಸುವ ಸಂದರ್ಭಗಳು ಅಪರೂಪ. ಹಿಂದಿನ ಅನೇಕ ರಾಷ್ಟ್ರ, ರಾಜ್ಯ ನಾಯಕರುಗಳು ರಾಜಕೀಯ ಮತ್ತು ಸಾಹಿತ್ಯದಲ್ಲಿ ನೀಡಿರುವ ಕೊಡುಗೆಗಳನ್ನು ಗಮನಿಸಬಹುದು. ಉದಾಹರಣೆಗೆ ಮಹಾತ್ಮ ಗಾಂಧಿ, ಜವಹರ್‌ಲಾಲ್ ನೆಹರು, ಶಾಂತವೇರಿ ಗೋಪಾಲಗೌಡರು ಇನ್ನು ಮುಂತಾದವರ ಸಾಲಿಗೆ ಸೇರುವಂತಹವರು ಹೆಚ್.ಕೆ.ವೀರಣ್ಣಗೌಡರು. ಹಾಗಾಗಿ ಪ್ರಸ್ತುತ ಪ್ರಬಂಧದಲ್ಲಿ ಸಾಹಿತ್ಯ ಮತ್ತು ರಾಜಕಾರಣದ ಅಂತರ್ ಸಂಬಂಧಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಮಹತ್ವ ಮತ್ತು ಅಧ್ಯಯನ ವಿಧಾನವನ್ನು ಹಾಗು ಅಧ್ಯಯನ ಕ್ರಮವನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಹೆಚ್.ಕೆ.ವೀರಣ್ಣಗೌಡರ ಜನ್ಮಸ್ಥಳದ ಮತ್ತು ಕೌಟುಂಬಿಕ ಹಿನ್ನೆಲೆ, ಬಾಲ್ಯ ಜೀವನ, ಶಿಕ್ಷಣ ಮತ್ತು ವೈವಾಹಿಕ ಜೀವನದ ಬಗ್ಗೆ ಹಾಗು ವೀರಣ್ಣಗೌಡರ ಮೇಲೆ ಪ್ರಭಾವ ಬೀರಿದ ತತ್ವಜ್ಞಾನಿಗಳ ಬಗ್ಗೆ ಅವಲೋಕಿಸಲಾಗಿದೆ. ಅಧ್ಯಾಯ ಮೂರರಲ್ಲಿ ಹೆಚ್.ಕೆ.ವೀರಣ್ಣಗೌಡರ ಉಪಾಧ್ಯಾಯ ವೃತ್ತಿ, ಪತ್ರಿಕಾರಂಗ, ಸಾಹಿತ್ಯದಲ್ಲಿನ ದುಡಿಮೆ ಮತ್ತು ಸಮುದಾಯ ಸಂಘಟನೆಯ ಬಗ್ಗೆ ಗಮನಿಸಲಾಗಿದೆ. ನಾಲ್ಕನೆ ಅಧ್ಯಾಯದಲ್ಲಿ ಹೆಚ್.ಕೆ.ವೀರಣ್ಣಗೌಡರ ಸ್ವಾತಂತ್ರ್ಯ ಪೂರ್ವದಲ್ಲಿ ತೊಡಗಿಕೊಂಡಿದ್ದ ಚಳುವಳಿಗಳಾದ ಇರ್ವಿನ್ ನಾಲಾ ಚಳುವಳಿ, ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ವಹಿಸಿದ ಪಾತ್ರದ ಬಗ್ಗೆ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ, ಜವಾಬ್ದಾರಿ ಸರ್ಕಾರ ಸ್ಥಾಪನೆಯ ಚಳುವಳಿ ಮತ್ತು ಏಕೀಕರಣ

ವಿರೋಧಿ ಚಳುವಳಿಯಲ್ಲಿ ನಿರ್ವಹಿಸಿದ ಪಾತ್ರದ ಬಗ್ಗೆ ವಿವೇಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಪ್ರಾದೇಶಿಕ ಪಕ್ಷ ಸಂಘಟನೆಯ ಬಗ್ಗೆ ಮತ್ತು ಸ್ವಾತಂತ್ರ್ಯ ನಂತರ ಆದಿಭಾಗದ ಕರ್ನಾಟಕ ರಾಜಕಾರಣದಲ್ಲಿ ಹೆಚ್.ಕೆ.ವೀರಣ್ಣಗೌಡರು ವಹಿಸಿದ ಪಾತ್ರವನ್ನು ಅಂದರೆ ಶಾಸನ ಸಭೆಯಲ್ಲಿ, ಚುನಾವಣೆಯ ಸಂದರ್ಭದಲ್ಲಿ ಅವರು ಅನುಸರಿಸಿದ ರೀತಿನೀತಿಗಳ ಮತ್ತು ಅವರ ವ್ಯಕ್ತಿತ್ವದ ಬಗ್ಗೆ ವಿವರಿಸಲಾಗಿದೆ. ಕೊನೆಯ ಅಧ್ಯಾಯ ಉಪಸಂಹಾರದಲ್ಲಿ ಹೆಚ್.ಕೆ.ವೀರಣ್ಣಗೌಡರ ವ್ಯಕ್ತಿತ್ವ ವಿವೇಚನೆಯ ಜೊತೆಗೆ ಅವರು ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಸಾಹಿತ್ಯಿಕವಾಗಿ ನೀಡಿರುವ ಕೊಡುಗೆಗಳ ಬಗೆಗಿನ ವಿಶ್ಲೇಷಣೆಯನ್ನು ಮಾಡಲಾಗಿದೆ.

# ಅಧ್ಯಾಯ – ೨

## ಹೆಚ್.ಕೆ. ವೀರಣ್ಣಗೌಡರ ವ್ಯಕ್ತಿತ್ವ ಮತ್ತು ಬದುಕು

## ಅಧ್ಯಾಯ-೨

# ಹೆಚ್.ಕೆ.ವೀರಣ್ಣಗೌಡರ ಪ್ರಾರಂಭಿಕ ಜೀವನ

ಯಾವುದೇ ವ್ಯಕ್ತಿಯ ಬಗ್ಗೆ ಸಂಶೋಧನೆಗೆ ತೊಡಗುವಾಗ ಆ ವ್ಯಕ್ತಿಯ ನೆಲೆಯ ಬಗ್ಗೆ ಅಧ್ಯಯನ ಅವಶ್ಯಕವಾಗುತ್ತದೆ. ಕಾರಣ ಆ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಆತ ಹುಟ್ಟಿದ, ಬೆಳೆದ ಪರಿಸರ ಯಾವ ರೀತಿಯಾದ ಪ್ರಭಾವವನ್ನು ಬೀರಿದೆ ಎಂಬುದು ಮುಖ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಒಬ್ಬ ದೇಶಾಭಿಮಾನಿ ಸ್ವಾತಂತ್ರ್ಯ ಹೋರಾಟಗಾರರಾಗಿ, ಪತ್ರಿಕೋದ್ಯಮಿಯಾಗಿ, ರಾಜಕಾರಣದಲ್ಲಿ ನಿಷ್ಠಾವಂತ ರಾಜಕೀಯ ಧುರೀಣರಾಗಿ ಬೆಳೆಯಲು ಅವರ ಮೂಲನೆಲೆ ಚನ್ನಪಟ್ಟಣ ಯಾವ ರೀತಿಯ ಅಡಿಪಾಯವನ್ನು ಒದಗಿಸಿಕೊಟ್ಟಿತೆಂದು ಆ ಸ್ಥಳದ ಹಿನ್ನೆಲೆ ಬಗ್ಗೆ ಅವಲೋಕಿಸುವುದು ಅಗತ್ಯವಾಗಿದೆ.

### ೨.೧ ಹಿನ್ನೆಲೆ (ಜನ್ಮಸ್ಥಳ): -

ಕರ್ನಾಟಕದ ಚಾರಿತ್ರಿಕ ಹಾಗು ಸಾಂಸ್ಕೃತಿಕ ಕಾಲಘಟ್ಟದಲ್ಲಿ ಚನ್ನಪಟ್ಟಣ ತಾಲ್ಲೂಕು ತನ್ನ ವಿಶಿಷ್ಟವಾದ ಹೆಜ್ಜೆ ಗುರುತುಗಳನ್ನು ಮೂಡಿಸಿದೆ. ರಾಜ್ಯದ ವೈವಿದ್ಯಮಯ ಸಾಂಸ್ಕೃತಿಕ ದಾಖಲೆಗಳಲ್ಲಿ ತನ್ನ ಕಾಣಿಕೆಯ ಇರುವಿಕೆಯನ್ನು ಪಡಿಮೂಡಿಸುವುದರ ಮೂಲಕ ನಾಡಿನ ಗಮನ ಸೆಳೆಯುವುದರಲ್ಲಿ ಯಶಸ್ವಿಯಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಶ್ಚಿಮದ ಒಂದು ತಾಲ್ಲೂಕು ಚನ್ನಪಟ್ಟಣ. ಇದು ಬೆಂಗಳೂರು-ಮೈಸೂರಿನ ಹೆದ್ದಾರಿಯಲ್ಲಿದೆ. ಬೆಂಗಳೂರಿನಿಂದ ನೈರುತ್ಯ ದಿಕ್ಕಿಗೆ ೬೦ ಕಿ.ಮೀ ದೂರದಲ್ಲಿ ಸಮುದ್ರ ಮಟ್ಟದಿಂದ ೬೭೦ ಮೀ. ಎತ್ತರದಲ್ಲಿದೆ. ತುಮಕೂರು ಜಿಲ್ಲೆಯ ಕುಣಿಗಲ್, ಬೆಂಗಳೂರು ಜಿಲ್ಲೆಯ ರಾಮನಗರ ಮತ್ತು ಕನಕಪುರ, ಮಂಡ್ಯಜಿಲ್ಲೆಯ ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕುಗಳಿಂದ ಸುತ್ತುವರಿಯಲ್ಪಟ್ಟಿರುವ ಚನ್ನಪಟ್ಟಣ ಬಯಲುಸೀಮೆಯ ಸೊಬಗನ್ನು ಹೊಂದಿದೆ. ಕಣ್ವ ಈ ತಾಲ್ಲೂಕಿನ ಮುಖ್ಯ ನದಿಯಾಗಿದ್ದು ಇದು ಮಾಗಡಿ ತಾಲ್ಲೂಕಿನ ಶ್ರೀಪತಿಹಳ್ಳಿ ಎಂಬ ಗ್ರಾಮದ ಸಮೀಪದಲ್ಲಿ ಹುಟ್ಟಿ ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತದೆ. ನದಿಯ ದಂಡೆಯಲ್ಲಿ ಕಾಣಬರುವ ಅಬ್ಬೂರು, ಮಳೂರು ಪಟ್ಟಣ, ಕಡಲೂರು ಇಲ್ಲಿನ ಪ್ರಮುಖ ಯಾತ್ರಾಸ್ಥಳಗಳಾಗಿವೆ. ತಾಲ್ಲೂಕಿನ ಮಣ್ಣು ಸಾಕಷ್ಟು ವೈವಿದ್ಯಮಯವಾಗಿದ್ದು ಭತ್ತ, ಕಬ್ಬು, ರಾಗಿ, ಬಾಳೆ, ಮಾವು, ಅಡಿಕೆ, ವೀಳ್ಯದೆಲೆ ಮುಂತಾದ ಬೆಳೆ ಬೆಳೆಯಲು ಸಹಕಾರಿಯಾಗಿದೆ. ಇಲ್ಲಿ ರೇಷ್ಮೆ ಬೆಳೆಯು ಉತ್ಕೃಷ್ಟವಾಗಿ ಬೆಳೆಯುವುದರಿಂದ ರೇಷ್ಮೆ ಕೈಗಾರಿಕೆಗೂ ಪ್ರಸಿದ್ದಿ ಹೊಂದಿದೆ. ಇಲ್ಲಿ ತಯಾರಾಗುವ ಬೊಂಬೆಗಳು ಸೌಂದರ್ಯ ಕಲಾವಂತಿಕೆ ಮತ್ತು ಗುಣಮಟ್ಟದಿಂದಾಗಿ ಜನಮನದಲ್ಲಿ ನೆಲೆಸಿವೆ. ಮೃದುವಾದ 'ಹಾಲೆ'

ಎಂಬ ಮರದಿಂದ ಚನ್ನಪಟ್ಟಣದ ಗೊಂಬೆಗಳನ್ನು ತಯಾರಿಸಲಾಗುತ್ತಿದ್ದು, ಇದು ಸ್ವಲ್ಪ ಮೃದುತ್ವ ಹೊಂದಿರುವುದರಿಂದ ಬೊಂಬೆಗಳ ತಯಾರಿಕೆಗೆ ಅತ್ಯಂತ ಸೂಕ್ತವಾಗಿದೆ. ಚೂರಾಗದ ಬಿರುಕು ಬೀಳದ ಗುಣವನ್ನು ಹೆಚ್ಚಾಗಿ ಹೊಂದಿದ ಈ ಮರದ ಒಂದು ಸಣ್ಣ ಕಡ್ಡಿಯನ್ನು ಸಹ ಗೊಂಬೆಯ ತಯಾರಿಕೆಗೆ ಅಳವಡಿಸಿಕೊಳ್ಳಬಹುದು. ಹಾಲೆ ಮರ ಸುಲಭವಾಗಿ ತಿರುಗುವುದಲ್ಲದೆ ಇದಕ್ಕೆ ಹಾಕುವ ಬಣ್ಣವೂ ಚೆನ್ನಾಗಿ ಹಿಡಿಯುತ್ತದೆ. ಈ ಪ್ರದೇಶದಲ್ಲಿ ಹಾಲೆಮರ ಹೆಚ್ಚಾಗಿ ದೊರಕುವುದರಿಂದ ಬಣ್ಣದ ಸಾಮಾನುಗಳು, ಇವುಗಳನ್ನು ತಯಾರಿಸುವ ಕೈಗಾರಿಕೆಗಳಿವೆ. ಇಲ್ಲಿನ ಬಣ್ಣದ ಸಾಮಾನುಗಳಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಅಮೇರಿಕಾ, ಹಾಲೆಂಡ್, ಡೆನ್ಮಾರ್ಕ್, ಜಪಾನ್, ಜರ್ಮನಿ ಮುಂತಾದ ರಾಷ್ಟ್ರಗಳಿಗೆ ಬಣ್ಣದ ಸಾಮಾನುಗಳನ್ನು ರಫ್ತು ಮಾಡಲಾಗುತ್ತಿದೆ. ಹಾಗಾಗಿ ಚನ್ನಪಟ್ಟಣ ಪ್ರಸಿದ್ಧ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾಗಿದೆ. ಒಟ್ಟಾರೆ ಜನರ ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ಇಲ್ಲಿನ ಭೌಗೋಳಿಕ ಲಕ್ಷಣಗಳು ಮಹತ್ವ ಪಾತ್ರ ವಹಿಸಿವೆಯೆನ್ನಬಹುದು.

ಗಂಗರ ಕಾಲದಲ್ಲಿ ಚನ್ನಪಟ್ಟಣ ಪ್ರಸಿದ್ಧಿಗೆ ಬಂದಿತು. ಗಂಗರ ದೊರೆ ಭೂವಿಕ್ರಮ ಮತ್ತು ಶ್ರೀಪುರುಷರ ಕಾಲದಲ್ಲಿ ಚನ್ನಪಟ್ಟಣ ಆರ್ಥಿಕ ಮತ್ತು ಸೈನಿಕ ದೃಷ್ಟಿಯಿಂದಲೂ ಆಯಕಟ್ಟಿನ ಸ್ಥಳವಾಗಿತ್ತು. ಆ ಕಾರಣದಿಂದಲೇ ಮಾಕುಂದ(ಮಂಕುಂದ ಎಂದೂ ಸಹ ಕರೆಯುತ್ತಾರೆ) ಅವರ ರಾಜಧಾನಿಯಾಗಿರಬೇಕು. ಮುಂದೆ ಚೋಳರ ಆಳ್ವಿಕೆಗೊಳಪಟ್ಟ ಅವಧಿಯಲ್ಲಿ ಇಲ್ಲಿನ (ಚನ್ನಪಟ್ಟಣ್ಣ) ಮಳೂರು, ಮಳೂರುಪಟ್ಟಣ, ಅಬ್ಬೂರು, ಕೂಡ್ಲೂರು, ಬ್ರಹ್ಮಣಿಪುರ ಇತರೆ ಸ್ಥಳಗಳು ವ್ಯಾಪಾರ ಮತ್ತು ಧಾರ್ಮಿಕ ಕೇಂದ್ರಗಳಾಗಿ ಪ್ರಸಿದ್ಧಿಗೆ ಬಂದವು. ನಂತರ ಇದು ಹೊಯ್ಸಳ ಮತ್ತು ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತು. ಚನ್ನಪಟ್ಟಣದ ಹೊಂಗನೂರು ಹೊಯ್ಸಳರ ಕಾಲದಲ್ಲಿ ಸೇನಾನೆಲೆಯಾಗಿ ಪ್ರಸಿದ್ಧಿಗೆ ಬಂದಿತು. ಇಲ್ಲಿನ ಸುತ್ತಮುತ್ತಲ ಹಳ್ಳಿಗಳಲ್ಲಿ ಅಸಂಖ್ಯಾತ ವೀರಗಲ್ಲುಗಳಿದ್ದು, ಆಳರಸರ ಸೇವೆಗೆ ಇಲ್ಲಿನ ಸ್ಥಳೀಯರು ಸೈನ್ಯಕ್ಕೆ ಸೇರಿ, ಯುದ್ಧಗಳಲ್ಲಿ ಭಾಗವಹಿಸಿ ಮಡಿದ ವಿಚಾರವನ್ನು ಇವು ತಿಳಿಸುತ್ತವೆ. ಈ ಮೂಲಕ ನಾಡಿನ ಜನರ ಕ್ಷಾತ್ರಗುಣವನ್ನು ಅರಿಯಬಹುದಾಗಿದೆ. ಚನ್ನಪಟ್ಟಣವನ್ನು ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದವರಲ್ಲಿ ಚನ್ನಪಟ್ಟಣದ ಪಾಳೆಯಗಾರರೆ ಪ್ರಮುಖರು. ಇವರು ೧೬ ಮತ್ತು ೧೭ನೇ ಶತಮಾನದಲ್ಲಿ ವಿಜಯನಗರದ ಸಂತತಿ(ಅರವೀಡು)ಯವರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಈ ಪಾಳೆಯಗಾರರು ಇಲ್ಲಿನ ದೇವಾಲಯಗಳಿಗೆ ದಾನದತ್ತಿ ಕೊಟ್ಟರಲ್ಲದೆ ಅವುಗಳನ್ನು ಪುನರ್ ರಚಿಸಿದರು.

ಮಾನವನ ಪ್ರತಿಭೆಯ ಅಭಿವ್ಯಕ್ತಿಯೇ ಕಲೆ. ಈ ಕಲೆಯ ಪರಮೋಚ್ಚ ರಚನೆಗಳೇ ದೇವಾಲಯಗಳು. ಸಮಾಜದ ಲೌಕಿಕ ಮತ್ತು ಆಧ್ಯಾತ್ಮಿಕ ನೆಲೆಗಳು ಈ ದೇವಾಲಯಗಳು. ಇಂತಹ ಕಲಾಕೃತಿಗಳ ಪರಂಪರೆಯಲ್ಲಿ ಚನ್ನಪಟ್ಟಣ ತಾಲ್ಲೂಕು ಎಲ್ಲಾ ಕಾಲದಲ್ಲೂ ಮುಂದು. ಚೋಳ, ಗಂಗ, ವಿಜಯನಗರ, ಹೊಯ್ಸಳ, ಮೈಸೂರು ಅರಸರ ಕಾಲದಲ್ಲಿ ನಿರ್ಮಾಣಗೊಂಡ ನೂರಾರು ದೇವಾಲಯಗಳು ತಾಲ್ಲೂಕಿನಾದ್ಯಂತ ಕಂಡುಬರುತ್ತವೆ. ಈ ದೇವಾಲಯಗಳಲ್ಲಿ ಚನ್ನಪಟ್ಟಣದ ಮಳೂರಿನ ಅಪ್ರಮೇಯ ಸ್ವಾಮಿ ದೇವಾಲಯ ಬಹಳ ಪ್ರಸಿದ್ಧವಾಗಿದ್ದು, ಇದನ್ನು ರಾಜರಾಜ ಚೋಳನ

ದಂಡನಾಯಕ ಅಪ್ರಮೇಯ ಕಟ್ಟಿಸಿದನೆಂದು ಅಲ್ಲಿನ ಸ್ಥಳೀಯರ ಅಭಿಪ್ರಾಯ. ಇದು ದ್ರಾವಿಡ ಶೈಲಿಯ ಶ್ರೇಷ್ಠ ರಚನೆಯಾಗಿದೆ. ಅಂಬೆಗಾಲಿಟ್ಟುಕೊಂಡು ಒಂದು ಕೈಯಲ್ಲಿ ಬೆಣ್ಣೆ ಹಿಡಿದಿರುವ ಇಲ್ಲಿನ ಬಾಲಕೃಷ್ಣನ ವಿಗ್ರಹ ಉಲ್ಲೇಖಾರ್ಹವಾಗಿದೆ. ಈ ದೇವಾಲಯಕ್ಕೆ ಭೇಟಿ ನೀಡಿದ್ದ ದಾಸಶ್ರೇಷ್ಠರಾದ ಪುರಂದರದಾಸರು ಅಂಬೆಗಾಲು ಕೃಷ್ಣನನ್ನು ನೋಡಿ ಭಕ್ತಿಪರವಶರಾಗಿ 'ಆಡಿಸಿದಳೆಶೋಧೆ ಜಗದೋದ್ದಾರನಾ'ಎಂಬ ಕೀರ್ತನೆಯನ್ನು ರಚಿಸಿದರೆಂದು ತಿಳಿದು ಬರುತ್ತದೆ. ಹಾಗೆಯೇ ಇಂದು ಭಾರತದ ಬಹುಭಾಗದಲ್ಲಿ ಹಿಂದೂ ಕಾನೂನಿಗೆ ಮೂಲಾಧಾರವೆಂದು ಪರಿಗಣಿಸಲ್ಪಟ್ಟಿರುವ 'ಮಿತಾಕ್ಷರ' ಎಂಬ ಕೃತಿ ಇಲ್ಲಿಯೇ ಯಜ್ಞವಲ್ಕ್ಯನಿಂದ ರಚಿಸಲ್ಪಟ್ಟಿತೆಂಬುದು ಬೆಳಕಿಗೆ ಬಂದಿದೆ.ಈ ಅಪ್ರಮೇಯಸ್ವಾಮಿ ದೇವಾಲಯದಲ್ಲಿ ಜರುಗುವ ಜಾತ್ರೆಗೆ ಬಹುದೂರದ ಊರುಗಳಿಂದ ಭಕ್ತಾದಿಗಳು ಆಗಮಿಸುತ್ತಾರೆ.

ಕರಕುಶಲಕರ್ಮಿಗಳ ತಾಣವಾಗಿರುವ ಚನ್ನಪಟ್ಟಣ 'ಬೊಂಬೆಗಳ ನಗರಿ' ಎಂಬ ಅಭಿದಾನಕ್ಕೆ ಪಾತ್ರವಾಗಿದೆ. ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು ಶ್ರೀಗಂಧದ ಕೆತ್ತನೆ ಕೆಲಸಗಳಿಗೆ ಪ್ರಸಿದ್ದವಾಗಿದ್ದರೆ ಚನ್ನಪಟ್ಟಣ ಮರದ ಆಟಿಕೆಗಳಿಗೆ ಪ್ರಸಿದ್ದಿಯಾಗಿದೆ. ಇಲ್ಲಿನ ಗೊಂಬೆಗಳು ತಮ್ಮ ಸೌಂದರ್ಯ, ವೈವಿಧ್ಯತೆ ಮತ್ತು ಉತ್ತಮಗುಣಮಟ್ಟದಿಂದಾಗಿ ಮಕ್ಕಳಿಂದ ಹಿಡಿದು ವೃದ್ಧರವರೆಗೂ ಎಲ್ಲರನ್ನು ಆಕರ್ಷಿಸುತ್ತವೆ. ಇಲ್ಲಿನ ಗೊಂಬೆಗಳ ಸೌಂದರ್ಯಕ್ಕೆ ಮಾರು ಹೋದ ಪ್ರಸಿದ್ಧ ಕವಿ ಜಿ.ಪಿ.ರಾಜರತ್ನಂ ಹೀಗೆ ಹಾಡಿ ಹೊಗಳಿದ್ದಾ;

ಚನ್ನಪಟ್ಟಣದ ಬಣ್ಣದ ಗೊಂಬೆ
ಚಿನ್ನದ ಹಾಗೆ ಹೊಳೆಯುವ ಗೊಂಬೆ
ಗರಗರ ತಿರುಗುವ ಮಾಟದ ಗೊಂಬೆ
ಕಣ್ಣನು ಮಿಟಿಕಿಸಿ ಆಡುವ ಗೊಂಬೆ. . .

ಇಲ್ಲಿನ ಚಿತ್ರಕಾರರೆಂಬ ಸಮುದಾಯಕ್ಕೆ ಸೇರಿದ ಪಾರಂಪರಿಕ ಕುಶಲಕರ್ಮಿಗಳಿಗೆ ಮೂರು ಶತಮಾನಗಳಿಗೂ ಹೆಚ್ಚಿನ ಇತಿಹಾಸವಿದೆ. ವಿವಿಧ ಜನಾಂಗಗಳ ಜೀವನಾಧಾರವಾಗಿರುವ ಈ ಉದ್ಯಮ ಎರಡು ಸಾವಿರಕ್ಕೂ ಹೆಚ್ಚು ಗುಡಿಕೈಗಾರಿಕೆಗಳನ್ನು ಹೊಂದಿದೆ. ಇದೆಲ್ಲವನ್ನು ಗಮನಿಸಿ ಕರಕುಶಲ ಕೈಗಾರಿಕೆಗೆ ವ್ಯವಸ್ಥಿತವಾಗಿ ಉತ್ತೇಜನ ನೀಡುವ ಸಲುವಾಗಿ ಸರ್ಕಾರ ಇಲ್ಲಿ ಕೈಗಾರಿಕಾ ತರಬೇತಿ ಕೇಂದ್ರವನ್ನು ತೆರೆದಿದೆ.

ಸ್ವಾತಂತ್ರ್ಯ ಪೂರ್ವದಲ್ಲಿಯೇ ಮೈಸೂರು-ಬೆಂಗಳೂರು ಮಧ್ಯೆ ಚನ್ನಪಟ್ಟಣದಲ್ಲಿ ಮಾತ್ರವೇ ಸರ್ಕಾರಿ ಮಾದರಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆ, ಪ್ರೌಢಶಾಲೆ ಪ್ರಾರಂಭವಾಗಿದ್ದು, ತಾಲ್ಲೂಕಿನ ಸುತ್ತಮುತ್ತಲ ವಿದ್ಯಾರ್ಥಿಗಳು ವಿದ್ಯೆ ಕಲಿಯಲು ಸಹಾಯವಾಗಿತ್ತು. ಇಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳು ಸ್ವಾತಂತ್ರ್ಯ ಚಳುವಳಿಯ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಈ ಶಾಲೆಯಲ್ಲಿ ಕಲಿತು ಸಮಾಜದಲ್ಲಿ ಗಣ್ಯರೆನಿಸಿಕೊಂಡವರೆಂದರೆ ಕಾನಕನಹಳ್ಳಿ ಕರಿಯಪ್ಪ, ತಿಟ್ಟಮಾರ್ನಹಳ್ಳಿ ವಿ.ವೆಂಕಟಪ್ಪ, ಅಕ್ಕೂರಿನ ಹೆಚ್.ಕೆ.ವೀರಣ್ಣಗೌಡ, ಪ್ರೊ.ಕೆ.ವೆಂಕಟಗಿರೀಗೌಡ, ಎಚ್.ಎಲ್.ನಾಗೇಗೌಡ, ಕೆ.ವಿ.ಶಂಕರೇಗೌಡ,

ಸಿ.ಕೆ.ವೆಂಕಟರಾಮಯ್ಯ, ಡಾ.ದೇ.ಜವರೇಗೌಡ, ಟಿ.ಕೆ.ರಾಮರಾವ್ ಇನ್ನು ಮುಂತಾದವರು. ಚನ್ನಪಟ್ಟಣದ ಈ ಸರ್ಕಾರಿ ಪ್ರೌಢಶಾಲೆಗೆ ಶತಮಾನ ತುಂಬಿ ಪ್ರಗತಿಯ ಹಾದಿಯಲ್ಲಿ ಮುನ್ನಡೆದಿದೆ.

ಸ್ವಾತಂತ್ರ್ಯಾನಂತರ ಚನ್ನಪಟ್ಟಣ ಇದೇ ಗತಿಯಲ್ಲಿ ಮುಂದುವರೆದು ಶೈಕ್ಷಣಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಸಾಧಿಸಿತು. ಸಾಂಸ್ಕೃತಿಕವಾಗಿಯೂ ಹೆಮ್ಮೆ ಪಡುವಂತಹ ಸಾಧನೆಯನ್ನು ಮಾಡಿದೆ. ಚನ್ನಪಟ್ಟಣದ ಸಾಂಸ್ಕೃತಿಕ ಹಿರಿಮೆಗೆ ಗರಿ ಮೂಡಿಸಿದ ಮಹನೀಯರುಗಳಾದ ಚ.ವಾಸುದೇವಯ್ಯ (ಪ್ರಥಮವಾಗಿ ಕನ್ನಡದಲ್ಲಿ ಬಾಲಬೋಧೆ ರಚಿಸಿದವರೆಂಬ ಹೆಗ್ಗಳಿಕೆ ಇವರದು), ಪ್ರಥಮ ಸಾಮಾಜಿಕ ಕಾದಂಬರಿ 'ಮಾಡಿದ್ದುಣ್ಣೋ ಮಹರಾಯ' ಬರೆದ ಎಂ.ಎಸ್.ಪುಟ್ಟಣ್ಣ, ನಾಡು ನುಡಿಗೆ ವಿಶಿಷ್ಟ ಸೇವೆ ಸಲ್ಲಿಸಿದ ಸಿ.ಕೆ.ವೆಂಕಟರಾಮಯ್ಯ, ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಉಪಕುಲಪತಿ, ನಾಡೋಜ ದೇ.ಜವರೇಗೌಡ, ಪತ್ತೇದಾರಿ ಕಾದಂಬರಿಕಾರ ಟಿ.ಕೆ.ರಾಮರಾಯ, ಮಕ್ಕಳ ಸಾಹಿತಿ ರಸಿಕ ಪುತ್ತಿಗೆ, ಸಾಹಿತಿ ಕಾಳೇಗೌಡ ನಾಗವಾರ, ಕನ್ನಡ ಭಾಷಾ ಪಂಡಿತ ಡಾ.ಕೆ.ಕೆಂಪೇಗೌಡ, ಚಲನಚಿತ್ರ ತಾರೆಯರಾದ ಪದ್ಮಭೂಷಣ ಪ್ರಶಸ್ತಿ ವಿಜೇತೆ ಬಿ.ಸರೋಜಾದೇವಿ, ಶ್ರೀನಾಥ, ಸಿ.ಆರ್.ಸಿಂಹ, ಪ್ರಸಿದ್ಧ ನಾಟಕಕಾರ ಹಾಗು ಕಂಪನಿ ಮಾಲೀಕರಾಗಿದ್ದ ಎಚ್.ಎಲ್.ಎನ್.ಸಿಂಹ ಇನ್ನು ಮುಂತಾದ ಪ್ರತಿಭಾನ್ವಿತ ವ್ಯಕ್ತಿಗಳು ನಾಡಿನ ಮೂಲೆ-ಮೂಲೆಯಲ್ಲಿ ಪಸರಿಸಿ ಚನ್ನಪಟ್ಟಣದ ಸಾಂಸ್ಕೃತಿಕ ಹಿರಿಮೆ ಗರಿಮೆಯನ್ನು ಹೆಚ್ಚಿಸಿ ತಾಲ್ಲೂಕಿಗೆ ಮಕುಟಪ್ರಾಯರೆನಿಸಿದ್ದಾರೆ. ರಾಜಕೀಯ ಕ್ಷೇತ್ರಕ್ಕೂ ಈ ತಾಲ್ಲೂಕು ನಾಡಿಗೆ ತನ್ನ ಕೊಡುಗೆಯನ್ನು ಸಲ್ಲಿಸುವ ಕೈಂಕರ್ಯದಲ್ಲಿ ಹಿಂದೆ ಬಿದ್ದಿಲ್ಲ. ಸಾಕಷ್ಟು ಮಂದಿ ಪ್ರಜಾನಿಷ್ಠ, ಸಾಮಾಜಿಕ ಕಳಕಳಿಯಿಂದ ಕೂಡಿದ ಶುದ್ಧರಾಜಕಾರಣಿಗಳನ್ನು ಇಲ್ಲಿ ಕಾಣಬಹುದು. ಹೀಗೆ ರಾಜಕೀಯ ಕ್ಷೇತ್ರಕ್ಕೂ ಮೆರಗು ತಂದು ತಾಲ್ಲೂಕಿನ ಅಭಿವೃದ್ಧಿಗೂ ಕಾರಣಕರ್ತರಾದವರಲ್ಲಿ ತಿಟ್ಟಮಾರನಹಳ್ಳಿ ವಿ.ವೆಂಕಟಪ್ಪ, ಬಿ.ಕೆ.ಪುಟ್ಟರಾಮಯ್ಯ, ಬಿ.ಜೆ.ಲಿಂಗೇಗೌಡ, ಡಿ.ಟಿ.ರಾಮು, ಕೆಂಗಲ್ ಹನುಮಂತಯ್ಯ, ಪ್ರೊ.ಕೆ.ವೆಂಕಟಗಿರಿಗೌಡ(ಪ್ರಖ್ಯಾತ ಅರ್ಥಶಾಸ್ತ್ರಜ್ಞ) ಇನ್ನು ಮುಂತಾದ ಮಹನೀಯರ ಸಾಲಿನಲ್ಲಿ ಚನ್ನಪಟ್ಟಣ ತಾಲ್ಲೂಕಿನ ಸಾದಹಳ್ಳಿಯಲ್ಲಿ ಜನಿಸಿ, ಮದ್ದೂರು ನೆಲದಲ್ಲಿ ಬೇರು ಬಿಟ್ಟು ಇಡೀ ಕರ್ನಾಟಕ ರಾಜಕಾರಣದಲ್ಲಿ ತಮ್ಮದೇ ಆದ ವಿಶಿಷ್ಟಛಾಪು ಮೂಡಿಸಿದ ವ್ಯಕ್ತಿಯೆಂದರೆ ಶ್ರೀ.ಹೆಚ್.ಕೆ.ವೀರಣ್ಣಗೌಡರು.

ಮನುಷ್ಯನ ವೈವಿಧ್ಯಮಯವಾದ ಬದುಕಿಗೆ ಒಂದೇ ಆಯಾಮ ಇರುವುದಿಲ್ಲ. ಹೋರಾಟದ ಹಾದಿ ಯಾವ ಸಮಯದಲ್ಲಿ ಯಾವ ತಿರುವು ಪಡೆಯುತ್ತದೆಯೋ ಹೇಳುವುದಕ್ಕಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಬದುಕಿನ ಒಂದೊಂದು ತಿರುವಿಗೂ ಅದರದೇ ಆದ ವೈಶಿಷ್ಟ್ಯತೆ ಇದೆ. ಜೊತೆಗೆ ಅವುಗಳಲ್ಲಿ ಸ್ವಾರಸ್ಯಕರ ಸನ್ನಿವೇಶಗಳೂ ಇವೆ. ಹಾಗಾಗಿ ಹೆಚ್.ಕೆ.ವೀರಣ್ಣಗೌಡರ ಜೀವನ ಹಲವಾರು ಟಿಸಿಲುಗಳನ್ನೊಳಗೊಂಡ ಒಂದು ವೃಕ್ಷದಂತೆ. ಇಂತಹ ವ್ಯಕ್ತಿಯ ಸಮಕಾಲೀನರು, ಕನ್ನಡದ ಸುಪ್ರಸಿದ್ಧ ಸಾಹಿತಿಗಳೂ, ಗಾಂಧಿವಾದಿಗಳೂ ಆದ ಗೊರೂರು ರಾಮಸ್ವಾಮಿ ಅಯ್ಯಂಗಾರರು ಹೆಚ್.ಕೆ.ವೀರಣ್ಣಗೌಡರ ಬಗೆಗಿನ ತಮ್ಮ ಅನಿಸಿಕೆ ಮತ್ತು ಅನುಭವವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ; "ಶ್ರೀಮಾನ್ ಹೆಚ್.ಕೆ.ವೀರಣ್ಣಗೌಡರ ಪರಿಚಯ ನನಗೆ ಸುಮಾರು ನಲವತ್ತು ವರುಷಗಳಿಗಿಂತ ಹೆಚ್ಚು ಕಾಲದಿಂದ ಇದೆ. ಅವರ ಹೆಸರು ಕನ್ನಡ ನಾಡಿನಲ್ಲಿ ಐವತ್ತು ವರುಷಗಳಿಂದಲೂ ಪತ್ರಿಕಾ ಪ್ರಕಾಶಕರಾಗಿ,

ಸಂಪಾದಕರಾಗಿ, ರೈತ ಮುಖಂಡರಾಗಿ, ಸಮಾಜ ಸೇವಾ ಕೆಲಸಗಾರರಾಗಿ, ಕಾಂಗ್ರೆಸ್ ಮುಖಂಡರಾಗಿ, ರಾಜಕೀಯ ಧುರೀಣರಾಗಿ, ದಕ್ಷ ಆಡಳಿತಗಾರರಾಗಿ ಕೇಳಿ ಬರುತ್ತಿದೆ. ದೇಶಾಭ್ಯುದಯದ ಎಲ್ಲಾ ಕ್ಷೇತ್ರಗಳಲ್ಲಿಯೂ ಅವರು ಈ ಐವತ್ತು ವರುಷಗಳ ಕಾಲದಲ್ಲಿ ನಿಸ್ವಾರ್ಥತೆಯಿಂದ ದುಡಿದು ಕನ್ನಡನಾಡಿನ ಜನತೆಯ ಪ್ರೀತಿ, ಗೌರವಕ್ಕೆ ಪಾತ್ರರಾಗಿದ್ದವರು. ಅವರ ಜೀವಿತದ ಪ್ರತಿಯೊಂದು ಕ್ಷಣವನ್ನು ನಾಡ ಏಳಿಗೆಗಾಗಿಯೇ ವಿನಿಯೋಗಿಸಿರುವವರು ಎಂಬುದು ನನ್ನ ಅನುಭವ".[೨] ಇಂತಹ ವಿಶಿಷ್ಟ ವ್ಯಕ್ತಿತ್ವ ಹೊಂದಿರುವ ಹೆಚ್.ಕೆ.ವೀರಣ್ಣಗೌಡರ ಜೀವನವನ್ನು ಆದಷ್ಟು ಸಮಗ್ರವಾಗಿ ಅರಿಯಬೇಕಾದರೆ ದೃಷ್ಟಿ ದುರ್ಬಿನ್ನಿನಲ್ಲಿ ಅವರ ಬದುಕಿನ ಎಳೆ,ಎಳೆಗಳನ್ನು ಒಟ್ಟು ಗೂಡಿಸಿ ವೀಕ್ಷೀಸಬೇಕಾಗುತ್ತದೆ.

### ೨.೨ ಕೌಟುಂಬಿಕ ಹಿನ್ನೆಲೆ:-

ಒಬ್ಬ ವ್ಯಕ್ತಿಯ ವ್ಯಕ್ತಿತ್ವ ವಿಕಾಸಗೊಳ್ಳುವಲ್ಲಿ ಆತನ ಪರಿಸರ ಹಾಗು ಕುಟುಂಬದ ಹಿನ್ನೆಲೆ ಪ್ರಭಾವ ಬೀರುತ್ತದೆ. ವೀರಣ್ಣಗೌಡರು ಗುರುತಿಸಲ್ಪಡುವಂತಹ ವ್ಯಕ್ತಿಯಾಗಲು ಅವರು ಹುಟ್ಟಿ ಬೆಳೆದ ಕುಟುಂಬದ ಪಾಲೂ ಇದೆ. ಹೆಚ್.ಕೆ.ವೀರಣ್ಣಗೌಡರು ಹುಟ್ಟಿದ್ದು ಚನ್ನಪಟ್ಟಣ ತಾಲ್ಲೂಕಿನ ಸಾದಹಳ್ಳಿ ಗ್ರಾಮದಲ್ಲಿಯಾದರೂ ಬೆಳೆದಿದ್ದು ಹೊಸಹಳ್ಳಿ ಮತ್ತು ಅವ್ವೇರಹಳ್ಳಿಯಲ್ಲಿ. ತಂದೆಯ ಸ್ವಗ್ರಾಮ ಅವ್ವೇರಹಳ್ಳಿಯಲ್ಲಿ ಬೆಳೆದ ಹೆಚ್.ಕೆ.ವೀರಣ್ಣಗೌಡರಿಗೆ ಈ ಗ್ರಾಮಕ್ಕೆ ಈ ಹೆಸರು ಬರಲು ಕಾರಣವೇನು? ಎಂಬ ಕುತೂಹಲ ಬಾಲ್ಯದಿಂದಲೂ ಕಾಡುತ್ತಿತ್ತು. ಅವ್ವೇರಹಳ್ಳಿಗೆ ಎರಡು ಮೈಲಿ ದೂರದಲ್ಲಿ ಮಳೂರು ಪಟ್ಟಣವೆಂಬ ದೊಡ್ಡ ಗ್ರಾಮವಿದೆ. ಆ ಸ್ಥಳ ಬಹಳ ಹಿಂದೆ ವಿಜಯನಗರದ ಪಾಳೇಗಾರರಿಗೆ ಒಳಪಟ್ಟಿತ್ತೆಂದು, ಪಾಳೇಗಾರರ ಅರಮನೆಯಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರು (ಅವ್ವೆಯರು) ಈ ಗ್ರಾಮದಲ್ಲಿ ನೆಲೆಸಿದ್ದರಿಂದ ಈ ಗ್ರಾಮಕ್ಕೆ ಅವ್ವೇರಹಳ್ಳಿ ಎಂಬ ಹೆಸರು ಬಂದಿರಬಹುದೆಂಬ ಹೆಚ್.ಕೆ.ವೀರಣ್ಣಗೌಡರ ಕಾಲಾನಂತರದ ಊಹೆಯಾಗಿತ್ತು. ಅವರ ಈ ಊಹೆಗೆ ಪುಷ್ಠಿ ನೀಡುವಂತೆ ಐತಿಹಾಸಿಕವಾಗಿ ಗಂಗರ, ಚೋಳರ, ಹೊಯ್ಸಳರ, ವಿಜಯನಗರ ಅರಸರ, ಮೈಸೂರು ಅರಸರ, ಹೈದರಾಲಿ, ಟಿಪ್ಪು ಮತ್ತು ಪಾಳೇಗಾರರ ಆಳ್ವಿಕೆಗೆ ಚನ್ನಪಟ್ಟಣ ಒಳಪಟ್ಟಿತ್ತು ಎಂಬುದಕ್ಕೆ ತಾಲ್ಲೂಕಿನಾದ್ಯಂತ ಈ ರಾಜರುಗಳು ನಿರ್ಮಿಸಿರುವ ದೇವಾಲಯಗಳು ಹಾಗು ಇವರ ಕಾಲದ ಶಾಸನಗಳು ದೊರೆತಿವೆ.

ಬಹಳ ಹಿಂದಿನಿಂದಲೂ ಇವರ ಕುಟುಂಬಕ್ಕೊಂದು ಘನತೆಯಿತ್ತು. ಹೆಚ್.ಕೆ.ವೀರಣ್ಣಗೌಡರ ವಂಶಸ್ಥರ ಹಿರಿಮೆಯಿಂದ ಅವರನ್ನು 'ಹೋಬಳಿ ವೀರೇಗೌಡರ' ವಂಶಕ್ಕೆ ಸೇರಿದವರೆಂದು ಕರೆಯುವುದುಂಟು. ಇವರದು ವಂಶ ಪಾರಂಪರ್ಯವಾಗಿ ಕುಲೀನ ಕುಟುಂಬವಾಗಿದ್ದು, ಸಾಕಷ್ಟು ಆಸ್ತಿ-ಪಾಸ್ತಿ, ತೋಟ ಗದ್ದೆಗಳು ಇದ್ದವೆಂದು ತಿಳಿದುಬರುತ್ತದೆ. ಇವರ ವಂಶಸ್ಥರ ಹಿರಿಮೆಗೆ ಕಾರಣವನ್ನು ಹುಡುಕಿದಾಗ ಕೆಲವು ಘಟನೆಗಳನ್ನು ಇಲ್ಲಿ ಅವಲೋಕಿಸಿ ಆ ಮೂಲಕ ಇದನ್ನು

---

[೨] ಚಿತ್ರಗುಪ್ತ ಸ್ಮರಣೆ, ಪುಟ -೩೦, ೩೧.

ಖಚಿತಪಡಿಸಿಕೊಳ್ಳಬಹುದಾಗಿದೆ. ಕಮಿಷನರ್ ಆಡಳಿತದ ಪ್ರಾರಂಭದ ಕಾಲದಲ್ಲಿ (ಮೈಸೂರು ೧೮೩೧ ರಿಂದ ೧೮೮೧ ರವರೆಗೂ ಬ್ರಿಟಿಷ್ ಕಮಿಷನರ್‌ಗಳ ಆಡಳಿತಕ್ಕೊಳಪಟ್ಟಿತ್ತು) ಬ್ರಿಟಿಷ ಅಧಿಕಾರಿಯೊಬ್ಬ ತನ್ನ ಸಿಬ್ಬಂದಿಯೊಂದಿಗೆ ಒಮ್ಮೆ ಹೆಚ್.ಕೆ.ವೀರಣ್ಣಗೌಡರ ವಂಶಸ್ಥರಾದ ಹಿರಿಯ ವೀರೇಗೌಡರ ತೋಟದ ಹಾದಿಯಲ್ಲಿ ಬರುವಾಗ ಬಿಸಿಲಿನಿಂದ ಬಸವಳಿದು ಬಾಯಾರಿ ಬಂದು ನೀರು ಕೇಳಿದಾಗ ತರುಣ ವೀರೇಗೌಡರು ನೀಡಿದ ಎಳನೀರು ಕುಡಿದು ಸಂತೃಪ್ತರಾಗಿ ಹಣ ಕೊಡಲು ಮುಂದಾದಾಗ ವೀರೇಗೌಡರು ಹಣ ಪಡೆಯಲು ನಿರಾಕರಿಸಿ 'ನನ್ನ ತಂದೆ ಬಾಯಾರಿ ಬಂದವರಿಗೆ ಎಳನೀರು ಕೊಟ್ಟಿದ್ದಕ್ಕೆ ನನ್ನನ್ನೇನು ಆಕ್ಷೇಪಿಸುವುದಿಲ್ಲವೆಂದು, ಅದಕ್ಕೆ ಬದಲಾಗಿ ಸಂತೋಷ ಪಟ್ಟಾರು'ಎಂದು ನುಡಿದರು. ಈ ಮಾತಿನಿಂದ ವೀರೇಗೌಡರ ಧೈರ್ಯ, ಚಮತ್ಕಾರ, ಔದಾರ್ಯಗಳನ್ನು ಮೆಚ್ಚಿ ಬ್ರಿಟಿಷ್ ಅಧಿಕಾರಿ ವೀರೇಗೌಡರನ್ನು ಶೇಕದಾರರನ್ನಾಗಿ ನೇಮಿಸುವುದಾಗಿ ಅದಕ್ಕೆ ಅವರ ತಂದೆಯವರ ಅನುಮತಿ ಕೇಳಿದರು. ಅವರ ತಂದೆ ಇರುವನೊಬ್ಬ ಮಗನನ್ನು ಕರೆದುಕೊಂಡು ಹೋಗಬೇಡಿರೆಂದು ಅಡ್ಡಬಿದ್ದು ಕೇಳಿಕೊಂಡರು. ಅಧಿಕಾರಿ ಅವರಿಗೆ ಸಮಾಧಾನ ಹೇಳಿ ಹುಡುಗನನ್ನು ತಮ್ಮ ಮದ್ದೂರು ಮೊಕ್ಕಾಂಗೆ ಬರುವಂತೆ ಹೇಳಿದರು. ನಂತರ ವೀರೇಗೌಡರು ತಮ್ಮ ತಂದೆಗೆ ತಿಳಿಸದೆ ಮದ್ದೂರಿಗೆ ಹೋದರು. ಅಲ್ಲಿ ಅವರಿಗೆ ಕ್ಲೋಸ್‌ಪೇಟೆ( ಈಗಿನ ರಾಮನಗರ)ಗೆ ಬರುವಂತೆ ತಿಳಿಸಿದರು. ಅಲ್ಲಿ ಅವರನ್ನು ಆ ಹೋಬಳಿ ಶೇಕದಾರರನ್ನಾಗಿ ನೇಮಿಸಿ ಅಲ್ಲೆ ಹುಕ್ಕುಂ ಬರೆದುಕೊಟ್ಟರು. ಬಹಳ ದಕ್ಷತೆಯಿಂದ, ನಿಷ್ಠೆಯಿಂದ ತಮ್ಮ ಕರ್ತವ್ಯ ನಿರ್ವಹಿಸುತ್ತಿದ್ದ ವೀರೇಗೌಡರಿಗೆ ತದನಂತರದಲ್ಲಿ ಏಳು ಹೋಬಳಿಗಳ ಶೇಕದಾರಿಕೆ ಲಭ್ಯವಾಯಿತು. ವೀರೇಗೌಡರು ಅನೇಕ ಹಳ್ಳಿಗಳಲ್ಲಿ ಅನುಕೂಲವಾದ ಕಡೆಗಳಲ್ಲಿ ಕೆರೆಗಳನ್ನು ಕಟ್ಟಿಸಿಕೊಟ್ಟು ರೈತರ ಕೃತಜ್ಞತೆಗೆ ಪಾತ್ರರಾಗಿದ್ದರೆಂದು ಹೆಚ್.ಕೆ.ವೀರಣ್ಣಗೌಡರು ತಮ್ಮ ಆತ್ಮಕಥೆ 'ಬದುಕು-ಮೆಲುಕು'ವಿನಲ್ಲಿ ವಿವರಣೆ ನೀಡಿದ್ದಾರೆ. ಅಲ್ಲದೆ ಈಗಿನ ಅವರ ಸಂಬಂಧಿಗಳು, ಸ್ನೇಹಿತರು ಇದೇ ವಿಷಯವನ್ನು ಇಂದಿಗೂ ಸ್ಮರಣೆಯಲ್ಲಿರಿಸಿಕೊಂಡು ಬಂದಿದ್ದಾರೆ. ಇದರಿಂದ ಅವರ ಕುಟುಂಬಕ್ಕೆ 'ಹೋಬಳಿ ವೀರೇಗೌಡರ' ವಂಶಸ್ಥರೆಂಬ ಅಭಿದಾನ ಪ್ರಾಪ್ತವಾಗಿದೆ ಎಂದು ತಿಳಿದುಬರುತ್ತದೆ.

ತಮ್ಮ ಕುಟುಂಬದ ಇನ್ನೊಬ್ಬ ಹಿರಿಯ ವ್ಯಕ್ತಿಯ ನಡವಳಿಕೆಯ ಬಗ್ಗೆ ವೀರಣ್ಣಗೌಡರು ಹೀಗೆ ವಿವರಿಸಿದ್ದಾರೆ. ಇವರ ಹಿರಿಯರು ಅವ್ವೇರಹಳ್ಳಿ ಮತ್ತು ಹೊಸಹಳ್ಳಿ ಊರುಗಳಿಗೆ ವಂಶಪಾರಂಪರ್ಯವಾಗಿ ಪಟೇಲರಾಗಿದ್ದುದರಿಂದ ಎರಡು ಗ್ರಾಮಗಳಲ್ಲೂ ಹೆಚ್.ಕೆ.ವೀರಣ್ಣಗೌಡರ ಕುಟುಂಬದವರಿಗೆ ಆಸ್ತಿ-ಪಾಸ್ತಿಗಳು ಇದ್ದವು. ಹೊಸಹಳ್ಳಿ ಊರು ಮುಂದೆ ಇದ್ದ ತೋಟ ವೀರಣ್ಣಗೌಡರ ವಂಶಸ್ಥರಾದ ಮಲ್ಲೆಗೌಡರಿಗೆ ಸೇರಿದ್ದು, ಅದರಲ್ಲಿ ತೆಂಗು, ಅಡಿಕೆ, ಬಾಳೆ ಸಮೃದ್ಧವಾಗಿ ಬೆಳೆದಿತ್ತು. ಅಂದಿನ ಕಾಲದಲ್ಲಿ ಒಬ್ಬ ಪೋಲಿಸ್ ದಫೇದಾರ ಅಥವ ಒಬ್ಬ ಶೇಕದಾರ ಎಂದರೆ ಅವರೇ ದೊಡ್ಡ ಅಧಿಕಾರಿಗಳೆಂದು ಜನ ಭಾವಿಸಿದ್ದರು. ಹಾಗಾಗಿ ಆ ಅಧಿಕಾರಿಗಳು ಕೇಳುವ ವಸ್ತುಗಳನ್ನು ಜನ ಪುಕ್ಕಟೆಯಾಗಿ ನೀಡಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಒಮ್ಮೆ ಶೇಕದಾರರ ಜವಾನ ಬಂದು ಮಲ್ಲೇಗೌಡರಿಗೆ 'ಶೇಕದಾರ ಸ್ವಾಮಿಗಳ ಮನೆಯಲ್ಲಿ ಏನೋ ಕಾರ್ಯಕ್ರಮವಿದೆ ಅದಕ್ಕೆ ತೆಂಗಿನಕಾಯಿ, ಬಾಳೆಯೆಲೆ, ಬಾಳೆಗೊನೆ ಬೇಕು, ಅದನ್ನು ನಿನಗೆ ಕೇಳಲು ನಮ್ಮನ್ನು ಕಳುಹಿಸಿದ್ದಾರೆ. ಅವುಗಳನ್ನು ಕೂಡಲೆ

ತೋಟಿಗಳ ಕೈಲಿ ಕಳುಹಿಸಿಕೊಡು' ಎಂದು ಏಕವಚನದಲ್ಲಿ ಆಜ್ಞಾಪಿಸುತ್ತಾನೆ. ಇದರಿಂದ ಕೋಪಗೊಂಡು 'ಬಂದಿರುವವನು ಜವಾನ, ನನ್ನಲ್ಲಿಗೆ ಭಿಕ್ಷೆಗೆ ಬಂದಿದ್ದಾನೆ. ಆದರೆ ಅವನ ಮಾತು ಎಷ್ಟು, ಕೂತಲ್ಲಿಂದಲೇ ನನಗೆ ಅಪ್ಪಣೆ ಮಾಡುವವನಂತೆ ಏಕವಚನದಲ್ಲಿ ಮಾತನಾಡುತ್ತಿದ್ದಾನೆ', ಆಗಲಿ, ಈ ಹಾಳು ತೋಟದಿಂದಲ್ಲವೆ ಕೈಗೆ ಎಟುಕದವರೂ ನನ್ನನ್ನು ಈ ರೀತಿ ಮಾತನಾಡಿಸುತ್ತಿರುವುದು, ಈ ತೋಟ ಹಾಳಾಗಲಿ, ಎಂದು ನಿರ್ಧರಿಸಿಕೊಂಡ ಮಲ್ಲೇಗೌಡರು ತೋಟಕ್ಕೆ ಬೆಂಕಿ ಇಟ್ಟರು. ಬೆಂಕಿಯನ್ನು ಆರಿಸಲು ಬಂದ ಜನರಿಗೆ 'ಆರಿಸಬೇಡಿ ನನ್ನ ಘನತೆಗೆ ಧಕ್ಕೆ ತರುವ ಈ ತೋಟ ಇದ್ದರೆಷ್ಟು ಹೋದರೆಷ್ಟು' ಎಂದು ಅವರನ್ನು ತಡೆದುಬಿಟ್ಟರು. ಆಸ್ತಿಗಿಂತ ಸ್ವಾಭಿಮಾನದಿಂದ ಬದುಕುವುದು ಮುಖ್ಯ ಎಂದು ಭಾವಿಸಿದ್ದರವರು. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ವಂಶಸ್ಥರು ಅತ್ಯಂತ ಸ್ವಾಭಿಮಾನಿಗಳಾಗಿ ಬದುಕು ನಡೆಸಿದವರು ಎಂದು ತಿಳಿದು ಬರುತ್ತದೆ.

ಇಂತಹ ಸಾತ್ವಿಕತೆ, ದಕ್ಷತೆ ಹಾಗೆಯೇ ಸ್ವಾಭಿಮಾನಿ ಗುಣಗಳನ್ನು ಮೈಗೂಡಿಸಿಕೊಂಡು ಬಾಳಿದ ಮನೆತನ ವೀರಣ್ಣಗೌಡರ ಮೇಲೂ ಸಹಜವಾಗಿಯೇ ಪ್ರಭಾವ ಬೀರಿರುವುದರಲ್ಲಿ ಸಂಶಯವಿಲ್ಲ. ಇದರೊಂದಿಗೆ ಗ್ರಾಮದ ಅಂದಿನ ವಾತಾವರಣ, ಅವರ ಹೆತ್ತವರ ಗುಣ ಮುಂತಾದವು ಅವರ ಮನಸ್ಸು ಬುದ್ಧಿಯ ಮೇಲೆ ಪರಿಣಾಮ ಮಾಡಿರಲೇಬೇಕೆಂಬ ಕಾರಣದಿಂದ ಹೊಸಹಳ್ಳಿಯ ಅಂದಿನ ಪರಿಸ್ಥಿತಿಯನ್ನು ಸಾಧ್ಯವಾದಷ್ಟು ಲಭ್ಯವಿರುವ ಮಾಹಿತಿಯ ಆಧಾರದ ಮೇಲೆ ರೂಪಿಸಿ ಚಿತ್ರಿಸುವ ಪ್ರಯತ್ನ ಮಾಡಲಾಗಿದೆ.

ಹೆಚ್.ಕೆ.ವೀರಣ್ಣಗೌಡರು ಚನ್ನಪಟ್ಟಣ ತಾಲ್ಲೂಕಿನ ಸಾದಹಳ್ಳಿ ಗ್ರಾಮದಲ್ಲಿ ೧೯೦೯ನೇ ಇಸವಿ ಮೇ ತಿಂಗಳ ೧ನೇ ತಾರೀಖಿನಂದು ಒಕ್ಕಲಿಗ ಕುಟುಂಬದಲ್ಲಿ ಹಿರಿಯ ಪುತ್ರನಾಗಿ ಜನಿಸಿದರು. ತಂದೆ ಪಟೇಲ್ ಕೆಂಚೇಗೌಡರು, ತಾಯಿ ಕೆಂಪಮ್ಮ. ನಿಷ್ಠಾವಂತ ಕುಲೀನ ಕುಟುಂಬ, ಸುಸಂಸ್ಕೃತ ಪರಿಸರ, ವೀರಣ್ಣಗೌಡರ ವ್ಯಕ್ತಿತ್ವದ ವಿಕಸನಕ್ಕೆ ಒತ್ತು ಕೊಟ್ಟಿತು. ಪಟೇಲ ಕೆಂಚೇಗೌಡರಿಗೆ ಇಬ್ಬರು ಹೆಂಡತಿಯರು. ಕೆಂಪಮ್ಮ ಮತ್ತು ನಿಂಗಮ್ಮ. ಕೆಂಪಮ್ಮನವರ ಮಕ್ಕಳು ; ಹೆಚ್.ಕೆ.ವೀರಣ್ಣಗೌಡ, ತಾಯಮ್ಮ (ಮಳೂರು ಪಟ್ಟಣದ), ಮತ್ತು ಹೆಚ್.ಕೆ.ಪುಟ್ಟಯ್ಯಗೌಡ. ನಿಂಗಮ್ಮನವರ ಮಕ್ಕಳು ಕೆಂಪಾಜಮ್ಮ, ಹೆಚ್.ಕೆ.ಪುಟ್ಟಸ್ವಾಮಿಗೌಡ, ಪುಟ್ಟವೀರಮ್ಮ, ಹೆಚ್.ಕೆ.ಕೃಷ್ಣಪ್ಪಗೌಡ, ಹೆಚ್.ಕೆ.ಮರಿಯಪ್ಪ ಮತ್ತು ಜಯಮ್ಮ. ಎಲ್ಲಾ ರೀತಿಯಿಂದಲೂ ದೊಡ್ಡ ಸಂಸಾರ, ದೊಡ್ಡ ವಹಿವಾಟು. ಅದಕ್ಕೆ ತಕ್ಕ ಹಾಗೆ ಮನೆಮಠ, ಜಮೀನು ಇದ್ದವು. ಇಂತಹ ದೊಡ್ಡ ಕುಟುಂಬದಲ್ಲಿ ಬೆಳೆದ ವೀರಣ್ಣಗೌಡರಲ್ಲಿ ಮನೆತನದಲ್ಲೇ ರಕ್ತಗತವಾಗಿ ಬಂದಿದ್ದ ಹಿರಿಮಗನಿಗೆ ತಕ್ಕ ಯಜಮಾನಿಕೆ ಪ್ರವೃತ್ತಿಯ ಲಕ್ಷಣ ಕಂಡುಬಂದಿದ್ದು ಸಹಜವಾಗಿಯೇ ಇತ್ತು. ಕೆಂಚೇಗೌಡರು ಹೊಸಹಳ್ಳಿ ಮತ್ತು ಅವ್ವೇರಹಳ್ಳಿ ಎರಡು ಊರುಗಳ ಪಟೇಲರಾದುದರಿಂದ ಊರಿನವರಿಗೆಲ್ಲಾ ಬೇಕಾದವರಾಗಿದ್ದರು. ಹಳ್ಳಿಗರ ಸಮಸ್ಯೆಗಳನ್ನು ಊರಿನ ಮುಖ್ಯಸ್ಥರಾಗಿ ಪರಿಹರಿಸುತ್ತಿದ್ದರು. 'ಬೆಳೆಯುವ ಪೈರು ಮೊಳಕೆಯಲ್ಲಿ' ಎನ್ನುವಂತೆ ವೀರಣ್ಣಗೌಡರು ಬಾಲ್ಯದಲ್ಲಿಯೇ ತಂದೆ ಇಲ್ಲದ ಸಮಯದಲ್ಲಿ ಹೊಲದಲ್ಲಿ ಕೆಲಸ ಮಾಡಿಸುವುದು, ಶಾಲೆಗೆ ತಾವೇ ಹೋಗಿ ಸೇರಿದ್ದು, ಶಾಲೆಯಲ್ಲಿ ವಿದ್ಯಾರ್ಥಿಸಂಘವನ್ನು ಕಟ್ಟಿದ್ದು-ಇವುಗಳನ್ನು ಗಮನಿಸಿದರೆ

ಬಾಲ್ಯದಲ್ಲೇ ವೀರಣ್ಣಗೌಡರಲ್ಲಿ ಮುಖಂಡತ್ವದ ಲಕ್ಷಣಗಳು ಕಾಣಿಸಿಕೊಳ್ಳಲು ಮನೆತನದ ಈ ಪರಿಸರವೂ ಕಾರಣವಾಗಿದೆ ಎನ್ನಬಹುದು.

ಹೆಚ್.ಕೆ.ವೀರಣ್ಣಗೌಡರ ತಂದೆ ಮಹಾ ಕೋಪಿಷ್ಟರು, ಅವರ ಮಾತಿಗೆ ಯಾರೂ ಎದುರಾಡುವಂತಿರಲಿಲ್ಲ. ಒಮ್ಮೆ ಹೊಸಹಳ್ಳಿಯಲ್ಲಿ ಗ್ರಾಮ ದೇವತೆಯ ಮೆರವಣಿಗೆಯ ಸಮಯದಲ್ಲಿ ನಡೆದ ಘಟನೆಯೊಂದು ಅವರ ಕೋಪದ ಉಗ್ರತೆಯನ್ನು ಸ್ಪಷ್ಟಪಡಿಸುತ್ತದೆ. 'ಸಾಂಸ್ಕೃತಿಕ ಮತ್ತು ಧಾರ್ಮಿಕ ಆಚರಣೆಗಳು ನಮ್ಮ ಜನರು ವಿದ್ಯೆಯ ಗಂಧವಿಲ್ಲದೆಯೂ, ಸುಸಂಸ್ಕೃತರಾಗಲು ಭದ್ರ ಬುನಾದಿ ಆಗಿದ್ದವು ಎಂಬುದು ಸಮಾಜ ವಿಜ್ಞಾನಿಗಳ ಶೋಧನೆ ಮತ್ತು ನಂಬುಗೆ'. ಈ ಹಿನ್ನೆಲೆಯಲ್ಲಿ ವಿದ್ಯಾವಂತರಾಗಿದ್ದ ಪಟೇಲ್ ಕೆಂಚೇಗೌಡರು ಹಳ್ಳಿ ಜನರ ಮನರಂಜನೆ ಮತ್ತು ಜ್ಞಾನಾಭಿವೃದ್ಧಿಗಾಗಿ ಅವ್ವೇರಹಳ್ಳಿ ಅಥವಾ ಹೊಸಹಳ್ಳಿಯಲ್ಲಿ ವರ್ಷದಲ್ಲಿ ಆಗಾಗ್ಗೆ ಬೈಲಾಟ, ದೊಂಬಿದಾಸರಾಟ, ತೊಗಲುಬೊಂಬೆಯಾಟ, ಹರಿಕಥೆ ಮುಂತಾದವುಗಳನ್ನು ಏರ್ಪಡಿಸುತ್ತಿದ್ದರು. ಹೀಗೆ ಹೊಸಹಳ್ಳಿಯಲ್ಲಿ ಬಯಲಾಟ ಏರ್ಪಡಿಸಿದ್ದ ದಿನ ಸುಳ್ಳೇರಿ ಗ್ರಾಮದ ಶ್ರೀ ಪಟ್ಟಲದಮ್ಮ ದೇವತೆಯ ಮೆರವಣಿಗೆಯನ್ನು ಭಕ್ತಾದಿಗಳು ಆಗಾಗ್ಗೆ ಏರ್ಪಡಿಸುತ್ತಿದ್ದಂತೆ ಆ ದಿನವೂ ಆಯೋಜಿಸಿದ್ದರು. ಅವ್ವೇರಹಳ್ಳಿ ಹೊಲೆಯ ಸಮುದಾಯದವರು ಹಬ್ಬ ಹರಿದಿನ ಮೆರವಣಿಗೆಗಳಲ್ಲಿ ಶ್ರೀ ಪಟ್ಟಲದಮ್ಮ ದೇವತೆಗೆ ಓಲಗ, ತಮಟೆ ಸೇವೆ ಮಾಡುತ್ತಿದ್ದರು (ಈಗಲೂ ಹಳ್ಳಿಗಳ ಕಡೆ ಹಬ್ಬ ಹರಿದಿನಗಳಲ್ಲಿ ಗ್ರಾಮ ದೇವರ ಮೆರವಣಿಗೆಗಳಲ್ಲಿ ಓಲಗ ತಮಟೆಯ ಸೇವೆಯು ಹರಿಜನರಿಂದಲೇ ನಡೆಯುತ್ತಿರುವುದನ್ನು ಕಾಣಬಹುದಾಗಿದೆ). ಆ ದಿನ ಅವರೆಲ್ಲರೂ ಹೊಸಹಳ್ಳಿಗೆ ಬಯಲಾಟ ನೋಡಲು ಹೋಗಿದ್ದರು. ಡೋಲು ಬಾರಿಸುವವ, ಮೋರಿ ಊದುವವ ಇಬ್ಬರೇ ಮೇಳದವರಿದ್ದರಿಂದ ಸುಳ್ಳೇರಿಯಲ್ಲಿ 'ಪೂಜೆ' ಹೊತ್ತಿದ್ದವನು ಇದ್ದಕ್ಕಿದ್ದಂತೆ ಆವೇಶ ಬಂದವನಂತೆ ಹೊಸಹಳ್ಳಿಯಲ್ಲಿ ಬಯಲಾಟ ನೋಡುತ್ತಾ ಕುಳಿತ್ತಿದ್ದ ಹೊಲೆಯರನ್ನು ಬಾಯಿಗೆ ಬಂದಂತೆ ಬಯ್ಯುತ್ತಾ ತುಂಬಿದ್ದ ಜನಸಂದಣಿಯ ಕಡೆ ನುಗ್ಗಿ ಬಂದ. ಇದರಿಂದ ಹೆಂಗಸರು, ಮಕ್ಕಳು ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಈ ಗಲಭೆಯಿಂದ ಮಲಗಿದ್ದ ಕೆಂಚೇಗೌಡರು ಎದ್ದು ಬಂದು ಏನಾಯಿತೆಂದು ತಿಳಿದು ಯಾರದೋ ಕೈಯಲ್ಲಿದ್ದ ದೊಣ್ಣೆಯನ್ನು ಕಿತ್ತುಕೊಂಡು 'ಪೂಜೆ' (ದೇವರ ಮೆರವಣಿಗೆ ಪಟವನ್ನು ತಲೆಯ ಮೇಲೆ ಹೊರುವುದಕ್ಕೆ 'ಪೂಜೆ' ಎನ್ನುತ್ತಾರೆ.) ಹೊತ್ತಿದ್ದವನಿಗೆ ಚೆನ್ನಾಗಿ ಬಿಗಿದರು. ಏಟಿನ ನೋವಿನಿಂದ ಆವೇಶ ಇಳಿದ ಆತನು 'ಇಲ್ಲ ಕೆಂಚಪ್ಪ ಹೊಡಿಬೇಡಿ' ಎಂದು ಕೂಗಿಕೊಳ್ಳಲಾರಂಭಿಸಿದನು. ಕೆಂಚೇಗೌಡರು 'ಕಳ್ಳ ಬಡ್ಡಿ ಮಗನೇ, ಏನೋ ನಿನಗೆ ಬಂದಿರುವುದು? ಹೆಂಗಸರು, ಮಕ್ಕಳು ಕುಳಿತಿದ್ದ ಭಾರಿ ಜನಸಂದಣಿಯಲ್ಲಿ ಈ ರೀತಿ ಪಂಜು ಹಿಡಿದುಕೊಂಡು ರಾಕ್ಷಸನಂತೆ ಕಿರುಚುತ್ತಾ ಜನರ ಮಧ್ಯದಲ್ಲಿ ನುಗ್ಗುತ್ತಿದ್ದೀಯೆ. . . ಓಲಗದವರು ಬರದೆ ಇದ್ದರೆ ನನಗೆ ಹೇಳಿಕಳುಹಿಸ ಬೇಕಾಗಿತ್ತು' ಎಂದು ಇನ್ನೂ ನಾಲ್ಕು ಏಟು ಹಾಕಿದರು. ಅಷ್ಟರಲ್ಲಿ ಯಾರೋ ಬಂದು ಕೆಂಚೇಗೌಡರ ಕೈಯಲ್ಲಿದ್ದ ಕೋಲನ್ನು ಕಿತ್ತುಕೊಂಡು ಅವರ ಮನೆಯ ಜಗುಲಿಗೆ ಕರೆ ತಂದು ಬಿಟ್ಟರು.

ಹೆಚ್.ಕೆ.ವೀರಣ್ಣಗೌಡರ ತಂದೆ ವಿದ್ಯಾವಂತರು, ವ್ಯವಹಾರ ಕುಶಲರಾಗಿದ್ದರು(ಅವರು ಎಲ್ಲಿಯವರೆಗೆ ಕಲಿತ್ತಿದ್ದರೆಂಬ ನಿಖರವಾದ ಮಾಹಿತಿ ಇಲ್ಲ. ಓದು ಬರಹ ಬರುವಷ್ಟು ತಿಳಿದಿದ್ದರೆಂದು ಅವರ ಮಗ ಈಗ ಅಮೇರಿಕಾದಲ್ಲಿ ನೆಲೆಸಿರುವ ಡಾ. ಹೆಚ್.ಕೆ.ಮರಿಯಪ್ಪನವರು ತಿಳಿಸಿದರು). ಆದರೂ ಅವರ ವೈಚಾರಿಕತೆ, (ಊರಿನ ಮುಖಂಡರಾಗಿ ಯಾವುದೇ ಸಮಸ್ಯೆಗಳಿಗೆ ಜಾತಿಪಕ್ಷಪಾತ ಮಾಡದೆ ನ್ಯಾಯವಿದ್ದ ಕಡೆ ಹೋರಾಡುತ್ತಿದ್ದುದು) ಜಾತ್ಯತೀತತನ, ಮಾನವಪರ ಕಾಳಜಿಗಳು ಇಲ್ಲಿ ಗುರುತಿಸುವಂತಹವು. ಅಲ್ಲದೆ ೧೯೦೦ ಇಸವಿಯ ಸುಮಾರಿಗೆ ಪಾಶ್ಚಾತ್ಯರ ಜೀವನಶೈಲಿ ಹಳ್ಳಿ ಜನಜೀವನದ ಮೇಲೆ ತನ್ನ ಪ್ರಭಾವ ಬೀರಿತ್ತು ಎಂಬುದಕ್ಕೆ ಕೆಂಚೇಗೌಡರು ನಾಗರೀಕ ಜೀವನ ನಡಿಸುತ್ತಿದ್ದುದೇ ಸಾಕ್ಷಿ. ಕೋಟು, ಷರ್ಟು, ಕಾಲರ್, ನೆಕ್‌ಟೈ ಇವುಗಳನ್ನೆಲ್ಲಾ ತೊಡುತ್ತಿದ್ದರು. ಜೀವನ ಶೈಲಿಯ ಜೊತೆಗೆ ತಮ್ಮ ಕಸುಬಿನಲ್ಲಿಯೂ ಆಧುನಿಕತೆಯನ್ನು ಕಂಡಿದ್ದರು. ಅಂದರೆ ಸುಮಾರು ೧೯೧೦ –೧೧ನೇ ಇಸವಿ ಹೊತ್ತಿಗೆ ಮದರಾಸಿನ ಮ್ಯಾಸಿ ಕಂಪನಿಯ ಕಬ್ಬಿಣದ ನೇಗಿಲುಗಳು, ಒಂದು ಮೇಳಿಯ ಯುರೇಕ ನೇಗಿಲುಗಳು, ಬಾವಿಯಿಂದ ನೀರೆತ್ತುವ ಯಂತ್ರ ಇವೇ ಮುಂತಾದ ನವೀನ ವ್ಯವಸಾಯೋಪಕರಣಗಳನ್ನು ಬಳಕೆಯಲ್ಲಿ ತಂದಿದ್ದರು. ಅವರಿಗೆ ಇಂಗ್ಲೀಷ್ ಬರುತ್ತಿರಲಿಲ್ಲವಾದರೂ ಸಾಮಾನ್ಯ ಸಿವಿಲ್ ಲಾ ಚೆನ್ನಾಗಿ ಅಂದರೆ ಹೊಸ ಲಾಯರುಗಳಿಗೆ ಹೇಳಿ ಕೊಡುವಷ್ಟರ ಮಟ್ಟಿಗೆ ತಿಳಿದಿತ್ತೆನ್ನಬಹುದು. ಸಾಂಪ್ರದಾಯಿಕವಾದ ಜಡ್ಡುಗಟ್ಟಿದ ಮನೋಭಾವನೆ ಹೊಂದಿರದೆ ಅಂದಂದಿನ ವರ್ತಮಾನಕ್ಕೆ ತಮ್ಮನ್ನು ಅಣಿಗೊಳಿಸಿಕೊಳ್ಳುತ್ತಿದ್ದ ಇವರ ಮನಸ್ಸು ಪ್ರಗತಿಯ ದಾರಿಯಲ್ಲಿ ಹೆಜ್ಜೆ ಇಡುವಂತೆ ಮಾಡುತ್ತಿತ್ತು.

ಒಮ್ಮೆ ಹೊಸಹಳ್ಳಿಯ ಕೆಲ ಗ್ರಾಮಸ್ಥರು ವೀರಣ್ಣಗೌಡರ ತಂದೆಗೆ ಫಲತಾಂಬೂಲದೊಂದಿಗೆ ಚಿನ್ನದ ಕಪ್ಪವನ್ನಿಟ್ಟು ಧನ್ಯವಾದ ಹೇಳಲು ಮನೆಗೆ ಬಂದರು. ಕೆಂಚೇಗೌಡರು 'ಏನ್ರೋ ಇದೆಲ್ಲ?' ಎಂದು ಪ್ರಶ್ನಿಸಿದರು. ಅದಕ್ಕೆ ಅವರಲ್ಲಿ ಒಬ್ಬ 'ಏನೂ ಇಲ್ಲಪ್ಪ ನಮ್ಮ ಸಂತೋಷ, ನೀವು ನಮ್ಮ ವ್ಯಾಜ್ಯ ಗೆದ್ದುಕೊಟ್ಟಿರಿ ಅದಕ್ಕಾಗಿ ಇದು ನಾವು ಸಲ್ಲಿಸುವ ಮರ್ಯಾದೆ' ಎಂದನು (ಯಾವ ತಕರಾರು ಎಂಬುದನ್ನು ಹೆಚ್.ಕೆ.ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ಸ್ಪಷ್ಟಪಡಿಸಿಲ್ಲ. ಅಲ್ಲದೆ ಈಗಿರುವ ಅವರ ಯಾವ ಸಂಬಂಧಿಕರಿಗೂ ಈ ವಿಷಯವಾಗಿ ಯಾವುದೇ ಮಾಹಿತಿ ತಿಳಿದಿಲ್ಲ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ). ಆಗ ಕೆಂಚೇಗೌಡರು 'ಅಲ್ರಯ್ಯ, ಊರ ಪಟೇಲನಾಗಿ ಯಾರ ಕಡೆ ನ್ಯಾಯ ಇದೆ ಎಂಬುದು ನನಗೆ ಗೊತ್ತಿತ್ತು. ಅದಕ್ಕಾಗಿ ನಾನು ನಿಮ್ಮ ಪರವಹಿಸಿದೆ. ಅಲ್ಲದೆ ನಾನು ಮಾಡಿದ್ದು ತಾನೇ ಏನು? ನಿಮಗೆ ಬೆಂಗಳೂರಲ್ಲಿ ಒಬ್ಬ ಒಳ್ಳೆಯ ಲಾಯರನ್ನು ಗೊತ್ತು ಮಾಡಿಕೊಟ್ಟೆ. ನಿಜಾಂಶಗಳನ್ನೊಳಗೊಂಡಿದ್ದ ಕಾಗದ ಪತ್ರಗಳನ್ನು ಲಾಯರಿಗೆ ಒದಗಿಸಿಕೊಟ್ಟೆ. ಆ ಆಧಾರದ ಮೇಲೆ ಲಾಯರು ವಾದಿಸಿದರು. ನಿಮ್ಮ ಕಡೆ ನ್ಯಾಯ ಇದ್ದುದರಿಂದ ನಿಮಗೆ ಜಯವಾಯಿತು. ಅದಕ್ಕಾಗಿ ನನಗೇಕೆ ಇದೆಲ್ಲಾ? ನೀವು ಅದನ್ನು ಮರ್ಯಾದೆ ಎಂದು ತಿಳಿದುಕೊಂಡಿರಬಹುದು. ಆದರೆ ಇದನ್ನು ನಾನು ಒಂದು ಬಗೆಯ ಲಂಚವೆಂದೇ ತಿಳಿಯುತ್ತೇನೆ. ಒಂದು ಕೆಲಸ ಮಾಡಿಕೊಟ್ಟು ಅದಕ್ಕಾಗಿ ಏನೇ ತೆಗೆದುಕೊಂಡರೂ ಅದು ಒಂದು ರೀತಿಯ ಲಂಚವೇ ಸರಿ. ನಿಮ್ಮ ಕೆಲಸ ನಡೆಸಿದ ಲಾಯರಿಗೆ ಫೀಸು

ಕೊಟ್ಟಿದ್ದೀರಿ, ಆದ್ದರಿಂದ ಇದು ಸರಿಯಲ್ಲ' ಎಂದರು. ಆದರೆ ಗ್ರಾಮಸ್ಥರು ಕೆಂಚೇಗೌಡರ ಮಾತನ್ನು ಒಪ್ಪಲಿಲ್ಲ. ಆಗ 'ಆ ಕಪ್ಪವನ್ನು ಮಾರಿ ಬಂದ ಹಣದಲ್ಲಿ ಊರಿನ ವೆಂಕಟರಮಣಸ್ವಾಮಿ ದೇವಸ್ಥಾನದ ಜೀರ್ಣೋದ್ಧಾರ ಕೆಲಸ ಮಾಡಿಸೋಣ'ಎಂದ ಕೆಂಚೇಗೌಡರ ಮಾತಿಗೆ ಗ್ರಾಮಸ್ಥರೆಲ್ಲರೂ ಸಮ್ಮತಿಸಿದರು. ಈ ಪ್ರಕರಣವು ಹೆಚ್.ಕೆ.ವೀರಣ್ಣಗೌಡರ ತಂದೆಯವರ ಪ್ರಾಮಾಣಿಕತೆ, ನ್ಯಾಯಪರತೆ ಗುಣಗಳನ್ನು ಅಭಿವ್ಯಕ್ತಿಗೊಳಿಸುತ್ತದೆ. ಈ ಘಟನೆಗಳು ಹೆಚ್.ಕೆ.ವೀರಣ್ಣಗೌಡರ ಮೇಲೆ ಬಹಳ ಪ್ರಭಾವ ಬೀರಿದವು. ಊರ ಗೌಡರೆಂದರೆ ನಮ್ಮ ವ್ಯವಸ್ಥೆಯಲ್ಲಿ ಪಟ್ಟಭದ್ರ ಹಿತಾಸಕ್ತಿಗೆ ಮತ್ತೊಂದು ಹೆಸರು, ಶ್ರೇಷ್ಠ ಶಕ್ತಿಯ ಸಂಕೇತ. ಆದರೆ ಇದಕ್ಕೆ ಹೊರತಾದವರು ಕೆಂಚೇಗೌಡರು. ಇಂತಹ ಉದಾತ್ತ ತಂದೆಯ ಆದರ್ಶಗಳೇ ವೀರಣ್ಣಗೌಡರು ಜನಪರ ಚಿಂತಕರಾಗಲು ಹಿನ್ನೆಲೆಯಾಗಿ ಪರಿಣಮಿಸಿದವು. ಸಚಿವರಾದಾಗಲೂ ಭ್ರಷ್ಟತನಕ್ಕೆ ಎಡೆಗೊಡಲಿಲ್ಲ. ತಂದೆಯ ಈ ಗುಣ ಅವರಲ್ಲೂ ಬಂದ ಕಾರಣ ಜನ ಇವರನ್ನು ಎಷ್ಟೋ ವೇಳೆ 'ಖಂಡಿತವಾದಿ, ಎದೆಗೆ ಒದ್ದಂತೆ ನುಡಿಯುತ್ತಾರೆ' ಎನ್ನುತ್ತಿದ್ದರು.

ಹೆಚ್.ಕೆ.ವೀರಣ್ಣಗೌಡರ ತಾಯಿ ಕೆಂಪಮ್ಮ ಅನಕ್ಷರಸ್ಥರು, ಅಂದರೆ ಓದು ಬರಹ ಬರದವರಷ್ಟೆ, ಆದರೆ ಸುಸಂಸ್ಕೃತರು. ವಾಸ್ತವವಾಗಿ ವಿದ್ಯೆ ವಿನಯ, ಸಂಸ್ಕೃತಿ, ಸಂಸ್ಕಾರ ನೀಡುತ್ತದೆ. ಗ್ರಾಮೀಣ ಅನಕ್ಷರಸ್ಥರಲ್ಲಿ ಸಂಸ್ಕೃತಿ, ಸ್ವಭಾವ ಅವರ ನಡೆ ನುಡಿಯಲ್ಲೇ ವ್ಯಕ್ತವಾಗುತ್ತದೆ. ಹೀಗಾಗಿ ವೀರಣ್ಣಗೌಡರ ತಾಯಿ ನೆರೆಹೊರೆಯವರಿಂದ, ಹಿರಿಯರಿಂದಲೂ 'ಬುದ್ದಿವಂತೆ' ಎನಿಸಿಕೊಂಡಿದ್ದರು. ಮನೆ ವೈದ್ಯದಲ್ಲಿ ಸಿದ್ದ ಹಸ್ತರಾಗಿದ್ದ ತಾಯಿಯ ಆರೈಕೆಯ ಬಗ್ಗೆ ವೀರಣ್ಣಗೌಡರ ಬಾಲ್ಯದಲ್ಲಿ ನಡೆದ ಒಂದು ಸನ್ನಿವೇಶವನ್ನು ಗಮನಿಸಬಹುದು. 'ಒಮ್ಮೆ ವೀರಣ್ಣಗೌಡರಿಗೆ ಬಹಳ ಜ್ವರ ಬಂದಿತ್ತು, ಮೂರು –ನಾಲ್ಕು ದಿನ ಆದರೂ ಜ್ವರ ಇಳಿದಿರಲಿಲ್ಲ. ಒಂದು ದಿನ ಮಧ್ಯಾಹ್ನ ಅವರ ಮನೆಯ ಹಿತ್ತಲ ಬಾವಿ ಕಲ್ಲಿನ ಮೇಲೆ ಸೊಪ್ಪನ್ನು ಅರೆದು ವೀರಣ್ಣಗೌಡರ ಬೆತ್ತಲೆ ಮೈಗೆಲ್ಲಾ ಲೇಪ ಹಾಕಿದರು. ಆ ಸೊಪ್ಪಿನ ರಸ ಒಣಗುವವರೆಗೂ ನಿಲ್ಲಿಸಿ, ಆಮೇಲೆ ಬಿಸಿನೀರಿನಲ್ಲಿ ಸ್ನಾನ ಮಾಡಿಸಿ ಬೆಚ್ಚಗೆ ಹೊದ್ದಿಸಿ ಮಲಗಿಸಿದರು. ವೀರಣ್ಣಗೌಡರು ನಿದ್ದೆಯಿಂದ ಏಳುವಷ್ಟರಲ್ಲಿ ಜ್ವರ ಬಿಟ್ಟು ಹೋಗಿತ್ತು. 'ಜ್ವರದಿಂದ ಕಾಯುತ್ತಿದ್ದ ವೀರಣ್ಣಗೌಡರ ಮೈಯನ್ನು ಗಾಳಿ ಬಿಸಿಲಿಗೊಡ್ಡಿ ನಿಲ್ಲಿಸಿದ್ದರೂ ನ್ಯೂಮೋನಿಯ ಕಾಯಿಲೆ ಬರಲಿಲ್ಲವಲ್ಲ ಎಂದು ಆಶ್ಚರ್ಯವಾಗುತ್ತದೆ' ಎಂದು ವೀರಣ್ಣಗೌಡರು ತಮ್ಮ ತಾಯಿಯ ಮನೆ ವೈದ್ಯದ ಸಿದ್ದಹಸ್ತತೆಯ ಬಗ್ಗೆ ತಮ್ಮ ಆತ್ಮಕಥೆಯಲ್ಲಿ ಆಶ್ಚರ್ಯ ವ್ಯಕ್ತಪಡಿಸುತ್ತಾರೆ.

ಇಂತಹ ಸುಸಂಸ್ಕೃತ, ಶಿಸ್ತುಬದ್ಧ, ಸ್ವಾಭಿಮಾನ, ಕ್ಷಮತೆ, ಜನಪರ ಕಾಳಜಿಯನ್ನು ಹೊಂದಿದ್ದ ಮನೆತನದ ಪರಿಸರ ಹೆಚ್.ಕೆ.ವೀರಣ್ಣಗೌಡರಂತಹ ಶುದ್ಧಹಸ್ತದ ರಾಜಕಾರಣಿಯನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿರುವುದು ದಿಟ.

**೨.೩ ಶೈಕ್ಷಣಿಕ ಹಿನ್ನೆಲೆ : –**

ಹೆಚ್.ಕೆ.ವೀರಣ್ಣಗೌಡರ ಬಾಲ್ಯ ಹೆಚ್ಚಾಗಿ ಅವ್ವೇರಹಳ್ಳಿ ಮತ್ತು ಹೊಸಹಳ್ಳಿಯಲ್ಲಿ ಕಳೆಯಿತು. ತಂದೆ ತಾಯಿಗಳ ಚೊಚ್ಚಲ ಮಗುವಾದ್ದರಿಂದ ಬಹಳ ಮುದ್ದಿನಿಂದ ಸಾಕಿದ್ದರು. ಬೇಸಿಗೆ ಕಾಲದಲ್ಲಿ ನಿಂಬೆಹುಳಿ ಪಾನಕಕ್ಕೆ ಬೆಲ್ಲ ಹಾಕಿದರೆ ಉಷ್ಣವಾಗಬಹುದೆಂದು ಬತಾಸ್‌ಗಳನ್ನು ಪುಡಿ ಮಾಡಿ ಹಾಕಿಕೊಡುತ್ತಿದ್ದರಂತೆ. ವೀರಣ್ಣಗೌಡರಿಗೆ ಬಾಲ್ಯದಲ್ಲಿ ನಾಯಿಕೆಮ್ಮು ಬಂದು ಮೂರು ವರ್ಷಗಳ ಕಾಲ ಔಷಧೋಪಚಾರಗಳನ್ನು ಮಾಡಿಸಿದ್ದರಿಂದ ವೀರಣ್ಣಗೌಡರು ಬಹಳ ಕೃಶವಾಗಿದ್ದರು. ಹಾಗಾಗಿ ಅವರ ತಂದೆ ಆತುರತೋರದೆ ನಿಧಾನವಾಗಿ ಅಂದರೆ ೭ನೇ ವಯಸ್ಸಿನಲ್ಲಿ ಮನೆಯ ಜಗುಲಿಯ ಮೇಲೆ ಅಕ್ಷರಭ್ಯಾಸ ಮಾಡಿಸಿದರು.

ವ್ಯಕ್ತಿಯ ಅಂತರಂಗದ ವಿಕಾಸಕ್ಕೆ ಸಂಸ್ಕಾರ, ಸಹವಾಸ ಪರಿಸರ ಹಾಗು ಗುರುಗಳ ಮಾರ್ಗದರ್ಶನ ಅವಶ್ಯಕ. ಶಿಕ್ಷಣದ ಮಹತ್ವ ಅರಿತಿದ್ದ ಕೆಂಚೇಗೌಡರು ಮಗ ಸಣ್ಣಕ್ಕಿದ್ದರಿಂದ, ಅಶಕ್ತನಾದ್ದರಿಂದ ತಮ್ಮ ಮನೆಗೇ ಉಪಾಧ್ಯಾಯರನ್ನು ಕರೆಸಿ ಶಿಕ್ಷಣ ಪ್ರಾರಂಭಿಸಿದರು. ಈ ರೀತಿ ವೀರಣ್ಣಗೌಡರ ಮನೆಯ ಮುಂದೆ ಪ್ರಾರಂಭವಾದ 'ಮಠ'ಕ್ಕೆ ಇನ್ನಿತರ ಮಕ್ಕಳು ಬಂದು ಉಚಿತವಾಗಿ ವಿದ್ಯಾಭ್ಯಾಸ ಕಲಿಯುತ್ತಿದ್ದರು. ಈ ಮಠಕ್ಕೆ ಮಳೂರು ಪಟ್ಟಣದಿಂದ ಒಬ್ಬ ಉಪಾಧ್ಯಾಯರನ್ನು ನೇಮಿಸಿದ್ದರು. ಅವರ ಸಂಬಳ,ಭತ್ಯೆ ಇತ್ಯಾದಿಯನ್ನು ವೀರಣ್ಣಗೌಡರ ತಂದೆ ಕೆಂಚೇಗೌಡರೇ ನೋಡಿಕೊಳ್ಳುತ್ತಿದ್ದರು. ತಮ್ಮ ಮಗನೊಂದಿಗೆ ಹಳ್ಳಿಯ ಇತರ ಮಕ್ಕಳೂ ವಿದ್ಯೆ ಕಲಿಯುತ್ತಿದ್ದುದು ಕೆಂಚೇಗೌಡರಿಗೆ ಸಹಜವಾಗಿಯೇ ಸಂತೋಷ ತಂದು ಕೊಟ್ಟಿತ್ತು.

"ಆಗಿನ ಕಾಲದಲ್ಲಿ ಈಗ ಇರುವಂತೆ ಸರ್ಕಾರಿ ಶಾಲೆಗಳು ಇರಲಿಲ್ಲ. ಅಲ್ಲದೆ ಪ್ರಚಲಿತವಾಗಿರುವ ಖಾಸಗಿ ಶಾಲೆಗಳೆಂಬ ವಿದ್ಯೆಯ ಮಾರಾಟದ ಅಂಗಡಿಗಳೂ ಇರಲಿಲ್ಲ. ಆದರೂ ಯಾರಿಗೆ ವಿದ್ಯೆ ಬೇಕಾಗಿತ್ತೋ ಅವರಿಗೆ ವಿದ್ಯೆ ಕಲಿಸುವ ಒಂದು ಏರ್ಪಾಟು ಇತ್ತು. ಶೇ. ೭೦, ೮೦ ಹಳ್ಳಿಗಳಲ್ಲಿಯಾದರೂ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆ ಈ ದೇಶದಲ್ಲಿ ಇತ್ತು ಎಂಬುದು ಐತಿಹಾಸಿಕ ಸತ್ಯ. 'ಮಿಸ್ ಮೇಯೊ' ಎಂಬ ಅಮೇರಿಕಾ ಪ್ರವಾಸಿಗಳೊಬ್ಬರು, ಭಾರತದ ಅಜ್ಞಾನ, ಅನಕ್ಷರತೆಯ ದಾರಿದ್ರ್ಯವನ್ನು ಕುರಿತು ಬರೆದ 'ಮದರ್ ಇಂಡಿಯಾ' ಎಂಬ ಪುಸ್ತಕಕ್ಕೆ ಉತ್ತರವಾಗಿ ಲಾಲಾ ಲಜಪತರಾಯರು ಬರೆದ 'ಅನ್ ಹ್ಯಾಪಿ ಇಂಡಿಯಾ'( Unhappy India) ಎಂಬ ಪುಸ್ತಕದಲ್ಲಿ ಬ್ರಿಟೀಷರು ಈ ದೇಶಕ್ಕೆ ಬರುವುದಕ್ಕಿಂತ ಮುಂಚೆ ಪ್ರಚಲಿತವಿದ್ದ ಶಿಕ್ಷಣ ಪದ್ದತಿಯ ಬಗ್ಗೆ ವಿದ್ವತ್ ಪೂರ್ಣವಾಗಿ ಎರಡು ಮೂರು ಅಧ್ಯಾಯಗಳಲ್ಲಿ ವಿವರವಾಗಿ ಬರೆದಿದ್ದಾರೆ. ರೆವೆರೆಂಡ್ ಕಿಯೆ ಎಂಬ ಆಂಗ್ಲಪಾದ್ರಿ ಬರೆದ ಒಂದು ಗ್ರಂಥದಿಂದ ಲಾಲಾಲಜಪತರಾಯ್ ಈ ಕೆಳಗಿನ ವಾಕ್ಯಗಳನ್ನು ಉದ್ದರಿಸುತ್ತಾರೆ :-

"ಭಾರತದಲ್ಲಿ ಶಿಕ್ಷಣವನ್ನು ಬ್ರಿಟೀಷ್ ಸರ್ಕಾರ ತಮ್ಮ ಅಂಕೆಯಲ್ಲಿ ಅಥವಾ ಹತೋಟಿಗೆ ತೆಗೆದುಕೊಳ್ಳುವುದಕ್ಕಿಂತ ಮೊದಲು ಒಂದು ಬಹು ವ್ಯಾಪಕವಾದ ಜನಪ್ರಿಯ ದೇಶೀಯ ಸ್ಥಳೀಯ ವಿದ್ಯಾ ಪದ್ದತಿ ಇತ್ತು. ಅದು ಒಂದೆರಡು ಪ್ರಾಂತ್ಯಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಭಾರತದ ಅನೇಕ

ಪ್ರಾಂತ್ಯಗಳಲ್ಲಿ ಇತ್ತು. ಕೆಲವು ಜಿಲ್ಲೆಗಳಲ್ಲಿ ಹೆಚ್ಚಾಗಿತ್ತು. ಮದ್ರಾಸ್ ಅಧಿಪತ್ಯದಲ್ಲಿ ೧೮೨೨ –೨೬ರಲ್ಲಿ ಮಾಡಿದ ಸಮೀಕ್ಷೆಯಿಂದ ಶಾಲೆಗೆ ಹೋಗುವ ವಯೋಮಿತಿಯ ಬಾಲಕರಲ್ಲಿ ೬ರಲ್ಲಿ ಒಬ್ಬನಿಗಿಂತ ಕಡಿಮೆ ಸಂಖ್ಯೆಯಲ್ಲಿ ಬಾಲಕರಿಗೆ ಒಂದು ಬಗೆಯ ಶಿಕ್ಷಣ ದೊರೆಯುತ್ತಿತ್ತು. ಮುಂಬೈ ಅಧಿಪತ್ಯದಲ್ಲಿ ೧೮೨೩ –೨೮ರ ಕಾಲಾವಧಿಗೆ ಸಂಬಂಧಿಸಿದಂತೆ ಮಾಡಿದ ಅದೇ ಬಗೆಯ ಸಮೀಕ್ಷೆಯಲ್ಲಿ ಶಿಕ್ಷಣ ಪಡೆಯುತ್ತಿದ್ದ ಶಾಲಾಬಾಲಕರ ಸಂಖ್ಯೆಯನ್ನು ಎಂಟು ಬಾಲಕರಲ್ಲಿ ಒಬ್ಬರೆಂದು ದಾಖಲಿಸಲಾಗಿದೆ . . . . ."[೩]

೧೮೨೨ –೩೦ರಲ್ಲಿ ಇತ್ತೆಂದು ರೆವರೆಂಡ್ ಕೆಯೆ ಹೇಳುವ ಪರಿಸ್ಥಿತಿ ೧೯೦೦–೨೦ರವರೆಗೂ ಇತ್ತೆಂದು ಧಾರಾಳವಾಗಿ ಹೇಳಬಹುದು.[೪] ವೀರಣ್ಣಗೌಡರು ಕಲಿಯಲು ಅಡಿ ಇಟ್ಟಿದ್ದು ತಮ್ಮ ಮನೆಯ ಜಗುಲಿಯ ಮೇಲೆ ಪ್ರಾರಂಭವಾದ 'ಮಠ'ವಾಗಿತ್ತು. ('ಮಠ'ಎಂಬ ಸಂಸ್ಕೃತ ಶಬ್ದದ ಅರ್ಥವೆ 'ಓದು ಕಲಿಸುವ ಸ್ಥಳ' ಎಂದು). ಆಗ ಕರ್ನಾಟಕದಲ್ಲಿ ಹಳೆ ಮೈಸೂರು ಸಂಸ್ಥಾನದಲ್ಲಿಯೂ ಸಹಿತ ಹಳ್ಳಿಗಳಲ್ಲಿ ಓದುವ ಮಠಗಳಿದ್ದವು. ಆ ಮಠದಲ್ಲಿ ಒಬ್ಬ ಅಯ್ಯನವರು ಅಲ್ಲಿಗೆ ಬರುವ ಮಕ್ಕಳಿಗೆ ಅಕ್ಷರಾಭ್ಯಾಸ, ಮಗ್ಗಿಲೆಕ್ಕ, ಬಾಯಿಲೆಕ್ಕ, ಪದ್ಯ ಮುಂತಾದವನ್ನು ಬಾಯಿ ಪಾಠ ಮಾಡಿಸುತ್ತಿದ್ದರು.[೫] ಊರಿನ ಇತರ ಮಕ್ಕಳೂ ಈ ಮಠಕ್ಕೆ ಬಂದು ಉಚಿತವಾಗಿ ವಿದ್ಯಾಭ್ಯಾಸ ಮಾಡಲು ಅವಕಾಶವಿತ್ತು. ವೀರಣ್ಣಗೌಡರು ಉಪಾಧ್ಯಾಯರು ಬರದಿದ್ದ ದಿನಗಳಲ್ಲಿ ವ್ಯರ್ಥವಾಗಿ ಕಾಲಹರಣ ಮಾಡಬಾರದೆಂದು ವಿದ್ಯಾಕಾಂಕ್ಷಿಯಾದ ತಂದೆಯ ಮಾರ್ಗದರ್ಶನದಂತೆ ಮನೆಗೆ ತರಿಸುತ್ತಿದ್ದ ಒಕ್ಕಲಿಗರ ಪತ್ರಿಕೆ, ಮೈಸೂರು ಸ್ಟಾರ್, ಸಾಧ್ವಿ, ವೃತ್ತಾಂತ ಪತ್ರಿಕೆ, ಕಾಗೆ, ಕೋಗಿಲೆ, ಮಹಿಳಾ ಸಖಿ ಇನ್ನು ಮುಂತಾದ ದಿನಪತ್ರಿಕೆ, ವಾರ ಪತ್ರಿಕೆಗಳಲ್ಲಿನ ಒಳ್ಳೆಯ ಲೇಖನಗಳನ್ನು ಪ್ರತಿ(ಕಾಪಿ) ಮಾಡುವ ಮೂಲಕ ಅವರ ಓದು ಸಾಗಿತು. ವಾಸ್ತವವಾಗಿ ಇದರಿಂದ ಹೆಚ್.ಕೆ.ವೀರಣ್ಣಗೌಡರ ಬರವಣಿಗೆ ಕುದುರಿದ್ದು ಮಾತ್ರವಲ್ಲದೆ ಶಬ್ದ ಸಂಪತ್ತು, ಭಾಷಾ ಪ್ರೌಢಿಮೆ, ಲೋಕಜ್ಞಾನ ಹೆಚ್ಚಲು ಕಾರಣವಾಯಿತು.

ಬಾಲಕ ವೀರಣ್ಣಗೌಡರಿಗೆ ಶಾಲಾ ಕಲಿಕೆಯ ಜೊತೆ ಜೊತೆಗೆ ಮನೆಯಲ್ಲಿ 'ಮೊದಲ ಗುರು'ವಾದ ತಾಯಿಯಿಂದ ಮತ್ತು ಅಜ್ಜಿಯಿಂದ ವ್ಯಕ್ತಿತ್ವ ವಿಕಸನದ ಪಾಠವೂ ಸಹ ನಡೆಯುತ್ತಿತ್ತು. ಒಮ್ಮೆ ವೀರಣ್ಣಗೌಡರ ಸ್ನೇಹಿತ ಪಕ್ಕದ ಮನೆಯ ಹುಡುಗ ಚಂದ್ರಿಕೆಯಲ್ಲಿದ್ದ ರೇಷ್ಮೆ ಗೂಡುಗಳನ್ನು ನೋಡಿಕೊಳ್ಳುತ್ತಿದ್ದವನು ಸ್ವಲ್ಪ ಗೂಡುಗಳನ್ನು ವೀರಣ್ಣಗೌಡರ ಕೈಗೆ ಕೊಟ್ಟು 'ಅಪ್ಪಾಜಿ ಇದನ್ನು ಎಲ್ಲಾದರೂ ಇಟ್ಟಿರು, ಗೂಡು ಕೊಳ್ಳುವವರು ಬಂದಾಗ ಮಾರಿ ನಾಲ್ಕಾಣೆಯನ್ನು ಹಂಚಿಕೊಳ್ಳೋಣ' ಎಂದನು. (ವೀರಣ್ಣಗೌಡರನ್ನು ಮನೆಯಲ್ಲಿ ಅಕ್ಕರೆಯಿಂದ ಅಪ್ಪಾಜಿ ಎಂದು ಕರೆಯುತ್ತಿದ್ದರು) ಅಪ್ಪಾಜಿ ರೇಷ್ಮೆ ಗೂಡನ್ನು ತಾಯಿ ಬಳಿ ಒಯ್ದು ಎಲ್ಲಾದರು ಇಟ್ಟಿರಲು ಕೊಡ ಹೋದಾಗ ತಾಯಿಗೆ ನಡೆದಿರುವ ವಿಷಯ ತಿಳಿದು 'ಏನಪ್ಪ ನಿನಗೇಕೋ ಈ ಬುದ್ದಿ ಬಂದಿತು, ಕಳ್ಳತನ ಮಾಡುವುದು ಒಳ್ಳೆಯದಲ್ಲ, ರೇಷ್ಮೆ

---

[೩] Unhappy India P:26, Banna Publishing C. Calcutta 1928

[೪] ಎಸ್.ನಿಜಲಿಂಗಪ್ಪ ಒಂದು ಅಧ್ಯಯನ, ಕೋ.ಚನ್ನಬಸಪ್ಪ. ಲೋಹಿಯಾ ಪ್ರಕಾಶನ ಪುಟ :೨೨–೨೩. ೨೦೦೧

[೫] ಅದೇ ಪುಟ :೨೩–೨೪

ಲಕ್ಷ್ಮಿಯಂತೆ, ನಮ್ಮ ಮನೆ ಬಿಟ್ಟು ಹೊರಟು ಹೋಗುತ್ತಾಳೆ. . . ಕಳ್ಳತನ ಮಾಡುವವರಿಗೆ ಸಹಾಯ ಮಾಡಬಾರದು, ಕಳ್ಳತನದಿಂದ ಬಂದ ದುಡ್ಡು ಕೈ ಹತ್ತುವುದಿಲ್ಲ. ಅಷ್ಟೇ ಅಲ್ಲ ಕಳ್ಳತನ ಮಾಡುವವರ ಮನೆ ಹಾಳಾಗುತ್ತೆ' ಎಂದು ಬುದ್ದಿವಾದ ಹೇಳಿದರು.

ಮತ್ತೊಮ್ಮೆ ತಮ್ಮ ಗದ್ದೆ ಬದುವಿನ ಹುಲ್ಲು ಕೊಯ್ದು ಹೊರೆ ಕಟ್ಟಿ ಒಯ್ಯುತ್ತಿದ್ದ ಹೆಂಗಸನ್ನು ನೋಡಿದ ಬಾಲಕ ವೀರಣ್ಣಗೌಡ ಆಕೆಯನ್ನು ಗದರಿಸಿ ಕುಡುಗೋಲು ಕಿತ್ತುಕೊಂಡ. ಆಕೆ 'ಇನ್ನು ಮೇಲೆ ಇಂಥ ಕೆಲಸ ಮಾಡುವುದಿಲ್ಲಕಣಪ್ಪ ಕುಡುಗೋಲು ಕೊಡಿ' ಎಂದು ಗೋಗರೆದಳು. 'ನಾಲ್ಕಾಣೆ ದಂಡ ಕೊಟ್ಟರೆ ಮಾತ್ರ ಕೊಡುತ್ತೇನೆ' ಎಂದ ವೀರಣ್ಣಗೌಡರ ಹಠಕ್ಕೆ ಆಕೆ ಮನೆಯಿಂದ ಕಣ್ಣೀರು ಹಾಕುತ್ತಾ ನಾಲ್ಕಾಣೆ ತಂದು ಕೊಟ್ಟಳು. ಮನೆಯೊಳಗಿದ್ದೇ ಕೂಗಾಟ ಕೇಳಿದ್ದ ತಾಯಿಗೆ, ನಾಲ್ಕಾಣೆ ಕೊಡಲು ಹೋದ ವೀರಣ್ಣಗೌಡರನ್ನು 'ಏನು ಕೆಲಸ ಮಾಡುತ್ತಿರುವುದು, ನೀನು ದೊಡ್ಡವನಾದ ಮೇಲೆ ಬಡ ಬಗ್ಗರನ್ನು ಹುರಿದು ಮುಕ್ಕುಬಿಡುತ್ತೀಯೆ' ಎಂದು ಮಗನ ವರ್ತನೆ ಕಂಡು ಸಂಕಟಪಟ್ಟುಕೊಂಡರು. 'ಬಡಬಗ್ಗರು ಬದುಕ ಬೇಡವೇ? ಅವರಿಗೆ ತೋಟ ತುಡಿಕೆ ಇಲ್ಲ. ಹಿಡಿ ಹುಲ್ಲು ಕೊಯ್ದರೆ ನಮ್ಮ ಆಸ್ತಿ ಕರಗಿ ಹೋಯಿತೇ? ನಿನಗಿಷ್ಟು ತಿಳಿಯ ಬೇಡವೆ, ಇಂಥದನ್ನು ಕಂಡೂ ಕಾಣದಂತಿರಬೇಕು' ಎಂದು ತಿಳಿವಳಿಕೆ ಹೇಳಿ ಆ ನಾಲ್ಕಾಣೆಯನ್ನು ಆಕೆಗೆ ಹಿಂದಿರುಗಿಸಿದರು. ಹೀಗೆ ವೀರಣ್ಣಗೌಡರಿಗೆ ತಮ್ಮ ತಾಯಿ ತಂದೆಯರ ಬುದ್ದಿವಾದದ ಮಾತುಗಳು ಅವರ ಜೀವನದಲ್ಲಿ ಸದಾ ಎಚ್ಚರಿಕೆಯ ಗಂಟೆಗಳಾಗಿದ್ದವು. ಅಲ್ಲದೆ ಊರಲ್ಲಿ ನಡೆದ ಘಟನೆಯೊಂದರಲ್ಲಿ ಮಗನೇ ತಂದೆಯನ್ನು ಕೊಂದು ಸೆರೆಮನೆಗೆ ಹೋಗಬೇಕಾದ ಸಂದರ್ಭದಲ್ಲಿ ವೀರಣ್ಣಗೌಡರ ಅಜ್ಜ ಏನೋ ಕೆಟ್ಟಗಳಿಗೆ ಆಗಿದ್ದು ಆಯಿತು, ಇನ್ನು ಮುಂದಾದರೂ ದೇವರು ನಿನಗೆ ಒಳ್ಳೆಯದು ಮಾಡಲಿ ಎಂದು ಹಾರೈಸುತ್ತಾರೆ. ಅಂದರೆ ಕೆಡುಕನ್ನು ಮಾಡಿದವರಿಗೂ ಒಳ್ಳೆಯದನ್ನು ಬಯಸಿದ ಅಜ್ಜಯ ಶ್ರೀಮಂತ ಗುಣವನ್ನು, ಮಹಾತ್ಮ ಗಾಂಧೀಜಿಯವರಲ್ಲೂ ಕಂಡಾಗ ವೀರಣ್ಣಗೌಡರು ಅವರ ಪ್ರಭಾವಕ್ಕೆ ಒಳಗಾಗಲು ಕಾರಣವಾಯಿತು. ಹೀಗಾಗಿ 'ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು' ಎಂಬ ಮಾತಿನಂತೆ ಮನೆಯ ಪರಿಸರ, ಸಂಸ್ಕಾರಗಳು ಬಾಲಕ ವೀರಣ್ಣಗೌಡರ ಮೇಲೆ ಬಹಳಷ್ಟು ಪ್ರಭಾವ ಬೀರಿದಂತೆ ಮಹಾಸಾಧ್ವಿಯಾದ ತಾಯಿ ಕೆಂಪಮ್ಮನವರ ಮಡಿಲಲ್ಲಿ ಮಾನವೀಯ ಮೌಲ್ಯಗಳ ಹಾಲುಂಡು ಬೆಳೆದರು. ಈ ಹಿನ್ನೆಲೆಯಲ್ಲಿ ವೀರಣ್ಣಗೌಡರಲ್ಲಿ ನಾವು ಕಾಣುವ ಎಲ್ಲ ಗುಣಗಳು ಅವರ ಕುಟುಂಬದ ಹಿರಿಯರಿಂದ ಬಂದವುಗಳಾಗಿದ್ದವು ಎನ್ನಬಹುದು.

ಹೆಚ್.ಕೆ.ವೀರಣ್ಣಗೌಡರ ಹೋರಾಟದ ಬದುಕು ಶೋಷಣೆ ಮಾಡುತ್ತಿದ್ದ ವ್ಯವಸ್ಥೆಯೊಂದಿಗೆ ಗುದ್ದಾಟ, ಸಾಹಿತ್ಯ, ಸಂಸ್ಕೃತಿಯೊಂದಿಗೆ ಸ್ನೇಹ ಹೀಗೆ ಹಲವಾರು ಸುಮುಖಗಳೊಂದಿಗೆ ಮುಂದುವರೆಯಿತು. ತಮ್ಮ ಬದುಕಿನ ನವುರಾದ ಅನುಭವಗಳಿಂದ ವಂಚಿತರಾಗಲು ಅವರು ಎಂದಿಗೂ ಇಚ್ಛಿಸದ ನುಡಿದಂತೆ ನಡೆದ ವ್ಯಕ್ತಿತ್ವವುಳ್ಳವರಾಗಿದ್ದರು.

ಮಳೂರು ಪಟ್ಟಣದಿಂದ ಬರುತ್ತಿದ್ದ ಉಪಾಧ್ಯಾಯರು ಬರುವುದು ನಿಂತ ಮೇಲೆ ಒಂದು ದಿನ ಬಾಲಕ ವೀರಣ್ಣಗೌಡರು ತಂದೆ ಬೆಂಗಳೂರಿಗೆ ಹೋಗಿದ್ದ ಸಮಯದಲ್ಲಿ ಅವ್ವೇರಹಳ್ಳಿಗೆ ಒಂದು ಮೈಲಿ ದೂರದಲ್ಲಿದ್ದ ಅಕ್ಕೂರು ವಿಲೇಜ್ ಎಲಿಮೆಂಟರಿ ಸ್ಕೂಲಿಗೆ ಹೋಗಿ ಸೇರಿಕೊಂಡರು. ಇದನ್ನು ತಿಳಿದ ತಂದೆಗೆ ಒಂದು ಕಡೆ ಮಗನ ವಿದ್ಯಾಸಕ್ತಿಯನ್ನು ಕಂಡು ಸಂತೋಷವಾದರೆ ಮತ್ತೊಂದೆಡೆ ಊರಿಂದ ಊರಿಗೆ ಹುಡುಗ ಒಬ್ಬನೇ ಹೋಗಬೇಕಲ್ಲ ಎಂಬ ಯೋಚನೆ. ಅಕ್ಕೂರು ಶಾಲೆಯ ಉಪಾಧ್ಯಾಯರು ವೀರಣ್ಣಗೌಡರ ತಂದೆಯ ವಿನಂತಿಯಂತೆ ಹುಡುಗನಿಗೆ ಮಧ್ಯಾಹ್ನದ ಊಟ ನೀಡುವ ವ್ಯವಸ್ಥೆಗೆ ಒಪ್ಪಿದರು. ಚಿಕ್ಕಂದಿನಲ್ಲಿ ಸಂಕೋಚದ ಮುದ್ದೆಯಾಗಿದ್ದ ವೀರಣ್ಣಗೌಡರು ಊಟದ ಬಗ್ಗೆ ಉಪಾಧ್ಯಾಯರು ಅವರ ತಂದೆಯವರೊಡನೆ 'ನಿಮ್ಮ ಹುಡುಗ ಏನೇನೂ ತಿನ್ನುವುದಿಲ್ಲ, ಆದ್ದರಿಂದಲೇ ಅವನು ಅಷ್ಟು ಬಡಕಲಾಗಿದ್ದಾನೆ'[1] ಎಂದು ಹೇಳಿದರು. ಮಿತಾಹಾರಿಯಾದ ವೀರಣ್ಣಗೌಡರಿಗೆ ಉಪಾಧ್ಯಾಯರ ಆತಿಥ್ಯ ಬಹಳ ಕಷ್ಟಕ್ಕೀಡು ಮಾಡುತ್ತಿತ್ತು. 'ತಾಯಿ ಮಾಡಿದ ಹೊಟ್ಟೆ ಊರು ಮಾಡಿದ ಕೊಳಗ' ಎಂಬ ಗಾದೆಯಂತೆ ವೀರಣ್ಣಗೌಡರು ಚಿಕ್ಕಂದಿನಿಂದಲೂ ಮಿತಾಹಾರಿ ಎಂಬುದು ತಿಳಿದು ಬರುತ್ತದೆ. ಅಲ್ಲದೆ ಅವರು ಶುದ್ಧ ಸಸ್ಯಹಾರಿಯಾಗಿದ್ದು ಮಾಂಸಹಾರವನ್ನು ಎಂದೂ ಮುಟ್ಟಿದವರಲ್ಲ ಎಂದು ವೀರಣ್ಣಗೌಡರ ಸಹೋದರ ಡಾ.ಹೆಚ್.ಕೆ.ಮರಿಯಪ್ಪನವರು ಸ್ಮರಿಸುತ್ತಾರೆ. ಶಾಲೆಗೆ ಹೋಗುವ ದಾರಿಯಲ್ಲಿ ದೆವ್ವದ ಭ್ರಮೆಗೆ ಸಿಲುಕಿ ಜ್ವರ ಬಂದು ನರಳಿ ವೈದ್ಯದ ಜೊತೆಗೆ ಯಂತ್ರ, ಮಂತ್ರ ಮಾಟದ ಬಲೆಗೂ ಬಿದ್ದುದ್ದನ್ನು ತಮ್ಮ ಆತ್ಮಕಥೆಯಲ್ಲಿ ವಿವರಿಸಿದ್ದಾರೆ. ಈ ಘಟನೆಯಿಂದ ಹೆಚ್.ಕೆ.ವೀರಣ್ಣಗೌಡರು ಬಾಲ್ಯದಲ್ಲಿ ಸಾಮಾನ್ಯ ಹುಡುಗರಂತೆ ಸಹಜ ಸ್ವಭಾವದವರಾಗಿದ್ದರು ಎಂಬುದನ್ನು ಅನಾವರಣಗೊಳಿಸುತ್ತಾರೆ. ಹಾಗೆಯೇ ತಮ್ಮ ಮನೆಮಂದಿಗೆಲ್ಲ ಚಿಕಿತ್ಸೆ ನೀಡುತ್ತಿದ್ದ ವೈದ್ಯ ಹಲಗಪ್ಪನವರ ಬಗ್ಗೆ ಹೇಳುತ್ತಾ ಆಗಿನ ಕಾಲದಲ್ಲಿ ವೈದ್ಯರು ತಮ್ಮ ವೃತ್ತಿಯಲ್ಲಿ ಯಾವ ರೀತಿ ನಿಪುಣತೆಯಿಂದ ಕೂಡಿದ್ದರು ಎಂಬುದನ್ನು ವಿವರಿಸುತ್ತಾರೆ. ಹಲಗಪ್ಪನವರು ವೀರಣ್ಣಗೌಡರ ದಾಯಾದಿಯೊಬ್ಬರಿಗಿದ್ದ ಕಾಯಿಲೆಗೆ ಚಿಕಿತ್ಸೆ ನೀಡಲು ರೋಗಿಯ ಕೈ ಹಿಡಿದು ನೋಡಿ, ಔಷಧಿ ಪಥ್ಯವನ್ನೆಲ್ಲಾ ತಿಳಿಸಿ, ನಂತರ ವೀರಣ್ಣಗೌಡರ ಮನೆಗೆ ಬಂದಾಗ ಅವರ ಅಜ್ಜ 'ಏನು ಸ್ವಾಮಿ ಹಲಗಪ್ಪನವರೇ ನಮ್ಮೊಡನೆ ನಿಜ ಹೇಳಿ, ಕಾಯಿಲೆ ವಾಸಿಯಾಗುತ್ತೋ ಇಲ್ಲವೋ' ಎಂದು ಕೇಳಿದರು. ಹಲಗಪ್ಪನವರು ಹುಸಿನಗೆ ನಗುತ್ತಾ ಮುಂದಿನ ಗುರುವಾರ ಮಧ್ಯಾಹ್ನದೊಳಗಾಗಿ ಎಲ್ಲವೂ ಮುಗಿದು ಹೋಗುತ್ತದೆ ಎಂಬರ್ಥದಲ್ಲಿ ಹೇಳಿದರು. ಅದೇ ರೀತಿ ರೋಗಿ ಮೃತರಾದರು! ಈ ರೀತಿ ರೋಗಿಯೊಬ್ಬನ ನಾಡಿ ನೋಡಿ ಆತ ಬದುಕುವನೋ ಸಾಯುವನೋ ಎಂಬುದನ್ನು ಎರಡು ತಿಂಗಳು ಮುಂಚಿತವಾಗಿಯೇ ತಿಳಿಸುತ್ತಿದ್ದರು. ಅಲ್ಲದೆ ಹಲಗಪ್ಪನವರು ಐದಾರು ತಿಂಗಳ ಗರ್ಭಿಣಿ ಕೈಹಿಡಿದು ನೋಡಿ, ಗರ್ಭದಲ್ಲಿರುವುದು ಹೆಣ್ಣೋ ಗಂಡೋ ಎಂದು

---

[1] ಬದುಕು-ಮೆಲುಕು, ಹೆಚ್.ಕೆ.ವೀರಣ್ಣಗೌಡ, ೧೯೭೪, ಪುಟ-೩೨

ಹೇಳಿಬಿಡುತ್ತಿದ್ದರು".[೭] ಈ ಘಟನೆಯಿಂದ ವೀರಣ್ಣಗೌಡರು ಯಾವುದೇ ಕೆಲಸದಲ್ಲಿ ಶ್ರದ್ಧೆ, ಪರಿಶ್ರಮವಿದ್ದರೆ ನಿಪುಣತೆ ಪಡೆಯಬಹುದೆಂಬ ಪಾಠವನ್ನು ಕಲಿಯುವಂತಾಯಿತು.

ಶಾಲೆಯಲ್ಲಿ ವೀರಣ್ಣಗೌಡರು ಬಹಳ ಬುದ್ಧಿವಂತ ಚೂಟಿ ಹುಡುಗನಾಗಿದ್ದರಿಂದ ಅಲ್ಲಿನ ಉಪಾಧ್ಯಾಯರು ತಾವೇ ಪಾಠ ಹೇಳಿಕೊಟ್ಟು ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಖಾಸಗಿಯಾಗಿ ಕಟ್ಟಿಸುವುದಾಗಿ ಬಾಲಕ ವೀರಣ್ಣಗೌಡರ ತಂದೆಗೆ ಹೇಳಿ ಒಪ್ಪಿಸಿದರು. ಹೀಗಾಗಿ ಮತ್ತೊಂದು ವರ್ಷ ಅಕ್ಕೂರು ಶಾಲೆಯಲ್ಲಿ ವೀರಣ್ಣಗೌಡರು ತಮ್ಮ ಪಾಠಗಳನ್ನು ಹೇಳಿಸಿಕೊಂಡು ಉಳಿದ ಸಮಯದಲ್ಲಿ ಮೊದಲ ತರಗತಿ ಹುಡುಗರಿಗೆ ಪಾಠ ಹೇಳಿಕೊಡುವುದಕ್ಕೆ ಉಪಾಧ್ಯಯರಿಂದ ನೇಮಿಸಲ್ಪಟ್ಟಿದ್ದರು. ಆದ್ದರಿಂದ ಕೆಲವು ಹುಡುಗರು ವೀರಣ್ಣಗೌಡರನ್ನು 'ಚಿಕ್ಕಮೇಷ್ಟ್ರು' ಎಂದು ಕರೆಯುತ್ತಿದ್ದರು.

ಅಕ್ಕೂರು ಶಾಲೆಯಲ್ಲಿ ೩ ವರ್ಷ ಕಲಿತ ನಂತರ ಕನ್ನಡ ಲೋಯರ್ ಸೆಕೆಂಡರಿ ವಿದ್ಯಾಭ್ಯಾಸಕ್ಕೆ ಚನ್ನಪಟ್ಟಣಕ್ಕೆ ಹೋಗಬೇಕಾಗಿತ್ತು. ಕಾರಣ '೧೮೯೯ರಲ್ಲಿ ಪ್ರಾರಂಭವಾದ ಚನ್ನಪಟ್ಟಣ ಹೈಸ್ಕೂಲ್ ಮೈಸೂರು ಸಂಸ್ಥಾನದ ಆಗಿನ ಸಂದರ್ಭದಲ್ಲಿ ಮೈಸೂರು ಬೆಂಗಳೂರು ನಡುವೆ ಇದ್ದ ಏಕಮಾತ್ರ ಹೈಸ್ಕೂಲ್ ಇದಾಗಿತ್ತು. ಈ ಸುತ್ತಮುತ್ತ ಇದನ್ನು ಬಿಟ್ಟರೆ ಬೇರೆಲ್ಲೂ ಹೈಸ್ಕೂಲ್ ಇರಲಿಲ್ಲ. ತದನಂತರದಲ್ಲಿ ಮುನಿಸಿಪಾಲ್ ಹೈಸ್ಕೂಲ್‌ಗಳು ರಾಮನಗರ(೧೯೪೫), ಮಾಗಡಿ (೧೯೪೫), ಹೊಸಕೋಟೆ(೧೯೪೬), ದೇವನಹಳ್ಳಿಯಲ್ಲಿ(೧೯೫೪) ಸರ್ಕಾರದ ವತಿಯಿಂದ ಪ್ರಾರಂಭಿಸಲ್ಪಟ್ಟವು.'[೮] ಆಗ ಮಂಡ್ಯ ಇನ್ನೂ ಜಿಲ್ಲೆಯಾಗಿರಲಿಲ್ಲ ಎಂಬುದರ ಜೊತೆಗೆ ಮೇಲಿನ ಮಾಹಿತಿಯನ್ನು ಚನ್ನಪಟ್ಟಣದವರೇ ಆದ 'ಬಯಲು ಸೀಮೆ' ಪತ್ರಿಕೆಯ ಸಂಪಾದಕರಾದ ಸು.ತ.ರಾಮೇಗೌಡರು ಉಲ್ಲೇಖಿಸುತ್ತಾರೆ.

ಒಂದು ದಿನ ಶಾಲಾ ಸಮೀಕ್ಷೆಗೆ ಬಂದ ಅಮಲ್ದಾರರು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ನೀಡಿದ್ದರೂ, ಸರಿಯಾದ ಉತ್ತರ ನೀಡಲಿಲ್ಲ ಎಂದು ಉಪಾಧ್ಯಯರು ವಿನಾಕಾರಣ ಹೊಡೆದದ್ದಕ್ಕೆ ವೀರಣ್ಣಗೌಡರು ಅನ್ಯಾಯವೆಂದು ಭಾವಿಸಿ ಪ್ರತಿಭಟನೆಯಾಗಿ ಉಪಾಧ್ಯಾಯರ ಸಹಾಯವಿಲ್ಲದೆ ಖಾಸಗಿಯಾಗಿ ಚನ್ನಪಟ್ಟಣದಲ್ಲಿ ಕನ್ನಡ ಮತ್ತು ಇಂಗ್ಲೀಷ್ ಎರಡರಲ್ಲೂ ಲೋಯರ್ ಸೆಕೆಂಡರಿ ಪರೀಕ್ಷೆಗೆ ಓದುತ್ತೇನೆಂದು ತಂದೆಯನ್ನು ಒಪ್ಪಿಸಿ ಸುಮಾರು ೧೯೧೨ ಅಥವ ೧೯೧೩ನೇ ಇಸವಿಯಲ್ಲಿ ಮುಂದಿನ ಶಿಕ್ಷಣಕ್ಕಾಗಿ ಚನ್ನಪಟ್ಟಣ ಹೈಸ್ಕೂಲ್ ಸೇರಿಕೊಂಡರು. ಅನ್ಯಾಯವನ್ನು ಸಹಿಸದ ಸ್ವಾಭಿಮಾನೀ ಗುಣ ಈಗಾಗಲೇ ವೀರಣ್ಣಗೌಡರಲ್ಲಿ ಮೊಳಕೆಯೊಡೆಯುತ್ತಿತ್ತು ಎಂಬುದು ಈ ಘಟನೆಯಿಂದ ತಿಳಿದು ಬರುತ್ತದೆ.

---

[೭] ಬದುಕು-ಮೆಲುಕು. ಹೆಚ್.ಕೆ.ವೀರಣ್ಣಗೌಡ. ೧೯೭೪, ಪುಟ-೩೬

[೮] Gazetter of India. Karnataka State, Bangalore Rural District. Chief Editor: Suryanath.U.Kamath. pg.3,4

೧೯೧೧ರಲ್ಲಿ ಮೈಸೂರಿಗೆ ಬ್ರಿಟಿಷ್ ವೈಸರಾಯ್ ಲಾರ್ಡ್ ಹರ್ಡಿಂಜರ್ ಭೇಟಿ ನೀಡುತ್ತಾನೆ. ಆ ಸಂದರ್ಭದಲ್ಲಿ ವೈಸರಾಯ್‌ನನ್ನು ನೋಡಲು ಸುತ್ತಮುತ್ತಲಿನ ಗ್ರಾಮಸ್ಥರೊಂದಿಗೆ ವೀರಣ್ಣಗೌಡರು ಸಹ ಮೈಸೂರಿಗೆ ಬಂದಿಳಿದರು. ಅಲ್ಲಿ ಅವರಿಗಾದ ಅನುಭವಗಳು ರೋಚಕತೆಯಿಂದ ಕೂಡಿದ್ದು, ಬೆರಗು ಮೂಡಿಸಿದ್ದವು. ಬೆಳಗಿನ ತಿಂಡಿ ತಿನ್ನಲು ಹೋಟೆಲ್‌ಗೆ ಹೋಗಿದ್ದಾಗ ಎರಡಾಣೆಗೆ ದೊರೆತ ಹನ್ನೆರಡು ದೋಸೆಗಳನ್ನು ತಿನ್ನಲಾಗದೆ, ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಯನ್ನು ತೆಗೆದುಕೊಳ್ಳುವಂತೆ ಕೇಳಿದಾಗ ಆತ ವೀರಣ್ಣಗೌಡರ ಜಾತಿಯ ಬಗ್ಗೆ ವಿಚಾರಿಸಿದ್ದು, ಒಂದೂ ಕಾಲು ರೂಪಾಯಿಗೆ (ಬಟ್ಟೆ, ಹೊಲಿಗೆ ಸೇರಿ) ಷರ್ಟ್ ಖರೀದಿಸಿದ್ದು, ಇವೆಲ್ಲ ಅಂದಿನ ರಾಜಧಾನಿ ಮೈಸೂರು ನಗರ ವ್ಯವಸ್ಥೆಯ ಸಾಮಾಜಿಕ, ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. 'ಆಗಿನ ಕಾಲಕ್ಕೆ ಹಳ್ಳಿಗಾಡಿನ ಮಕ್ಕಳಿಗೆ, ತಂದೆ ತಾಯಿಯರು ಹಣವಂತರಾದರೂ, ಇಷ್ಟು ಸೌಲಭ್ಯಗಳು ಸಿಗುವುದು ಕಷ್ಟವಾಗುತ್ತಿತ್ತು. ಸಾವಿರ ಮಕ್ಕಳಲ್ಲೊಬ್ಬನಿಗೆ ದೊರಕುವುದೂ ದುರ್ಲಭ. ಈ ಶತಮಾನದ ಆದಿಭಾಗದಲ್ಲಿಯೇ ಅವರ ತಂದೆ ಕೋಟು ಷರ್ಟು ಕಾಲರ್ ನೆಕ್‌ಟೈಗಳನ್ನು ತೊಡುತ್ತಿದ್ದರೆಂದರೆ ಅವರ ಮಗನನ್ನು ಕೇಳಬೇಕೆ? ಅವರು ಮತ್ತು ಅವರ ಕುಟುಂಬ ಎಷ್ಟು ಮುಂದುವರಿದಿತ್ತೆಂಬುದಕ್ಕೆ ಇದೊಂದೆ ಸಾಕ್ಷಿ ಸಾಕು' (ಬುದುಕು–ಮೆಲುಕು ಕೃತಿಯಲ್ಲಿ ನುಡಿಕಾಣಿಕೆಗೆ ಬರೆದಿರುವ ದೇಜಗೌ ಅವರ ಈ ಸಾಲುಗಳು ವೀರಣ್ಣಗೌಡರ ಆರ್ಥಿಕ ಸ್ಥಿತಿಗತಿಯ ಬಗ್ಗೆ ಮನದಟ್ಟು ಮಾಡಿಕೊಡುತ್ತವೆ.)

ವೈಸರಾಯ್‌ರನ್ನು ನೋಡಲು ಶಾಲೆಯಲ್ಲಿ ರಜೆ ಪಡೆಯದೆ ಹೋಗಿದ್ದರಿಂದ ವೀರಣ್ಣಗೌಡರ ಹೆಸರನ್ನು ಶಾಲೆಯ ರಿಜಿಸ್ಟರ್‌ನಲ್ಲಿ ತೆಗೆದು ಹಾಕಿದ್ದರು. ಶಾಲೆಯ ಹೆಡ್‌ಮಾಸ್ಟರ್ ಆರ್.ವಿ.ಕೃಷ್ಣಸ್ವಾಮಿ ಅಯ್ಯರ್ (ಆರ್.ವಿ.ಕೃಷ್ಣಸ್ವಾಮಿ ಅಯ್ಯರ್ ವಿಖ್ಯಾತರಾದ ಕಾದಂಬರಿಗಾರ ಆರ್.ಕೆ.ನಾರಾಯಣ್ ಮತ್ತು ಪ್ರಸಿದ್ಧ ಚಿತ್ರಗಾರ ಆರ್.ಕೆ.ಲಕ್ಷ್ಮಣ್ ಅವರ ತಂದೆ) ಕಠಿಣವಾಗಿ ಕಂಡರೂ ಮೃದು ಹೃದಯಿಯಾದ ಇವರ ಬಳಿ ಹೆಚ್.ಕೆ.ವೀರಣ್ಣಗೌಡರು ತಪ್ಪಾಯಿತೆಂದು ಕ್ಷಮೆ ಕೇಳಿ ತರಗತಿಗೆ ಮರಳಿದರು. ೧೯೧೮ರಲ್ಲಿ ಇಂಗ್ಲೀಷ್–ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆಗೆ ಕುಳಿತಾಗ ಹೆಚ್.ಕೆ.ವೀರಣ್ಣಗೌಡರ ಬಲಗಾಲಿನಲ್ಲಿ ಕಲ್ಲೋತ್ತಾಗಿ ಬಹಳ ಸಂಕಟ ಪಟ್ಟರು. ಆದರೆ ಶಾಲೆಯ ಮುಖ್ಯೋಪಾಧ್ಯಾಯರಾದ ಕೃಷ್ಣಯ್ಯಂಗಾರ್‌ರವರು ಬುದ್ಧಿವಂತ ವಿದ್ಯಾರ್ಥಿ ಎಂದು ತಿಳಿದಿದ್ದ ವೀರಣ್ಣಗೌಡರಿಗೆ ಪರೀಕ್ಷೆ ಬರೆಯಲು ಬಹಳಷ್ಟು ಅನುಕೂಲಗಳನ್ನು ಮಾಡಿಕೊಟ್ಟರು. ಅಂದರೆ ವೀರಣ್ಣಗೌಡರಿದ್ದ ಗೌವರ್ನಮೆಂಟ್ ಹಾಸ್ಟೆಲ್‌ನ ಕೊಠಡಿಯಲ್ಲಿ ಉಯ್ಯಾಲೆ ಹಾಕಿಸಿ ಅದರ ಮೇಲೆ ಮೆತ್ತಗಿರುವ ದಿಂಬು ಹಾಕಿಸಿ ಆ ದಿಂಬಿನ ಮೇಲೆ ಕಾಲಿಟ್ಟುಕೊಂಡು ಮಲಗಿಕೊಂಡು ವೀರಣ್ಣಗೌಡರಿಗೆ ಓದಲು ಅವಕಾಶ ಮಾಡಿಕೊಟ್ಟರು. ಅವರ ಸಹಪಾಠಿಗಳಿಬ್ಬರಿಗೆ ಪ್ರತಿ ರಾತ್ರಿ ವೀರಣ್ಣಗೌಡರ ಪಕ್ಕದಲ್ಲೇ ಇದ್ದುಕೊಂಡು ಮಾರನೆ ದಿನದ ಪರೀಕ್ಷೆ ವಿಷಯದ ಪಾಠಗಳನ್ನು ಗಟ್ಟಿಯಾಗಿ ಓದಿ ಚರ್ಚೆ ಮಾಡುವಂತೆ ಸೂಚನೆ ನೀಡಿದ್ದರು. ಹಾಗೆಯೇ ಪರೀಕ್ಷೆಗೆ ಹೋಗಿ ಬರಲು ಗಾಡಿಯ ವ್ಯವಸ್ಥೆಮಾಡಿದ್ದರ ಜೊತೆಗೆ ಪರೀಕ್ಷಾ ಕೊಠಡಿಯಲ್ಲಿ ನೋವಾಗದಂತೆ ಕುಳಿತುಕೊಳ್ಳಲು ವೀರಣ್ಣಗೌಡರ ಟೇಬಲ್ ಕೆಳಗೆ ಒಂದು ಸ್ಟೂಲ್ ಇಟ್ಟು ಅದರ ಮೇಲೆ ದಿಂಬು ಹಾಕಿಸಿ, ಅದರ ಮೇಲೆ ಕಾಲಿಟ್ಟುಕೊಂಡು ಬರೆಯುವಂತೆ ಮತ್ತು ಪರೀಕ್ಷಾ ಕಾಲಾವಧಿಗಿಂತ ಸ್ವಲ್ಪ

ಹೆಚ್ಚು ಕಾಲಾವಧಿ ತೆಗೆದುಕೊಂಡು ಉತ್ತರ ಪತ್ರಿಕೆ ನೀಡುವುದಕ್ಕೆ ಅವಕಾಶ ನೀಡಿದ್ದರು. ಹೀಗೆ ಕೆಲವು ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ವೀರಣ್ಣಗೌಡರು ಮೊದಲನೆ ತರಗತಿಯಲ್ಲಿ ತೇರ್ಗಡೆಯಾಗಲು ಬೆಂಬಲವಾಗಿ ನಿಂತ ಉಪಾಧ್ಯಾಯರನ್ನು ವೀರಣ್ಣಗೌಡರು ಕೃತಜ್ಞತಾ ಪೂರ್ವಕವಾಗಿ ತಮ್ಮ ಆತ್ಮಕಥೆಯಲ್ಲಿ ಸ್ಮರಿಸಿಕೊಂಡಿದ್ದಾರೆ. ಈ ಸನ್ನಿವೇಶಗಳು ವಿದ್ಯಾರ್ಥಿಗಳ ಭವಿಷ್ಯಕ್ಕೆ ಭಾಷ್ಯ ಬರೆಯುವಲ್ಲಿ ಉಪಾಧ್ಯಾಯರುಗಳ ಪಾತ್ರ, ಸ್ಥಾನ ಎಷ್ಟರ ಮಟ್ಟಿನದಾಗಿರುತ್ತದೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತವೆ. ಅಲ್ಲದೆ ಯಾರೂ ಕದಿಯಲಾರದ ಕೊಟ್ಟಷ್ಟು ವೃದ್ಧಿಯಾಗುವ ಸಂಪತ್ತು ವಿದ್ಯೆ, ಅಂತಹ ಮಹತ್ತರವಾದುದನ್ನು ಸಿದ್ಧಿ ಮಾಡಿಕೊಳ್ಳಲು ಎಂಥ ಕಷ್ಟವನ್ನಾದರೂ ಸಹಿಸುವ ತಾಳ್ಮೆ, ಛಲ ಇರಬೇಕು ಎಂಬುದು ಗಮನಿಸುವಂತಹದ್ದು.

ಚನ್ನಪಟ್ಟಣಕ್ಕೆ ಹೋಗುವ ಮೊದಲೇ 'ದಿ ಸೆಲ್ಫ್ ಇಂಗ್ಲಿಷ್ ಸ್ಟಡಿ' ಎಂಬ ಪುಸ್ತಕವನ್ನು ವಿ.ಪಿ.ಮೂಲಕ ತರಿಸಿಕೊಂಡು ನಾಲ್ಕು ಬಗೆಯ ಇಂಗ್ಲಿಷ್ ಅಕ್ಷರಗಳನ್ನು ಬರೆಯುವುದನ್ನು ವೀರಣ್ಣಗೌಡರು ತಿಳಿದುಕೊಂಡಿದ್ದರು. ಹೀಗೆ ವಾರ್ಷಿಕ ಪರೀಕ್ಷೆಯಲ್ಲಿ ಇಂಗ್ಲಿಷ್ ಹೊರತುಪಡಿಸಿ ಉಳಿದೆಲ್ಲ ವಿಷಯಗಳಲ್ಲಿ ನೂರಕ್ಕೆ ಎಪ್ಪತ್ತು-ಎಂಬತ್ತು ಅಂಕಗಳಿಸಿದ್ದರು. ಉದ್ದಕ್ಕೂ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗುತ್ತಿದ್ದ ವೀರಣ್ಣಗೌಡರ ವಿದ್ಯಾಭಿರುಚಿ ಆಸಕ್ತಿಯುತವಾಗಿತ್ತು. ಆದ್ದರಿಂದ ಬಾಲಕನ ಚುರುಕು ಬುದ್ಧಿ ಕಂಡು ಅಧ್ಯಾಪಕರು ಡಬಲ್ ಪ್ರಮೋಷನ್ ಕೊಡುತ್ತೇವೆಂದರೂ ಒಪ್ಪದೆ ವೀರಣ್ಣಗೌಡರು ಹಂತ ಹಂತವಾಗಿ ಕಲಿಯಲು ಇಚ್ಛೆ ಪಟ್ಟರು. ಚನ್ನಪಟ್ಟಣದಲ್ಲಿ ವಾಸಕ್ಕೆ ಮನೆಗೊತ್ತು ಮಾಡಲಾಗಿತ್ತು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಮೈಸೂರು ಸಂಸ್ಥಾನಕ್ಕೆ ೮ನೇ ರ್‍ಯಾಂಕ್ ಗಳಿಸಿದರು. ಇದು ಇವರ ಪರಿಶ್ರಮಕ್ಕೆ ಸಂದ ಮನ್ನಣೆಯಾಗಿತ್ತು.

ವೀರಣ್ಣಗೌಡರು ಚನ್ನಪಟ್ಟಣ ದಲ್ಲಿದ್ದಾಗ ನಡೆದೊಂದು ಸಂಗತಿಯನ್ನು ಹಿಂದುಳಿದ ವರ್ಗಕ್ಕೆ ಸೇರಿದ ಯಾವ ವ್ಯಕ್ತಿಯೂ ಮರೆಯುವಂತಿಲ್ಲ. ಗೌಡರು ಮಿಡಲ್‌ಸ್ಕೂಲಿನ ೩ನೇ ತರಗತಿಗೆ ಬಂದಾಗ ಈಗಿನ ವ್ಯವಸ್ಥೆಯಂತೆ ಅಂದು ಇಷ್ಟ ಬಂದ ಭಾಷೆಯನ್ನು ಅಂದರೆ ಕನ್ನಡ, ಉರ್ದು, ಸಂಸ್ಕೃತ ಈ ಮೂರು ಭಾಷೆಯಲ್ಲಿ ಒಂದನ್ನು ಆರಿಸಿಕೊಳ್ಳಬಹುದಿತ್ತು. ಗೌಡರ ತಂದೆಗೆ ಕೃಷ್ಣಮಾಚಾರ್ಯರೆಂಬ ಸಂಸ್ಕೃತದ ಪಂಡಿತರು ಹೆಚ್ಚು ಪರಿಚಯವಿದ್ದರಿಂದ ಚನ್ನಪಟ್ಟಣಕ್ಕೆ ಬಂದಾಗಲೆಲ್ಲ ಅವರು ಸಂಸ್ಕೃತ ಪಂಡಿತರ ಮನೆಗೆ ಹೋಗಿ ಅವರೊಡನೆ ವೇದಾಂತ ಸಂಬಂಧವಾದ ಮಾತುಗಳನ್ನಾಡುತ್ತಿದ್ದರು. ತಂದೆಯ ಜೊತೆಯಲ್ಲಿ ವೀರಣ್ಣಗೌಡರು ಪಂಡಿತರ ಮನೆಗೆ ಹೋಗುತ್ತಿದ್ದುದರಿಂದ ಸಂಸ್ಕೃತದ ಬಗ್ಗೆ ಆಸಕ್ತಿ ತಳೆದು ಸಂಸ್ಕೃತದ ತರಗತಿಗೆ ಹೋಗಿ ಕುಳಿತುಕೊಂಡಾಗ "ಏನಯ್ಯ ನೀನು ಸಂಸ್ಕೃತ ಕಲಿಯಬೇಕೆ? ಚೆನ್ನಾಗಿ ಕನ್ನಡ ಕಲಿತುಕೊಂಡರೆ ಸಾಲದೆ? ನಿನಗೇಕೆ ಸಂಸ್ಕೃತ?" ಎಂಬ ಹೀಯಾಳಿಕೆಯ ಮಾತು ವೀರಣ್ಣಗೌಡರ ಮನಸ್ಸನ್ನು ಹೆಚ್ಚು ಘಾಸಿಗೊಳಿಸಿತು. ನಂತರ ಕನ್ನಡ ತರಗತಿಗೆ ಹೋಗಿ ಕುಳಿತರು. ಕನ್ನಡ ಪಂಡಿತರ ಮಾರ್ಗದರ್ಶನ ವೀರಣ್ಣಗೌಡರಿಗೆ ಬೆಂಗಳೂರು ಒಕ್ಕಲಿಗರ ಸಂಘದ ವಿದ್ಯಾರ್ಥಿ ನಿಲಯದವರು ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಗಳಿಸಿಕೊಡುವುದರ ಜೊತೆಗೆ ಕುವೆಂಪು ಅವರ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರ ಪ್ರಶಂಸೆಗೆ ಪಾತ್ರವಾಗುವಂತೆ ಮಾಡಿತ್ತು. ಹೀಗೆ

ಸಂಸ್ಕೃತ ಬಿಟ್ಟು ಕನ್ನಡ ಕಲಿತಿದ್ದರಿಂದ ವೀರಣ್ಣಗೌಡರು ಮುಂದೆ ಪತ್ರಿಕಾ ಸಂಪಾದಕರಾಗಿ ತಮ್ಮ ಸಾಹಿತ್ಯ ಭಾಷೆಯ ಬರವಣಿಗೆಯ ಮೇಲೆ ಹೆಚ್ಚು ಹಿಡಿತ ಸಾಧಿಸಲು ಸಾಧ್ಯವಾಯಿತೆನ್ನಬಹುದು. ಅಲ್ಲದೆ ಒಮ್ಮೆ ಬರೆಯಲು ಪ್ರಾರಂಭಿಸಿದರೆ ಯಾವುದೇಃ ಕಾರಣಕ್ಕೂ ಅಳಿಸದೆ ಏಕಾಗ್ರತೆಯಿಂದ ಒಂದೇ ಬಾರಿಗೆ ವಿಷಯವನ್ನು ಬರವಣಿಗೆಗೆ ಇಳಿಸುತ್ತಿದ್ದರೆಂದು ವೀರಣ್ಣಗೌಡರ ಸಂಬಂಧಿ ವೀರಮಲ್ಲೇಶ್ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿವರಿಸಿದರು.

ಚನ್ನಪಟ್ಟಣದ ಹೈಸ್ಕೂಲ್‌ನಲ್ಲಿ ಓದುತ್ತಿದ್ದಾಗ ಹೆಚ್.ಕೆ.ವೀರಣ್ಣಗೌಡರಿಗೆ ತಿಟ್ಟಮಾರನಹಳ್ಳಿ ವಿ.ವೆಂಕಟಪ್ಪನವರು ಸಹಪಾಠಿಯಾದರು. ಈ ಇಬ್ಬರು ಸ್ನೇಹಿತರು ಕಲಿಕೆಯ ಜೊತೆಗೆ ಶೈಕ್ಷಣಿಕೇತರ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿ ಹೊಂದಿ ೧೯೧೧ಳರಲ್ಲಿ ಒಕ್ಕಲಿಗರ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿದರು. ಹೀಗಾಗಿ ಥಿಯೋಸಫಿಸ್ಟರಾಗಿದ್ದ ಕೆ.ಸೂರ್ಯನಾರಾಯಣಪ್ಪ ಗುರುಗಳ ಗಮನ ಸೆಳೆದರು. ಈ ಗುರುಗಳು ಚನ್ನಪಟ್ಟಣದಲ್ಲೊಂದು ಥಿಯೋಸಾಫಿಕಲ್ ಸೊಸೈಟಿಯನ್ನು ಸ್ಥಾಪಿಸಿದ್ದರು. ಚುರುಕಿನ ವಿದ್ಯಾರ್ಥಿಗಳಾಗಿದ್ದ ಹೆಚ್.ಕೆ.ವೀರಣ್ಣಗೌಡರು, ವಿ.ವೆಂಕಟಪ್ಪನವರನ್ನೂ ಸದಸ್ಯರನ್ನಾಗಿ ಸೇರಿಸಿಕೊಂಡಿದ್ದರು. ಇವರು ವಿದ್ಯಾರ್ಥಿಗಳಿಗೆ ಪಾಠಗಳ ಜೊತೆಗೆ ಸಾಮಾನ್ಯ ಜ್ಞಾನ ಹೆಚ್ಚಿಸುವ ಇತರ ವಿಷಯಗಳಾದ ಸನ್ನಡತೆ, ಆರೋಗ್ಯ, ಗ್ರಾಮನೈರ್ಮಲ್ಯ, ಆಹಾರ ಇತ್ಯಾದಿಗಳ ಬಗ್ಗೆ ತಿಳುವಳಿಕೆ ನೀಡುತ್ತಿದ್ದರು. ಪ್ರತಿ ವರ್ಷ ಮದ್ರಾಸಿನ ಅಡ್ಯಾರ್‌ನಲ್ಲಿ ನಡಿಯುತ್ತಿದ್ದ ಥಿಯೋಸಫಿಕಲ್ ಸೊಸೈಟಿಯ ಕನ್‌ವೆನ್ಷನ್‌ಗಳಲ್ಲಿ ಭಾಗವಹಿಸಲು ಈ ವಿದ್ಯಾರ್ಥಿಗಳನ್ನು ಕರೆದೊಯ್ಯುತ್ತಿದ್ದರು. ಕನ್ವೆಷನ್‌ಗಳಲ್ಲಿ ಸಹಕಾರ ಸಂಘಗಳ ರಿಜಿಸ್ಟ್ರಾರ್ ಕೆ.ಎಚ್.ರಾಮಯ್ಯ, ಪ್ರಮುಖ ಅಡ್ವೋಕೇಟ್ ಕೆ.ಶಂಕರನಾರಾಯಣರಾಯರು, ಮೈಸೂರು ಚೀಫ್‌ಕೋರ್ಟ್ ಮುಖ್ಯ ನ್ಯಾಯಾಧೀಶರಾಗಿದ್ದ ಕೆ.ಎಸ್.ಚಂದ್ರಶೇಖರ ಅಯ್ಯರ್, ಹರಿಜನ ಸೇವಾ ತತ್ಪರರಾಗಿದ್ದ ಗೋಪಾಲಸ್ವಾಮಿ ಅಯ್ಯರ್, ಶ್ರೀಮತಿ ಪಾರ್ವತಮ್ಮ ಚಂದ್ರಶೇಖರ ಅಯ್ಯರ್ ಮುಂತಾದವರು ಭಾಗವಹಿಸುತ್ತಿದ್ದರು. ಈ ಮೂಲಕ ಹೆಚ್.ಕೆ.ವೀರಣ್ಣಗೌಡರಿಗೆ ಮತ್ತು ವಿ.ವೆಂಕಟಪ್ಪನವರಿಗೆ ಇಂತಹ ಮಹನೀಯರನ್ನು ನೋಡುವ ಮತ್ತು ಭಾಷಣ ಕೇಳುವ ಸದವಕಾಶ ದೊರೆತು, ಅವರ ಪ್ರಭಾವಕ್ಕೆ ಒಳಗಾದರು. ಹಾಗೆಯೇ ಟಿ.ಕೃಷ್ಣಮೂರ್ತಿಯೆಂಬ ವಿಜ್ಞಾನ ಉಪಾಧ್ಯಾಯರ ವಿದ್ವತ್ತು ಮತ್ತು ವಿನಯಶೀಲತೆಗೆ ವೀರಣ್ಣಗೌಡರು ಮಾರುಹೋಗಿದ್ದರು. ಟಿ.ಕೃಷ್ಣಮೂರ್ತಿಯವರು ಸೈನ್ಸ್ ಟೀಚರ್ ಆದರೂ ಅವರಿಗೆ ಇಂಗ್ಲಿಷ್, ಕನ್ನಡ, ಚರಿತ್ರೆ, ಭೂಗೋಳ, ಗಣಿತ ಮುಂತಾದ ವಿಷಯಗಳಲ್ಲಿ ಹೆಚ್ಚಿನ ಪರಿಶ್ರಮವಿತ್ತು. ಹಾಗಾಗಿ ಅವರು ಯಾರಾದರೂ ಉಪಾಧ್ಯಾಯರು ರಜ ತೆಗೆದುಕೊಂಡಿದ್ದರೆ, ಅವರು ಮಾಡಬೇಕಾಗಿದ್ದ ಪಾಠಗಳನ್ನು ಇವರೇ ತರಗತಿಗೆ ಹೋಗಿ ಹೇಳಿಕೊಡುತ್ತಿದ್ದರು. ಒಮ್ಮೆ ವೀರಣ್ಣಗೌಡರು ಕನ್ನಡ ಉಪಾಧ್ಯಾಯರೊಂದಿಗೆ ಗಟ್ಟಿಯಾಗಿ ಯಾವುದೋ ವಿಷಯಕ್ಕೆ ವಾದಿಸಿದ್ದನ್ನು ಕೇಳಿಸಿಕೊಂಡ ಟಿ.ಕೃಷ್ಣಮೂರ್ತಿಯವರು ವೀರಣ್ಣಗೌಡರನ್ನು ತರಗತಿಯ ನಂತರ ತಮ್ಮೊಂದಿಗೆ ಕರೆದುಕೊಂಡು 'ಏನೇ ಆದರೂ ಅವರು ಗುರುಗಳು; ನೀನು ವಿದ್ಯಾರ್ಥಿ, ಹಾಗಿದ್ದೂ ಗುರುಗಳನ್ನು ಗದರಿಸಿ ಮಾತಾಡುವುದು ವಿದ್ಯಾರ್ಥಿಯಾದವನಿಗೆ ತಕ್ಕುದಲ್ಲ' ಎಂದು ಬುದ್ಧಿವಾದ ಹೇಳಿದರು.

ಒಕ್ಕಲಿಗ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿಕೊಂಡಿದ್ದ ವೀರಣ್ಣಗೌಡರು ವಾರಕ್ಕೊಮ್ಮೆ ಒಬ್ಬೊಬ್ಬ ಉಪಾಧ್ಯಾಯರುಗಳ ಅಧ್ಯಕ್ಷತೆಯಲ್ಲಿ ಚರ್ಚಾಕೂಟಗಳನ್ನೇರ್ಪಡಿಸಿ ವಿದ್ಯಾರ್ಥಿಗಳು ಭಾಷಣ ಮಾಡುವ ಶಕ್ತಿ ರೂಢಿಸಿಕೊಳ್ಳುವುದಕ್ಕೆ ಮತ್ತು ಅವರ ತಿಳುವಳಿಕೆ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾದ ವಾತಾವರಣವನ್ನು ಸೃಷ್ಟಿಸಿದರು. ಹಾಗೆಯೇ ಹಳ್ಳೀಗಾಡಿನ ಬಡವಿದ್ಯಾರ್ಥಿಗಳು ಚನ್ನಪಟ್ಟಣಕ್ಕೆ ಬಂದಿದ್ದುಕೊಂಡು ವಿದ್ಯಾರ್ಜನೆ ಮಾಡುವುದು ಕಷ್ಟ. ಆದುದರಿಂದ ಒಕ್ಕಲಿಗ ವಿದ್ಯಾರ್ಥಿ ನಿಲಯದ ಅಗತ್ಯತೆಯನ ಚಿಕ್ಕ ವಯಸ್ಸಿನಲ್ಲಿಯೇ ಮನಗಂಡ ಹೆಚ್.ಕೆ.ವೀರಣ್ಣಗೌಡರು, ವಿ.ವೆಂಕಟಪ್ಪನವರೊಂದಿಗೆ ಚರ್ಚಿಸಿ ಶಕ್ತ, ಶ್ರೀಮಂತ ವಿದ್ಯಾರ್ಥಿಗಳು ಬಡ ವಿದ್ಯಾರ್ಥಿಗಳ ಖರ್ಚು ವಹಿಸಿಕೊಳ್ಳುವುದು ಸೇರಿದಂತೆ ವಂತಿಗೆಯಿಂದ ವಿದ್ಯಾರ್ಥಿನಿಲಯ ನಿಭಾಯಿಸುವ ತಮ್ಮ ಕಲ್ಪನೆಯಂತೆ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿದರು. ಅಂದು ಇಬ್ಬರು ಗೆಳೆಯರು ಚನ್ನಪಟ್ಟಣದಲ್ಲಿ ಪ್ರಾರಂಭಿಸಿದ ವಿದ್ಯಾರ್ಥಿ ನಿಲಯ ಇಂದು ಶಾಲಾ, ಕಾಲೇಜುಗಳಾಗಿ ಬೆಳೆದಿದೆ. ಶಿಕ್ಷಣದ ಬಗೆಗಿನ ಆಸಕ್ತಿ ವೀರಣ್ಣಗೌಡರಿಗೆ ಸಹಜವಾಗಿ ಬಂದಿದ್ದಾದರೂ ಅದು ಸಾರ್ವಜನಿಕ ಸೇವಾ ಕ್ಷೇತ್ರದಲ್ಲಿ ಮುಂದಣಹೆಜ್ಜೆ ಇಡಲು ನಾಂದಿಯಾಯಿತು.

ಚನ್ನಪಟ್ಟಣ ಹೈಸ್ಕೂಲಿನಲ್ಲಿ ಒಕ್ಕಲಿಗರ ವಿದ್ಯಾರ್ಥಿಗಳ ಸಂಘದ ವತಿಯಿಂದ ನಡೆಯುತ್ತಿದ್ದ ಚರ್ಚಾಕೂಟಗಳಲ್ಲಿ ವಿದ್ಯಾರ್ಥಿಗಳು ತಮ್ಮ ವಾಕ್ಚಾತುರ್ಯ, ಭಾಷಣಮಾಡುವ ಕಲೆ ಮುಂತಾದವುಗಳನ್ನು ವೃದ್ಧಿಪಡಿಸಿಕೊಳ್ಳುವ ಅವಕಾಶದ ಜೊತೆಗೆ ಲೇಖನ ಕಲೆಯನ್ನು ವೃದ್ಧಿಪಡಿಸಿಕೊಳ್ಳಲು ಒಂದು ಮಾಸಿಕ ಪತ್ರಿಕೆಯನ್ನು ಪ್ರಕಟಿಸುವುದು ಬಹಳ ಮುಖ್ಯವಾದ ಕೆಲಸವೆಂದು ಹೆಚ್.ಕೆ.ವೀರಣ್ಣಗೌಡರು, ವಿ.ವೆಂಕಟಪ್ಪನವರು ತೀರ್ಮಾನಿಸಿಕೊಂಡರು. ಅದೇ ರೀತಿ ಪತ್ರಿಕೆಗೆ 'ಒಕ್ಕಲಿಗ ವಿದ್ಯಾರ್ಥಿ' ಎಂದು ಹೆಸರಿಸಲು ನಿರ್ಧರಿಸಿಕೊಂಡರು. ಪತ್ರಿಕೆಯ ಮೊದಲ ಸಂಚಿಕೆಗೆ ಒಂದು ಸಂದೇಶ ನೀಡಬೇಕೆಂದು ಮೈಸೂರಿನ ಪ್ರಮುಖ ಗಣ್ಯವ್ಯಕ್ತಿಗಳಲ್ಲಿ ಒಬ್ಬರಾಗಿದ್ದ ಕೆ.ಎಚ್.ರಾಮಯ್ಯನವರ ಬಳಿ ಹೋದರು. ವಿದ್ಯಾರ್ಥಿಗಳ ಅಭಿಪ್ರಾಯವನ್ನೆಲ್ಲ ಕೇಳಿದ ಮೇಲೆ ಪತ್ರಿಕೆಯ ಹೆಸರಿನ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ ಕೆ.ಎಚ್.ರಾಮಯ್ಯನವರು "ಕಾಲಕ್ಕೆ ತಕ್ಕಂತೆ ನಾವು ನಡೆಯಬೇಕು. ಈ ಕಾಲದಲ್ಲಿ ಜಾತಿಯ ಹೆಸರುಗಳು ಹೆಚ್ಚಾಗಿರಬಾರದು. ನಮ್ಮಲ್ಲಿ ವಿಶಾಲಭಾವನೆ ಮೂಡಬೇಕು. ಬೇರೆ ಬೇರೆ ಜಾತಿ ಮತಗಳ ವಿದ್ಯಾರ್ಥಿಗಳೊಡನೆ ಸಮರಸದಿಂದ ಬಾಳಬೇಕೆಂಬುದು ನಮ್ಮ ಆಶಯವಾಗಿರಬೇಕು. ನೀವು ಅದನ್ನು ಚನ್ನಪಟ್ಟಣದ ಒಕ್ಕಲಿಗ ವಿದ್ಯಾರ್ಥಿ ಸಂಘದ ಉದ್ದೇಶದಲ್ಲಿ ತಿಳಿಸಿದ್ದೀರಿ. ಸಂತೋಷ, ಆದರೆ ನಿಮ್ಮದನ್ನು ಅಂತಹ ಜಾತಿ ವಿದ್ಯಾರ್ಥಿ ಪತ್ರಿಕೆ ಎಂದೇಕೆ ಕರೆಯಬೇಕು? ಅದಕ್ಕಿಂತ ವಿಶಾಲವಾದ 'ಕರ್ನಾಟಕ ವಿದ್ಯಾರ್ಥಿ' ಎಂಬ ಹೆಸರು ಎಷ್ಟು ಶೋಭಾಯಮಾನವಾಗಿರುತ್ತೆ? ಅಪ್ಪ ಹಾಕಿದ ಆಲದ ಮರ ಎಂದು ಜಾತಿ ಹೆಸರಿಗೇ ಅಂಟಿಕೊಳ್ಳಬೇಕೆ? ಉದಾರ ಭಾವನೆ ನಿಮ್ಮಲ್ಲಿ ಬೆಳೆಯಬೇಕಾದರೆ ಜಾತಿ ಮತ ಸ್ಥಳಭಾವನೆ ಹೋಗಬೇಕು. ಆದುದರಿಂದ ಪತ್ರಿಕೆ ಹೆಸರನ್ನು ಬದಲಾಯಿಸದಿದ್ದರೆ ನಿಮ್ಮ ಪತ್ರಿಕೆಗೆ ಸಂದೇಶ ಕೊಡುವುದಿಲ್ಲ"[೧] ಎಂದು ಹೇಳಿಬಿಟ್ಟರು. ಕೆ.ಎಚ್.ರಾಮಯ್ಯನವರ ಸಲಹೆಯಂತೆ 'ಕರ್ನಾಟಕ

---

[೧] ಬದುಕು-ಮೆಲುಕು.ಹೆಚ್.ಕೆ.ವೀರಣ್ಣಗೌಡ.ಪ್ರಬುದ್ಧಪ್ರಕಾಶನ.೧೯೭೪,ಪುಟ-೭೭

ವಿದ್ಯಾರ್ಥಿ'ಎಂಬ ಹೆಸರಿನಲ್ಲಿಯೇ ಪತ್ರಿಕೆ ಪ್ರಕಟಿಸಲು ನಿರ್ಧರಿಸಿದರು. ಕರ್ನಾಟಕ ವಿದ್ಯಾರ್ಥಿ ಪತ್ರಿಕೆಯಲ್ಲಿ ಮೂಲತಃ ವಿದ್ಯಾರ್ಥಿಗಳ ಲೇಖನಗಳಲ್ಲದೆ ಸಮಕಾಲೀನ ಪ್ರಸಿದ್ದ ಲೇಖಕರುಗಳಾದ ಸಾಲಿ ರಾಮಚಂದ್ರರಾವ್, ಕಡೆಂಗೋಡ್ಲು ಶಂಕರಭಟ್ಟರು ಮುಂತಾದವರ ಲೇಖನಗಳು ಪ್ರಕಟವಾಗುತ್ತಿದ್ದವು. ಇದೊಂದು ಕೈಬರಹದ ಪತ್ರಿಕೆಯಾಗಿತ್ತು. ಹೆಚ್.ಕೆ.ವೀರಣ್ಣಗೌಡರು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ಬರೆದಿದ್ದ 'ಆಶಾ' ಎಂಬ ನೀಳ್ಗತೆಯ ಪುಸ್ತಕವನ್ನು ಪತ್ರಿಕೆಯ ಚಂದಾದಾರರಿಗೆ ಉಚಿತವಾಗಿ ನೀಡಲಾಗಿತ್ತು ಎಂದು ತಮ್ಮ ಆತ್ಮಕಥೆಯಲ್ಲಿ ಹೇಳಿ ಕೊಂಡಿದ್ದಾರೆ. ವೀರಣ್ಣಗೌಡರ ನಂತರ ಯಾವ ವಿದ್ಯಾರ್ಥಿಯೂ ಪತ್ರಿಕೆ ನಡೆಸಲು ಮುಂದೆ ಬರದ ಕಾರಣ ಅದು ಮೂರು ವರ್ಷಗಳ ಕಾಲ ಚಾಲ್ತಿಯಲ್ಲಿದ್ದು ನಂತರ ನಿಂತುಹೋಯಿತು.

ಕೆ.ಎಚ್.ರಾಮಯ್ಯನವರು ಅಂದಿನ ಮೈಸೂರು ಸಂಸ್ಥಾನದಲ್ಲಿ ಗಣ್ಯವ್ಯಕ್ತಿಯಾಗಿದ್ದರು. ಜನರಿಗೆ ಸಮಾಜಕ್ಕೆ ಹಿತವಾಗುವ ಚಟುವಟಿಕೆ ನಡೆಸುವವರನ್ನು ಯಾವ ಭೇದಭಾವವನ್ನೂ ತೋರದೆ ಹುರಿದುಂಬಿಸುತ್ತಿದ್ದರು. ಅಂದಿನ ರಾಜ್ಯಾಡಳಿತದಲ್ಲಿ ಬ್ರಾಹ್ಮಣೇತರ ವರ್ಗದ ಪಾಲು ಅತಿನಿಕೃಷ್ಟವಾಗಿತ್ತು. ಹಿಂದುಳಿದ ಜನಾಂಗ ಬೌದ್ಧಿಕ ತಯಾರಿ ಇಲ್ಲದೆ ಧೈರ್ಯ ಸಾಹಸಗಳ ಕೊರತೆಯಿಂದ ಶೋಷಣೆ ತುಳಿತಕ್ಕೆ ಸಿಕ್ಕಿ ನಲುಗಿ ಹೋಗಿತ್ತು. ಆ ದಲಿತ ವರ್ಗದ ಪರ ಹೋರಾಟಕ್ಕೆ ನಾಯಕತ್ವ ವಹಿಸಿದ ಪ್ರಮುಖರಲ್ಲಿ ಸಿ.ಆರ್.ರೆಡ್ಡಿ, ಬನುಮಯ್ಯ, ಡಿ.ಎಸ್.ಮಲ್ಲಪ್ಪ, ಎಂ.ಬಸವಯ್ಯ, ಅಬ್ಬಾಸ್ ಖಾನ್ ಮುಖ್ಯರು. ಇಂಥ ನಾಯಕರ ನೇತೃತ್ವದಲ್ಲಿ ನಡೆದ ಹೋರಾಟ, ಮಹಾರಾಜರ ಪ್ರೋತ್ಸಾಹ ಹಾಗೂ ಮಿಲ್ಲರ್ ಸಮಿತಿಯ ವರದಿಯ ಜಾರಿಗೆ ಬಂದ ಪರಿಣಾಮದಿಂದಾಗಿ ಬ್ರಾಹ್ಮಣೇತರ ವರ್ಗದಲ್ಲಿ ಜಾಗೃತಿ ಉಂಟಾಯಿತು. ಈ ಹೋರಾಟದಲ್ಲಿ ಬ್ರಾಹ್ಮಣೇತರ ವರ್ಗದಿಂದ ಅನೇಕ ಯುವಕರು ಬೆಳಕಿಗೆ ಬಂದರು. ಅಂಥವರಲ್ಲಿ ಕೆ.ಎಚ್.ರಾಮಯ್ಯನವರೂ ಒಬ್ಬರು.

ಉದಾರ ವ್ಯಕ್ತಿತ್ವದ ರಾಮಯ್ಯನವರು ವಾತ್ಸಲ್ಯಮಯಿ. ಅವರ ಔದಾರ್ಯ ಆದರಣೆಗಳಿಂದ ನಾಡಿನ ಬಹಳ ಮಂದಿ ಪ್ರತಿಭಾವಂತರು ತಮ್ಮ ಬಾಳಿನಲ್ಲಿ ಅಭ್ಯುದಯದ ಬೆಳಕು ಕಂಡರು. ಅದರಲ್ಲೂ ಒಕ್ಕಲಿಗ ಜನಾಂಗದ ಸಂಘಟನೆಯಲ್ಲಿ ಅವರದು ಅದ್ಭುತ ಪಾತ್ರ. ಬೆಂಗಳೂರಿನ ಒಕ್ಕಲಿಗ ಸಂಘದ ಸ್ಥಾಪನೆಗೆ ಅವರೇ ಮೂಲಪುರುಷರು. ಜನಾಂಗದ ಒಳಿತಿಗಾಗಿ ಮುನ್ನಡೆಗಾಗಿ ತಮ್ಮ ದೂರದೃಷ್ಟಿಯಿಂದ ಮಾರ್ಗದರ್ಶನ ಮಾಡುತ್ತಿದ್ದರು. ಅವರ ಜನಾಂಗ ಪ್ರೇಮ ಅಸದೃಶವಾದುದು. ಜನಾಂಗದ ಯಾರೇ ಆದರೂ ಮದುವೆ ಮತ್ತಿತರ ಮಂಗಳ ಕಾರ್ಯಗಳಿಗೆ ಆಹ್ವಾನಿಸಿದರೆ ತುಂಬು ಹೃದಯದಿಂದ ಹೋಗುತ್ತಿದ್ದರು. ಜನಾಂಗದ ಒಳಿತಿಗಾಗಿ ಪೂರ್ಣ ನಿಷ್ಠೆಯಿಂದ ಕೆಲಸ ಮಾಡುವಾಗಲೂ ಅವರಲ್ಲಿ ಕಿಂಚಿತ್ತಾದರೂ ಅಹಂಕಾರವಿರಲಿಲ್ಲ. ತಾವು ಪ್ರತಿಷ್ಠಿತರೆಂಬ ಹಮ್ಮುಬಿಮ್ಮು ಇರಲಿಲ್ಲ. ಜನಾಂಗದ ಉದ್ಧಾರಕನೆಂಬ ದುರಹಂಕಾರ ಭಾವನೆಯಿರಲಿಲ್ಲ. ಸಾಮಾನ್ಯರಲ್ಲಿ ಸಾಮಾನ್ಯರಾಗಿ ಬೆರೆಯುತ್ತಿದ್ದರು. ಅವರ ನೋವು ನಲಿವುಗಳಿಗೆ ಸ್ಪಂದಿಸುತ್ತಿದ್ದರು. ಜನಾಂಗದಲ್ಲಿ ಮನೆ ಮಾಡಿರುವ ಅಜ್ಞಾನ, ಮೌಢ್ಯ, ದುಂದುಗಾರಿಕೆಗಳ ವಿರುದ್ಧ ಜಾಗೃತಿಯನ್ನುಂಟು ಮಾಡುತ್ತಿದ್ದರು. ವಿದ್ಯಾಭ್ಯಾಸಕ್ಕೆ ಆದ್ಯತೆ ನೀಡಬೇಕೆಂದು ಆಗ್ರಹ ಪಡಿಸುತ್ತಿದ್ದರು. ನೆರವಾಗುತ್ತಿದ್ದರು. ಅವರಲ್ಲಿ ಹಾಸ್ಯ ಪ್ರಜ್ಞೆಗೂ ಕೊರತೆಯಿರಲಿಲ್ಲ. ಒಮ್ಮೆ

ಒಂದು ಸಭೆಯಲ್ಲಿ 'am the watch dog of the Vokkaligara Sanaga' ಅದಕ್ಕಾಗಿಯೇ ಸಂಘದ ಕಟ್ಟಡದ ಪಕ್ಕದಲ್ಲಿಯೇ ಮನೆ ಮಾಡಿ ವಾಸಿಸುತ್ತಿದ್ದೇನೆ ಎಂದು ಹೇಳಿ ಹಾಸ್ಯದ ಹೊನಲು ಹರಿಸಿದ್ದರು. ಅವರ ಮನೆ ಇಂದು ಒಕ್ಕಲಿಗರ ಸಂಘದ ಪಕ್ಕದಲ್ಲಿರುವ ಕುರುಹಿನಶೆಟ್ಟಿ ಜನಾಂಗದ ವಿದ್ಯಾರ್ಥಿನಿಲಯ ಇರುವ ಸ್ಥಳವಾಗಿತ್ತು. ದಾನ ಧರ್ಮಗಳಿಗೆ ಆದರ ಆತಿಥ್ಯ ಹಾಗೂ ಜನಸೇವೆಗೆ ತಮ್ಮ ಹಣವನ್ನೆಲ್ಲ ಖರ್ಚು ಮಾಡಿ ಸಾಲ ಶೂಲಗಳಿಗೆ ತುತ್ತಾಗಿ ಮನೆಯನ್ನು ಮಾರಾಟ ಮಾಡಿದರು. ರಾಮಯ್ಯನವರು ತಮ್ಮ ಜನಾಂಗಕ್ಕಾಗಿ ತನು ಮನ ಧನಗಳನ್ನು ಧಾರೆಯೆರೆದು ಸೇವೆ ಸಲ್ಲಿಸಿದ ಮಹಾಚೇತನ. ಅವರ ಆದರ್ಶ ಇಂದಿಗೂ ಎಂದೆಂದಿಗೂ ಚಿರಸ್ಫೂರ್ತಿ.

ಕೆ.ಎಚ್.ರಾಮಯ್ಯನವರು ಆಗಿನ ಮೈಸೂರು ಸಂಸ್ಥಾನದಲ್ಲಿ ಸಹಕಾರ ಸಂಘಗಳ ರಿಜಿಸ್ಟ್ರಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದರು.[೧೦] ಬೆಂಗಳೂರು ಒಕ್ಕಲಿಗರ ಸಂಘದ ಸಂಸ್ಥಾಪಕರಲ್ಲೊಬ್ಬರಾಗಿದ್ದರು. ಹಾಗಾಗಿ ಇಂತಹ ಗಣ್ಯ ವ್ಯಕ್ತಿಯ ಜಾತ್ಯತೀತ ಮನೋಭಾವನೆಯ ಸಲಹೆಯನ್ನು ಹೆಚ್.ಕೆ.ವೀರಣ್ಣಗೌಡರು ಮತ್ತು ಅವರ ಸಂಗಡಿಗರು ಒಪ್ಪಿಕೊಂಡರು. ಬಹುಶಃ ಮೊದಲೇ ಇವರಲ್ಲಿ ತಮ್ಮ ಮನೆತನದ ಪರಿಸರ ಜಾತ್ಯತೀತ ಮನೋಭಾವವನ್ನು ಚಿಕ್ಕಂದಿನಲ್ಲಿಯೇ ಇವರ ಮನಸ್ಸಿನಲ್ಲಿ ಬೆಳೆಯುವಂತೆ ಮಾಡಿದ್ದರಿಂದ ಈ ನಿಲುವಿಗೆ ಬರಲು ಸಾಧ್ಯವಾಗಿರಬಹುದು. ಇವರ ಈ ಸಕಾರಾತ್ಮಕ ನಿಲುವು ಮುಂದೆ ಹೆಚ್.ಕೆ.ವೀರಣ್ಣಗೌಡರು ಒಬ್ಬ ಜನಪ್ರಿಯ ನಾಯಕರಾಗಿ ಬೆಳೆಯಲು ಸಹಾಯಕವಾಯಿತು.

ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ವೀರಣ್ಣಗೌಡರಲ್ಲಿ ಸಂಘಟನಾ ಶಕ್ತಿ ಹಂತ ಹಂತವಾಗಿ ಅಗಾಧ ಪ್ರಮಾಣದಲ್ಲಿ ರೂಪು ತಳೆಯುತ್ತಿತ್ತು. ಇವರಲ್ಲಿದ್ದ ಈ ಸಾಮರ್ಥ್ಯವನ್ನು ಗುರುತಿಸಿದ ಬೆಂಗಳೂರಿನಲ್ಲಿ ಅಡ್ವೋಕೇಟ್ ಆಗಿದ್ದ ಬ್ರಾಹ್ಮಣೇತರ ಪಂಗಡಗಳ ನಾಯಕರಲ್ಲಿ ಒಬ್ಬರಾಗಿದ್ದ ಶ್ರೀಯುತ ಜಿ.ಪರಮಶಿವಯ್ಯನವರು ಚನ್ನಪಟ್ಟಣದಲ್ಲಿ ಅನೇಕ ಸಮಾರಂಭಗಳನ್ನು ಯಶಸ್ವಿಯಾಗಿ ನಡಿಸುತ್ತಿದ್ದನ್ನು ಗಮನಿಸಿ ಒಮ್ಮೆ "ನೀವು ಮೈಸೂರು ಸಂಸ್ಥಾನದ ಪಟೇಲರ ಸಭೆಯನ್ನು ಏಕೆ ನಡೆಸಬಾರದು?" ಎಂದು ಕೇಳಿದರು. ಅವರ ಸಲಹೆ ಸೂಚನೆಯ ಮೇರೆಗೆ ಹೆಚ್.ಕೆ.ವೀರಣ್ಣಗೌಡರು ತಮ್ಮ ಸ್ನೇಹಿತರೊಂದಿಗೆ ಸೇರಿ ಚನ್ನಪಟ್ಟಣದಲ್ಲಿ ಮೊದಲಿಗೆ ಪಟೇಲರ ಸಭೆಯನ್ನು ಯಶಸ್ವಿಯಾಗಿ ನಡೆಸಿದ್ದರಿಂದ ಉತ್ತೇಜಿತರಾಗಿ ನಂತರ ಶ್ರೀರಂಗಪಟ್ಟಣ ಬೆಂಗಳೂರಿನಲ್ಲಿ ನಡೆಸಿದರು. ಈಗ ಕರ್ನಾಟಕ ಸರ್ಕಾರ ಪ್ರತಿ ಗ್ರಾಮದಲ್ಲೂ ಗ್ರಾಮಸಭೆಯನ್ನು ನಡೆಸುವ ವ್ಯವಸ್ಥೆಯನ್ನು ಜಾರಿಗೊಳಿಸಿದೆ. ಗ್ರಾಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಆ ಸಭೆಯಲ್ಲಿಯೇ ಸಾಧ್ಯವಾದಷ್ಟು ಇತ್ಯರ್ಥಗೊಳಿಸಿಕೊಳ್ಳಬೇಕೆಂಬುದೇ ಗ್ರಾಮ ಸಭೆಯ ಮೂಲ ಉದ್ದೇಶ. ಇಂತಹ ಸಭೆಯನ್ನು ಸಂಘಟಿಸುವುದು ಆಯೋಜಕರಿಗೆ ಒಂದು ದೊಡ್ಡ ಸಮಸ್ಯೆಯೇ ಸರಿ. ಬಹಳ

---

[೧೦] ಸಹಕಾರಿ ವ್ಯವಸ್ಥೆಯನ್ನು ಪ್ರಪ್ರಥಮವಾಗಿ ಬ್ರಿಟಿಷರು ೧೯೦೪ರಲ್ಲಿ ಭಾರತಕ್ಕೆ ಪ್ರಚಾರಕ್ಕೆ ತಂದರು. ೧೯೦೫ರಲ್ಲಿ ಸಹಕಾರ ಸಂಘಗಳ ರೆಗ್ಯೂಲೇಷನ್ ವಿಧೇಯಕವನ್ನು ಅಸ್ತಿತ್ವಕ್ಕೆ ತರಲಾಯಿತು. ಈ ವಿಧೇಯಕದಡಿಯಲ್ಲಿ ಪ್ರಥಮದಲ್ಲಿ ೭ ಸಹಕಾರ ಸಂಘಗಳ ಸ್ಥಾಪನೆಯೊಡನೆ ಹೊಸದಾದ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತಂದು ಸರ್ಕಾರ ಗ್ರಾಮಾಂತರ ಪ್ರದೇಶದಲ್ಲಿ ರೈತಾಪಿ ವರ್ಗ ಅನುಭವಿಸುತ್ತಿದ್ದ ಆರ್ಥಿಕ ಸಂಕಷ್ಟಗಳನ್ನು ನೀಗಿಸಲು ಪ್ರಯತ್ನಿಸಿತು. ಜನತೆ ಪರಸ್ಪರ ಸಹಕಾರದೊಡನೆ ಸ್ವಾವಲಂಬಿಗಳಾಗಿ ತಮ್ಮ ತಮ್ಮ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸಲು ಅನುಕೂಲವಾಯಿತು. (ಡಾ.ಟಿ.ಡಿ.ದೇವೇಗೌಡ. ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ. ೧೯೯೯. ಪು-೮೮)

ಹಿಂದೆಯೇ ಇದೇ ಗ್ರಾಮೋದ್ಧಾರದ ಉದ್ದೇಶವನ್ನಿಟ್ಟುಕೊಂಡು ಪಟೇಲರ ಸಭೆಯನ್ನು ನಡೆಸಬೇಕೆಂಬ ಸೂಚನೆ ಕೊಟ್ಟ ಪರಮಶಿವಯ್ಯನವರನ್ನು ನೆನೆಯುತ್ತಲೇ ಅದನ್ನು ಕಾರ್ಯರೂಪಕ್ಕೆ ತಂದ ವೀರಣ್ಣಗೌಡರ ಆಸಕ್ತಿಯನ್ನು ಇಲ್ಲಿ ನಾವು ಸ್ಮರಿಸಬೇಕಾಗುತ್ತದೆ. ಹಳ್ಳಿಗಾಡಿನಲ್ಲಿ ಬೆಳೆದು ರೂಪುಗೊಂಡ ವ್ಯಕ್ತಿತ್ವ ವೀರಣ್ಣಗೌಡರದು. ಅಂತಹ ಹಳ್ಳಿಯ ಮುಖ್ಯಸ್ಥರಾದ ಪಟೇಲರ ಮನೆತನದಲ್ಲಿ ಜನಿಸಿದ ಇವರಲ್ಲಿ ಪಟೇಲರ ಜವಾಬ್ದಾರಿ, ಗ್ರಾಮೋದ್ಧಾರದಲ್ಲಿ ಅವರ ಪಾತ್ರ ಇವುಗಳ ಬಗ್ಗೆ ತಿಳುವಳಿಕೆ ಇದ್ದಿತು. ಪಟೇಲರೆಂದರೆ ಜಮೀನ್ದಾರಿ ಪದ್ಧತಿಯ ಒಂದು ಮುಖ, ಪಟೇಲರೆಂದರೆ ಕೇವಲ ಹಕ್ಕುಗಳನ್ನು ಚಲಾಯಿಸಲು ಅರ್ಹತೆ ಪಡೆದವರು ಎಂಬ ನಂಬಿಕೆ ಜನರಲ್ಲಿತ್ತು. ಅಂತಹ ಸಂದರ್ಭದಲ್ಲಿ ವೀರಣ್ಣಗೌಡರು ತಾವು ಸಂಘಟಿಸಿದ್ದ ಪಟೇಲರ ಸಭೆಯಲ್ಲಿ ಮುಖಂಡರಿಂದ ಪಟೇಲರ ಹಕ್ಕು ಬಾದ್ಯತೆಗಳು ಅಷ್ಟೆ ಅಲ್ಲ. ಅವರ ಕರ್ತವ್ಯಗಳು ; ಮುಖ್ಯವಾಗಿ ಸರ್ಕಾರಿ ಆಡಳಿತದಲ್ಲಿ ಪಟೇಲರ ಪಾತ್ರ ಎಷ್ಟು ಮುಖ್ಯವಾದುದ್ದು ಎಂಬ ವಿಚಾರಗಳ ಬಗ್ಗೆ ಭಾಷಣವನ್ನು ಏರ್ಪಡಿಸಿದ್ದರು. ಹೀಗೆ ಪಟೇಲರ ಕರ್ತವ್ಯಗಳನ್ನು ನೆನಪಿಸಿ ಆ ಮೂಲಕ ಗ್ರಾಮದ ಅಭ್ಯುದಯವನ್ನು ತಮ್ಮ ಕನಸನ್ನಾಗಿಸಿಕೊಂಡಿದ್ದ ಮನೆತನ ಈ ವೀರಣ್ಣಗೌಡರದು. ಬಹುಶಃ ಈ ಹಿನ್ನೆಲೆಯೇ ವೀರಣ್ಣಗೌಡರು ಜಿ.ಪರಮಶಿವಯ್ಯನವರ ಮಾತಿಗೆ ಸಮ್ಮತಿಸಿ ಇಂತಹ ಒಂದು ವಿಶೇಷವಾದ ಕಾರ್ಯಕ್ರಮ ನಡೆಸಲು ಸಾಮರ್ಥ್ಯವನ್ನು ತಂದುಕೊಟ್ಟಿರಬಹುದು.

ಹೆಚ್.ಕೆ.ವೀರಣ್ಣಗೌಡರು ತಮ್ಮ ಅಧ್ಯಯನದ ಜೊತೆಗೆ ಕುಟುಂಬದ ವೃತ್ತಿಯಾದ ವ್ಯವಸಾಯದ ಬಗ್ಗೆ ಹೆಚ್ಚು ಗಮನ ನೀಡುತ್ತಿದ್ದರು. ಅಂದರೆ ಶಾಲೆಯ ರಜಾ ದಿನಗಳಲ್ಲಿ ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಮುಂದೆ ರೈತನಾಯಕನಾಗಿ, ರೈತರ ಸಮಸ್ಯೆಗಳನ್ನು ಪರಿಹರಿಸುವ ಹರಿಕಾರರಾಗಿ ರೂಪುಗೊಳ್ಳಬೇಕಾದರೆ ಅವರ ಬಾಲ್ಯ, ಅದನ್ನು ಅರ್ಥಪೂರ್ಣವಾಗಿ ರೂಪಿಸಿದ ಅವರ ತಂದೆಯ ಪಾತ್ರವೂ ಸಾಕಷ್ಟಿದೆ. ಮೂಲತಃ ಇವರದು ರೈತಾಪಿ ಕುಟುಂಬವಾಗಿದ್ದು, ಸಾಕಷ್ಟು ಭೂ-ಹಿಡುವಳಿ ಹೊಂದಿದ್ದರು. ವೀರಣ್ಣಗೌಡರ ತಂದೆ ಕೆಂಚೇಗೌಡರು ಮಗನಿಗೆ ವಿದ್ಯಾಭ್ಯಾಸದ ಜೊತೆಗೆ ತಮ್ಮ ಕುಲ ಕಸುಬನ್ನು ತಿಳಿದಿರಬೇಕು ಎಂದು ಆಲೋಚಿಸಿದ್ದರು. ಈ ಹಿನ್ನೆಲೆಯಿಂದ ರಜಾ ದಿನಗಳಲ್ಲಿ ಹೆಚ್.ಕೆ.ವೀರಣ್ಣಗೌಡರು ಮನೆಗೆ ಬಂದಾಗ ವ್ಯರ್ಥವಾಗಿ ಕಾಲಹರಣ ಮಾಡದಂತೆ ತಮ್ಮ ವ್ಯವಸಾಯದ ಕಡೆ ನಿಗವಹಿಸುವಂತೆ ಹೇಳುತ್ತಿದ್ದರು. ಕೋಟಿ ವಿದ್ಯೆ ಕಲಿತರೂ ಮೇಟಿ ವಿದ್ಯೆಯ ಮಹತ್ವವೂ ಗೊತ್ತಿರಬೇಕು ಎಂಬುದು ವೀರಣ್ಣಗೌಡರ ಸಿದ್ಧಾಂತವಾಗಿತ್ತು. ಹೊಲಗದ್ದೆ ಕೆಲಸದ ಕಡೆ ನಿಗ ವಹಿಸುವುದರ ಜೊತೆಗೆ ತಾವೂ ಸ್ವತಃ ಆ ಕೆಲಸಗಳಲ್ಲಿ ಪಳಗಲು ಮುಂದಾದರು. ಹೀಗೆ ಏರು ಕಟ್ಟುವುದು, ಉಳುವುದು ಇವೆಲ್ಲವನ್ನು ಕರಗತ ಮಾಡಿಕೊಂಡಿದ್ದರು.

ಈ ವ್ಯವಸಾಯದ ಕೆಲಸದೊಂದಿಗೆ ವಿರಾಮ ಕಾಲದಲ್ಲಿ ತಂದೆಯವರು ಸಂಗ್ರಹಿಸಿದ್ದ ಪುಸ್ತಕಗಳನ್ನು ಓದುವುದರ ಮೂಲಕ ಜ್ಞಾನಾಭಿವೃದ್ಧಿ ಮಾಡಿಕೊಂಡರು. ಪತ್ರಿಕೆಗಳಿಗೆ ಲೇಖನವನ್ನು ಬರೆಯುತ್ತಿದ್ದರು. ಲೋಕ ವಿಖ್ಯಾತ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ದಿವಾನರಾಗಿದ್ದಾಗ ೧೯೧೧ರಲ್ಲಿ 'ಎಕನಾಮಿಕ್ಸ್ ಕಾನ್ಫರೆನ್ಸ್'ಎಂಬ ಹೊಸ ವಿಭಾಗವನ್ನು ಪ್ರಾರಂಭಿಸಿದ್ದರು.

ಈ ವಿಭಾಗದವರು ಪ್ರತಿವರ್ಷ ಹೋಬಳಿ, ತಾಲ್ಲೂಕು ಕಾನ್ಫರೆನ್ಸ್‌ಗಳನ್ನು ನಡೆಸುತ್ತಿದ್ದರು. 'ಇದರ ಪ್ರಮುಖ ಉದ್ದೇಶವೆಂದರೆ ಸಂಸ್ಥಾನದ ಆರ್ಥಿಕ ಪ್ರಗತಿಯ ಬಗ್ಗೆ ಅಧಿಕಾರಿಗಳು ಪ್ರಮುಖ ವ್ಯವಸಾಯಗಾರರು, ವ್ಯಾಪಾರಸ್ಥರು, ಸಾರ್ವತ್ರಿಕ ಹಿತಾಸಕ್ತಿ ಹೊಂದಿರುವ ಗಣ್ಯವ್ಯಕ್ತಿಗಳು ಮೊದಲಾದವರೊಡನೆ ರಾಜ್ಯದ ಪ್ರಗತಿಯ ಬಗ್ಗೆ ಚರ್ಚಿಸುವುದು, ಅಭಿಪ್ರಾಯಗಳನ್ನು ಸಂಗ್ರಹಿಸುವುದು, ಸರ್ಕಾರದ ಕಾರ್ಯಕ್ರಮಗಳ ಬಗ್ಗೆ ತಿಳುವಳಿಕೆ ನೀಡಿ ಜನರಿಗೆ ಅಗತ್ಯ ಸಹಾಯ ನೀಡುವುದು, ರಾಜ್ಯದ ವಾಸ್ತವ ಪ್ರಗತಿ ಏನು? ಎಂಬುದನ್ನು ಅರಿಯಲು ವಾರ್ಷಿಕ ಸಮ್ಮೇಳನವನ್ನು ನಡೆಸುವುದು. ಒಟ್ಟಾರೆ ಈ ಸಭೆಯ ಪ್ರಮುಖ ಉದ್ದೇಶ ರಾಜ್ಯದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿ ಸುಧಾರಣೆಗೊಳಿಸುವುದೇ ಆಗಿತ್ತಾದರೂ ವಿಶ್ವೇಶ್ವರಯ್ಯನವರು ಉದ್ದೇಶಿದಷ್ಟು ಯಶಸ್ವಿಯಾಗಲಿಲ್ಲ'.[೧೧] ಈ ವೇಳೆಗಾಗಲೇ ಲೋಯರ್ ಸೆಕೆಂಡರಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ವೀರಣ್ಣಗೌಡರು ತಾಲ್ಲೂಕು ಕಾನ್ಫರೆನ್ಸ್‌ನಲ್ಲಿ 'ವ್ಯವಸಾಯಗಾರನಿಗೆ ವಿದ್ಯೆ ಅವಶ್ಯಕ' ಎಂಬ ವಿಷಯದಲ್ಲಿ ಭಾಷಣ ಮಾಡಿದ್ದರು. ಹೀಗೆ ರೈತನಿಗೆ ಅವಶ್ಯಕವಾಗಿ ಬೇಕಾಗಿರುವ ಅಕ್ಷರಜ್ಞಾನ ಹಾಗು ವಿದ್ಯಾವಂತನೊಬ್ಬ ಸ್ವಲ್ಪ ಮಟ್ಟಿಗಾದರೂ ಹೊಂದಿರಬೇಕಾದ ತನ್ನ ಕುಟುಂಬದ ವೃತ್ತಿಯ ಜ್ಞಾನ ಶಿಸ್ತು, ಇವೆರಡೂ ವ್ಯಕ್ತಿತ್ವದ ವಿಕಸನಕ್ಕೆ ಅವಶ್ಯಕ ಎಂಬುದನ್ನು ವೀರಣ್ಣಗೌಡರು ಮನಗಂಡಿದ್ದರು. ಈ ಎರಡರ ಸಮನ್ವಯದಿಂದ ಕೂಡಿದ ಇವರ ಜ್ಞಾನ ಇವರನ್ನು ರೈತನಾಯಕನಾಗಿ ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿತು ಎಂಬುದರಲ್ಲಿ ಅನುಮಾನವಿಲ್ಲ. ಹಾಗೇ ಇವರು ಗ್ರಾಮೀಣಾಭಿವೃದ್ಧಿಯ ಬಗೆಗೆ ಚಿಕ್ಕ ವಯಸ್ಸಿನಿಂದಲೇ ಚಿಂತಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ.

ಭವಿಷ್ಯದ ಭವ್ಯ ಸೌಧ ನಿರ್ಮಾಣಕ್ಕೆ ಶಿಕ್ಷಣ ಭದ್ರಬುನಾದಿಯನ್ನು ಒದಗಿಸುತ್ತದೆ ಎಂಬುದು ಸಾರ್ವಕಾಲಿಕ ಸತ್ಯ. ಈ ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ಎಲ್ಲರು ವಿದ್ಯಾರ್ಥಿ ದೆಸೆಯಲ್ಲಿ ತಮ್ಮ ಶಿಕ್ಷಣದ ಪ್ರಗತಿಯ ಕಡೆ ಮಾತ್ರ ಹೆಚ್ಚು ಗಮನ ನೀಡುತ್ತಾರೆ. ಆದರೆ ಹೆಚ್.ಕೆ.ವೀರಣ್ಣಗೌಡರಲ್ಲಿ ವಯಸ್ಸಿಗೆ ಮೀರಿದ ಪ್ರೌಢತೆ ಇದ್ದುದರಿಂದ ವಿದ್ಯಾರ್ಥಿಯಾಗಿದ್ದಾಗಲೇ ತಮ್ಮ ಸಹಜವಾದ ಆಟ ಪಾಠಗಳ ಜೊತೆಗೆ ಇತರ ವಿಶೇಷ ಕಾರ್ಯ ಚಟುವಟಿಕೆಗಳಲ್ಲಿ ತಮ್ಮನ್ನು ಗುರ್ತಿಸಿಕೊಂಡಿದ್ದರು. ಆಗ ಮೈಸೂರು ಸಂಸ್ಥಾನದಲ್ಲಿ ಮೊದಲಿಗೆ ಸ್ಕೌಟಿಂಗ್ ಚಳುವಳಿ ಪ್ರಾರಂಭಿಸಲು ಅಮೇರಿಕಾದ ಫ್ರಾಂಕ್.ಸಿ.ಅರ್ವಿನ್ ಎಂಬುವವರನ್ನು ಸ್ಕೌಟ್ ಡೈರೆಕ್ಟರ್ ಆಗಿ ಮೈಸೂರು ಸರ್ಕಾರ ಮೂರು ವರ್ಷಗಳ ಅವಧಿಯ ಮೇಲೆ ನೇಮಿಸಿತ್ತು. ಆ ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಶಿಕ್ಷಣ ಪಡೆದು ಬಂದಿದ್ದ ವೆಂಕಟೇಶ್ವರ ಎಂಬ ಚರಿತ್ರೆ ಉಪಾಧ್ಯಾಯರು ಶಾಲೆಯಲ್ಲಿ ಸ್ಕೌಟ್ ಟ್ರೂಪ್ ಪ್ರಾರಂಭಿಸಿದರು. ಬಾಲಕರ ಜೀವಮಾನದಲ್ಲಿ ೧೨ ರಿಂದ ೧೬ ವರ್ಷಗಳ ಕಾಲಾವಧಿ 'ಬೆಳೆಯುವ' (Formative) ಕಾಲವೆಂದು ಕರೆಯಲ್ಪಡುವುದು. ಆ ಕಾಲಾವಧಿಯಲ್ಲಿ ಬಾಲಕರು ದೇಹದಲ್ಲಿಯೂ, ಬುದ್ಧಿಶಕ್ತಿಯಲ್ಲಿಯೂ ಸ್ವಭಾವದಲ್ಲಿಯೂ

---

[೧೧] ಡಾ.ಟಿ.ಡಿ.ದೇವೇಗೌಡ. ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ. ೧೯೯೯. ಪು-೧೨೫

ಅಭಿವೃದ್ಧಿಯನ್ನು ಬಹಳ ಜಾಗ್ರತೆಯಾಗಿ ಹೊಂದುವರು, ಆ ಕಾರಣಕ್ಕಾಗಿ ಬಾಲಕರನ್ನು ಈ ವಯಸ್ಸಿನಲ್ಲಿಯೇ ಸ್ಕೌಟುಗಳಾಗಿ ಸೇರಿಸಿಕೊಳ್ಳಲಾಗುತ್ತದೆ.

ಹಾಗಾಗಿ ಆ ಟ್ರೂಪ್‌ಗೆ ಹದಿನಾಲ್ಕು ವರ್ಷದೊಳಗಿನ ವಿದ್ಯಾರ್ಥಿಗಳು ಸೇರಲು ಅರ್ಹರಾಗಿದ್ದರು. ಆದರೆ ಟ್ರೂಪ್ ಸೇರಲು ಉತ್ಸುಕರಾಗಿದ್ದ ವೀರಣ್ಣಗೌಡರಿಗೆ ೧೪ ವರ್ಷ ಮೀರಿದ್ದರಿಂದ ಅವಕಾಶ ದೊರೆಯಲಿಲ್ಲ. ಸ್ಕೌಟ್ ಮಾಸ್ಟರನ್ನು ಕಂಡು ವೀರಣ್ಣಗೌಡರು ಹದಿನಾಲ್ಕು ವರ್ಷ ತುಂಬಿ ಕೆಲವು ದಿನಗಳು ಮಾತ್ರ ಹೆಚ್ಚುವರಿಯಾಗಿರುವುದರಿಂದ ತನಗೆ ಒಂದು ಅವಕಾಶ ನೀಡಬೇಕೆಂದು ಕೇಳಿಕೊಂಡರು. ಟ್ರೂಪ್‌ಗೆ ಆಯ್ಕೆಯಾದವರಲ್ಲಿ ಒಬ್ಬ ವಿದ್ಯಾರ್ಥಿ ಗೈರುಹಾಜರಾದ್ದರಿಂದ ಸ್ಕೌಟ್ ಮಾಸ್ಟರ್ ವೀರಣ್ಣಗೌಡರನ್ನು ಸ್ಕೌಟ್ ಟ್ರೂಪ್‌ನಲ್ಲಿ ಸೇರಿಸಿಕೊಂಡರು.

ಸ್ಕೌಟ್ ಮಂಡಲಿಯು ಮೈಸೂರು ಸಂಸ್ಥಾನದಲ್ಲಿ ೧೯೧೪ರಲ್ಲಿ ಪ್ರಾರಂಭವಾಯಿತು. ಯಾವ ರೀತಿಯಲ್ಲಿ ಶಿಕ್ಷಣವನ್ನು ಕೊಟ್ಟರೆ ನಮ್ಮ ಬಾಲಕರು ಧೈರ್ಯ, ಸ್ಥೈರ್ಯ, ಸಾಹಸಾದಿ ಗುಣಗಳನ್ನು ಪಡೆಯುವರೋ, ಸಭ್ಯರು, ಸತ್ಪ್ರಜೆಗಳೂ ಆಗಿ ಪರಿಣಮಿಸುವರೋ, ಸ್ವಾವಲಂಬಿಗಳಾಗಿ ರಾಜಭಕ್ತಿ, ಗುರುಭಕ್ತಿ, ದೇಶ ಭಕ್ತಿಗಳಿಂದಲೂ ಮತ್ತು ಜನಸೇವೆ ದೇಶ ಸೇವೆಗಳಿಂದಲೂ ಪುನೀತರಾಗುವರೋ ಅಂಥ ಶಿಕ್ಷಣಕ್ಕೆ 'ಸ್ಕೌಟಿಂಗ್' ಎಂದು ಹೆಸರು.

ಸ್ಕೌಟಾದವನು ತನ್ನ ಕೆಲಸ ತಾನು ಮಾಡುವದು ಅವಮಾನಕರವಲ್ಲವೆಂದು ತಿಳಿದು, ಎಲ್ಲಾ ಕೆಲಸಗಳನ್ನೂ ಮಾಡಿ ಶಿಕ್ಷಣವನ್ನು ಪಡೆಯುತ್ತಾನೆ. ಇದೇ ಸ್ಕೌಟಿಂಗಿನ ಕ್ರಮ.

ಪ್ರತಿಯೊಬ್ಬ ಬಾಲಕನು ತಾನು ಸ್ಕೌಟಾಗುವುದಕ್ಕೆ ಮೊದಲು ಈ ಕೆಳಗೆ ಕಂಡ ನಿಯಮದಂತೆ ನಡೆದುಕೊಳ್ಳುತ್ತೇನೆಂದು ವಾಗ್ದಾನ ಮಾಡಬೇಕು.

೧. ನಾನು ಇತರರ ನಂಬಿಕೆಗೆ ಅರ್ಹನಾಗಿ ನನ್ನ ಗೌರವವನ್ನು ಹೆಚ್ಚಿಸುವಂತೆ ನಡೆದುಕೊಳ್ಳುತ್ತೇನೆ.
೨. ನಾನು ರಾಜಭಕ್ತಿ, ದೇಶಭಕ್ತಿ ಗುರು ಹಿರಿಯರಲ್ಲಿ ಭಕ್ತಿ ವಿಶ್ವಾಸಗಳುಳ್ಳವನಾಗಿ ವರ್ತಿಸುತ್ತೇನೆ.
೩. ನಾನು ಇತರರಿಗೆ ಪ್ರಯೋಜಕನೂ ಉಪಕಾರಿಯೂ ಆಗಿರುತ್ತೇನೆ.
೪. ನಾನು ಎಲ್ಲರಲ್ಲಿ ಸ್ನೇಹದಿಂದಲೂ, ಇತರ ಸ್ಕೌಟುಗಳಲ್ಲಿ ಭ್ರಾತೃವಿನಂತೆಯೂ ನಡೆದುಕೊಳ್ಳುತ್ತೇನೆ.
೫. ನಾನು ವಿನಯಪರನಾಗಿರುತ್ತೇನೆ.
೬. ನಾನು ಪ್ರಾಣಿಗಳಲ್ಲಿ ಮಮತೆಯುಳ್ಳವನಾಗಿರುತ್ತೇನೆ.
೭. ನಾನು ಆಜ್ಞಾಪಾಲಕನಾಗಿರುತ್ತೇನೆ.
೮. ನಾನು ಯಾವಾಗಲೂ ಹಸನ್ಮುಖಿಯಾಗಿರುತ್ತೇನೆ.
೯. ನಾನು ಮಿತವ್ಯಯಿಯಾಗಿರುತ್ತೇನೆ.
೧೦. ನಾನು ಮನೋವಾಕ್ಕಾಯ ಕರ್ಮಗಳಲ್ಲಿ ಪರಿಶುದ್ಧನಾಗಿರುತ್ತೇನೆ.

ಈ ವಾಗ್ದಾನವೂ ಬಹಳ ಕಠಿಣವಾದದ್ದು. ಆದರೆ ಪ್ರತಿ ಬಾಲಕನೂ ಇದರಂತೆ ನಡೆದುಕೊಳ್ಳಬೇಕೆಂದು ಪ್ರಯತ್ನಿಸಿದರೆ ಮೊದಲಿಗಿಂತಲೂ ತಾನು ಹೆಚ್ಚು ಶ್ರೇಷ್ಠತೆಯನ್ನು ಪಡೆಯುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ತಾನು ಮನಸ್ಸಾಕ್ಷಿಯಾಗಿ ಎಲ್ಲರೆದುರಿಗೂ ಮಾಡಿದ ಪ್ರತಿಜ್ಞೆಯನ್ನು ಸಾಧ್ಯವಾದಷ್ಟು

ಮಟ್ಟಿಗೆ ಸಾಧಿಸದೇ ಯಾವ ಸ್ಕೌಟು ಬಿಡಲಾರನು.ಒಟ್ಟಿನಲ್ಲಿ ಸ್ಕೌಟಿಂಗಿನಿಂದ ಆಗುವ ಪ್ರಯೋಜನಗಳನ್ನು ಹೀಗೆ ಸಂಕ್ಷೇಪವಾಗಿ ಹೇಳಬಹುದು.

೧. ಕವಾತು, ಕುಸ್ತಿ, ಮಲ್ಲವಿದ್ಯೆ ಮುಂತಾದ ಆಟಗಳಿಂದ(ಡ್ರಿಲ್ಲು), ಕಾಯಕ ಅಭ್ಯಾಸಗಳಿಂದ ಬಾಲಕರ ಆರೋಗ್ಯವನ್ನು ಹೆಚ್ಚಿಸುತ್ತದೆ.
೨. ನಾಯಕತ್ವ, ಸ್ವಾವಲಂಬನೆ, ಜವಾಬ್ದಾರಿ ಇವುಗಳ ಶಿಕ್ಷಣದಿಂದ ಸೌಶೀಲ್ಯಾದಿ ಗುಣಗಳನ್ನು ಬೆಳೆಸುತ್ತದೆ.
೩. ಕೈ ಕೆಲಸ(ಹ್ಯಾಂಡಿಕ್ರಾಫ್ಟ್) ದಲ್ಲಿ ಪ್ರವೀಣತೆಯಿಂದ ಜಾಣತನವನ್ನು, ಬಾಲಕರಲ್ಲಿ ಸಹಜ ಶಕ್ತಿಯನ್ನು ಅಭಿವೃದ್ಧಿಗೊಳಿಸುತ್ತದೆ.
೪. ಇತರರಿಗೆ ಸದಾ ಸಹಾಯ ಮಾಡಲು ಸಿದ್ಧರಾಗಿರಬೇಕೆಂಬ ಉಪದೇಶದಿಂದ ಪ್ರಜಾ ಧರ್ಮವನ್ನು ಬಾಲಕರಲ್ಲಿ ನೆಲೆಗೊಳಿಸುತ್ತದೆ.

ಬಾಲಕರು ಮುಂದೆ ಸತ್ಪ್ರಜೆಗಳಾಗಿ ಪರಿಣಮಿಸಬೇಕೆಂಬುದೇ ಸ್ಕೌಟು ಕ್ರಮದ ಉದ್ದೇಶವೆಂದು ಇದರಿಂದ ಗೊತ್ತಾಗುತ್ತದೆ.[೨] ಈ ರೀತಿಯ ಸದುದ್ದೇಶವನ್ನು, ಅನುಕೂಲವನ್ನು ಹೊಂದಿರುವ ಸ್ಕೌಟ್ ಸೇರಿದ ವೀರಣ್ಣಗೌಡರು ಒಮ್ಮೆ ಚನ್ನಪಟ್ಟಣದಲ್ಲಿ ಪ್ಲೇಗ್ ರೋಗ ಕಾಣಿಸಿಕೊಂಡಾಗ, ಸ್ಕೌಟ್ ವಿದ್ಯಾರ್ಥಿಯಾಗಿದ್ದ ವೀರಣ್ಣಗೌಡರು 'ಸೇವಾ ಮನೋಭಾವನೆಯನ್ನು ಹೊಂದಿರಬೇಕು' ಎಂಬ ಸ್ಕೌಟ್ ನಿಯಮಕ್ಕೆ ಬದ್ಧರಾಗಿ ಮತ್ತು ಮಹಾತ್ಮ ಗಾಂಧೀಜಿಯವರ ಸೇವಾಭಾವನೆಯ ಪರಿಕಲ್ಪನೆಯಿಂದ ಪ್ರಭಾವಿತಗೊಂಡು ಪ್ಲೇಗ್ ರೋಗಿಗಳಾದ ಝಾಡಮಾಲಿಗಳ ಸೇವೆ ಮಾಡಿದರು. ವೈದ್ಯರು ಕೊಟ್ಟ ಔಷಧವನ್ನು ರೋಗಿಗಳಿಗೆ ನಿಯಮಿತವಾಗಿ ನೀಡಿ, ಬ್ರೆಡ್ ಮತ್ತು ಹಾಲನ್ನು ಕೊಟ್ಟು ಉಪಚರಿಸಿದರು. ಅಲ್ಲದೆ ಅವರ ಬಟ್ಟೆಗಳನ್ನು ಒಗೆದು ನಂತರ ತಾನು ಬಿಸಿನೀರಿನಲ್ಲಿ ಸ್ನಾನ ಮಾಡುವ ಮೂಲಕ ತಮ್ಮನ್ನು ಸ್ವಚ್ಛವಾಗಿಟ್ಟುಕೊಂಡು ರೋಗ ಬಾರದಂತೆ ಎಚ್ಚರಿಕೆ ವಹಿಸಿದರು. ಇಂತಹ ಅನುಭವದ ಹಿನ್ನೆಲೆಯೇ ಕಾರಣವಾಗಿ ವೀರಣ್ಣಗೌಡರು ಮುಂದೆ ತಮ್ಮ ಸಾರ್ವಜನಿಕ ಕ್ಷೇತ್ರದಲ್ಲಿ ಸೇವಾ ಮನೋಭಾವಕ್ಕೆ ಬದ್ಧರಾಗಿ ಕಾರ್ಯ ನಿರ್ವಹಿಸುವಂತೆ ಮಾಡಿತೆನ್ನಬಹುದು.

ಫ್ರಾಂಕ್.ಸಿ.ಅರ್ವಿನ್ ನಂತರ ಮದರಾಸಿನ ವಕೀಲರಾಗಿದ್ದ ಕೆ.ಎಸ್.ಕಾಮತ್ ಸ್ಕೌಟ್ ಡೈರೆಕ್ಟರ್ ಆಗಿ ಬಂದರು. ಆ ಸಂದರ್ಭದಲ್ಲಿ ಮಂಗಳೂರಿನಲ್ಲಿ ಈಗಾಗಲೇ ಸ್ಕೌಟ್ ಚಳುವಳಿಯಲ್ಲಿದ್ದ ಕಾಲೇಜು ಮತ್ತು ಶಾಲಾ ಅಧ್ಯಾಪಕರುಗಳಿಗೆ ಸ್ಕೌಟ್ ಮಾಸ್ಟರ್‌ಗಳ ತರಬೇತಿ ಶಿಕ್ಷಣ ಕೇಂದ್ರವನ್ನು ಪ್ರಾರಂಭಿಸಿದರು. ಈ ವೇಳೆಗಾಗಲೇ ಸ್ಕೌಟ್ ತರಬೇತಿ ಪಡೆದಿದ್ದ ವಿ.ವೆಂಕಟಪ್ಪ ಮತ್ತು ಹೆಚ್.ಕೆ.ವೀರಣ್ಣಗೌಡರು ಸ್ಕೌಟ್ ಮಾಸ್ಟರ್ ತರಬೇತಿಗೆ ಸೇರಲು ಉತ್ಸುಕರಾಗಿದ್ದರು. ಆದಕಾರಣ ಸ್ಕೌಟ್ ಮಾಸ್ಟರ್ ತರಬೇತಿಗೆ ಸೇರಲು ಸ್ಕೌಟ್ ಡೈರೆಕ್ಟರ್ ಆಗಿದ್ದ ಕೆ.ಎಸ್.ಕಾಮತ್‌ರವರನ್ನು ಕೋರಿದರು. ತಮ್ಮ ಖರ್ಚುಗಳನ್ನು ತಾವೇ ಭರಿಸುವುದಾದರೆ ವಿಶೇಷ ಆದ್ಯತೆಯ ಮೇರೆಗೆ ತರಬೇತಿಗೆ ಸೇರಿಸಿಕೊಳ್ಳುವುದಾಗಿ ಹೇಳಿದರು. ಇದಕ್ಕೊಪ್ಪಿದ ಗೆಳೆಯರಿಬ್ಬರು ದೊರೆತ ಅವಕಾಶವನ್ನು ಸದುಪಯೋಗ ಪಡಿಸಿಕೊಂಡು ಮಂಗಳೂರಿನಲ್ಲಿ

---

[೨] ಒಕ್ಕಲಿಗರ ಪತ್ರಿಕೆ ೧೯೨೪ರ ವಾರ್ಷಿಕ ವಿಶೇಷ ಸಂಚಿಕೆಗೆ 'ಸ್ಕೌಟ್' ಬಗ್ಗೆ ಅಂದಿನ ಆರ್ಗನೈಜಿಂಗ್ ಸ್ಕೌಟ್ ಕಮಿಷನರ್ ಆಗಿದ್ದ ಶ್ರೀ ಸಿ.ಸುಬ್ಬರಾವ್ ಅವರು ಬರೆದಿರುವ ಲೇಖನದಿಂದ ಸಂಗ್ರಹ. ಪುಟ-೩೪.

ಸ್ಕೌಟ್ ಮಾಸ್ಟರ್ ತರಬೇತಿ ಪಡೆದು ಬಂದರು. ನಂತರ ಚನ್ನಪಟ್ಟಣ ಹೈಸ್ಕೂಲಿನಲ್ಲಿ ಒಂದು ಸ್ಕೌಟ್ ಟ್ರೂಪ್ ನಡೆಸಿದರು. ಹಾಗೆಯೇ ಎಸ್.ಎಸ್.ಎಲ್.ಸಿ ಯ ನಂತರ ಮೈಸೂರಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಿದ ವೀರಣ್ಣಗೌಡರು ಅಲ್ಲಿ ವೆಸ್ಲಿಯನ್ ಮಿಷನ್ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ ಒಂದು, ಕರ್ನಾಟಕ ಸೆಂಟ್ರಲ್ ಸ್ಕೂಲಿನಲ್ಲಿ ಒಂದು, ಹಾರ್ಡ್‌ವಿಕ್ ಕಾಲೇಜಿನಲ್ಲಿ ಒಂದು, ಪ್ರಾಕ್ಟೀಸಿಂಗ್ ಮಿಡ್ಲ್‌ಸ್ಕೂಲಿನಲ್ಲಿ ಒಂದು ಹೀಗೆ ಒಂದೇ ಸಾರಿ ನಾಲ್ಕು ಸ್ಕೌಟ್ ಟ್ರೂಪ್‌ಗಳಿಗೆ ಸ್ಕೌಟ್ ಮಾಸ್ಟರಾಗಿ ದಿನ ಬಿಟ್ಟು ದಿನ ಒಂದೊಂದು ಟ್ರೂಪ್‌ನಲ್ಲಿ ಸ್ಕೌಟಿಂಗ್ ವಿಷಯಗಳನ್ನು ಅಂದರೆ ೧೦ ಸ್ಕೌಟ್ ನಿಯಮಗಳ ಮೇಲೆ ಭಾಷಣ ಮಾಡಿ, ಡ್ರಿಲ್ ಮಾಡಿಸುವುದು, ಸಿಗ್ನಲಿಂಗ್ ಹ್ಯೂಮನ್ ಪಿರಮಿಡ್ಸ್, ದೊಣ್ಣೆವರಸೆ, ಲಜೀಂ ಹೀಗೆ ಆಟ ಪಾಠಗಳನ್ನು ಕಲಿಸುತ್ತಿದ್ದರು. ಇವುಗಳನ್ನು ಕಲಿಸಲು ಹೆಚ್.ಕೆ.ವೀರಣ್ಣಗೌಡರು ದಿನವೂ ಬೆಳಿಗ್ಗೆ ನಾಲ್ಕು ಗಂಟೆಗೇ ಎದ್ದು ಸ್ಕೌಟಿಂಗಿಗೆ ಸಂಬಂಧ ಪಟ್ಟ ಪುಸ್ತಕಗಳನ್ನು ಓದಿಕೊಂಡು, ಚಿತ್ರಗಳನ್ನು ನೋಡಿಕೊಂಡು ಅಭ್ಯಾಸ ಮಾಡುತ್ತಿದ್ದರು. ಇದರಿಂದ ವೀರಣ್ಣಗೌಡರಿಗೆ ಮುಂದೆ ತಮ್ಮ ಉಪಾಧ್ಯಾಯ ವೃತ್ತಿಯಲ್ಲಿ ಸಮರ್ಥರಾಗಲು, ಉತ್ತಮ ಹೆಸರು ಗಳಿಸುವಂತಾಯಿತು. ಇದರಿಂದ ಯಾವುದೇ ಕೆಲಸ ಮಾಡುವಾಗಲೂ ಸೂಕ್ತ ಪೂರ್ವ ಸಿದ್ಧತೆ ಮಾಡಿಕೊಳ್ಳುತ್ತಿದ್ದ ಅವರ ಕಾರ್ಯವೈಖರಿ ಕೆಲಸದ ಬಗ್ಗೆ ಅವರಿಗಿದ್ದ ಬದ್ಧತೆಯನ್ನು ಸಂಕೇತಿಸುತ್ತದೆ.

ಚಿಕ್ಕ ವಯಸ್ಸಿನಲ್ಲಿಯೇ ಹೆಚ್.ಕೆ.ವೀರಣ್ಣಗೌಡರು ಹೋರಾಟದ ಸಂಘಟನಾ ಮನೋಭಾವವನ್ನು ಹೊಂದಿದ್ದರು. ಪತ್ರಿಕೆಗಳ ಮೂಲಕ ಪ್ರಚಲಿತ ವಿದ್ಯಮಾನಗಳ ಅರಿವು, ಅಧ್ಯಾಪಕರು ನೀಡಿದ ತಿಳುವಳಿಕೆ, ಸಾಹಿತ್ಯ ಕೃತಿಗಳ ಪ್ರಭಾವ (ತಿಲಕರ ಕಟ್ಟಳೆ) ಇವುಗಳಿಂದಾಗಿ ವೀರಣ್ಣಗೌಡರಲ್ಲಿ ದೇಶದ ಬಗ್ಗೆ ಗೌರವ, ಪ್ರೀತಿ, ಅಭಿಮಾನ ಮೂಡಲು ಕಾರಣವಾದವು. ಜೊತೆ ಜೊತೆಗೇ ಅದೇ ಸಂದರ್ಭಕ್ಕೆ ಪ್ರೌಢ ಶಾಲಾ ಶಿಕ್ಷಣ ಮುಗಿಸಿದರು.

ಮುಂದೆ ಕಾಲೇಜು ಶಿಕ್ಷಣಕ್ಕೆಂದು ಮೈಸೂರಿನ ವೆಸ್ಲಿಯನ್ ಮಿಷನ್ ಕೊಲಜಿಯೇಟ್ ಹೈಸ್ಕೂಲಿನಲ್ಲಿ ಯೂನಿವರ್ಸಿಟಿ ಎಂಟ್ರೆನ್ಸ್ ತರಗತಿಗೆ ಸೇರಿದರು. ಆದರೆ ಹೆಚ್.ಕೆ.ವೀರಣ್ಣಗೌಡರ ಕಾರ್ಯ ಚಟುವಟಿಕೆಗಳು ಅಲ್ಲಿಯೂ ಮುಂದುವರಿದುವು. ಸ್ಕೌಟ್ ಚಳುವಳಿಯಲ್ಲಿ ವಿಶೇಷ ಆಸಕ್ತಿಯಿಂದ ಕೆಲಸ ಮಾಡುತ್ತಿದ್ದಂತೆ, ಮೈಸೂರು ಸಂಸ್ಥಾನದ ಒಕ್ಕಲಿಗರ ವಿದ್ಯಾರ್ಥಿಗಳ ಮಹಾಸಭೆಯನ್ನು ಯಶಸ್ವಿಯಾಗಿ ನಡೆಸಿದರು. ಈ ಮಹಾಸಭೆಗೆ ಅಂದಿನ ಮೈಸೂರು ಸಂಸ್ಥಾನದ ಬ್ಯಾರಿಸ್ಟರ್ ಬಿ.ನಾಗಪ್ಪನವರು ಅಧ್ಯಕ್ಷರಾಗಿದ್ದರು. ಈ ಸಭೆಯಲ್ಲಿ ನೇಮಕವಾದ 'ಮೈಸೂರು ಸಂಸ್ಥಾನದ ಒಕ್ಕಲಿಗ ವಿದ್ಯಾರ್ಥಿಗಳ ಸ್ಥಾಯಿ ಸಮಿತಿ'ಯ ಸೆಕ್ರೆಟರಿಯಾಗಿ ಹೆಚ್.ಕೆ.ವೀರಣ್ಣಗೌಡ ರು ಆಯ್ಕೆಯಾದರು. ಅಲ್ಲದೆ 'ಕರ್ನಾಟಕ ವಿದ್ಯಾರ್ಥಿ' ದ್ವೈಮಾಸಿಕ ಪತ್ರಿಕೆ ಪ್ರಕಟಣೆಯ ಹೊಣೆಯೂ ಇವರ ಮೇಲೆಯೇ ಬಿತ್ತು. ಹಾಗೇ ಹಾಸನ, ನೆಲಮಂಗಲ, ತುಮಕೂರು ಮುಂತಾದ ಸ್ಥಳಗಳಲ್ಲಿ ಒಕ್ಕಲಿಗ ವಿದ್ಯಾರ್ಥಿ ನಿಯಲಗಳನ್ನು ಸ್ಥಾಪಿಸುವ ಓಡಾಟದ ಫಲವಾಗಿ ವೀರಣ್ಣಗೌಡರಿಗೆ ತರಗತಿಯ ಪಠ್ಯಕ್ರಮಗಳ ಬಗ್ಗೆ ಗಮನ ನೀಡಲು ಸಾಧ್ಯವಾಗಲಿಲ್ಲ. ಇದರಿಂದ ಆ ವರ್ಷ ಅನುತ್ತೀರ್ಣರಾಗಿ ಮನೆ ಸೇರ ಬೇಕಾಯಿತು. ಹೀಗೆ ವಿದ್ಯಾರ್ಥಿ ದೆಸೆಯಲ್ಲಿಯೇ ಅವರಲ್ಲೊಬ್ಬ ಸಂಘಟಕ,ಹೋರಾಟಗಾರ ಅವರಿಗೆ ತಿಳಿಯದಂತೆಯೇ ರೂಪುಗೊಳ್ಳುತ್ತಿದ್ದ.

ಈ ಪ್ರತಿ ಕೆಲಸದಲ್ಲಿಯೂ ಹೊಣೆಗಾರಿಕೆ ಜೊತೆಯಾಗಿತ್ತು. ಹೆಸರಿಗಾಗಿ ಇಂದು ಮುಖಂಡರಾಗಿ ಮಿಂಚುವ ಜನರಿಗೆ ಹೋಲಿಸಿದಾಗ ಪ್ರತಿಫಲಾಪೇಕ್ಷೆ ಇಲ್ಲದ ಇವರ ನಿಸ್ವಾರ್ಥ ಸೇವೆ ವಿಶಿಷ್ಟವೆನಿಸುತ್ತದೆ.

ಹಾಸನದಲ್ಲಿ ಒಕ್ಕಲಿಗ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲು ಮುಂದಾದರು. ಆಗ ಹಾಸನದವರಾದ ಕೆಲ ಹಿರಿಯ ವಿದ್ಯಾರ್ಥಿಗಳ ಸಹಕಾರ ಕೋರಿದಾಗ ಅವರ ನಿಷ್ಠುರವಾದ ತಿರಸ್ಕಾರದ ನುಡಿಗಳು ಹೆಚ್.ಕೆ.ವೀರಣ್ಣಗೌಡರಿಗೆ ಬಹಳ ನಿರಾಶೆಗೊಳಿಸಿದರು ಅಧೈರ್ಯಗೊಳ್ಳದ ವೀರಣ್ಣಗೌಡರು ಮುಂದುವರಿದು ಒಬ್ಬ ವಕೀಲರನ್ನು ಭಾಷಣಕ್ಕೆ ಆಹ್ವಾನಿಸಿದರು. ಅಧ್ಯಕ್ಷರಾದ ಮುದ್ದಪ್ಪನವರು ತಮ್ಮ ಭಾಷಣದಲ್ಲಿ 'ಹಾಸನ ಜಿಲ್ಲೆಯ ಬಹಳಷ್ಟು ಜನ ಬಡವರು, ಅವಿದ್ಯಾವಂತರು. ಬಹಳ ಹಿಂದೆ ಕ್ಷಾಮ ಬಂದಿದ್ದಾಗ ಕ್ರಿಶ್ಚಿಯನ್ ಪಾದರಿಗಳು ಇಡೀ ಹಳ್ಳಿಯ ಒಕ್ಕಲಿಗರನ್ನು ೫, ೧೦ ರೂಪಾಯಿಗಳನ್ನು ಕೊಟ್ಟೋ, ಹಣ್ಣು ಕೊಟ್ಟೋ, ಬಲವಂತವಾಗಿಯೋ ತಮ್ಮ ಮತಕ್ಕೆ ಸೇರಿಸಿಕೊಂಡರು. ಹೀಗೆ ಇಡೀ ಹಳ್ಳಿಯೇ ಮತಾಂತರ ಹೊಂದಿದ ಊರುಗಳು ಈ ಭಾಗದಲ್ಲೆಷ್ಟೋ ಇವೆ. ನಮ್ಮ ಜನ ಅಂತಹ ಅವಿವೇಕಿಗಳಾಗಿದ್ದರು. ನೀವಿನ್ನೂ ತರುಣರಾದರೂ, ನಮ್ಮ ಮುಂದಿನ ಪೀಳಿಗೆಯಾದರೂ ವಿದ್ಯಾವಂತರಾಗಿ ಮುಂದೆ ಬರಲಿ ಎಂಬ ಮಹದಾಶೆಯಿಂದ ಬಡ ಒಕ್ಕಲಿಗ ಹುಡುಗರ ಸಹಾಯಾರ್ಥ ಇಂತಹ ಒಂದು ಕಾರ್ಯ ಮಾಡುತ್ತಿರುವುದು ಸಂತೋಷ' ಎಂದು ಹೇಳಿದರು. ಮುದ್ದಪ್ಪನವರ ಪ್ರೋತ್ಸಾಹದಾಯಕ ಈ ನುಡಿಗಳು ಹೆಚ್.ಕೆ.ವೀರಣ್ಣಗೌಡರಿಗೆ ಸಾರ್ವಜನಿಕ ಕೆಲಸಗಳಲ್ಲಿ ತಮ್ಮ ಚಟುವಟಿಕೆ ಮುಂದುವರಿಸಲು ಮತ್ತಷ್ಟು ಸ್ಫೂರ್ತಿ ನೀಡಿದವೆಂದು ಹೇಳಬಹುದು. ಜೊತೆಗೆ ಹಾಸನದಲ್ಲಿ ಅವಿದ್ಯಾವಂತರು ಬಡತನದ ಬೇಗೆಯಿಂದ ಬೇಸತ್ತು ತಮ್ಮ ಧರ್ಮವನ್ನು ತ್ಯಜಿಸಿ ಕ್ರಿಶ್ಚಿಯನ್ ಧರ್ಮಕ್ಕೆ ಅಲ್ಲಿನ ಸೌಕರ್ಯಗಳಿಗಾಗಿ ಮತಾಂತರಗೊಡಿದ್ದು ಒಂದು ರೀತಿಯ ಅಸಾಹಾಯಕತೆಯನ್ನು ಸೂಚಿಸಿದರೆ, ಇಂದು ಭಾರತದ ಹಲವೆಡೆ ಕ್ರಿಶ್ಚಿಯನ್ ಮತಕ್ಕೆ ಮತಾಂತರಗೊಳ್ಳುತ್ತಿರುವುದು ವಿದ್ಯಾವಂತ ಜನರೇ ಹೆಚ್ಚು. ನಮ್ಮ ನಾಡು ನುಡಿಯ ಸಂಪದ್ಭರಿತ ಸಂಸ್ಕೃತಿಯ ಅರಿವಿದ್ದವರೇ ಈ ರೀತಿ ನಮ್ಮತನದಿಂದ ವಿಮುಖರಾದರೆ ಅವಿದ್ಯಾವಂತರ ಅಜ್ಞಾನಿಗಳ ಪಾಡೇನು? ಎಂಬುದನ್ನು ಇಲ್ಲಿ ಗಮನಿಸಬೇಕು. ಇಂದೊಂದು ವಿಪರ್ಯಾಸವೇ ಸರಿ.

ಮೈಸೂರಿನಲ್ಲಿ ಯೂನಿವರ್ಸಿಟಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ವೀರಣ್ಣಗೌಡರು ಅನುತ್ತೀರ್ಣರಾದಾಗ ಮೈಸೂರಿನಲ್ಲಿ ತಮ್ಮ ಸಾರ್ವಜನಿಕ ಚಟುವಟಿಕೆಗಳೇ ಕಾರಣವೆಂದು ಓದಿನ ಕಡೆ ಹೆಚ್ಚು ಗಮನ ಹರಿಸಲು ಮೈಸೂರಿನ ಸಂಪರ್ಕದಿಂದ ಹೊರ ಬಂದು ಪುನಃ ಪರೀಕ್ಷೆ ಕಟ್ಟಲು ಬೆಂಗಳೂರಿಗೆ ವೆಸ್ಲಿಯನ್ ಮಿಷನ್ ಕೊಲಿಜಿಯೇಟ್ ಹೈಸ್ಕೂಲಿಗೆ ಸೇರಿದರು. ಅಲ್ಲಿ ವೀರಣ್ಣಗೌಡರು ಒಕ್ಕಲಿಗ ವಿದ್ಯಾರ್ಥಿ ನಿಲಯಕ್ಕೆ ಸೇರಿರದಿದ್ದರೆ ಒಬ್ಬ ಪದವೀಧರರಾಗುತ್ತಿದ್ದರೋ ಏನೋ? ಆದರೆ ಬೆಂಗಳೂರಿನ ಒಕ್ಕಲಿಗ ವಿದ್ಯಾರ್ಥಿಗಳ ಹಾಸ್ಟೆಲಿಗೆ ಸೇರಿ ಅಲ್ಲಿಯೂ ಹಾಸ್ಟೆಲಿನ ವ್ಯವಹಾರಗಳಲ್ಲಿ ಆಸಕ್ತಿ ವಹಿಸಿದ್ದರಿಂದ ಆ ವರ್ಷವೂ ಉತ್ತೀರ್ಣರಾಗದೆ ವಿದ್ಯಾಭ್ಯಾಸದಲ್ಲಿ ನಿರಾಸಕ್ತಿ ಉಂಟಾಯಿತು. ಅಷ್ಟರಲ್ಲಿ ೧೯೨೧ರಲ್ಲಿ ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳುವಳಿ ಪ್ರಾರಂಭವಾಗಿತ್ತು. ಕಾನೂನುಗಳ ಉಲ್ಲಂಘನೆ ಅಸಹಕಾರ ಚಳುವಳಿಯ ಮುಖ್ಯ ಉದ್ದೇಶವಾಗಿತ್ತು. ಆ ಸಂದರ್ಭದಲ್ಲಿ ಲಾಯರುಗಳು

ಕೋರ್ಟುಗಳಿಗೂ, ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೂ ಹೋಗಬಾರದೆಂಬ ಗಾಂಧೀಜಿಯವರ ಕರೆಗೆ ಓಗೊಟ್ಟ ವೀರಣ್ಣಗೌಡರು ವಿದ್ಯಾಭ್ಯಾಸಕ್ಕೆ ತಿಲಾಂಜಲಿ ನೀಡಿ ಊರಿಗೆ ಮರಳಿದರು.

**೨.೪ ವೈವಾಹಿಕ ಜೀವನ: –**

ನಮ್ಮ ಭಾರತೀಯ ಸಮಾಜದಲ್ಲಿ ಹಿಂದಿನಿಂದಲೂ ವಿವಾಹವನ್ನು ಅದ್ದೂರಿ ಆಡಂಬರಗಳ ಸಮಾರಂಭವನ್ನಾಗಿ ನಡೆಸಿಕೊಂಡು ಬರಲಾಗುತ್ತಿದೆ. ಆದರೆ ಮದುವೆ ಎಂಬುದು ಜೀವನದ ಅತಿ ಮುಖ್ಯ ಘಟ್ಟ ನಿಜ. ಆದ್ದರಿಂದಲೇ ಇಷ್ಟೊಂದು ಸಡಗರ. ಬಾಳಸಂಗಾತಿಯನ್ನು ಆಯ್ಕೆ ಮಾಡಿಕೊಂಡು ಮುನ್ನಡೆಯುವ ಹಂತ. ಆದರೆ ಕೆಲವರು ತಮ್ಮ ಸರಳ ಆದರ್ಶವನ್ನು ವೈಯಕ್ತಿಕ (ವಿವಾಹ) ಜೀವನದಲ್ಲಿ ಅನುಸರಿಸುವ ಮೂಲಕ ಇತರರಿಗೆ ಮಾದರಿಯಾಗುತ್ತಾರೆ. ಅಂತಹವರ ಸಾಲಿಗೆ ಸೇರಿದವರು ಹೆಚ್.ಕೆ.ವೀರಣ್ಣಗೌಡರು. ಶ್ರೀಮಂತವಾದ ಕುಟುಂಬದವರಾದರೂ ಸರಳತೆಯ ದಾರಿ ಹಿಡಿದರು.

ವಿದ್ಯಾರ್ಥಿ ದೆಸೆಯಲ್ಲಿಯೇ ಸಾರ್ವಜನಿಕ, ಜನಪರ ಚಟುವಟಿಕೆಗಳಲ್ಲಿ ಗುರ್ತಿಸಿಕೊಂಡಿದ್ದ ವೀರಣ್ಣಗೌಡರು, ರಾಷ್ಟ್ರದ ಹಿತಚಿಂತನೆಯಲ್ಲಿ ತಮ್ಮ ವೈಯಕ್ತಿಕ ಬದುಕಿನತ್ತ ಹೆಚ್ಚು ಗಮನಹರಿಸಿದವರಲ್ಲ. ಸಾಮಾನ್ಯವಾಗಿ ಆ ಕಾಲದಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಹದಿಹರೆಯ ಪೂರೈಸುವುದರೊಳಗಾಗಿ ಹೆಣ್ಣು ಗಂಡುಗಳ ಮದುವೆ ಮಾಡಿಬಿಡುತ್ತಿದ್ದರು. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ತಮ್ಮ ವೈವಾಹಿಕ ಜೀವನಕ್ಕೆ ಅಡಿಯಿಟ್ಟಿದ್ದು ಆ ಕಾಲಕ್ಕೆ ಬಹಳ ತಡವಾಯಿತೆಂದು ಹೇಳಬಹುದು. ವಿವಾಹದ ಸಮಯಕ್ಕೆ ವೀರಣ್ಣಗೌಡರಿಗೆ ೩೨ ವರ್ಷಗಳಾಗಿದ್ದವು.

ಉಪಾಧ್ಯಾಯ ವೃತ್ತಿ, ಪತ್ರಿಕಾವೃತ್ತಿಯ ಕಾರಣದಿಂದ ವೀರಣ್ಣಗೌಡರ ಮದುವೆಯ ಪ್ರಸ್ತಾಪ ಮುಂದೂಡಲ್ಪಡುತ್ತಿತ್ತು. ವೈಚಾರಿಕ ದೃಷ್ಟಿಯುಳ್ಳವರಾಗಿದ್ದ ವೀರಣ್ಣಗೌಡರು ಪ್ರಗತಿವಾದಿಯೂ ಆಗಿದ್ದರು. ಈ ಹಿನ್ನೆಲೆಯಿಂದಾಗಿ ವೀರಣ್ಣಗೌಡರ ಹಳೆಯ ನೆಂಟರ ಸಂಬಂಧಗಳು, ಶ್ರೀಮಂತ ಸಂಬಂಧಗಳು, ಇಂಗ್ಲೆಂಡಿಗೆ ಕಳುಹಿಸಿ ಕೊಡುತ್ತೇವೆ ಎಂಬ ಆಸೆ ತೋರುವ ಸಂಬಂಧಗಳೆಲ್ಲ ಬಂದರೂ ವೀರಣ್ಣಗೌಡರು ಒಪ್ಪಿಕೊಳ್ಳಲಿಲ್ಲ. ಅಲ್ಲದೆ ಡಿ.ಕೆ.ಭಾರದ್ವಜರು ಮುಂಬೈನಲ್ಲಿನ ನ್ಯಾಯಾಧೀಶರೊಬ್ಬರ ಮಗಳು ಬಾಲ ವಿಧವೆಯನ್ನು ವಿವಾಹವಾಗುವಂತೆ ಸೂಚಿಸಿದರು. ಆದರೆ ವೀರಣ್ಣಗೌಡರಿಗೆ ಕನ್ನಡದವರಲ್ಲವೆಂಬ ಕಾರಣದಿಂದ ಸಂಬಂಧ ಬೆಳೆಸಲು ಹಿಂಜರಿಕೆಯಾಯಿತು. ಅಲ್ಲದೆ ಕಮಲಾದೇವಿ ಚಟ್ಟೋಪಾಧ್ಯಯರು ಸಾಕಿಕೊಂಡಿದ್ದ ಭಂಟರ ಹುಡುಗಿಯನ್ನು ಮದುವೆಯಾಗುವಂತೆ ಸೂಚಿಸಿದರೂ ವೀರಣ್ಣಗೌಡರಿಗೆ ಮನಸ್ಸಾಗಲಿಲ್ಲ. ವಿದ್ಯಾರ್ಥಿ ದೆಸೆಯಲ್ಲಿ ಥಿಯೋಸಫಿಕಲ್ ಕನ್ವೆಷನ್‌ಗಳಲ್ಲಿ ಭಾಗವಹಿಸುತ್ತಿದ್ದ ವೀರಣ್ಣಗೌಡರು ಸಮಾಜ ಸುಧಾರಕರಾದ ಅನಿಬೆಸೆಂಟ್, ಪುರೋಹಿತಶಾಹಿಯ ವಿರುದ್ಧ ಸಿಡಿದೆದ್ದು ಪ್ರಗತಿಪರ ಚಿಂತಕರಾಗಿದ್ದ ರಾಜಾರಾಂ ಮೋಹನ ರಾಯ್, ಎಂ.ಜಿ.ರಾನಡೆ, ಜ್ಯೋತಿಬಾಪುಲೆ, ದಯಾನಂದ ಸರಸ್ವತಿ, ವಿವೇಕಾನಂದರುಗಳ ಪ್ರಭಾವಕ್ಕೆ ಒಳಗಾಗಿದ್ದರು. ಈ ಸಮಾಜ ಸುಧಾರಕರು ಅನಿಷ್ಟ ಸಂಪ್ರದಾಯ ಪದ್ಧತಿ, ಪಿಡುಗುಗಳ ವಿರುದ್ಧ ಧನಿ ಎತ್ತುವ ಮೂಲಕ ಬಾಲ್ಯವಿವಾಹ ನಿಷೇಧ,

ಅಂತರ್‌ಜಾತಿ ವಿವಾಹ, ವಿಧವಾ ವಿವಾಹಗಳಿಗೆ ಪ್ರೋತ್ಸಾಹ ನೀಡಿದ್ದರು. ಸಾಹಿತ್ಯ ಕೃತಿಗಳ, ಪತ್ರಿಕೆಗಳ, ಸಭೆಗಳಲ್ಲಿನ ಭಾಷಣಗಳ ಮೂಲಕ ಈ ವಿಚಾರಗಳನ್ನು ತಿಳಿದುಕೊಂಡಿದ್ದ ವೀರಣ್ಣಗೌಡರಿಗೆ ಪ್ರೌಢಾವಸ್ಥೆಯಲ್ಲಿಯೇ ಅವರ ಮನಸ್ಸಿನ ಮೇಲೆ ಬಹಳಷ್ಟು ಪ್ರಭಾವ ಬೀರಿದ್ದವು. ಈ ಹಿನ್ನೆಲೆಯಿಂದ ತಾವೂ ಒಬ್ಬ ಆದರ್ಶ ವ್ಯಕ್ತಿಯಾಗಿ ಬಾಳಬೇಕು, ದೇಶಸೇವೆ ಮಾಡಬೇಕೆಂಬ ಅಭಿಲಾಷೆ ಅವರ ಮನದಲ್ಲಿ ಮೂಡಿತ್ತು ಎಂದೇಳಬಹುದು. ಇದರ ಪರಿಣಾಮ ವೀರಣ್ಣಗೌಡರು ವಿಧವೆಯನ್ನು ವಿವಾಹವಾಗಬೇಕೆಂಬ ಇಚ್ಛೆ ಇದ್ದಿತು. ಸಹಜವಾಗಿಯೇ ಎಲ್ಲರಂತೆ ತಾಯಮ್ಮನವರ ಕಡೆಗೆ ಆಕರ್ಷಿತರಾದರೂ ನಂತರ ಆಕೆ ಬಾಲವಿಧವೆ ಎಂದು ತಿಳಿದು ತಮ್ಮ ಇಚ್ಛೆಯಂತೆಯೇ ಆಯ್ಕೆಮಾಡಿಕೊಂಡಿರುವುದನ್ನು ಅರಿತು ಪ್ರಾರಂಭದಲ್ಲಿ ಕೆಲ ಅಡೆತಡೆಗಳು ಎದುರಾದರೂ ಲೆಕ್ಕಿಸದೆ ಅವರನ್ನೆ ವಿವಾಹವಾಗಬೇಕೆಂಬ ಹಟ ತೊಟ್ಟರು. ವಿಧವಾ ವಿವಾಹವನ್ನು ಅಷ್ಟಾಗಿ ಒಪ್ಪಿಕೊಳ್ಳದಿದ್ದ ಅಂದಿನ ಒಕ್ಕಲಿಗ ಜನ ಸಮುದಾಯದಲ್ಲೇ ವೀರಣ್ಣಗೌಡರ ವಿವಾಹ ವಿಚಾರ ಬಹುದೊಡ್ಡ ಸುದ್ದಿಯಾಗಿ ಪ್ರಸಾರಗೊಂಡಿತ್ತು ಎಂಬುದನ್ನು ವೀರಣ್ಣಗೌಡರ ಸ್ನೇಹಿತರಾದ ಹ.ಕ.ರಾಜೇಗೌಡರು ನೆನಪಿಸಿಕೊಳ್ಳುತ್ತಾರೆ.

ಬೆಂಗಳೂರಿನಲ್ಲಿ ಇಂಟರ್ ಮಿಡಿಯೇಟ್ ಓದುತ್ತಿದ್ದ ತಾಯಮ್ಮನವರನ್ನು ನೋಡಿದ ವೀರಣ್ಣಗೌಡರಿಗೆ ಬಾಲ ವಿಧವೆ ಎಂದು ತಿಳಿದ ಮೇಲೆ ಅವರನ್ನೇ ಮದುವೆಯಾಗಬೇಕೆಂಬ ಮನಸ್ಸಾಯಿತು. ಹಾಗಾಗಿ ತಮ್ಮ ಆಪ್ತಮಿತ್ರ ವಿ.ವೆಂಕಟಪ್ಪನವರನ್ನು ಈ ವಿಷಯವಾಗಿ ರಾಯಭಾರ ವಹಿಸಲು ಕೇಳಿಕೊಂಡರು. ಮದ್ದೂರಿನ ಶ್ರೀಮಂತ ಜಮೀನುದಾರರಾಗಿದ್ದ ಎಂ.ಎಚ್.ಚನ್ನೇಗೌಡರು ಹೆಣ್ಣಿನ ತಂದೆ. ಇವರು ಆರಂಭದಲ್ಲಿ ವೀರಣ್ಣಗೌಡರನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಳ್ಳಲಿಲ್ಲ. ಆದರೆ ವೀರಣ್ಣಗೌಡರ ಸ್ನೇಹಿತರ ಒತ್ತಾಯ ಚನ್ನೇಗೌಡರ ಮೇಲೆ ಪರಿಣಾಮವನ್ನುಂಟು ಮಾಡಿರಬಹುದು. ಕಡೆಗೊಮ್ಮೆ ವೀರಣ್ಣಗೌಡರು ಸಣ್ಣಗಿರುವುದನ್ನು ಕಂಡು ವರನು ವೈದ್ಯಕೀಯ ಪರೀಕ್ಷೆಗೆ ಒಳಪಡುವುದಾದರೆ ಮತ್ತು ತಮ್ಮ ಮಗಳು ಒಪ್ಪುವುದಾದರೆ ಈ ಮದುವೆ ಆಗಬಹುದೆಂದು ತಿಳಿಸಿದರು. ಕಾರಣ ತಮ್ಮ ಮೊದಲ ಅಳಿಯ ಕ್ಷಯ ರೋಗದಿಂದ ಸಾವನ್ನಪ್ಪಿದ್ದರಿಂದ ಸಣ್ಣಗಿದ್ದ ವೀರಣ್ಣಗೌಡರಿಗೆ ಕ್ಷಯರೋಗವಿರಬಹುದೆಂಬ ಅನುಮಾನ ಎಂ.ಎಚ್.ಚನ್ನೇಗೌಡರಿಗಿತ್ತೆನ್ನಬಹುದು. 'ಸಾವಿರ ಸುಳ್ಳು ಹೇಳಿ ಮದುವೆ ಮಾಡು' ಎಂಬ ಗಾದೆಗೆ ಅನುಗುಣವಾಗಿ ತಮಗೆ ವರನ ಕಡೆಯವರು ಸುಳ್ಳು ತಪಾಸಣಾ ವರದಿ ನೀಡಬಹುದೆಂದು ಭಾವಿಸಿದ ಚನ್ನೇಗೌಡರು ತಮ್ಮ ಅಳಿಯನಾಗುವವನು ಆರೋಗ್ಯವಂತನಾಗಿರುವನೆಂದು ಖಚಿತ ಪಡಿಸಿಕೊಳ್ಳಲು ತಮಗೆ ತಿಳಿದಿದ್ದ ವೈದ್ಯರ ಮೂಲಕ ಮಂಡ್ಯದಲ್ಲಿ ವೀರಣ್ಣಗೌಡರ ತಪಾಸಣೆ ಮಾಡಿಸಿದರು. ಉತ್ತಮ ವರದಿ ದೊರೆತ ಮೇಲೆ, ತಮ್ಮ ಮಗಳ ಇಷ್ಟಾರ್ಥವನ್ನು ಅರಿತು ಮುಂದಿನ ಶುಭಕಾರ್ಯಕ್ಕೆ ಕಾರ್ಯೋನ್ಮುಖರಾದರು.

ದಿನಾಂಕ ೨ ಮಾರ್ಚ್ ೧೯೩೧ರಂದು ಹೆಚ್.ಕೆ.ವೀರಣ್ಣಗೌಡ ಮತ್ತು ತಾಯಮ್ಮನವರ ಮದುವೆಯನ್ನು ಸರಳ ರೀತಿಯ ಶಾಸ್ತ್ರ ಸಂಪ್ರದಾಯಗಳನ್ನು ಅನುಸರಿಸಿ ಅವರ ಮದ್ದೂರಿನ ತೋಟದ ಮನೆಯಲ್ಲಿ ಮಾಡಿದರು. ವೀರಣ್ಣಗೌಡರು ತಮ್ಮ ವಿವಾಹಕ್ಕೆ ತಮ್ಮ ತಂದೆಯ ಹೆಸರಿನಲ್ಲಿ ಐವತ್ತು, ಮತ್ತು ಮಾವನವರ ಹೆಸರಿನಲ್ಲಿ ಐವತ್ತು ಹೀಗೆ ಕೇವಲ ನೂರು ಲಗ್ನಪತ್ರಿಕೆಯನ್ನು ಮಾತ್ರ ಅಚ್ಚು

ಹಾಕಿಸಿದ್ದರು. ವಿಧವಾವಿವಾಹ ಆ ಕಾಲಕ್ಕೆ ಬ್ರಾಹ್ಮಣರಿರಲಿ ಒಕ್ಕಲಿಗರಲ್ಲೂ ನಿಷಿದ್ಧವಾಗಿತ್ತು. ವೀರಣ್ಣಗೌಡರು ಈ ಸಂಪ್ರದಾಯ ಮುರಿದು ವಿಧಿವತ್ತಾಗಿಯೇ ಮದುವೆಯಾದರು. 'ಸಾಮಾನ್ಯವಾಗಿ ವಿಧವೆಯನ್ನು ಆ ಕಾಲದಲ್ಲಿ ವಿಧುರನಾದವನು ಮಾತ್ರ 'ಕೂಡಾವಳಿ' ಮಾಡಿಕೊಳ್ಳುತ್ತಿದ್ದುದು ವಾಡಿಕೆ.[೧೩] ಆದರೆ ವೀರಣ್ಣಗೌಡರು ತಾಯಮ್ಮನವರನ್ನು ತಮ್ಮ ಧರ್ಮಪತ್ನಿಯಾಗಿಯೇ ಶಾಸ್ತ್ರೋಕ್ತವಾಗಿ, ವಿಧಿಪೂರ್ವಕವಾಗಿ ಕೆಲವೇ ಬಂಧು ಮಿತ್ರರ ಸಮ್ಮುಖದಲ್ಲಿ ಸರಳ ವಿವಾಹವಾಗುವುದರ ಮೂಲಕ ಸಮಾಜದಲ್ಲಿ ಅವರೊಬ್ಬ ಕ್ರಾಂತಿಕಾರಿ ವಿಚಾರಧಾರೆಯವರೆಂಬುದನ್ನು ತೋರಿಸಿಕೊಟ್ಟರು. ಹಾಗೆಯೇ ತಮ್ಮ ಮದುವೆ ಮುಖಾಂತರ ಒಕ್ಕಲಿಗ ಸಮುದಾಯದಲ್ಲಿ ಸುಧಾರಣೆ ತರುವುದಕ್ಕೆ ಮುಂದಾದರೆಂದೂ ಹೇಳಬಹುದು.

'ತಡವಾಗಿಯಾದರೂ ಆರಂಭವಾದ ದಾಂಪತ್ಯ ಜೀವನ ವೀರಣ್ಣಗೌಡರ ಜೀವಿತ ಅವಧಿಯವರೆವಿಗೆ ತುಂಬಾ ಅನ್ಯೋನ್ಯವಾಗಿಯೇ ಇದ್ದಿತು'ಎಂದು ವೀರಣ್ಣಗೌಡರ ಸಂಬಂಧಿ ಶ್ರೀ ಕೆ.ಟಿ.ಚಂದು ಅವರು ಹೇಳುತ್ತಾರೆ. ದಂಪತಿಗಳಿಬ್ಬರೂ ಅತಿಥಿ ಸತ್ಕಾರದಲ್ಲಿ, ಗ್ರಾಮೀಣ ಜನರ ಏಳಿಗೆಯಲ್ಲಿ ಸುಸಂಸ್ಕೃತ ನಡವಳಿಕೆಗಳಲ್ಲಿ ಏಕ ಮನಸ್ಕರಾಗಿದ್ದರು ಎಂಬುದನ್ನು ವೀರಣ್ಣಗೌಡರ ಬಂಧು ಪಿ.ವೀರಮಲ್ಲೇಶ್‌ರವರು, ಸ್ನೇಹಿತರಾದ ಹ.ಕ.ರಾಜೇಗೌಡರು ಸ್ಮರಿಸುತ್ತಾರೆ. ಅವರಿಬ್ಬರ ನಡುವಿನ ರಸಕ್ಷಣಗಳ ಹಾಸ್ಯ ಚಟಾಕಿಗಳು ಮೆಚ್ಚುಗೆಗೆ ಪಾತ್ರವಾಗಿದ್ದವು.

"ವೀರಣ್ಣಗೌಡ ದಂಪತಿಗಳಿಗೆ ಸಂತಾನವಿಲ್ಲ. ಸಂಬಂಧಿಕರ ಮಕ್ಕಳನ್ನು ಕೈಯಾರ ಸಾಕಿ ಸಲಹಿ ಬೆಳೆಸಿದ ಹೃದಯವಂತಿಕೆ ಅವರದಾಗಿತ್ತು. ಉತ್ತಮ ಗೃಹಿಣಿಯಾದ ತಾಯಮ್ಮನವರಿಗೆ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಯ ಬಗೆಗೆ ಆಸಕ್ತಿ ಹೆಚ್ಚಾಗಿತ್ತು. ಇದು ಅವರನ್ನು ಮೈಸೂರು ಸಂಸ್ಥಾನದ ಮಹಿಳಾ ಶಾಖೆಯ ಕಸ್ತೂರ ಬಾ ಕ್ಷೇತ್ರದ ಅಧ್ಯಕ್ಷರನ್ನಾಗಿ ಮಾಡಿತು. ಮಂಡ್ಯ ಜಿಲ್ಲೆಯ ಸ್ತ್ರೀ ಪ್ರತಿನಿಧಿಯಾಗಿ ಪ್ರಜಾಪ್ರತಿನಿಧಿ ಸಭೆಗೆ ಎರಡು ಬಾರಿ ಚುನಾಯಿತರಾಗಿದ್ದರು. ಗಂಡನ ನೆರಳಾಗಿ ಜೀವನವಿಡೀ ಸಹಕರಿಸಿದ ತಾಯಮ್ಮನವರು ಗಂಡನೊಡನೆ ಸಂಸ್ಥಾನವನ್ನೆಲ್ಲಾ ಪ್ರವಾಸ ಮಾಡಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನ ಒಗೊಡಲು ಪ್ರೇರಕರಾದರು. ಅನೇಕ ಸಾರ್ವಜನಿಕ ಭಾಷಣಗಳನ್ನು ಮಾಡಿದರು. ವೀರಣ್ಣಗೌಡರ ಸಾರ್ವಜನಿಕ ಹಾಗೂ ರಾಜಕೀಯ ಚಟುವಟಿಕೆಗಳಿಗೆ ಒತ್ತಾಸೆಯಾಗಿ ನಿಂತರು. ಮೈಸೂರು ಸಂಸ್ಥಾನದ ಕೆಲವು ಪ್ರಸಿದ್ದ ರಾಜಕಾರಣಿ ದಂಪತಿಗಳಾದ ಹೆಚ್.ಸಿ.ದಾಸಪ್ಪ ಮತ್ತು ಯಶೋಧರಾ ದಾಸಪ್ಪ, ಎಂ.ಎನ್.ಜೋಯಿಸ್ ಮತ್ತು ಸುಬ್ಬಮ್ಮ ಜೋಯಿಸರವರಂತೆ ರಾಜಕೀಯ ಚಟುವಟಿಕೆಗಳಲ್ಲಿ ವೀರಣ್ಣಗೌಡ ದಂಪತಿಗಳು ಪ್ರಸಿದ್ದರಾಗಿದ್ದರು"[೧೪] ವೀರಣ್ಣಗೌಡರು ತಮ್ಮ ಜೀವನದ ಬಹು ಭಾಗವನ್ನು ದೇಶ ಸೇವೆಗೆ ಮೀಸಲಿಟ್ಟಿದ್ದರಿಂದ, ಬಹಳ ಕಾಲ ಸ್ವಂತ ನೆಲೆಯಿಂದ ಹೊರಗಿರಬೇಕಾಗಿತ್ತು. ಇದರಿಂದಾಗಿ ಗೃಹ ಕೃತ್ಯಗಳಿಗೆ ಗಮನ ಕೊಡಲು ತಮ್ಮ ಭಾಗದ ಭೂಮಿ

---

[೧೩] ಬಹುಜನ ಕನ್ನಡಿಗರು, ಮಾರ್ಚ್ ೧, ೨೦೦೧, ಪುಟ-೭

[೧೪] ಹೆಚ್.ಕೆ.ವೀರಣ್ಣಗೌಡ ಸಂಕ್ಷಿಪ್ತ ಜೀವನ ಚರಿತ್ರೆ, ಡಿ.ಲಿಂಗಯ್ಯ,೧೯೯೯, ಪುಟ-೨೨.೨೩

ಕಾಣಿಯಲ್ಲಿ ಸ್ವತಃ ಬೇಸಾಯ ಮಾಡಿಸಲು ಆಗಲಿಲ್ಲ. ಅಂಥ ಸಮಯದಲ್ಲಿ ವೀರಣ್ಣಗೌಡರ ಸಂಬಂಧಿ ಕೆ.ಟಿ.ಚಂದು ಅವರು ವೀರಣ್ಣಗೌಡರ ವ್ಯವಹಾರಗಳನ್ನು ಸಮರ್ಥವಾಗಿ ನಿರ್ವಹಿಸಿದರು. ಇಂದಿಗೂ ವೀರಣ್ಣಗೌಡರ ಬಗ್ಗೆ ಅಭಿಮಾನ, ಗೌರವ ಹೊಂದಿರುವ ಕೆ.ಟಿ.ಚಂದು ಅವರು ವೀರಣ್ಣಗೌಡ ದಂಪತಿಗಳನ್ನು ಬಹಳ ಹತ್ತಿರದಿಂದ ಬಲ್ಲವರಾದ ಇವರು ಅವರ ಹಾಸ್ಯ ಮಿಶ್ರಿತ ರಸಕ್ಷಣಗಳ ಬಗ್ಗೆ ಒಂದೆರೆಡು ಘಟನೆಗಳನ್ನು ಉಲ್ಲೇಖಿಸುವ ಮೂಲಕ ಸ್ಮರಿಸುತ್ತಾರೆ; "ಒಮ್ಮೆ ಮಧ್ಯಾಹ್ನದ ಊಟ ಮುಗಿಸಿ ವಿಶ್ರಾಂತಿಗಾಗಿ ವೀರಣ್ಣಗೌಡರು ಮಲಗಿದ್ದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಆಗಿನ ಸದಸ್ಯರಲ್ಲೊಬ್ಬರಾದ ಶ್ರೀ ಕೆ.ಎಂ.ಹುಸೇನ್ ಸಾಹೇಬರು ಯಾವುದೋ ಕಾರ್ಯನಿಮಿತ್ತ ವೀರಣ್ಣಗೌಡರನ್ನು ಎಬ್ಬಿಸಲು ಬಂದು ಬಾಗಿಲು ತಟ್ಟಿದರು. ನಿಧಾನವಾಯಿತೆಂದು ಭಾವಿಸಿಯೊ ಏನೊ ಮತ್ತೊಮ್ಮೆ ಬಾಗಿಲು ತಟ್ಟಿದರು. ಶ್ರೀಗೌಡರು 'ಇರ್‍ರಿ ಸಾಬ್ರೆ ನನ್ನ ಹೆಂಡತಿ ಜೊತೆಗಿದ್ದಾಳೆ' ಎಂದುದು ನವಿರಾದ ಹಾಸ್ಯದ ಅಲೆಯೆಬ್ಬಿಸಿತು. ಮತ್ತೊಮ್ಮೆ ಗೌಡರೊಡನೆ ಮನೆಗೆ ಹೋದಾಗ ರಾತ್ರಿ ಸುಮಾರು ೯ ಗಂಟೆ, ಮನೆಯವರೆಲ್ಲ ಉಂಡು ಮಲಗುವ ಹವಣಿಕೆಯಲ್ಲಿದ್ದರು, ಬಾಗಿಲು ಹಾಕಿತ್ತು. ಶ್ರೀಗೌಡರು ಹೊರಗಿನಿಂದ ಬಾಗಿಲು ಶಬ್ದ ಮಾಡಿದರು. ಒಳಗಿನಿಂದ ಶ್ರೀಮತಿಯವರು ನಾಯಿಯಿರಬಹುದೆಂದು ಉಳಿದವರಿಗೆ ಹೇಳಿದ್ದು ಕೇಳಿ ಇವರು "ಹೌದು ನಾಯಿ ಮತ್ತು ಮರಿ" ಎಂದು ಗಟ್ಟಿಯಾಗಿ ಹೇಳಿದುದನ್ನು ಕೇಳಿ ಒಳಗಿದ್ದ ಎಲ್ಲರೂ ನಗುವಂತಾಯಿತು."[೧೫] ವೀರಣ್ಣಗೌಡರು ತಮ್ಮ ಹಾಸ್ಯಪ್ರವೃತ್ತಿಯ ಮೂಲಕ ಸಾರ್ವಜನಿಕವಾಗಿ ತಮ್ಮ ಕಣ್ಣಿಗೆ ಕಂಡ ಅಸಂಬದ್ಧ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಿದ್ದರು. ಇದರಿಂದ ತಪ್ಪುಗಳು ಸಂಬಂಧಪಟ್ಟವರ ಗಮನಕ್ಕೆ ಬಂದು ತಕ್ಷಣವೇ ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯಸಾಗುವಂತಾಗುತ್ತಿತ್ತು. ಇಂತಹ ಪ್ರಸಂಗಗಳು ಅವರು ಹೋದೆಡೆಯೆಲ್ಲಾ ಘಟಿಸಿವೆಯಾದರೂ ಅವುಗಳಲ್ಲಿ ಮದ್ದೂರಿನ ವೀರಣ್ಣಗೌಡ ಕಾಲೇಜಿನ ಡಾ. ಅರ್ಜುನಪುರಿ ಅಪ್ಪಾಜಿಗೌಡರು ತಮ್ಮ ಕಿರುಹೊತ್ತಿಗೆ 'ಸಂಘಟನಾ ಚತುರ ಹೆಚ್.ಕೆ. ವೀರಣ್ಣಗೌಡ'ದಲ್ಲಿ ಪ್ರಸ್ತಾಪಿಸಿರುವ ಗಮನಾರ್ಹವಾದ ಒಂದೆರಡಂಶಗಳನ್ನು ಇಲ್ಲಿ ಉಲ್ಲೇಖಮಾಡಲಾಗಿದೆ. 'ಸ್ವರಾಜ್ಯ ಹೋರಾಟದ ಸಂದರ್ಭ,ತಿಪಟೂರಿನಲ್ಲಿ ಭಾರೀ ಬಹಿರಂಗ ಸಭೆ, ಭಾಷಣ ಮಾಡುತ್ತಿದ್ದ ವೀರಣ್ಣಗೌಡರು ಎದುರಿಗೆ ಕಾಣುತ್ತಿದ್ದ'ಹೆಂಗಸರ ಹೆರಿಗೆ ಆಸ್ಪತ್ರೆ' ಎಂಬ ಬೋರ್ಡು ತೋರಿಸುತ್ತ ನಮ್ಮ ಕಡೆ ಕೇವಲ ಹೆರಿಗೆ ಆಸ್ಪತ್ರೆಗಳು ಮಾತ್ರ ಇವೆ. ಗಂಡಸರಿಗೆ ಹೆರಿಗೆ ಪ್ರಸಂಗವೇ ಬರುವುದಿಲ್ಲ. ತಿಪಟೂರಿನಲ್ಲಿ ಮಾತ್ರ ಹೆಂಗಸರ ಹೆರಿಗೆ ಆಸ್ಪತ್ರೆ ಇದೆ! ನಮ್ಮ ಎದುರಿಗೆ ಕಾಣುತ್ತಿದೆ. ಈ ಊರಿನಲ್ಲಿ ಗಂಡಸರ ಹೆರಿಗೆ ಆಸ್ಪತ್ರೆ ಎಲ್ಲಿದೆಯೋ ಕಾಣೆ?' ಎಂದು ಹಾಸ್ಯ ಚಟಾಕಿ ಹಾರಿಸಿದರು. ಇದರ ಪರಿಣಾಮ ಅದೇ ದಿನ ಸಂಜೆ ವೇಳೆಗೆ 'ಹೆಂಗಸರ' ಎಂಬ ಭಾಗಕ್ಕೆ ಬಣ್ಣ ಬಳಿದು 'ಹೆರಿಗೆ ಆಸ್ಪತ್ರೆ' ಎಂದು ಮಾಡಲಾಗಿತ್ತು. ಮತ್ತೊಂದು ಪ್ರಸಂಗ; 'ಮಂಡ್ಯ ಸಕ್ಕರೆ ಕಾರ್ಖಾನೆ ಕೆಲಸಗಾರರ ಸಂಘದ ಅಧ್ಯಕ್ಷರಾಗಿದ್ದಾಗ ೧೯೪೨ ರ ಸುಮಾರಿನಲ್ಲಿ ನಡೆದ ಒಂದು ಪ್ರಸಂಗ, ಸಕ್ಕರೆ ಕಾರ್ಖಾನೆ ಪಶ್ಚಿಮಕ್ಕೆ ಮತ್ತು ಪೇಟೆ ಬೀದಿಯ ಪೂರ್ವಭಾಗಕ್ಕೆ ಮಧ್ಯೆ ಸ್ಮಶಾನವಿತ್ತು. ಸರ್ಕಾರ

---

[೧೫] ಚಿತ್ರಗುಪ್ತ ಸ್ಮರಣೆ, ಹ.ಕ.ರಾಜೇಗೌಡ.೧೯೬೪, ಪುಟ-೪

ಆ ಸ್ಥಳದಲ್ಲಿ ಹೆಣ ಹೂಳುವುದನ್ನು ತಪ್ಪಿಸಲು 'ಇಲ್ಲಿ ಸತ್ತ ಹೆಣಗಳನ್ನು ಹೂಳಬಾರದು' ಎಂದು ನಾಮಫಲಕ ಹಾಕಿಸಿದ್ದರು. ವೀರಣ್ಣಗೌಡರು ಕೆಲಸಗಾರರ ಸಭೆಯಲ್ಲಿ ಮಾತನಾಡುತ್ತಾ 'ಹೆಣ ಎಂದರೆ ಉಸಿರಿಲ್ಲದ ಶರೀರ ಎಂದೇ ಅರ್ಥ. 'ಸತ್ತ ಹೆಣ' ಎಂದು ಬೋರ್ಡು ಹಾಕಿದ್ದಾರೆ, ಆದರೆ ಜೀವದ ಹೆಣ ಬೇರೆ ಇದೆಯೇನು? ಹಾಗಾದರೆ ಇಲ್ಲಿ ಜೀವದ ಹೆಣಗಳನ್ನು ಹೂಳಬಹುದೇನು? ಅವು ಎಲ್ಲಿ ಕಂಡು ಬರುತ್ತವೆ? ಎಂದು ಚಟಾಕಿ ಹಾರಿಸಿದರು. ಮುಂಜಾನೆಯಷ್ಟರಲ್ಲಿ 'ಸತ್ತ' ಎಂಬ ಅಕ್ಷರಗಳನ್ನು ಅಳಿಸಿ ಹಾಕಿ 'ಇಲ್ಲಿ ಹೆಣಗಳನ್ನು ಹೂಳಬಾರದು' ಎಂಬ ನಾಮಫಲಕ ಪ್ರತ್ಯಕ್ಷವಾಗಿತ್ತು.

**೨.೫. ವೀರಣ್ಣಗೌಡರ ಮೇಲೆ ತತ್ವಜ್ಞಾನಿಗಳ ಪ್ರಭಾವ : –**

ಭಾರತ ರಾಷ್ಟ್ರೀಯ ಹೋರಾಟದ ಆರಂಭದ ದಶಕದಲ್ಲಿ ಅಂದರೆ ೧೮೯೯ ರಲ್ಲಿ ಜನಿಸಿದ ಹೆಚ್.ಕೆ.ವೀರಣ್ಣಗೌಡರು ತಮ್ಮ ಬಾಲ್ಯಜೀವನದಲ್ಲಿ ತಂದೆ–ತಾಯಿ, ಗುರು ಹಿರಿಯರು ಮತ್ತು ಸುತ್ತಲಿನ ಪರಿಸರದಿಂದ ಪ್ರಭಾವಿತಗೊಂಡಿದ್ದರು. ಹಾಗೆಯೇ ಅವರು ರಾಷ್ಟ್ರೀಯ ತತ್ವಜ್ಞಾನಿಗಳ ಪ್ರಭಾವಕ್ಕೆ ಒಳಪಟ್ಟು, ತಮ್ಮ ವ್ಯಕ್ತಿತ್ವ ವಿಕಾಸದಲ್ಲಿ ಕಂಡುಕೊಂಡ ಬದಲಾವಣೆಗಳನ್ನು ಅವಲೋಕಿಸಲಾಗಿದೆ.

ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದಾಗ ಕೆ.ಸೂರ್ಯನಾರಾಯಣಪ್ಪ ಎಂಬ ಥಿಯೋಸಫಿಸ್ಟರಾಗಿದ್ದ ಉಪಾಧ್ಯಾಯರ ಪ್ರಭಾವಕ್ಕೆ ಒಳಗಾಗಿದ್ದರು. ಹೀಗಾಗಿ ಗೌಡರು 'ಥಿಯೋಸಫಿಕಲ್ ಸೊಸೈಟಿಯ ಸದಸ್ಯರಾಗಿದ್ದರು. ಮದ್ರಾಸಿನ ಅಡ್ಯಾರಿನಲ್ಲಿ ನಡೆಯುತ್ತಿದ್ದ ಥಿಯೋಸಫಿಕಲ್ ಕನ್ವೆಷನ್‌ಗಳಿಗೆ ಭಾಗವಹಿಸುವ ಅವಕಾಶ ಪಡೆದಿದ್ದರು. ಥಿಯೋಸಫಿ ಎಂದರೆ ಬ್ರಹ್ಮವಿದ್ಯೆ ಅಥವ ತತ್ವಜ್ಞಾನ ಎಂದರ್ಥ. ಥಿಯೋಸ್–ದೇವರು ಮತ್ತು ಸೋಫಿಯಾ–ಜ್ಞಾನ ಎಂದರ್ಥ. ಮೋಕ್ಷವನ್ನು ಬಯಸುವವನಿಗೆ ಸಾಧನೆಗಳಲ್ಲಿ ತಿಳುವಳಿಕೆ ಅಥವ ಜ್ಞಾನದ ಬೆಳವಣಿಗೆ ಮಾತ್ರ ಇದ್ದರೆ ಸಾಲದು, ಅವನು ಉತ್ತಮ ಆಲೋಚನೆಗಳನ್ನು ಬೆಳೆಸಿಕೊಂಡಿರಬೇಕು. ಎಂದರೆ ದೇವರಲ್ಲಿ ಭಕ್ತಿಯನ್ನು ಬೆಳೆಸಿಕೊಂಡರೆ ಮಾತ್ರ ಸಾಲದು, ಮಾನವ ಕೋಟಿಯ ಸುಖ, ದುಃಖಗಳೊಂದಿಗೆ ತಾನು ಒಂದಾಗಬೇಕು, ಅವರ ಸೇವೆಗಾಗಿ ತನ್ನನ್ನು ಅರ್ಪಿಸಿ ಕೊಳ್ಳಬೇಕು, ಇದುವೇ ಥಿಯೋಸಾಫಿಕಲ್ ಸೊಸೈಟಿಯ ಮುಖ್ಯ ಧ್ಯೇಯವಾಗಿದ್ದಿತು. ಗೌಡರು ಡಾ.ಅನಿಬೆಸೆಂಟರ ಈ ವಿಚಾರಧಾರೆಗಳಿಂದ ಪ್ರಭಾವಿತರಾದರು. ಅವರ ಪ್ರಭಾವ ಎಷ್ಟಿತ್ತೆಂದರೆ ಸಮಾಜ ಸುಧಾರಣೆಯ ಚಟುವಟಿಕೆಗೆ ಹೆಚ್ಚು ಒತ್ತು ನೀಡಿದ್ದ ಅನಿಬೆಸೆಂಟರು ಸ್ತ್ರೀವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿ, ಬಾಲ್ಯ ವಿವಾಹ ಪದ್ಧತಿಯ ವಿರುದ್ಧ ಚಳವಳಿ ಮಾಡಿದರು. ವಿಧವಾ ವಿವಾಹಕ್ಕೆ ವಿಶೇಷವಾಗಿ ಆಗ್ರಹಪಡಿಸಿದರು. ಇಂಥ ವಿಚಾರಗಳು ವೀರಣ್ಣಗೌಡರ ಮುಗ್ಧ ಮನಸ್ಸಿನಲ್ಲಿ ಬೇರು ಬಿಟ್ಟಿದ್ದರಿಂದಲೇ ಇರಬೇಕು ಅವರು ಮೊದಲು ತಮ್ಮನ್ನು ತಾವು ವಿಧವಾ ವಿವಾಹಕ್ಕೆ ಅನುವುಗೊಳಿಸಿ ಕೊಂಡಿರಬಹುದು. ಆದರ್ಶಗಳನ್ನು ಹೇಳುವುದಕ್ಕಿಂತ ಜೀವನದಲ್ಲಿ ಸ್ವತಃ ಅದನ್ನು ಅಳವಡಿಸಿಕೊಳ್ಳಬೇಕು ಎಂಬುದು ಹೆಚ್.ಕೆ.ವೀರಣ್ಣಗೌಡರ ಆಲೋಚನೆಯಾಗಿತ್ತು. ಅನಿಬೆಸೆಂಟರಿಂದ ಪ್ರಭಾವಿತಗೊಂಡಿದ್ದ

ವೀರಣ್ಣಗೌಡರು ತಮ್ಮ ಆತ್ಮಕತೆಯಲ್ಲಿ ಅನಿಬೆಸೆಂಟರ ಬಗ್ಗೆ ಹೀಗೆ ಬರೆಯುತ್ತಾರೆ; ‘ಡಾ.ಅನಿಬೆಸೆಂಟರ ಜೀವನ ಚರಿತ್ರೆಗೂ ನನ್ನ ಜೀವನ ಚರಿತ್ರೆಗೂ ಯಾವ ಸಂಬಂಧವೂ ಇಲ್ಲ. ಅವರು ಭಾರತದ ಯುವಕರಿಗೆ ರಾಷ್ಟ್ರೀಯ ಭಾವನೆ ಉಂಟು ಮಾಡಬಹುದಾದ ರಾಷ್ಟ್ರೀಯ ವಿದ್ಯಾಸಂಸ್ಥೆಗಳ ಸ್ಥಾಪನೆ, ಸಾಮಾಜಿಕ ಸುಧಾರಣಾಚಳುವಳಿ ಇತ್ಯಾದಿಗಳಿಗಾಗಿ ಭಾರತವನ್ನು ತನ್ನ ‘ಮಾತೃಭೂಮಿ’ಯನ್ನಾಗಿ ಮಾಡಿಕೊಂಡಿದ್ದರು. ಅವರು ಸಲ್ಲಿಸಿದ ಅಪಾರ ಸೇವೆಗಾಗಿ ನನ್ನಲ್ಲುಂಟಾಗಿರುವ ಕೃತಜ್ಞತೆಯಿಂದಾಗಿ ಅವರ ಬಗ್ಗೆ ಕೆಲವು ಮಾತುಗಳನ್ನು ಬರೆಯಬೇಕೆನಿಸಿತು. ಬ್ರಿಟಿಷ್ ಚಕ್ರಾಧಿಪತ್ಯಕ್ಕೊಳ ಪಟ್ಟಂತೆ ಭಾರತ ಸ್ವರಾಜ್ಯಾಡಳಿತ ನಡೆಸುವ ಅಧಿಕಾರ ಸ್ಥಾಪನೆಗಾಗಿ ‘ಹೋಂ ರೂಲ್’ ಸಂಸ್ಥೆಯೊಂದನ್ನು ಸ್ಥಾಪಿಸಲಾಯಿತು. ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಹೋರಾಟ ಪ್ರಾರಂಭಿಸಿದಾಗ, ಬ್ರಿಟಿಷ್ ಸರ್ಕಾರ ಡಾ.ಅನಿಬೆಸೆಂಟರನ್ನು ಮತ್ತು ಅವರ ಸಹ ವರ್ತಿಗಳಾಗಿದ್ದ ಬಿ.ಪಿ.ವಾಡಿಯಾ ಮತ್ತು ಅರುಂಡೇಲರನ್ನು ನೀಲಗಿರಿಯಲ್ಲಿ ನಿರ್ಬಂಧ ವಾಸ ಮಾಡುವಂತೆ ಮಾಡಿದರು. ಆ ತ್ರಿಮೂರ್ತಿಗಳು ನೀಲಗಿರಿಗೆ ಪ್ರಯಾಣ ಮಾಡುವುದಕ್ಕಾಗಿ ಮದರಾಸು ರೈಲ್ವೇ ಸ್ಟೇಷನ್ನಿಗೆ ಬಂದಾಗ ಲಕ್ಷಾಂತರ ಜನ ಅಲ್ಲಿ ಸೇರಿ ಅವರಿಗೆ ಜಯ ಕೋರಿ ಸುಖ ಪ್ರಯಾಣ ಬಯಸಿದರು. ವೈಸರಾಯ್, ಪ್ರಿನ್ಸ್ ಆಫ್ ವೇಲ್ಸ್ ಮುಂತಾದವರು ಬಂದಿದ್ದಾಗಲೂ ಇಷ್ಟು ಜನ ರೈಲ್ವೆ ಸ್ಟೇಷನ್ನಿನಲ್ಲಿ ಸೇರಿರಲಿಲ್ಲವೆಂದು ಮದರಾಸಿನ ಇಂಗ್ಲೀಷ್ ಪತ್ರಿಕೆಗಳಲ್ಲಿ ಓದಿದಾಗ ನನ್ನ ಮೈ ಪುಳಕಿತವಾಯಿತು. ದೇಶಸೇವೆಗಾಗಿ ಆ ರೀತಿ ತ್ಯಾಗ ಮಾಡುವ ಅವಕಾಶವನ್ನು ದೇವರು ನನಗೂ ಕರುಣಿಸಲಿ ಎಂದುಕೊಂಡರು.”[೧೬]

ಅನಿಬೆಸೆಂಟರಂತಹ ವಿದೇಶೀಯರೇ ಭಾರತದಲ್ಲಿ ಸ್ವರಾಜ್ಯಕ್ಕಾಗಿ ಹೋರಾಡುತ್ತಿರುವಾಗ ತಾವು ಹೋರಾಟ ಮಾಡುವುದು ನೈತಿಕ ಜವಾಬ್ದಾರಿ ಎಂಬ ಆಲೋಚನೆ ಗೌಡರ ಮನಸ್ಸನ್ನು ಹೊಕ್ಕಿತು. ಹೀಗೆ ಹೆಚ್.ಕೆ.ವೀರಣ್ಣಗೌಡರಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಲು, ದೇಶಪ್ರೇಮವನ್ನು ಬೆಳೆಸಿಕೊಳ್ಳಲು ಮೊದಲ ಪ್ರೇರಣೆಯಾದವರು ಡಾ.ಅನಿಬೆಸೆಂಟ್ ಎಂದು ಹೇಳಬಹುದು. ಐರಿಷ್ ಸಂಜಾತೆಯಾದ ಅನಿಬೆಸೆಂಟರು ಹಿಂದೂ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ಮತ್ತು ಥಿಯೋಸಾಫಿಕಲ್ ಸೊಸೈಟಿಯ ಕಾರ್ಯಕರ್ತೆಯಾಗಿ ಭಾರತಕ್ಕೆ ಬಂದರು. ಭಾರತವು ಸ್ವಯಂಮಾಡಳಿತ ಹೊಂದಬೇಕೆಂದು ಹಾಗೂ ಹಂತ ಹಂತವಾಗಿ ಸ್ವಾತಂತ್ರ್ಯಗಳಿಸಬೇಕೆಂಬುದು ಇವರ ಅಭಿಪ್ರಾಯವಾಗಿತ್ತು. ಈ ಉದ್ದೇಶವನ್ನು ಸಾಧಿಸಲು ೧೯೧೬ ರಲ್ಲಿ ‘ಹೋಂ ರೂಲ್ ಲೀಗ’ನ್ನು ಸ್ಥಾಪಿಸಿದರು. ೧೯೧೭ರ ಭಾರತ ರಾಷ್ಟ್ರೀಯ ಕಾಂಗ್ರೆಸ್ನ ಕಲ್ಕತ್ತ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಅನಿಬೆಸೆಂಟರನ್ನು ಆಯ್ಕೆಮಾಡಿತು. ಇದರಿಂದ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಪ್ರಥಮ ಮಹಿಳಾ ಅಧ್ಯಕ್ಷೆ ಎಂಬ ಹಿರಿಮೆಗೆ ಪಾತ್ರರಾದರು. ಅನಿಬೆಸೆಂಟರ ಪ್ರಭಾವಕ್ಕೊಳಗಾದ ಭಾರತೀಯರಲ್ಲಿ ಮೊದಲಿಗರು ಗಾಂಧೀಜಿ. ೧೯೨೦ ರಿಂದೀಚೆಗೆ ಅನಿಬೆಸೆಂಟರ ಪ್ರಭಾವ ಕಡಿಮೆಯಾಗುತ್ತಾ ಹೋಯಿತು. ಅದಕ್ಕೆ ಹಲವಾರು ಕಾರಣಗಳು ಹುಟ್ಟಿಕೊಂಡವು. ಒಂದು

---

[೧೬] ಬದುಕು-ಮೆಲುಕು. ಹೆಚ್.ಕೆ.ವೀರಣ್ಣಗೌಡ. ೧೯೭೪. ಪುಟ-೫೮

ಅನಿಬೆಸೆಂಟರ ಸಹವರ್ತಿ ಅರುಂಡೇಲರು ದೇಶಸೇವೆಗೆ ಶ್ರಮಿಸುತ್ತಿದ್ದವರು ಕಿರಿಯರಿಗೆ ಮಾರ್ಗದರ್ಶಕರಾಗಿದ್ದವರು ಇದ್ದಕ್ಕಿದ್ದಂತೆ ತಮಗಿಂತ ೩೦ವರ್ಷ ಕಡಿಮೆ ವಯಸ್ಸಿನ ಹುಡುಗಿಯನ್ನು ವಿವಾಹವಾಗಿದ್ದರು.

ಮತ್ತೊಂದು ಮದರಾಸಿನ ಜಡ್ಡು ನಾರಾಯಣಯ್ಯ ಎಂಬುವರು ಅಡಿಯಾರ್ ಥಿಯೋಸೊಫಿಕಲ್ ಸಂಸ್ಥೆ ಅಸಿಸ್ಟೆಂಟ್ ಸೆಕ್ರೆಟರಿಯಾಗಿದ್ದರು. ಅವರ ಹಿರಿಯ ಮಗ ಜೆ.ಕೃಷ್ಣಮೂರ್ತಿ ಎಂಬುವರು ಮುಂದೆ ಮೈತ್ರೇಯ ಮಹರ್ಷಿ ಎಂಬ ಹೆಸರಿನಿಂದ ಜಗದ್ಗುರುವಾಗುವರೆಂದೂ ಈ ಭವಿಷ್ಯ ಹಿಮಾಲಯದಲ್ಲಿ ತಪಸ್ಸು ಮಾಡುತ್ತಿರುವ ಶ್ವೇತರ್ಷಿ ಮಂಡಲಿಯವರಿಂದ ತಮಗೆ ತಿಳಿದಿದೆ ಎಂದೂ ತಮ್ಮ ಅನುಯಾಯಿಗಳಿಗೆ ಡಾ. ಅನಿಬೆಸೆಂಟರು ಹೇಳುತ್ತಿದ್ದರು. ನಿಸರ್ಗಪ್ರಿಯನಾಗಿ ವಿದ್ಯೆಯಲ್ಲಿ ಹೆಚ್ಚು ಆಸಕ್ತಿ ತೋರದ ಹಾಗೂ ಹೆಚ್ಚು ಅನಾರೋಗ್ಯದಿಂದ ಅಶಕ್ತನಾಗಿ ಅಂತರ್ಮುಖಿಯಾಗಿ ಕುಳಿತಿರುತ್ತಿದ್ದ ಜೆ.ಕೃಷ್ಣಮೂರ್ತಿಯನ್ನು ಥಿಯೋಸಾಫಿಕಲ್ ಸೊಸೈಟಿಯವರು ಮೈತ್ರೇಯ ಮಹರ್ಷಿಗಳ ಪುನರ್ ಅವತಾರವೆಂದು ಭಾವಿಸಿದರು. ಈ ಹಿನ್ನೆಲೆಯಲ್ಲಿ ಆತನನ್ನು ತಮ್ಮ ವಶಕ್ಕೆ ತೆಗೆದುಕೊಂಡು, ಜಗದ್ಗುರುಗಳಾಗಲು ಅರ್ಹರಾಗುವಂತೆ ಕೃಷ್ಣಮೂರ್ತಿಯವರಿಗೆ ಅಗತ್ಯ ಶಿಕ್ಷಣ ನೀಡುವ ಜವಾಬ್ದಾರಿಯನ್ನು ತಮಗೆ ಬಿಡಬೇಕೆಂದು ಅನಿಬೆಸೆಂಟರು ಜಡ್ಡು ನಾರಾಯಣಯ್ಯನವರ ಮನವೊಲಿಸಿ ಬಾಲಕ ಜೆ.ಕೃಷ್ಣಮೂರ್ತಿಯವರನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಜೆ.ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ಪೂರ್ವದಿಕ್ಕಿನ ನಕ್ಷತ್ರೋದ್ಭವ (ಆಡರ್ ಆಫ್ ದಿ ಸ್ಟಾರ್ ಇನ್ ದಿ ಈಸ್ಟ್) ಸಂಸ್ಥೆಯನ್ನು ಸ್ಥಾಪಿಸಿದ್ದರು. ಬಾಲಕ ಜೆ.ಕೃಷ್ಣಮೂರ್ತಿಯವರನ್ನು ಆ ಸಂಸ್ಥೆಯ ಮುಂದಿನ ಪ್ರವಾದಿಯೆಂದು, ಜೆ.ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ಆ ಸಂಸ್ಥೆಯನ್ನು ಸ್ಥಾಪಿಸಿಕೊಂಡಿದ್ದರು. ಹಿಂದೆ ಲೋಕದಲ್ಲಿ ಅವತರಿಸಿದ್ದ ಶ್ರೀಕೃಷ್ಣ, ಏಸು, ಮಹಮ್ಮದ್ ಮುಂತಾದ ಪ್ರವಾದಿಗಳನ್ನು ಜನತೆ ಹೆಚ್ಚು ಕಾಲ ತಮ್ಮ ಮಧ್ಯೆ ಬಾಳಗೊಡದೆ ಹೋದರು. ಯಾವಾಗಾದರೊಮ್ಮೆ ಪ್ರವಾದಿ ಪುರುಷರು ಅವತರಿಸುವಾಗ ಪೂರ್ವ ದಿಕ್ಕಿನಲ್ಲೊಂದು ದಿವ್ಯ ನಕ್ಷತ್ರ ಕಾಣಿಸಿಕೊಳ್ಳುವುದು. ಏಸು ಹುಟ್ಟಿದಾಗ ಅಂತಹ ನಕ್ಷತ್ರ ಹುಟ್ಟಿದ್ದು, ಅದರ ಸಹಾಯದಿಂದ ಮೂರು ಜನ ಕುರುಬರು ಏಸು ಜನ್ಮ ತಾಳಿದ ಕೊಟ್ಟಿಗೆಗೆ ಬಂದು ದೇವರ ಮಗನಾಗಿ ಅವಿವಾಹಿತ ಕನ್ಯೆಯಲ್ಲಿ ಜನಿಸಿದ್ದ ಆ ಮಗುವನ್ನು ಜನರು ಪೂಜಿಸಿದರು. ಆಗ ಅಂತಹ ನಕ್ಷತ್ರವೊಂದು ಪೂರ್ವದಿಕ್ಕಿನಲ್ಲಿ ಕಾಣಿಸಿಕೊಂಡಿದೆ. ಆದ್ದರಿಂದ ಲೋಕ ಗುರುವಾದ ಪ್ರವಾದಿಯೊಬ್ಬನು ಇಷ್ಟರಲ್ಲಿ ಜನರ ಮಧ್ಯೆ ಕಾಣಿಸಿಕೊಳ್ಳುತ್ತಾನೆ. ಆ ಸಮಯದಲ್ಲಿ ಅವನನ್ನು ಸಾಧ್ಯವಾದಷ್ಟು ಹೆಚ್ಚು ಕಾಲ ನಮ್ಮ ಮಧ್ಯೆ ಉಳಿಸಿಕೊಂಡು ಆತನಿಂದ ಸಾಧ್ಯವಾಗುವಷ್ಟು ಪ್ರಯೋಜನ ಹೊಂದುವಂತೆ ಜನತೆಯನ್ನು ಸಿದ್ಧಗೊಳಿಸುವುದೇ ಈ ಸಂಸ್ಥೆಯ ಉದ್ದೇಶವೆಂದು ಹೇಳುತ್ತಿದ್ದರು. ಅಲ್ಲದೆ ಆಗಿಂದಾಗ್ಗೆ ಥಿಯೋಸೊಫಿಕಲ್ ಭವನದಲ್ಲಿ ನಡೆಯುತ್ತಿದ್ದ ಈ ಸಂಸ್ಥೆಯ ಸದಸ್ಯರ ಗುಪ್ತ ಸಭೆಗಳಲ್ಲಿ ಜೆ.ಕೃಷ್ಣಮೂರ್ತಿಯವರನ್ನು ಹೋಲುವ ಫೋಟೋವನ್ನು ಪೂಜಿಸುತ್ತಿದ್ದು, ಮುಂದೆ ಕಾಣಿಸಿಕೊಳ್ಳುವ ಮೈತ್ರೇಯ ಮಹರ್ಷಿಗಳ ಭಾವಚಿತ್ರವನ್ನು ನೋಡಿರುವುದಾಗಿ ಬಹಿರಂಗ ಪಡಿಸಬಾರದೆಂದು ಹೇಳುತ್ತಿದ್ದರು. ಮೈತ್ರೇಯ ಮಹರ್ಷಿಗಳ ಭಾವಚಿತ್ರವನ್ನು ನಾವು ನೋಡಿರುವೆವೆಂದು ಜನರಿಗೆ

ತಿಳಿಸಿದರೆ ಅವರಿಗೆ ಹೆಚ್ಚಿನ ನಂಬಿಕೆ ಉಂಟಾಗುವುದೆಂದು ವಾದಿಸಿದ ಹೆಚ್.ಕೆ.ವೀರಣ್ಣಗೌಡರನ್ನು 'ತಲಹರಟೆ' ಎಂದು ಗದರಿಸಿದರು. ಈ ರೀತಿಯ ನಡವಳಿಕೆಯಿಂದ ಬೇಸತ್ತ ಹೆಚ್.ಕೆ.ವೀರಣ್ಣಗೌಡರು ಥಿಯೋಸೊಫಿಕಲ್ ಸೊಸೈಟಿಯ ಸಂಬಂಧವನ್ನು ಕಡಿದು ಹೊರಬಂದರು. ಈ ಮಧ್ಯೆ ಚಿಕ್ಕ ವಯಸ್ಸಿನ ಜೆ.ಕೃಷ್ಣಮೂರ್ತಿಯವರ ಮೇಲೆ ಅನೈತಿಕ ಹಾಗು ಅನೈಸರ್ಗಿಕ ಬೋಧೆ ನಡೆಸುತ್ತಿದ್ದಾರೆ ಎಂಬ ಕೃಷ್ಣಮೂರ್ತಿಯವರ ತಂದೆ ನಾರಾಯಣ ಅಯ್ಯನವರು ಕೋರ್ಟ್ ಹತ್ತಿದರು. ಸರ್.ಸಿ.ಪಿ.ರಾಮಸ್ವಾಮಿ ಅಯ್ಯರ್ ಅವರು ನಾರಾಯಣಯ್ಯನವರ ಪರ ವಕೀಲರಾಗಿ ಡಾ.ಬೆಸೆಂಟರ ಮತ್ತು ಅವರ ಅನುಯಾಯಿಗಳ ಬಗ್ಗೆ ಕೋರ್ಟಿನಲ್ಲಿ ಉಗ್ರವಾಗಿ ಟೀಕಿಸಿದ್ದರು. ಈ ಮೊಕದ್ದಮೆ ಕಡೆಗೆ ಲಂಡನ್ನಿನಲ್ಲಿ ಪ್ರೀವೀ ಕೌನ್ಸಿಲ್‌ವರೆಗೂ ಹೋಗಿತ್ತು. ಅಷ್ಟರಲ್ಲಿ ಕೃಷ್ಣಮೂರ್ತಿಯವರಿಗೆ ಇಪ್ಪತ್ತೊಂದು ವರ್ಷ ತುಂಬಿದುದರಿಂದ ಅವರು ತಮ್ಮ ಸ್ವಯಿಚ್ಛೆಯಂತೆ ಇರಲು ಸ್ವತಂತ್ರರೆಂದು ಪ್ರೀವೀ ಕೌನ್ಸಿಲ್ ಆಫ್ ಇಂಡಿಯಾ ಎಂಬ ಕೋರ್ಟಿನಲ್ಲಿ ತೀರ್ಮಾನವಾಯಿತು. ಈ ಘಟನೆ ಅನಿಬೆಸೆಂಟರ ಮುನ್ನಡೆಗೆ ಅಡ್ಡಿಯನ್ನುಂಟು ಮಾಡಿತು. ಮುಂದೆ ಜೆ.ಕೃಷ್ಣಮೂರ್ತಿಯವರು 'ಸತ್ಯವು ಪಥವಿಲ್ಲದ ತಾಣ, ಹಾಗೂ ಮನುಷ್ಯನನ್ನು ಪೂರ್ಣವಾಗಿ ಯಾವ ಶರತ್ತುಗಳಿಲ್ಲದೆ ಬಿಡುಗಡೆ ಮಾಡುವುದೇ ನನ್ನ ಕಾಳಜಿ' ಎಂದು ೧೯೨೯ರಲ್ಲಿ ಘೋಷಿಸಿದ್ದರು. ಅಲ್ಲದೆ ತಮ್ಮ ಭೋಧನೆಯಲ್ಲಿ ಇದಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ. ಸತ್ಯದ ಅರಿವು ಆಯಾ ವ್ಯಕ್ತಿಯದು ಮಾತ್ರ. ಸಂಘಟಿತ ಧರ್ಮಗಳಾಗಲಿ, ಗುರು ಮಠಗಳಾಗಲಿ, ಧರ್ಮ ಗ್ರಂಥಗಳಾಗಲಿ, ಪೂಜಾ ವಿಧಿ ವಿಧಾನಗಳಾಗಲಿ ಇತರ ಯಾವುದಾದರೂ ಮನುಷ್ಯನನ್ನು ಸತ್ಯದೆಡೆಗೆ ಕರೆದೊಯ್ಯಲಾರರು'[೧೭] ಎಂದು ಖಡಾ ಖಂಡಿತವಾಗಿ ಸಾರಿದ್ದಾರೆ. ಈ ರೀತಿಯ ವೈಚಾರಿಕವಾದವು ವೀರಣ್ಣಗೌಡರ ಮೇಲೆ ಪ್ರಭಾವ ಬೀರದೆ ಇರಲಿಲ್ಲ.

ಅಲ್ಲದೆ ಅನಿಬೆಸೆಂಟರು ಗಾಂಧೀಜಿಯವರ ಅಸಹಕಾರ ಹಾಗು ಸತ್ಯಾಗ್ರಹ ಚಳುವಳಿಯನ್ನು ಟೀಕಿಸಿದರು. ಮತ್ತು ಅನಿಬೆಸೆಂಟರ ಕೆಲವು ನಿಲುವುಗಳು ಅನೇಕ ಮಂದಿ ಥಿಯೋಸಫಿಕಲ್ ಸೊಸೈಟಿ ಸದಸ್ಯರಿಗೆ ಸರಿ ಕಾಣದ ಕಾರಣ ಅನಿಬೆಸೆಂಟರನ್ನು ತೊರೆದು ಗಾಂಧೀ ನಾಯಕತ್ವದ ಅಸಹಕಾರ ಚಳವಳಿಯಲ್ಲಿ ಧುಮುಕಿದರು. ಇದೇ ರೀತಿ ವೀರಣ್ಣಗೌಡರು ಮೊದ ಮೊದಲು ಅನಿಬೆಸೆಂಟರ ಪ್ರಭಾವಕ್ಕೊಳಗಾಗಿ ಗಾಂಧೀಜಿಯವರ ಬಗ್ಗೆ ಅಷ್ಟೇನು ಒಲವು ಬೆಳೆಸಿಕೊಂಡಿರಲಿಲ್ಲ. ಆದರೆ ಎತಿರಾಜಲು ನಾಯ್ಡು ಎಂಬ ಉಪಾಧ್ಯಾಯರೊಡನೆ ಒಮ್ಮೆ ಈ ವಿಚಾರವಾಗಿ ಚರ್ಚೆ ಮಾಡುತ್ತ ಅವರ ವಾದಗಳನ್ನು ಕೇಳಿ ತನ್ನ ಮನಸ್ಸು ಮಹಾತ್ಮಾಗಾಂಧಿಯವರ ಖಚಾರಗಳತ್ತ ವಾಲಿದರು.

'ಗಾಂಧೀಜಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದ ನಂತರ ಸ್ವರಾಜ್ಯ ಪಡೆಯುವ ಬಗ್ಗೆ ಆಗ ಹಿರಿಯ ಮುಖಂಡರಾಗಿದ್ದವರೊಡನೆ ಚರ್ಚಿಸಿದರು. ಭಾರತಾದ್ಯಂತ ಪ್ರವಾಸ ಕೈಗೊಂಡರು. ಸ್ವರಾಜ್ಯ ಪಡೆಯಲು ಅತಿ ಮುಖ್ಯವಾದ ಸಂಘಟನೆಗೆ ಪ್ರಯತ್ನಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಕಾಂಗ್ರೆಸ್ ಸಂಸ್ಥೆಗೆ

---

[೧೭] ಸಂಯೋಜಕರು: ಎಸ್.ಕೆ.ದೇಸಾಯಿ. ನಿಮಗೆ ನೀವೇ ಬೆಳಕು(ಜೆ.ಕೃಷ್ಣಮೂರ್ತಿಯವರ ಜೀವನ ಹಾಗೂ ಭೋಧನೆ ಪರಿಚಯ) ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ. ೧೯೯೮, ಪುಟ-೨೩

ಸೇರಿದವರು ಹೇಗೆ ನಡೆದುಕೊಳ್ಳಬೇಕು? ಎಂಬುದನ್ನು ವಿವರಿಸುತ್ತಾ, ರಚನಾತ್ಮಕ ಕಾರ್ಯದಲ್ಲಿ ತೊಡಗಿ ದೇಶಸೇವಾ ಮನೋಭಾವ ಹೊಂದಿದ್ದು ಖಾದಿಧಾರಿಗಳಾಗಿ ವೈಯಕ್ತಿಕ ಜೀವನದಲ್ಲೂ ಪರಿಶುದ್ಧತೆಗೆ ವಿಶೇಷ ಗಮನ ಕೊಡಬೇಕೆಂದು ಗಾಂಧೀಜಿ ತಿಳಿಸಿದರು. ಆಗ ದೇಶಾದ್ಯಂತ ಲಕ್ಷಾಂತರ ಜನ ಗಾಂಧೀಜಿ ಪ್ರಭಾವಕ್ಕೆ ಒಳಗಾದರು. ಗಾಂಧೀಜಿ ತಿಳಿಸಿದ ಮಾರ್ಗದಲ್ಲಿ ನಡೆಯಲಾರಂಭಿಸಿದರು. ಹೀಗೆ ಮಹಾತ್ಮ ಗಾಂಧೀಜಿಯಿಂದ ಪ್ರಭಾವಿತರಾದವರಲ್ಲಿ ಶ್ರೀ ಹೆಚ್.ಕೆ.ವೀರಣ್ಣಗೌಡರು ಒಬ್ಬರು"[೧೮] ಇದರಿಂದಾಗಿ ಮುಂದೆ ಇರ್ವಿನ್ ನಾಲಾ ಚಳುವಳಿಯನ್ನು ಗಾಂಧೀಜಿಯವರ ಸತ್ಯ, ಅಹಿಂಸೆ ತತ್ವಗಳನ್ನು ಅನುಸರಿಸಿ, ಅವುಗಳ ಮಾರ್ಗದಲ್ಲಿ ಮುನ್ನಡೆಸಿದರು. ಹಾಗೇ ಸ್ವಾತಂತ್ರ್ಯ ಸಂಗ್ರಾಮದ ಪರ್ವ ಕಾಲದಲ್ಲಿ ತುರಂಗವಾಸವನ್ನು ಅನುಭವಿಸಿದರು. ಅಲ್ಲದೆ ಮೈಸೂರು ಜವಾಬ್ದಾರಿ ಸರ್ಕಾರ ಹೋರಾಟದಲ್ಲಿಯೂ ಗಾಂಧೀಜಿಯವರ ತತ್ವಗಳನ್ನನುಸರಿಸಿ ಅಹಿಂಸಾತ್ಮಕ ಹೋರಾಟ ಮಾಡಿದರು. ಸಂಪೂರ್ಣ ಖಾದಿಧಾರಿಯಾದರು. ಅಲ್ಲದೆ ಚರಕದಿಂದ ನೂಲು ತೆಗೆಯುವ ಕಾಯಕವನ್ನು ಮಾಡುತ್ತಿದ್ದರೆಂದು ವೀರಣ್ಣಗೌಡರ ಸಂಬಂಧಿಗಳು ವೀರಮಲ್ಲೇಶ್ ಮತ್ತು ಡಾ. ಹೆಚ್.ಕೆ.ಮರಿಯಪ್ಪನವರು ಸ್ಮರಿಸುತ್ತಾರೆ.

೧೯೧೦-೨೦ರ ದಶಕಗಳಲ್ಲಿ ಸ್ವಾತಂತ್ರ್ಯ ಹೋರಾಟದ ವಿದ್ಯಮಾನಗಳು ಯುವ ಮನಸ್ಸುಗಳ ಮೇಲೆ ಹೆಚ್ಚು ಪ್ರಭಾವ ಬೀರಿದವು. "ಸಾಹಿತ್ಯಿಕ ಪುನರುಜ್ಜೀವನ ಮತ್ತು ರಾಷ್ಟ್ರವಾದಿ ಚಳವಳಿಗಳೆರಡೂ ಈ ಎರಡು ದಶಕಗಳಲ್ಲಿ ಹೆಚ್ಚು ಸದೃಢಗೊಂಡವು ಎನ್ನಬೇಕು. ಆ ಕಾಲಮಾನದಲ್ಲೇ ಅಸಂಖ್ಯಾತವಾಗಿ ಸಾಹಿತ್ಯಿಕ ಸಂಘಗಳು ಸ್ಥಾಪನೆಗೊಂಡವು."[೧೯] ರಾಷ್ಟ್ರೀಯ ಹೋರಾಟದ ಅಲೆಯಲ್ಲಿ ಜನರನ್ನು ಮಿಳಿತಗೊಳಿಸಲು ಗಣೇಶ ಉತ್ಸವ ಮತ್ತು ಶಿವಾಜಿ ಜಯಂತಿಯಂತಹ ಸಾಂಸ್ಕೃತಿಕ ಉತ್ಸವಗಳನ್ನು ಬಾಲಗಂಗಾಧರ ತಿಲಕರು ಪ್ರಚಾರಗೊಳಿಸಿದರು. ಹಾಗಾಗಿ ತಿಲಕರ ಪ್ರಭಾವ ಯುವ ಜನತೆಯ ಮೇಲೆ ಬಹಳಷ್ಟು ಬೀರಿತು. ಈ ಹಿನ್ನೆಲೆಯಲ್ಲಿ ತಿಲಕರ ಬಗ್ಗೆ ಪತ್ರಿಕೆಗಳ ಮೂಲಕ ತಿಳಿದುಕೊಂಡಿದ್ದ ವೀರಣ್ಣಗೌಡರು ತಮ್ಮ ತಂದೆಯ ಸಂಗ್ರಹದಲ್ಲಿದ್ದ 'ತಿಲಕರ ಖಟ್ಲೆ' ಎಂಬ ಪುಸ್ತಕವನ್ನು ಓದಿ ಹೆಚ್ಚು ಪ್ರಭಾವಿತರಾದರು. ಈ ಪುಸ್ತಕವು ಬಾಲಗಂಗಾಧರ ತಿಲಕರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ ಅವರನ್ನು ೬ ವರ್ಷಗಳ ಕಾಲ ಸಮುದ್ರದಿಂದಾಚೆ ಮಾಂಡಲೆಯಲ್ಲಿ ದೇಶಾಂತರ ಶಿಕ್ಷೆಗೆ ಗುರಿ ಮಾಡಿದ್ದು, ತಿಲಕರಿಗೆ ಶಿಕ್ಷೆ ವಿಧಿಸುವ ಮುನ್ನ ಆಂಗ್ಲ ಸರ್ಕಾರದವರು ಅವರನ್ನು ವಿಚಾರಣೆಗೆ ಗುರಿಮಾಡಿದ್ದ ವಿಷಯ ಕುರಿತು ಆ ವಿಚಾರಣೆಯ ವಿವರಗಳನ್ನೊಳಗೊಂಡುದುದಾಗಿತ್ತು. ಇದನ್ನು ಓದಿದುದರ ಪರಿಣಾಮವಾಗಿ ವೀರಣ್ಣಗೌಡರು ಮುಂದಿನ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಚಳವಳಿಯಲ್ಲಿ ಭಾಗವಹಿಸಲು ಸ್ಫೂರ್ತಿ ನೀಡಿತು. 'ಸ್ವರಾಜ್ಯ ನನ್ನ ಜನ್ಮಸಿದ್ಧವಾದ ಹಕ್ಕು' ಎಂದು ಗುಡುಗಿದ ಬಾಲ ಗಂಗಾಧರ ತಿಲಕರು ಕೇವಲ ಮಹಾರಾಷ್ಟ್ರದ ನಾಯಕರು ಮಾತ್ರವೇ ಅಲ್ಲದೆ ಇಡೀ ದೇಶದ ಮಹಾನಾಯಕರ ಪಂಕ್ತಿಯಲ್ಲಿ ಅಗ್ರಗಣ್ಯರಾಗಿದ್ದರು.

---

[೧೮] ಚಿತ್ರಗುಪ್ತ ಸ್ಮರಣೆ. ಹ.ಕ.ರಾಜೇಗೌಡ.೧೯೯೪. ಪುಟ -೮೫

[೧೯] ಕರ್ನಾಟಕ ಚರಿತ್ರೆ ಸಂ -೭, ಕನ್ನಡ ವಿ.ವಿ. ಪುಟ-೭೧

ವೀರಣ್ಣಗೌಡರು ಬಾಲ್ಯದಲ್ಲಿ ತಂದೆ ಹೇಳಿದ ರೀತಿ ಪತ್ರಿಕೆಗಳ ಲೇಖನಗಳನ್ನು ಪ್ರತಿಮಾಡಿದುದರಿಂದ ಆಗ ದೇಶದಲ್ಲಿ ನಡೆಯುತ್ತಿದ್ದ ರಾಜಕೀಯ ಆಂದೋಲನ ಇವರನ್ನು ಆಕರ್ಷಿಸಿತ್ತು. ಈ ಹಿನ್ನೆಲೆಯಲ್ಲಿ ಮಂದಗಾಮಿ ನಾಯಕರಾಗಿದ್ದ ಗೋಖಲೆಯವರ ಭಾಷಣಗಳನ್ನು ಮತ್ತು ಅವರ ಕಾರ್ಯ ಚಟುವಟಿಕೆಗಳ ಬಗ್ಗೆ ಪತ್ರಿಕೆಗಳಲ್ಲಿ ಓದುವುದರ ಮೂಲಕ ಅವರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದರು. ಹೀಗಾಗಿ ವೀರಣ್ಣಗೌಡರು ಗೋಖಲೆಯವರನ್ನು ತಮ್ಮ ಆದರ್ಶದ ವ್ಯಕ್ತಿಯಾಗಿಸಿಕೊಂಡಿದ್ದಲ್ಲದೆ ಪೂಜ್ಯಭಾವನೆಯಿಂದ ಕಾಣುತ್ತಿದ್ದರು.

ದೇಶದ ಪ್ರಗತಿಗೆ ಶಿಕ್ಷಣ ಎಷ್ಟು ಅವಶ್ಯಕ ಎಂಬುದನ್ನು ಮನಗಂಡಿದ್ದ ಗೋಖಲೆಯವರು "ಭಾರತದಲ್ಲಿ ಕಡ್ಡಾಯವಾಗಿ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರಬೇಕೆಂದು ಸತತವಾಗಿ ಆಂದೋಲನ ನಡೆಸಿದರು. ಅಲ್ಲದೆ ಭಾರತ ಮುನ್ನಡೆಯ ಬೇಕಾದರೆ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳಲ್ಲಿ ಪರಿಪೂರ್ಣ ಜ್ಞಾನ ಪಡೆದು ಬುದ್ಧಿಪೂರ್ವಕವಾಗಿ ದೇಶಕ್ಕಾಗಿ ತ್ಯಾಗ ಮಾಡುವಂತಹ ಹಾಗು 'ದೇಶ ಸೇವೆಯೇ ಈಶ ಸೇವೆ'ಯೆಂದು ಬಗೆದು ದುಡಿಯುವಂತಹ ಯುವಕರ ತಂಡ ತಯಾರಾಗಬೇಕು ಎಂದು ಗೋಖಲೆ ಭಾವಿಸಿದ್ದರು. ೧೯೧೪ ರ ಗೋಖಲೆಯ ಕಾಲಾವಧಿ ಮುಗಿಯುವ ಹಂತಕ್ಕೆ ಗಾಂಧೀಜಿ ಅವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಮರಳಿದರು. ಹಾಗಾಗಿ ಸಹಜವಾಗಿ ರಾಜಕೀಯ ಧುರೀಣ ಮತ್ತು ಪ್ರಾಜ್ಞರಾದ ಗೋಖಲೆಯವರ ಪ್ರಭಾವ ದೇಶದ ಯುವಕರ ಮೇಲೆ ಬಿದ್ದಿತು."[೨೦] ಈ ಹಿನ್ನೆಲೆಯಲ್ಲಿ ಇಂಪೀರಿಯಲ್ ಕೌನ್ಸಿಲ್‌ನಲ್ಲಿ ೧೯೦೧ ರಿಂದ ೧೯೧೫ರವರೆಗೆ ಅತ್ಯುತ್ತಮ ಸಂಸದೀಯ ಪಟುವೆಂದು ಹೆಸರಾದ ಗೋಖಲೆಯವರು ಮಾಡಿದ ಭಾಷಣಗಳೆಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಈ ಭಾಷಣಗಳನ್ನು ಪತ್ರಿಕೆಗಳಲ್ಲಿ ಓದುತ್ತಿದ್ದ ಹೆಚ್.ಕೆ.ವೀರಣ್ಣಗೌಡರ ಮೇಲೆ ಗೋಖಲೆಯವರ ವಿಚಾರಗಳು ಹೆಚ್ಚು ಪ್ರಭಾವ ಬೀರಿದವೆಂದು ಹೇಳಬಹುದು.

ಚನ್ನಪಟ್ಟಣ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಥಿಯೋಸಫಿಸ್ಟರಾಗಿದ್ದ ಕೆ.ಎಚ್.ರಾಮಯ್ಯನವರು ವೀರಣ್ಣಗೌಡರು ಪತ್ರಿಕೆ ಪ್ರಾರಂಭಿಸುವ ವಿಷಯದಲ್ಲಿ ಜಾತ್ಯತೀತ ಮನೋಭಾವನೆಯೊಂದಿಗೆ ಪತ್ರಿಕಾ ಚಟುವಟಿಕೆ ನಡೆಸಬೇಕೆಂದು ಮಾರ್ಗದರ್ಶನ ನೀಡಿದರು. ಅವರ ಮಾರ್ಗದರ್ಶನ ವೀರಣ್ಣಗೌಡರ ಮೇಲೆ ಹೆಚ್ಚು ಪ್ರಭಾವ ಬೀರಿತು. ಹಾಗೆಯೇ ಕಾಲೇಜು ವ್ಯಾಸಂಗದ ಸಂದರ್ಭದಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದ ವೀರಣ್ಣಗೌಡರ ಮೇಲೆ ಹೊಸಪೇಟೆಯ ಸ್ವಾತಂತ್ರ್ಯ ಹೋರಾಟಗಾರರಾದ ಸಿ.ಹನುಮಂತಗೌಡರ ಮತ್ತು ಸ್ವಾತಂತ್ರ್ಯ ಹೋರಾಟದ ಬಗೆಗೆ ರಾಷ್ಟ್ರೀಯ ಭಾವನೆಯನ್ನುಂಟು ಮಾಡುವ ಮುದವೀಡು ಕೃಷ್ಣರಾಯರು ಮಾಡಿದ ಭಾಷಣಗಳು ವೀರಣ್ಣಗೌಡರ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನುಂಟುಮಾಡಿದವು. ಹೀಗೆ ಮುಂದೆ ನಿರಂತರವಾಗಿ ರಾಷ್ಟ್ರೀಯ ನಾಯಕರ ಭಾಷಣಗಳು ವೀರಣ್ಣಗೌಡರನ್ನು ಸಂಪೂರ್ಣವಾಗಿ ಸ್ವಾತಂತ್ರ್ಯ ಸಂಗ್ರಾಮದತ್ತ ಸೆಳೆದವು. ಇದೇ ರೀತಿ ಪ್ರಭಾವಿತರಾದ ಅನೇಕ ಮಂದಿ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸಿದರು. ಸ್ವತಂತ್ರ್ಯ

---

[೨೦] ಭಾರತದ ಸ್ವಾತಂತ್ರ್ಯ ಹೋರಾಟದ ಮೇರು ಕೃತಿಗಳು.ಆರ್.ಪ್ರಾಣೇಶರಾವ್.೧೯೯೯. ಪುಟ –೨೦,೩೦,೩೧

ಭಾರತದ ಹಂಬಲ ಮನದಲ್ಲಿ ಮೂಡಿ ಅದಕ್ಕಾಗಿ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಅತ್ಯಂತ ಅಗತ್ಯ ಮತ್ತು ತುರ್ತಿನ ಕೆಲಸ ಎಂದು ಅರ್ಥಮಾಡಿಕೊಂಡಿದ್ದರು. ವೀರಣ್ಣಗೌಡರೂ ಇದರಿಂದ ಹೊರತಾಗಿರಲಿಲ್ಲ, ಹಾಗಾಗಿ ಕಾಲೇಜು ತ್ಯಜಿಸಿ ಹೊರಬಂದು ರಾಷ್ಟ್ರೀಯ ಅಸಹಕಾರ ಚಳುವಳಿಯಲ್ಲಿ ಧುಮುಕಿದರು. ಹೋರಾಟವೇ ಅವರ ಕಾಲೇಜಾಯಿತು. ಭಾರತದ ಸ್ವಾತಂತ್ರ್ಯ ಗಳಿಕೆಗೆ ಕ್ರಾಂತಿಕಾರಿಗಳ ದಾರಿ ಒಂದಾದರೆ ರಾಜಕೀಯ ಪಕ್ಷಗಳ ರಾಜಕಾರಿಣಿಗಳ ಸಮಾಜ ಸುಧಾರಕರ ದೇಶಹಿತ ಚಿಂತಕರ, ಮುತ್ಸದ್ದಿಗಳ ದಾರಿ ಮತ್ತೊಂದಾಯಿತು. ಎಲ್ಲವೂ ಎಲ್ಲರದು ಒಂದೇ ಗುರಿ ಸ್ವಾತಂತ್ರ್ಯ ಪ್ರಾಪ್ತಿ. ಚಳುವಳಿಗಳಲ್ಲಿ ನೇರವಾಗಿ ಹೋರಾಡಿದವರು ಕೆಲವರಾದರೆ ಚಳುವಳಿಗಳಿಂದ ಹೊರಗಿದ್ದು ಹೋರಾಡಿದವರ ಸಂಖ್ಯೆ ಅಪಾರ.

ಈ ಹಿನ್ನೆಲೆಯಲ್ಲಿ ವೀರಣ್ಣಗೌಡರು ೧೯೨೪ರಲ್ಲಿ ತಮ್ಮ ಮಿತ್ರರು ವಿ.ವೆಂಕಟಪ್ಪ, ವಿ.ಎಲ್.ರಾಮಯ್ಯ ಮುಂತಾದವರನ್ನು ಕೂಡಿಕೊಂಡು ಬೆಳಗಾಂ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ಬಂದರು. ಆ ವೇಳೆಗಾಗಲೇ ಗಾಂಧೀಜಿಯವರ ಪ್ರಭಾವಕ್ಕೆ ಸಿಲುಕಿದ್ದ ವೀರಣ್ಣಗೌಡರು ಅಧಿವೇಶನಕ್ಕೆ ಹೋಗುವ ಮೊದಲು ವೀರಣ್ಣಗೌಡರು ಮಾಡಿಕೊಂಡ ತಯಾರಿಯನ್ನು ಅವರ ಮಾತುಗಳಲ್ಲಿಯೇ ತಿಳಿಯೋಣ; "ಬೆಳಗಾಂನಲ್ಲಿ ಮಹಾತ್ಮಗಾಂಧಿಯವರ ಅಧ್ಯಕ್ಷತೆಯಲ್ಲಿ ೧೯೨೪ನೇ ಡಿಸೆಂಬರ್ ತಿಂಗಳ ಅಂತ್ಯ ಮತ್ತು ಇಪ್ಪತ್ತೈದನೇ ಜನವರಿ ಮೊದಲ ವಾರದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನಕ್ಕೆ ಹೋಗುವ ಮೊದಲು ನಾನು ಮೈಸೂರಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಅಂದರೆ ೧೯೨೧-೨೨ನೇ ಸಾಲಿನಲ್ಲಿ ನಾಲ್ಕು ಆಣೆಯ ಕಾಂಗ್ರೆಸ್ ಸದಸ್ಯನಾದೆ. ಆಗ ಅರ್ಧಂಬರ್ಧ ಖಾದಿ ಬಟ್ಟೆ ತೊಡುತ್ತಿದ್ದೆ. ಬೆಳಗಾಂ ಅಧಿವೇಶನಕ್ಕೆ ಹೋಗುವ ಮುನ್ನ ನನ್ನಲ್ಲಿದ್ದ ಪರದೇಸಿ ಹಾಗೂ ಮಿಲ್ ಬಟ್ಟೆಗಳನ್ನೆಲ್ಲಾ ಬೆಂಗಳೂರು ಒಕ್ಕಲಿಗರ ಸಂಘದ ವಿದ್ಯಾರ್ಥಿನಿಲಯದ ಹುಡುಗರು ಕೆಲವರಿಗೆ ಕೊಟ್ಟುಬಿಟ್ಟೆ. ಆ ಕಾಲದಲ್ಲಿ ಸಾಮಾನ್ಯವಾಗಿ ನಾನು ಸೂಟ್ ಹಾಕಿಕೊಳ್ಳುತ್ತಿದ್ದೆ, ನೆಕ್‌ಟೈ, ಹ್ಯಾಟ್ ಮುಂತಾದ ಪಾಶ್ಚಿಮಾತ್ಯ ಉಡುಪುಗಳು ನನ್ನಲ್ಲಿ ಸಾಕಷ್ಟಿದ್ದುವು. ಓವರ್ ಕೋಟು, ಮಳೆ ಕೋಟು ಮುಂತಾದವುಗಳೂ ಇದ್ದುವು. ಇವೆಲ್ಲವನ್ನೂ ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಕೊಟ್ಟುಬಿಟ್ಟು ಒಂದು ಜತೆ ಖಾದಿ ಪಂಚೆ, ಒಂದು ಜೊತೆ ಬನಿಯನ್, ಒಂದು ಜೊತೆ ಟವಲ್ ಕೊಂಡುಕೊಂಡು ಬೆಳಗಾಂಗೆ ಹೋದೆ"[೨೧] ಈ ರೀತಿ ಮೊದಲ ಬಾರಿಗೆ ಸಂಪೂರ್ಣ ಖಾದಿಧಾರಿಗಳಾದ ವೀರಣ್ಣಗೌಡರು ತಮ್ಮ ಜೀವಿತದವರೆಗೂ ಖಾದಿಧಾರಿಗಳಾಗಿ ಉಳಿದರು.

ಬೆಳಗಾಂ ಅಧಿವೇಶನದಲ್ಲಿ ಹಲವಾರು ಕಾಂಗ್ರೆಸ್ ಧುರೀಣರು ಮಾಡಿದ ಭಾಷಣಗಳು ವೀರಣ್ಣಗೌಡರ ಮೇಲೆ ಬಹಳಷ್ಟು ಪ್ರಭಾವ ಬೀರಿದವು. ಅದರಲ್ಲೂ ಸರೋಜಿನಿ ದೇವಿಯವರ ಮತ್ತು ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣೆಯ ಬಗೆಗಿನ ಭಾಷಣಗಳು ಹೆಚ್.ಕೆ.ವೀರಣ್ಣಗೌಡರ ಮನಸ್ಸಿನಲ್ಲಿ ದಲಿತರ ಬಗ್ಗೆ ಹೆಚ್ಚು ಮೃದುಭಾವನೆ ತಳೆಯಲು ಮತ್ತು ಅಸ್ಪೃಶ್ಯತಾ ನಿವಾರಣೆಗೆ

---

[೨೧] ಬದುಕು -ಮೆಲುಕು, ಪು-೧೪೯. ವೀರಣ್ಣಗೌಡ ಪ್ರತಿಷ್ಠಾನ. ಬೆಂಗಳೂರು. ೨೦೦೬

ಬದ್ಧರಾಗಿರುವಂತೆ ಪ್ರೇರೇಪಿಸಿದವೆಂದು ಹೇಳಬಹುದು. ಮಹಾತ್ಮ ಗಾಂಧೀಜಿ ಮತ್ತು ಅನಿಬೆಸೆಂಟರು ರಾಜಕೀಯವಾಗಿ ಎಷ್ಟೇ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರೂ ಪರಸ್ಪರ ಅವರಿಬ್ಬರ ಮಧ್ಯೆ ಇದ್ದ ಸೌಹಾರ್ದ ಗೌರವ ವಿಶ್ವಾಸಗಳು ವೀರಣ್ಣಗೌಡರ ಸ್ವಭಾವಕ್ಕೆ ಒಂದು ತಿರುವನ್ನು ನೀಡಿದವೆಂದು ಹೇಳಬಹುದು. ಇದರ ಪ್ರಭಾವದಿಂದ ವೀರಣ್ಣಗೌಡರು ತಮ್ಮ ರಾಜಕೀಯ ಜೀವನದಲ್ಲಿ ಹಲವಾರು ಸಂಗಡಿಗರೊಂದಿಗೆ ತತ್ವ ಆದರ್ಶಗಳಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರೂ ವೈಯಕ್ತಿಕವಾಗಿ ಅವರನ್ನು ಗೌರವ ವಿಶ್ವಾಸದಿಂದ ಕಾಣುತ್ತಿದ್ದರು ಎಂಬುದಕ್ಕೆ ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ತಮ್ಮ ರಾಜಕೀಯ ಸಂಬಂಧಿಗಳ ಬಗ್ಗೆ ವಿವರಿಸಿರುವ ಸಂಗತಿಗಳು ಹೆಚ್ಚು ಬೆಳಕು ಚೆಲ್ಲುತ್ತವೆ.

'ಶ್ರೀ ಪಂಡಿತ ತಾರಾನಾಥರು ಅತ್ಯಂತ ಪ್ರಭಾವಶಾಲಿಯಾದ ವ್ಯಕ್ತಿ. ಅವರು ಒಳ್ಳೆ ಸಂಗೀತಗಾರರು, ಖ್ಯಾತರಾದ ಆಯುರ್ವೇದ ಪಂಡಿತರು. ಅವರ ಭಾಷಣವೆಂದರೆ ಅಮೃತವನ್ನು ಸವಿದಂತಾಗುತ್ತಿತ್ತು. ಅವರಿಗೆ ತಿಳಿಯದ ವಿಷಯವೇ ಇರಲಿಲ್ಲ. ಮೊದಲಸಾರಿ ನಾನವರನ್ನು ನೋಡಿದ್ದು ಮೈಸೂರು ರಂಗಾಚಾರ್ಲು ಭವನದಲ್ಲಿ ಕಿಕ್ಕಿರಿದು ಸೇರಿದ್ದ ಸಭೆಯಲ್ಲಿ ಮಾತಾಡಿದಾಗ...ಅವರ ಭಾಷಣದಿಂದ ಮುಗ್ಧರಾಗಿ ನಾವು ದವಾಖಾನೆಗೆ ಹೋಗಬೇಕಾಗಿ ಬಂದಲ್ಲಿ ಬೆಂಗಳೂರಿನ ಅವರ ಮನೆಗೇ ಹೋಗುತ್ತಿದ್ದೆವು." ಎಂಬುದು ವೀರಣ್ಣಗೌಡರಿಗೆ ಪಂಡಿತ ತಾರಾನಾಥರ ಬಗ್ಗೆ ಇದ್ದ ಅನುಭವ. [೨೨]

ನಾಡಿನಾದ್ಯಂತ ಕಾಂಗ್ರೆಸ್ ಪ್ರಚಾರ ಸಭೆಗಳನ್ನು ನಡೆಸುವುದಕ್ಕೆ ಹೆಚ್.ಕೆ.ವೀರಣ್ಣಗೌಡರು ಹೆಚ್.ಸಿ.ದಾಸಪ್ಪರೊಂದಿಗೆ ಪ್ರವಾಸ ಕೈಗೊಂಡಿದ್ದ ಸಂದರ್ಭದಲ್ಲಿ ಹೆಚ್.ಸಿ.ದಾಸಪ್ಪನವರ ವಿನಯ ಸ್ವಭಾವಕ್ಕೆ ಹೆಚ್ಚು ಪ್ರಭಾವಕ್ಕೊಳಗಾದರು. ಅಲ್ಲದೆ ಹೆಚ್.ಕೆ.ವೀರಣ್ಣಗೌಡರ ಮುಂಗೋಪದ ಪರಿಣಾಮದಿಂದ ಜನರಿಗೆ ನೋವಾಗುವ ಸಂದರ್ಭಗಳು ಎದುರಾದಾಗ ದಾಸಪ್ಪನವರು 'ವೀರಣ್ಣಗೌಡ (You may be firm but not rude) ನೀನು ಖಂಡಿತವಾಗಿರಬಹುದು, ಆದರೆ ಬಹಳ ಒರಟಾಗಿರಬಾರದು' ಎಂದು ಹೇಳಿದ ಮಾತನ್ನು ವೀರಣ್ಣಗೌಡರು ತಮ್ಮ ಜೀವಾವಧಿ ಮರೆಯುವಂತಾಗಲಿಲ್ಲ ಮತ್ತು 'ದಾಸಪ್ಪನವರು ಹೇಳಿದ ಬುದ್ಧಿವಾದದಿಂದ ಅವರನ್ನು ನನ್ನ ಗುರುಗಳೆಂದು ನಾನು ಭಾವಿಸಿದ್ದೇನೆ'ಎಂದು ವೀರಣ್ಣಗೌಡರೇ ಹೇಳಿರುವುದರಿಂದ ದಾಸಪ್ಪನವರ ಪ್ರಭಾವಕ್ಕೆ ಗೌಡರು ಒಳಗಾಗಿದ್ದರು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಸ್ವಾತಂತ್ರ್ಯ ಭಾರತದ ಮೊಟ್ಟಮೊದಲ ಪ್ರಧಾನಿ ಪಂಡಿತ್ ಜವಹರಲಾಲ ನೆಹರು ಅವರು ಭಾರತದ ದೇಶೀಯ ಸಂಸ್ಥಾನಗಳ ಅಧ್ಯಕ್ಷರಾಗಿದ್ದ ಸಮಯದಲ್ಲಿ ವೀರಣ್ಣಗೌಡರಿಗೆ ನೆಹರೂರವರ ನೇರ ಪರಿಚಯವಾಯಿತು. Indian State People's Conference (ದೇಶೀಯ ಸಂಸ್ಥಾನ ಪ್ರಜೆಗಳ ಸಮ್ಮೇಳನ) ನೇಮಿಸಿದ ಸಂಸ್ಥೆಯಲ್ಲಿ ವೀರಣ್ಣಗೌಡರು ಸ್ಟ್ಯಾಂಡಿಂಗ್ ಕಮಿಟಿ ಸದಸ್ಯರಾಗಿದ್ದರು. ಒಮ್ಮೆ ಹಳೆ ದೆಹಲಿಯಲ್ಲಿ ಸೇರಿದ್ದ ಭಾರತೀಯ ದೇಶೀಯ ಸಂಸ್ಥಾನಗಳ ಪ್ರಜೆಗಳ ಅಧಿವೇಶನದಲ್ಲಿ ನೆಹರು ಅವರು ಸಭಿಕರನ್ನುದ್ದೇಶೀಸಿ ಮಾತನಾಡಿದ ನಂತರ ದೇಶೀಯ ಸಂಸ್ಥಾನಗಳ ಪ್ರತಿನಿಧಿಗಳು ತಮ್ಮ

---

[೨೨] ಬದುಕು-ಮೆಲುಕು. ಪು-೨೨೭

ಸಂಸ್ಥಾನದಲ್ಲಿ ರಾಜಕೀಯವಾಗಿ ಸ್ವಾತಂತ್ರ್ಯ ಪಡೆಯಲು ಕೈಗೊಂಡಿರುವ ಕಾರ್ಯ ಚಟುವಟಿಕೆಗಳ ಬಗ್ಗೆ ವಿವರಿಸುವಂತೆ ಹೇಳಿದರು. ಎಲ್ಲಾ ಸಂಸ್ಥಾನದ ಪ್ರತಿನಿಧಿಗಳಂತೆ ವೀರಣ್ಣಗೌಡರು ತಮ್ಮ ಸರದಿ ಬಂದಾಗ 'ಮೈಸೂರು ಕಾಂಗ್ರೆಸ್ ಸತ್ಯಾಗ್ರಹ ಹೂಡಲು ತುದಿಗಾಲಿನಲ್ಲಿ ಸಿದ್ದವಾಗಿದೆ. ಕೇಂದ್ರ ನಾಯಕರೇ ತಡೆಯುತ್ತಿರುವುದರಿಂದ ಸುಮ್ಮನಿದ್ದಾರೆ. ಕೇಂದ್ರದ ಅನುಮತಿ ಸಿಕ್ಕ ಕೂಡಲೆ ನಾವು ಯಾವುದಕ್ಕೂ ಸಿದ್ಧರಾಗುತ್ತೇವೆ'ಎಂದು ಹೇಳಿದರು. ಇದರಿಂದ ನೆಹರೂರವರು ಕಸಿವಿಸಿಗೊಂಡರೂ ನಂತರ ವೀರಣ್ಣಗೌಡರ ಉತ್ಸುಕತೆಯನ್ನು ಕಂಡು ಸುಮ್ಮನಾದರು. ಹೀಗೆ ಪಂಡಿತ ಜವಹರಲಾಲ ನೆಹರೂ ಅವರ ನೇರ ಪರಿಚಯವಿದ್ದ ಗೌಡರು ಅವರಿಂದ ಸ್ವಾತಂತ್ರ್ಯ ಆಂದೋಳನ ಹಾಗು ಮುಂದಿನ ದಿನಗಳ ರಾಜ್ಯಾಡಳಿತಕ್ಕೆ ಸಂಬಂಧಿಸಿದಂತೆ ಅನೇಕ ಸಲಹೆ ಸೂಚನೆ ಪಡೆಯುತ್ತಿದ್ದರು. ಮೈಸೂರು ಕಾಂಗ್ರೆಸ್ ವಿಚಾರವಾಗಿ ಹೈಕಮಾಂಡ್ ಆದ ನೆಹರು ಅವರನ್ನು ಭೇಟಿ ಮಾಡಬೇಕಾದ ಪ್ರಸಂಗ ವೀರಣ್ಣಗೌಡರಿಗೆ ಆಗಾಗ ಒದಗುತ್ತಿತ್ತು. ಸಮಾಜವಾದದ ಬಗ್ಗೆ ಒಲವಿದ್ದ ನೆಹರು ಅವರು ಭಾರತದ ಮೊಟ್ಟಮೊದಲ ಪ್ರಧಾನಿಯಾಗಿ ಭಾರತವನ್ನು ಮುಂದುವರೆದ ರಾಷ್ಟ್ರಗಳ ಸಾಲಿನಲ್ಲಿ ಕೊಂಡೊಯ್ಯುಬೇಕೆಂಬ ಉದ್ದೇಶವನ್ನು ಹೊಂದಿದ್ದರು. ಹಾಗಾಗಿ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆಗೆ ಮೊದಲ ಆದ್ಯತೆ ನೀಡಿದ್ದರು. ನೆಹರು ಅವರ ಕಾರ್ಯವೈಖರಿ, ಗತ್ತು ಗಾಂಭೀರ್ಯ ಮತ್ತು ಅವರ ಸಿದ್ಧಾಂತಗಳು ಸಹ ವೀರಣ್ಣಗೌಡರ ಮೇಲೆ ಪ್ರಭಾವ ಬೀರಿದ್ದವು. ನೆಹರೂರವರಂತೆ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರ ಪ್ರಾಮಾಣಿಕತೆ, ರಾಷ್ಟ್ರನಿಷ್ಠೆ, ಸೌಜನ್ಯ ಗುಣ, ಅವರಿಗಿದ್ದ ರೈತಪರ ಕಾಳಜಿ ಇವೆಲ್ಲ ವೀರಣ್ಣಗೌಡರ ಮೇಲೆ ಹೆಚ್ಚು ಪ್ರಭಾವ ಬೀರಿದ್ದವು.

ನಮ್ಮ ದೇಶದ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ರಾಜೇಂದ್ರ ಪ್ರಸಾದರು ಉನ್ನತ ನಾಯಕರಾಗಿ ಎಲ್ಲರಿಗೂ ಸ್ಫೂರ್ತಿದಾಯಕ ಚೇತನವಾಗಿದ್ದಾರೆ. ಅಂತಹ ಉನ್ನತ ವ್ಯಕ್ತಿತ್ವವನ್ನು ಹೊಂದಿದ್ದ ಆ ಮಹನೀಯರ ಪ್ರಭಾವಕ್ಕೊಳಗಾಗದವರು ಯಾರೂ ಇಲ್ಲವೆಂದೇ ಹೇಳಬೇಕು. ವೀರಣ್ಣಗೌಡರು ಇದಕ್ಕೆ ಹೊರತಾದವರಲ್ಲ. ಶ್ರೀ ರಾಜೇಂದ್ರ ಪ್ರಸಾದರರ ಬಗ್ಗೆ ವೀರಣ್ಣಗೌಡರಿಗೆ ಎಲ್ಲಿಲ್ಲದ ಗೌರವ. ಬಾಬು ರಾಜೇಂದ್ರ ಪ್ರಸಾದರು ರಾಷ್ಟ್ರಾಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಒಮ್ಮೆ ಶೃಂಗೇರಿ ಮಠಕ್ಕೆ ಭೇಟಿಕೊಟ್ಟರು. ಆಗ ಶ್ರೀ ಶ್ರೀ ಚಂದ್ರಶೇಖರ ಭಾರತಿ ಮಹಾಸ್ವಾಮಿಗಳವರು ಇವರ ಸ್ಥಾನದ ಬಗ್ಗೆ ಇತರರಿಂದ ವಿಚಾರಿಸಿ ತಿಳಿದು ಅಂತಹ ಉನ್ನತ ಸ್ಥಾನದವರನ್ನು ಚಿನ್ನದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಮಠಕ್ಕೆ ಕರೆತನ್ನಿರೆಂದು ಶ್ರೀ ರಾಜೇಂದ್ರ ಪ್ರಸಾದರು ಬೀಡುಬಿಟ್ಟಿದ್ದ ಪ್ರವಾಸಿ ಮಂದಿರಕ್ಕೆ ಕಳುಹಿಸಿದರಂತೆ. ಪ್ರವಾಸಿ ಮಂದಿರದ ಹತ್ತಿರ ಬಂದ ಚಿನ್ನದ ಪಲ್ಲಕ್ಕಿಯನ್ನು ಕಣ್ಣಿಗೊತ್ತಿಕೊಂಡು, ತಾವು ಆ ಪಲ್ಲಕ್ಕಿಯ ಮೇಲೆ ಕುಳಿತುಕೊಳ್ಳುವ ಅರ್ಹತೆ ಪಡೆದಿಲ್ಲವೆಂದು ಹೇಳಿ, ಆ ಪಲ್ಲಕ್ಕಿಯನ್ನು ಮುಂದು ಮಾಡಿಕೊಂಡು ಶ್ರೀಮಠಕ್ಕೆ ಕಾಲ್ನಡಿಗೆಯಲ್ಲಿ ಹೋದರು ಎಂಬ ಸನ್ನಿವೇಶ, ತಮ್ಮ ಮನೆಯ ಪಾರಿಚಾರಕರ ಬಗ್ಗೆ ಮಾನವೀಯತೆಯಿಂದ ತೋರುತ್ತಿದ್ದ ಕಾಳಜಿ, ಬಾಪೂಜಿಯವರನ್ನು ಕಂಡಾಗ ಅತಿ ವಿನಯದಿಂದ ನಡೆದುಕೊಳ್ಳುತ್ತಿದ್ದರು ಎಂಬ ರಾಜೇಂದ್ರ ಪ್ರಸಾದರ ಇಂತಹ ವಿಚಾರಗಳು ವೀರಣ್ಣಗೌಡರಿಗೆ ಅವರ ಬಗ್ಗೆ ಹೆಚ್ಚು ಒಲವನ್ನುಂಟು ಮಾಡಿದ್ದವು. ಈ ವಿಚಾರಗಳನ್ನು ತಮ್ಮ ಆತ್ಮಕಥೆಯಲ್ಲಿ ಪ್ರಸ್ತಾಪಿಸಿರುವ ವೀರಣ್ಣಗೌಡರು ಶ್ರೀ ರಾಜೇಂದ್ರ ಪ್ರಸಾದರು

ನಿರ್ಗವಿಗಳು, ಸುಸಂಸ್ಕೃತ ಗುಣವನ್ನೊಂದಿದರು ಎಂಬುದರ ಬಗ್ಗೆ ಬೆಳಕು ಚೆಲ್ಲಿದ್ದಾರೆ. ತಾವು ಇಂತಹ ಮಹಾನ್ ವ್ಯಕ್ತಿಯ ವ್ಯಕ್ತಿತ್ವದಿಂದ ಹೆಚ್ಚು ಆಕರ್ಷಿತರಾಗಿದ್ದರು.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರದ ರಾಜಕೀಯ ಆಗುಹೋಗುಗಳ ಸಂದರ್ಭದಲ್ಲಿ ರಾಷ್ಟ್ರದ ಪ್ರಮುಖ ನಾಯಕರಾದ ಸರ್ದಾರ್ ವಲ್ಲಭಾಯಿ ಪಟೇಲರ ಸಂಪರ್ಕ ವೀರಣ್ಣಗೌಡರಿಗೆ ಆಯಿತು. ದೇಶ ಕಟ್ಟುವ ನಿಟ್ಟಿನಲ್ಲಿ ದೇಶೀಯ ಸಂಸ್ಥಾನಗಳನ್ನು ಕೇಂದ್ರ ಸರ್ಕಾರಕ್ಕೆ ಸೇರಿಸುವ ಸಂದರ್ಭದಲ್ಲಿ ಅವರು ತೋರಿದ ದಿಟ್ಟತನ ಎಂತವರಿಗೂ ರೋಮಾಂಚನವನ್ನುಂಟು ಮಾಡಿತ್ತು. ಸರ್ದಾರ್ ಪಟೇಲರು ಬಹಳ ನಿಷ್ಠಾವಂತ ಕಾಂಗ್ರೆಸ್ ಭಕ್ತರು, . . . ಭಾರತದ ಇತಿಹಾಸದಲ್ಲಿ ಈ ಬಗೆಯ ಶಕ್ತಿ ಸಾಮರ್ಥ್ಯಗಳನ್ನು ಧೈರ್ಯವನ್ನು ಪ್ರದರ್ಶಿಸಿ ದೇಶದ ಪರಿಸ್ಥಿತಿಯನ್ನು ಒಂದು ಹಂತಕ್ಕೆ ತಂದವರು ಇನ್ನೊಬ್ಬರಿಲ್ಲವೆಂದು ನನಗೆ ಅನ್ನಿಸುತ್ತದೆ. ಗುಜರಾತ್ ಪ್ರಾಂತ್ಯದ ಹಳ್ಳಿಯೊಂದರ ಒಕ್ಕಲಿಗ ಮನೆತನದಲ್ಲಿ ಹುಟ್ಟಿ, ಇಂಗ್ಲೆಂಡ್‌ಗೆ ಹೋಗಿ ಬ್ಯಾರಿಸ್ಟರಾಗಿ ಬಂದು, ಕಡೆಗೆ ಅತ್ಯಂತ ಧೈರ್ಯ ಸಾಹಸಗಳಿಂದ ದೇಶದ ಮುನ್ನಡೆಗೆ ಕಾರಣರಾಗಿ ಬಾಳಿದವರು ಬೇರೆ ಯಾರೂ ನಮಗೆ ಸಿಗುವುದಿಲ್ಲ. ಸರ್ದಾರ್ ಪಟೇಲರೆಂದರೆ ಸಿಂಹದೋಪಾದಿಯಲ್ಲಿದ್ದವರು, ಸಮಯ ಬಂದರೆ ಪ್ರಧಾನಿಯವರನ್ನೂ ಧಿಕ್ಕರಿಸಿ ನಿಲ್ಲುವ ಎದೆಗಾರಿಕೆ ಅವರಲ್ಲಿತ್ತು. ಮಹಾತ್ಮ ಗಾಂಧೀಜಿಯವರನ್ನು 'ಅವನೊಬ್ಬ ಹುಚ್ಚ' ಎಂದು ಮೂದಲಿಸಿದ್ದ ಸರ್ದಾರ್ ವಲ್ಲಭಾಯಿ ಪಟೇಲರು ನಂತರದ ದಿನಗಳಲ್ಲಿ ಗಾಂಧೀಜಿಯವರ ಕಟ್ಟಾ ಅನುಯಾಯಿಗಳಾಗಿ ಮಾರ್ಪಟ್ಟರು. ಮಹಾತ್ಮ ಗಾಂಧಿಯವರನ್ನು ತಮ್ಮ ಗುರುವೆಂದು ಅಂತ್ಯದವರೆಗೂ ನಡೆದುಕೊಂಡರು ಎಂಬುದಾಗಿ ಅವರ ಬಗೆಗಿನ ತಮ್ಮ ಮೆಚ್ಚುಗೆಯನ್ನು ವೀರಣ್ಣಗೌಡರು ಆತ್ಮಕಥೆಯಲ್ಲಿ ವ್ಯಕ್ತಪಡಿಸಿದ್ದಾರೆ.



ವೀರಣ್ಣಗೌಡರಿಗೆ ತಮ್ಮ ಸಾರ್ವಜನಿಕ ಸೇವೆಯ ನಿಮಿತ್ತ ರಾಜ್ಯ ಮತ್ತು ಕೇಂದ್ರ ನಾಯಕರ ಸಂಪರ್ಕ ಅನಿವಾರ್ಯವಾಗಿ ಲಭಿಸಿತು. ಹೀಗೆ ಸಂಪರ್ಕಕ್ಕೆ ಬಂದವರಲ್ಲಿ ತಮಿಳು ನಾಡಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕಾಮರಾಜ್ ನಾಡಾರ್ ಮತ್ತು ನೀಲಂ ಸಂಜೀವರೆಡ್ಡಿಯವರು ಕೇಂದ್ರ ರಾಜಕಾರಣದಲ್ಲಿ ಪ್ರಭಾವಿಗಳಾಗಿದ್ದ ಇವರು ತಮ್ಮ ನಿಷ್ಠಾವಂತಿಕೆ, ಸ್ನೇಹಪರತೆಯಿಂದ ವೀರಣ್ಣಗೌಡರ ಮೇಲೆ ಪ್ರಭಾವ ಬೀರಿದ್ದರು. ಇವರೊಂದಿಗೆ ದೇಶದ ರಾಜಕೀಯದಲ್ಲಿ ಪ್ರಭಾವಿ ಮಹಿಳಾ ನಾಯಕಿಯಾಗಿ ದೇಶವನ್ನು ೧೪ ವರ್ಷಗಳ ಕಾಲ ಆಳ್ವಿಕೆ ಮಾಡಿದ ಶ್ರೀಮತಿ ಇಂದಿರಾಗಾಂಧಿಯವರ ಪ್ರಭಾವ ವೀರಣ್ಣಗೌಡರ ಮೇಲೆ ಸಾಕಷ್ಟು ಬೀರಿತ್ತು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ವೀರಣ್ಣಗೌಡರು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಾಗ ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ ರಾಜ್ಯದ ಆಗುಹೋಗುಗಳ ಬಗ್ಗೆ ಹೆಚ್ಚು ಚರ್ಚಿಸುತ್ತಿದ್ದರು.



ವರ್ತಕರಾಗಿದ್ದ ಎಸ್.ಚನ್ನಯ್ಯನವರನ್ನು ಶಿವಪುರದ ಧ್ವಜಸತ್ಯಾಗ್ರಹ ಸಮ್ಮೇಳನಕ್ಕೆ ಸ್ವಾಗತ ಸಮಿತಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡುವ ಮೂಲಕ ವೀರಣ್ಣಗೌಡರು ಅವರನ್ನು ರಾಜಕೀಯದಲ್ಲಿ ನೇರವಾಗಿ ಪಾಲ್ಗೊಳ್ಳುವಂತೆ ಮಾಡಿದರು. ಚನ್ನಯ್ಯನವರು ಒಬ್ಬ ನಿಷ್ಠಾವಂತ, ಹಿಡಿದ ಕೆಲಸವನ್ನು ಶತಾಯ ಗತಾಯ ಪೂರ್ಣಗೊಳಿಸುವ ಛಲವಂತರಾಗಿದ್ದರು. ಹೀಗೆ ಪ್ರತ್ಯಕ್ಷವಾಗಿ ರಾಜಕೀಯಕ್ಕೆ

ಪ್ರವೇಶಿಸಿದ ಚನ್ನಯ್ಯನವರು ಮುಂದಿನ ದಿನಗಳಲ್ಲಿ ರಾಜ್ಯದ ರಾಜಕಾರಣದಲ್ಲಿ ಅತ್ಯಂತ ಪ್ರಭಾವಿ ರಾಜಕಾರಣಿಯಾಗಿ ಬೆಳೆದು 'ಕಿಂಗ್ ಮೇಕರ್' ಎಂಬ ಅಭಿದಾನಕ್ಕೆ ಪಾತ್ರರಾದರು. ಸಮಕಾಲೀನ, ಸಹವರ್ತಿಗಳಾಗಿದ್ದ ಚನ್ನಯ್ಯನವರ ಬಗ್ಗೆ ವೀರಣ್ಣಗೌಡರಿಗೆ ಅಪಾರ ಅಭಿಮಾನ ಮತ್ತು ಗೌರವವಿತ್ತು.

ಏಕೀಕರಣ ಕರ್ನಾಟಕದ ಮೊದಲ ಮುಖ್ಯಮಂತ್ರಿಗಳಾಗಿ ಉತ್ತಮ ಆಡಳಿತ ಸೇವೆಸಲ್ಲಿಸಿದ ಶ್ರೀ ಎಸ್.ನಿಜಲಿಂಗಪ್ಪನವರಿಗೂ ವೀರಣ್ಣಗೌಡರಿಗೂ ಆತ್ಮೀಯವಾದ ಸ್ನೇಹಸಂಬಂಧವಿತ್ತು. ಈ ಇಬ್ಬರು ಸ್ನೇಹಿತರ ನಡುವೆ ಹಲವಾರು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಒಬ್ಬರಿಗೊಬ್ಬರು ತಮ್ಮ ತಮ್ಮ ವಿಚಾರ, ಸಿದ್ಧಾಂತಗಳಿಗೆ ಬದ್ಧರಾಗಿ ನಡೆದುಕೊಳ್ಳುತ್ತಿದ್ದರು. ಆದರೆ ಇದು ತಮ್ಮ ಸ್ನೇಹಕ್ಕೆ ಯಾವುದೇ ರೀತಿ ಕುಂದು ಬರದಂತೆ ನೋಡಿಕೊಂಡು ಬರುತ್ತಿದ್ದರು. ಏಕೀಕರಣ ವಿಚಾರದಲ್ಲಿ ತಮ್ಮ ನಿಲುವಿಗೆ ವಿರುದ್ಧವಾಗಿದ್ದ ವೀರಣ್ಣಗೌಡರ ವ್ಯಕ್ತಿತ್ವ, ಜನಪರ ಕಾಳಜಿಯನ್ನು ಅರ್ಥಮಾಡಿಕೊಂಡಿದ್ದ ನಿಜಲಿಂಗಪ್ಪನವರು ಅವರನ್ನು ತಮ್ಮ ಮಂತ್ರಿಮಂಡಲದಲ್ಲಿ ಲೋಕೋಪಯೋಗಿ ಮಂತ್ರಿಗಳ ಸ್ಥಾನ ನೀಡಿದರು. ಹೀಗೆ ಇವರಿಬ್ಬರು ನಿಷ್ಠಾವಂತ ಕಾಂಗ್ರೆಸ್ಸಿಗರಾಗಿ ರಾಜ್ಯದ ಅಭಿವೃದ್ಧಿಯನ್ನೇ ತಮ್ಮ ಆದ್ಯಕರ್ತವ್ಯವೆಂದು ತಿಳಿದು ಕಾರ್ಯನಿರ್ವಹಿಸುತ್ತಿದ್ದರು. ಪರಸ್ಪರರಲ್ಲಿ ಅಭಿಮಾನ, ಪ್ರೀತಿ-ಗೌರವ ಹೊಂದಿದವರಾಗಿದ್ದರು. ತದನಂತರದಲ್ಲಿ ಜಾತಿ ರಾಜಕಾರಣಕ್ಕೆ ಸಂಬಂದಿಸಿದಂತೆ ನಡೆದ ಸನ್ನಿವೇಶಗಳು ಇವರಿಬ್ಬರ ನಡುವೆ ವೈಮನಸ್ಸನುಂಟುಮಾಡಿತ್ತು.

ಸ್ವಾತಂತ್ರ್ಯ ಹೋರಾಟ ಮತ್ತು ಮೈಸೂರು ಸಂಸ್ಥಾನದ ಜವಾಬ್ದಾರಿ ಸರ್ಕಾರದ ಚಳುವಳಿಯಲ್ಲಿ ಹೆಚ್ಚು ನಿಷ್ಠೆಯಿಂದ ಕಾರ್ಯನಿರ್ವಹಿಸಿದ ಕೆ.ಚಂಗಲರಾಯರೆಡ್ಡಿಯವರ ಒಡನಾಟದಲ್ಲಿದ್ದ ವೀರಣ್ಣಗೌಡರು ಅವರ ಕಾರ್ಯಕ್ಷಮತೆ, ತಾಳ್ಮೆ, ನಿಷ್ಠೆ, ಆತ್ಮೀಯತೆ ಕಂಡು ಮನಸೋತಿದ್ದರು. ಇವರುಗಳೇ ಅಲ್ಲದೆ ಕೆ.ಟಿ.ಭಾಷ್ಯಂ, ವೈಕುಂಠ ಬಾಳಿಗ, ಕೆ.ಪುಟ್ಟಸ್ವಾಮಿ, ಎ.ಬಿ.ಶೆಟ್ಟಿ, ಸಿ.ಎಂ.ಪೂಣಚ್ಚ, ಮುಂತಾದವರು ಗೌಡರ ಸಹೋದ್ಯೋಗಿಗಳಾಗಿ ಕೆಲಸ ಮಾಡುತ್ತಲೇ ಗೌಡರ ಜೀವನದಲ್ಲಿ ಮುಖ್ಯ ಪಾತ್ರಗಳನ್ನು ವಹಿಸಿದ್ದಾರೆ.

ವೀರಣ್ಣಗೌಡರ ಮೇಲೆ ರಾಜಕೀಯ ಚಿಂತಕರು ತಮ್ಮ ವಿಚಾರ ಚಿಂತನೆಗಳಿಂದ ಪ್ರಭಾವ ಬೀರಿದಂತೆ ಹಲವಾರು ಸಾಹಿತ್ಯ ಕೃತಿಗಳು ಮತ್ತು ಕಲೆ ತಮ್ಮ ಪ್ರಭಾವ ಬೀರಿರುವುದನ್ನು ಕಾಣಬಹುದು. ಟಾಲ್‌ಸ್ಟಾಯ್ ಬರೆದ ಮಹಾ ಕಾದಂಬರಿ 'ಅನ್ನಕರೇನಿನಾ' ಕೃತಿಯು ರಷ್ಯಾದೇಶದ ಒಬ್ಬ ಸುಸಂಪನ್ನ ಮಹಿಳೆಯ ಜೀವನದ ಏಳುಬೀಳುಗಳ ಸುತ್ತ ಹೆಣೆದ ಕಾದಂಬರಿಯಾಗಿದ್ದು, ಗೌಡರ ಮನಸ್ಸಿಗೆ ಮೆಚ್ಚುಗೆಯಾಗಿದ್ದರಿಂದ ಅದನ್ನು ಬಿಡುವಿನ ವೇಳೆಯಲ್ಲಿ ಅನೇಕ ಬಾರಿ ಓದಿಕೊಂಡಿದ್ದರು. ಅಲ್ಲದೆ ರಷ್ಯಾದ ದೇಶದ ಸಮಾಜವಾದದಿಂದ/ಕಮ್ಯೂನಿಸಂನಿಂದ ಪ್ರಭಾವಿತಗೊಂಡಿದ್ದ ವೀರಣ್ಣಗೌಡರು ೧೯೪೨ರಲ್ಲಿ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಸೆರೆಮನೆಯಲ್ಲಿರುವಾಗ, ರಷ್ಯವನ್ನು ಕುರಿತು ದೊರೆತ ಸಾಹಿತ್ಯವನ್ನೆಲ್ಲ ಅಭ್ಯಾಸ ಮಾಡಿ 'ರಷ್ಯಾದ ಇಣುಕು ನೋಟಗಳು' ಎಂಬ ಕೃತಿಯನ್ನು ರಚಿಸಿದರು.

೧೯೬೦-೭೦ರ ಸಂದರ್ಭದಲ್ಲಿ ತಮ್ಮ ನಟನಾ ಶೈಲಿಯಿಂದ ಜನರ ಮೇಲೆ ಪ್ರಭಾವ ಬೀರಿದ್ದ ಡಾ.ರಾಜ್‌ಕುಮಾರ್‌ರವರ ಬಗ್ಗೆ ವೀರಣ್ಣಗೌಡರು ಅಭಿಮಾನ ಹೊಂದಿದ್ದರು. ಅಲ್ಲದೆ ಈ ಅಭಿಮಾನದಿಂದಲೇ ಮದ್ದೂರಿನಲ್ಲಿ ನಡೆದ ನಾಟಕ ಪ್ರದರ್ಶನದ ಸಂದರ್ಭದಲ್ಲಿ ಡಾ. ರಾಜ್‌ಕುಮಾರ್ ರವರಿಗೆ ಸನ್ಮಾನಿಸಿದರು. ಹಾಗೆಯೇ ಗುಬ್ಬಿವೀರಣ್ಣರವರ ನಾಟಕಗಳು ಹೆಚ್ಚು ಜನಪ್ರಿಯವಾಗಿದ್ದ ಆ ಸಂದರ್ಭದಲ್ಲಿ ಅವುಗಳಿಂದ ಪ್ರಭಾವಿತಗೊಂಡು ವೀರಣ್ಣಗೌಡರು ಅರ್ಜುನಪುರಿ ಕಾಲೇಜು ಆವರಣದಲ್ಲಿ ಪ್ರದರ್ಶನಗೊಂಡ ನಾಟಕವೊಂದರಲ್ಲಿ ನ್ಯಾಯಾಧೀಶನ ಪಾತ್ರವಹಿಸಿದ್ದನ್ನು ಗಮನಿಸಿದಾಗ ಅವರಿಗೆ ನಾಟಕ ಸಾಹಿತ್ಯ ರಚನೆಯಲ್ಲಷ್ಟೇ ಅಲ್ಲದೆ ನಟನೆಯಲ್ಲೂ ಅಭಿರುಚಿ ಇತ್ತೆಂಬುದು ಕಂಡುಬರುತ್ತದೆ. ಎಂ.ಎನ್.ಶ್ರೀಕಂಠೇಶಗೌಡರಂತಹ ನಾಟಕಕಾರರ ಕೃತಿಗಳ ಬಗ್ಗೆ ಗೌಡರಿಗೆ ಒಲವಿತ್ತು. ರಾಜಕೀಯವಾಗಿ ಅನೇಕ ಭಿನ್ನಾಭಿಪ್ರಾಯಗಳಿದ್ದರೂ ಡಿ.ವಿ.ಗುಂಡಪ್ಪನವರ ಸಾಹಿತ್ಯ ವಿಚಾರಗಳು ಹಾಗೂ ಕೃತಿಗಳ ಬಗ್ಗೆ ಗೌಡರು ಒಲವು ಬೆಳೆಸಿಕೊಂಡಿದ್ದರು.

ವಯಸ್ಸಿನಲ್ಲಿ ಗೌಡರಿಗಿಂತ ಕಿರಿಯರಾಗಿದ್ದ ಕುವೆಂಪು ಅವರ ಕೃತಿಗಳು ಗೌಡರಿಗೆ ಪ್ರಿಯವಾಗಿದ್ದವು. ಕುವೆಂಪು ಅವರ ಮೊದಲ ಇಂಗ್ಲೀಷ್ ಕೃತಿ 'Beginner's muse' ಚನ್ನಪಟ್ಟಣದ ಒಕ್ಕಲಿಗ ವಿದ್ಯಾರ್ಥಿಗಳಿಗಾಗಿ ನಡೆಸಿದ ಸ್ಪರ್ಧೆಯಲ್ಲಿ ಬೆಳ್ಳಿ ಪದಕ ಪಡೆದುಕೊಂಡಿತ್ತು. ಈ ಬಹುಮಾನ ನೀಡುವ ಕಾರ್ಯಕ್ರಮವನ್ನು ಗೌಡರು ರೂಪಿಸಿದ್ದರು. ಆನಂತರ ಕುವೆಂಪು ಗೌಡರ ಒಳ್ಳೆಯ ಮಿತ್ರರಾಗಿದ್ದರು. ಮೈಸೂರಿನ ರಾಮಕೃಷ್ಣಾಶ್ರಮದಲ್ಲಿದ್ದ ಕುವೆಂಪು ಅವರನ್ನು ಗೌಡರು ಆಗಾಗ ಭೇಟಿ ಮಾಡುತ್ತಿದ್ದರು.

ಗೌಡರು ಹೋದಾಗಲೆಲ್ಲ ಕುವೆಂಪು ತಮ್ಮ ಹೊಸ ಕೃತಿಗಳನ್ನು ಗೌಡರೆದುರು ಓದಿ, ಚರ್ಚಿಸಿ ಸಲಹೆ ಪಡೆಯುತ್ತಿದ್ದರು. ಕಿಂದರ ಜೋಗಿ, ಟುವ್ವಿಟುವ್ವಿ, ಯಮನ ಸೋಲು ಮುಂತಾದ ಕೃತಿಗಳನ್ನು ಅವು ಅಚ್ಚಿಗೆ ಹೋಗುವ ಮೊದಲೇ ಕುವೆಂಪು ಗೌಡರಿಗೆ ಓದಿ ಹೇಳಿದ್ದರು. ಕುವೆಂಪು ಅವರ ಪ್ರಾರಂಭದ ಕೃತಿಗಳ ಪ್ರಕಟಣೆಗೆ ಗೌಡರು ನೆರವಾಗಲು ಪ್ರಯತ್ನಪಟ್ಟರಾದರೂ ಕಾರಣಾಂತರಗಳಿಂದ ವಿಫಲರಾಗುತ್ತಾರೆ. ಮುಂದೆ ರಾಜಕಾರಣದಲ್ಲಿ ಗೌಡರು ತೀವ್ರವಾಗಿ ತೊಡಗಿಸಿಕೊಂಡ ಮೇಲೆ ಕುವೆಂಪು ಅವರ ಭೇಟಿ ಕಡಿಮೆಯಾಗುತ್ತದೆ. ಜ್ಞಾನಪೀಠ ಪ್ರಶಸ್ತಿ ಪಡೆದ 'ಶ್ರೀರಾಮಾಯಣ ದರ್ಶನಂ' ಮೂಲ ರಾಮಾಯಣಕ್ಕಿಂತ ಭಿನ್ನವಾಗಿದ್ದುದ್ದರ ಬಗ್ಗೆ ಗೌಡರು ಅಲ್ಲಲ್ಲಿ ಪ್ರಸ್ತಾಪಿಸಿದ್ದಾರೆ. ಶ್ರೀರಂಗಪಟ್ಟಣದಲ್ಲಿ ಕುವೆಂಪು ಮಾಡಿದ ಪ್ರಸಿದ್ಧ ಭಾಷಣ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಸದಾಕಾಲ ಗೌಡರ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದಿತ್ತು.

ನಿಜವಾದ ಪ್ರತಿಭೆಯನ್ನು ಅದು ಎಲ್ಲಿಯೇ ಇರಲಿ, ಯಾರಲ್ಲಿಯೇ ಇರಲಿ ಕಾಣುವ ವಿಶಾಲ ಬುದ್ಧಿಯೂ ಗುರುತಿಸುವ ಉದಾರ ಹೃದಯವಿದ್ದ, ಕನ್ನಡದ ಶ್ರೇಷ್ಠ ವಿದ್ವಾಂಸ ಹಾಗೂ ಲೇಖಕ ಟಿ.ಎಸ್.ವೆಂಕಣ್ಣಯ್ಯನವರು ಗೌಡರಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಲಹೆ ಸಹಕಾರ ನೀಡಿದ್ದಾರೆ. ವಿದ್ಯಾರ್ಥಿಯಾಗಿದ್ದಾಗ ಲೇಖನ ಸ್ಪರ್ಧೆಯೊಂದರಲ್ಲಿ ಭಾಗವಹಿಸಿ ಬಹುಮಾನ ಪಡೆದ ಗೌಡರನ್ನು

ವೆಂಕಣ್ಣಯ್ಯನವರು ಅಪಾರ ವಿಶ್ವಾಸದಿಂದ ಮಾತನಾಡಿಸಿ ಗೌಡರು ಓದುತ್ತಿದ್ದ ಶಾಲೆ ಹಾಗೂ ಕನ್ನಡ ಕಲಿಸಿದ ಕನ್ನಡ ಪಂಡಿತರ ಬಗ್ಗೆ ವಿಚಾರಿಸಿ ಪ್ರಶಂಸಿಸುತ್ತಾರೆ.

ವೀರಣ್ಣಗೌಡರ ಒಕ್ಕಲಿಗ ವಿದ್ಯಾರ್ಥಿ ಸಂಘದ ಕಾರ್ಯ ಚಟುವಟಿಕೆಗಳಲ್ಲಿ ಕ್ರಿಯಾಶೀಲನಾಗಿ ಭಾಗವಹಿಸುತ್ತಿದ್ದ ಲೇಖಕ ಡಿ.ಹೆಚ್.ಹನುಮ ಅವರ 'ಗೌಡರ ಮಗಳೂ' ಕಾದಂಬರಿ ಹಾಗೂ ಮತ್ತಿತರ ಕೃತಿಗಳ ಬಗ್ಗೆ ಗೌಡರು ವಿಶ್ವಾಸ ತಾಳಿದ್ದರು. ಚಿಕ್ಕವಯಸ್ಸಿನಲ್ಲೇ ನಿಧನರಾದ ಹನುಮ ಅವರ ಬಗ್ಗೆ ಗೌಡರು 'ಈತನ ಸಾವು ಕನ್ನಡ ಮಾತೆಗೂ, ಒಕ್ಕಲಿಗ ಸಮಾಜಕ್ಕೂ ದೊಡ್ಡ ಹಾನಿಯಾಗಿದೆ'[೨೬] ಎಂದು ಶೋಕಿಸುತ್ತಾರೆ.

ಹೀಗೆ ಸಾಹಿತ್ಯ ಲೋಕದ ದಿಗ್ಗಜರೆಂದು ಹೇಳಬಹುದಾದ ಟಿ.ಎಸ್.ವೆಂಕಣ್ಣಯ್ಯನರು, ಕೆ.ವಿ.ಪುಟ್ಟಪ್ಪನವರು, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಡಿ.ವಿ.ಗುಂಡಪ್ಪ, ಮುಂತಾದ ಸಾಹಿತಿಗಳ ಬರಹ ಮತ್ತು ಪ್ರೇರಣೆ ವೀರಣ್ಣಗೌಡರ ಮೇಲೆ ಅಪಾರ ಪ್ರಭಾವ ಬೀರಿದ್ದವು.

ವೀರಣ್ಣಗೌಡರ ಪತ್ನಿ ಶ್ರೀಮತಿ ತಾಯಮ್ಮನವರು ಗೌಡರ ಏಳಿಗೆಗಾಗಿ ತಮ್ಮ ಸಂಪೂರ್ಣ ಶ್ರಮ ಹಾಗೂ ಒತ್ತಾಸೆ ನೀಡುವ ಮೂಲಕ ಚೈತನ್ಯದಾತೆಯಾಗಿದ್ದರು. ಗೌಡರ ಪ್ರವಾಸಗಳಲ್ಲಿ ಅವರೊಂದಿಗಿದ್ದು, ಅನೇಕ ಸಭೆಗಳಲ್ಲಿ ಜನರ ಒತ್ತಾಯದ ಮೇಲೆ ಭಾಷಣ ಕೂಡ ಮಾಡುತ್ತಿದ್ದರು. ಯಾವುದೇ ಸಾರ್ವಜನಿಕ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುವ ಮುನ್ನ ಅವರು ತಮ್ಮ ಹೆಂಡತಿಯೊಂದಿಗೆ ಚರ್ಚಿಸಿ ತೀರ್ಮಾನ ತೆಗೆದು ಕೊಳ್ಳುತ್ತಿದ್ದರು.

ಗೌಡರಿಗೆ ಶೃಂಗೇರಿ ಜಗದ್ಗುರುಗಳಾದ ದಿವಂಗತ ಚಂದ್ರಶೇಖರ ಭಾರತಿ ಸ್ವಾಮಿಗಳ ಬಗ್ಗೆ ಅಪಾರ ಭಕ್ತಿ ಗೌರವಗಳಿದ್ದವು. ಆಗಾಗ ಮಠಕ್ಕೆ ಭೇಟಿ ಕೊಡುತ್ತಿದ್ದರು. ಒಮ್ಮೆ ಸ್ವಾಮಿಗಳ ನೇರ ದರ್ಶನದಿಂದ ಪುಳಕಿತರಾದ ಬಗ್ಗೆ ಬರೆದುಕೊಂಡಿದ್ದಾರೆ. ಮದ್ದೂರಿನ ತಮ್ಮ ತೋಟದ ಮನೆಗೆ ಸ್ವಾಮಿಗಳನ್ನು ಆಹ್ವಾನಿಸಿ ಭಕ್ತಿ ಸಮರ್ಪಿಸಿದ್ದರು. ಆದಿಚುಂಚನಗಿರಿ ಮಠದ ಪೀಠಾಧಿಕಾರಿಗಳ ಆಯ್ಕೆಯ ಸಂದರ್ಭದಲ್ಲಿ ಹಾಗೂ ಆ ಮಠದ ಏಳಿಗೆಗಾಗಿ ಅನೇಕ ಸಂದರ್ಭಗಳಲ್ಲಿ ಗೌಡರು ಕಾಳಜಿ ವಹಿಸಿದ್ದರು. ಒಮ್ಮೆಯಂತೂ ಆ ಮಠದ ವಿಶೇಷ ಕಾರ್ಯಕ್ರಮದ ಬಗ್ಗೆ ಪತ್ರಿಕೆಯಲ್ಲಿ ಲೇಖನ ಬರೆದು ಅನೇಕರ ಮೆಚ್ಚುಗೆಗೆ ಪಾತ್ರರಾಗಿದ್ದರು.

---

[೨೬] ಬದುಕು ಮೆಲುಕು, ಪು-೨೭೮

# ಅಧ್ಯಾಯ – ೩

## ಶಿಕ್ಷಣ, ಪತ್ರಿಕಾ ರಂಗ ಮತ್ತು ಸಾಹಿತ್ಯಿಕ ಅಭಿರುಚಿ

## ಅಧ್ಯಾಯ – ೩

# ಶಿಕ್ಷಣ, ಪತ್ರಿಕೆ ರಂಗ ಮತ್ತು ಸಾಹಿತ್ಯಿಕ ಅಭಿರುಚಿ

ವೀರಣ್ಣಗೌಡರ ಜೀವನ ಹರಿಯುವ ನದಿಯಂತೆ. ನದಿ ತಾನು ಮುಂದೆ ಸಾಗುತ್ತಾ ಹಾದಿಯಲ್ಲಿ ಎದುರಾಗುವ ಎಲ್ಲವನ್ನು ಹಾದು ತನ್ನ ಗುರಿ ಸೇರುವಂತೆ ವೀರಣ್ಣಗೌಡರು ತಮಗೆ ದೊರೆತ ಅವಕಾಶಗಳಲ್ಲಿ ಆಸಕ್ತಿಗನುಗುಣವಾಗಿ ಆಯ್ಕೆ ಮಾಡಿಕೊಂಡ ಕ್ಷೇತ್ರಗಳಲ್ಲಿ ಆ ಕೆಲಸಕ್ಕೆ ಬದ್ಧತೆಯಿಂದ ನಡೆದುಕೊಂಡು ಜನಮನ್ನಣೆಯನ್ನು ಪಡೆದರು. ಸಾರ್ವಜನಿಕ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ತಮ್ಮ ಚಿಕ್ಕಂದಿನ ಬಯಕೆಯಂತೆ ಶಿಕ್ಷಣ ಕ್ಷೇತ್ರ ಮತ್ತು ಪತ್ರಿಕಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿದ ನಂತರ ಅಂತಿಮವಾಗಿ ರಾಜಕೀಯ ಕ್ಷೇತ್ರ ಸೇರಿ ಸಾರ್ವಜನಿಕ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವೆಲ್ಲವುಗಳ ಮಧ್ಯೆ ಸಮುದಾಯ ಸಂಘಟನೆಗೆ ದುಡಿದವರು. ಅವರ ವೈವಿಧ್ಯಮಯ ಬದುಕಿನ ತಿರುವುಗಳನ್ನು ಒಂದೊಂದಾಗಿ ಅವಲೋಕಿಸಲಾಗಿದೆ.

**೩.೧ ಶಿಕ್ಷಣ ರಂಗ : –**

ಹೆಚ್.ಕೆ.ವೀರಣ್ಣಗೌಡರಿಗೆ ಶಿಕ್ಷಣದ ಬಗ್ಗೆ ಅಪಾರವಾದ ಗೌರವ ಮತ್ತು ಪ್ರೀತಿಯುಳ್ಳವರಾಗಿದ್ದರು. ಓದುವುದು ಮತ್ತು ಬರೆಯುವುದರಲ್ಲಿ ಅವರಿಗೆ ತುಂಬ ಶ್ರದ್ಧೆ ಮತ್ತು ಭಕ್ತಿಯಿತ್ತು. ಇದರಿಂದಾಗಿ ಅವರು ಕಲಿಯುವುದರಲ್ಲಿ ಬಹಳ ಆಸಕ್ತಿಯನ್ನು ಹೊಂದಿದ್ದರು. ತಾವು ಕಲಿಯುವುದರ ಜೊತೆಗೆ ಇತರ ವಿದ್ಯಾರ್ಥಿಗಳಿಗೆ ವಿವಿಧ ವಿಷಯಗಳನ್ನು ಕಲಿಸುವ ಕಾಯಕದಲ್ಲಿ ನಿರತರಾಗಿದ್ದರು. ಅವರು ವಿದ್ಯಾರ್ಥಿಯಾಗಿದ್ದಾಗಲೇ ಸ್ಕೌಟ್‌ಮಾಸ್ಟರರಾಗಿ ಇತರ ವಿದ್ಯಾರ್ಥಿಗಳಿಗೆ ಶಿಸ್ತಿನ ಪಾಠವನ್ನು ಹೇಳಿಕೊಡುತ್ತಿದ್ದರು ಎಂದು ಅವರ ಆಪ್ತೇಷ್ಟರಲ್ಲಿ ಒಬ್ಬರಾದ ವಿ.ವೆಂಕಟಪ್ಪನವರು ಹಾಗೂ ಮತ್ತೊಬ್ಬ ಗೆಳೆಯರಾದ ಹ.ಕ.ರಾಜೇಗೌಡರು, ಹೆಚ್.ಕೆ.ವೀರಣ್ಣಗೌಡರ ಬದುಕು ಮತ್ತು ಕರ್ತವ್ಯದ ಬಗೆಗಿನ ಶಿಸ್ತನ್ನು ಗೌರವಗಳೊಡನೆ ಬಹಳ ಪ್ರೀತಿಯಿಂದ ಮನಃಪೂರ್ವಕವಾಗಿ ಸ್ಮರಿಸಿಕೊಳ್ಳುತ್ತಾರೆ; ಹಾಗೂ ಇದನ್ನು ಸ್ವತಃ ವೀರಣ್ಣಗೌಡರ ಬರಹಗಳಲ್ಲೂ ಇದನ್ನು ಕಾಣಬಹುದಾಗಿದೆ. ಕಲಿಸುವ ಕಾಯಕ ಎಂದರೆ ಅವರಿಗೆ ತುಂಬ ಪ್ರಿಯವಾದುದು. ಈ ಕಾರಣಕ್ಕಾಗಿಯೇ ತಮಗೆ ದೊರೆತ ಶೇಕ್‌ದಾರಿಕೆ ಕೆಲಸವನ್ನು ತೊರೆದು ಉಪಾಧ್ಯಾಯ ವೃತ್ತಿಯೇ ಸೂಕ್ತವೆಂದು ಆಯ್ಕೆ ಮಾಡಿಕೊಂಡು ಮುನ್ನಡಿಯಿಟ್ಟರು. ಹಳ್ಳಿಯ ಮಕ್ಕಳಿಗೆ ಉನ್ನತ ಧ್ಯೇಯ ಧೋರಣೆಗಳನ್ನು ಬೋಧಿಸಿ ಉತ್ತಮ ಜನಾಂಗವನ್ನಾಗಿ ರೂಪಿಸಬಹುದೆಂಬ ಮಹದಾಸೆಯಿಂದ ಮುಖ್ಯೋಪಾಧ್ಯಾಯ ವೃತ್ತಿಯನ್ನು ಆರಿಸಿಕೊಂಡರು. ರಾಮನಗರ ತಾಲ್ಲೂಕಿನ ಜಾಲಮಂಗಲದ ಮಿಡ್ಲ್‌ಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ನೇಮಕವಾದರು.

ಮುಖ್ಯೋಪಾಧ್ಯಾಯರಾದುದರಿಂದ ಶಿಕ್ಷಕ ವೃತ್ತಿಯ ಜೊತೆಗೆ ನೆರೆಹೊರೆಯ ನಾಲ್ಕಾರು ಸ್ಕೂಲುಗಳ ಅಟೆಂಡೆನ್ಸ್ ಆಫೀಸರ್ ಆಗಿಯೂ ಕಡ್ಡಾಯ ಶಿಕ್ಷಣದ ಮೇಲ್ವಿಚಾರಕರಾಗಿಯೂ ಕೆಲಸ ಮಾಡಿದರು. ಗ್ರಾಮೀಣ ಜನರಿಗೆ ಕಡ್ಡಾಯವಾಗಿ ಶಿಕ್ಷಣ ದೊರೆಯಬೇಕೆಂಬುದು ವೀರಣ್ಣಗೌಡರ ಆಸೆ. ಜನಸಾಮಾನ್ಯರಿಗೆ ಓದು ಬರಹ ತಿಳಿಯದಿದ್ದರೆ ದೇಶದ ಏಳಿಗೆಯಾಗುವುದಿಲ್ಲವೆಂದು ದೃಢವಾಗಿ

ನಂಬಿದ್ದರು. ಹಳ್ಳಿಯ ಜನರು ತಮ್ಮ ಮಕ್ಕಳನ್ನು ತಪ್ಪದೆ ಪಾಠಶಾಲೆಗೆ ಕಳುಹಿಸಲು ಒತ್ತಾಯ ಪೂರ್ವಕವಾದ ಪ್ರಚಾರ ಮಾಡುತ್ತಿದ್ದರು. ಜಾಲಮಂಗಲದಲ್ಲಿ ಮಕ್ಕಳಿಗೆ ಪಾಠದ ಜೊತೆಗೆ ಆಟಗಳನ್ನು ಆಡಿಸುತ್ತಿದ್ದ ವೀರಣ್ಣಗೌಡರು ಊರ ಜನರ ಗೌರವ ವಿಶ್ವಾಸ ಆದರಗಳಿಗೆ ಪಾತ್ರರಾಗಿದ್ದರು. ಅಲ್ಲಿ ಎರಡು ವರ್ಷ ಶಿಕ್ಷಕ ವೃತ್ತಿ ಮಾಡಿದ ಮೇಲೆ ಚನ್ನಪಟ್ಟಣ ತಾಲ್ಲೂಕಿನ ಚಕ್ಕರೆಗೆ ವರ್ಗಾವಣೆಯಾದರು. ಈ ಸುದ್ದಿ ಜಾಲಮಂಗಲದ ತುಂಬ ಕಾಳ್ಗಿಚ್ಚಿನಂತೆ ಹಬ್ಬಿತು. ಇದರಿಂದ ವಿಚಲಿತರಾದ ಊರಿನ ಜನ ವೀರಣ್ಣಗೌಡ್ರು ಮೇಸ್ಟ್ರನ್ನು ತಮ್ಮ ಊರಿನಲ್ಲೆ ಉಳಿಸಿಕೊಳ್ಳಲು ಶತಾಯಗತಾಯ ಪ್ರಯತ್ನಿಸಿದರಂತೆ. ಆದ್ದರಿಂದ ವೀರಣ್ಣಗೌಡರು ಒಬ್ಬ ಉತ್ತಮ ಶಿಕ್ಷಕಮಾತ್ರವಲ್ಲದೆ ಜನಾನುರಾಗಿಯಾಗಿದ್ದರು. ಹೀಗೆ ಜನರ ಪ್ರೀತಿಯೇ ಮುಂದೆ ಗೌಡರು ಸಾಮಾಜಿಕ ಕಳಕಳಿಯ ವ್ಯಕ್ತಿಯಾಗಿ ರೂಪುಗೊಳ್ಳಲು ಕಾರಣವಾಯಿತು.

ಅವರ ಸಾಮಾಜಿಕ ಕಳಕಳಿ ಮತ್ತು ಮಾನವೀಯ ಅಂತಃಕರಣಕ್ಕೆ ಬಹುದೊಡ್ಡ ಒಂದು ಉದಾಹರಣೆಯನ್ನು ಗಮನಿಸಬಹುದು. ಚಕ್ಕೆರೆಯಲ್ಲಿ ಉಪಾಧ್ಯಾಯರಾಗಿದ್ದ ಸಂದರ್ಭದಲ್ಲಿ ಒಮ್ಮೆ ಆಡು ಮೇಯಿಸುವ ಹುಡುಗನ ವಿದ್ಯಾಸಕ್ತಿಯನ್ನು ಗಮನಿಸಿ ತಮ್ಮ ಮಾನವೀಯ ದೃಷ್ಟಿಕೋನದಿಂದ ಆತನಿಗೆ ಅಕ್ಷರ ಜ್ಞಾನಕ್ಕೆ ದಾರಿ ತೋರಿದರು. ಆಡು ಮೇಯಿಸುವ ಹುಡುಗನೇ ಇಂದಿನ ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳು, ಪ್ರಸಿದ್ಧ ಸಾಹಿತಿಗಳೂ ಆದ ಡಾ. ದೇ.ಜವರೇಗೌಡರು. ಇಂತಹ ಒಬ್ಬ ಮಹಾನ್ ಚೇತನದ ಉಗಮಕ್ಕೆ ಕಾರಣರಾದರು. "ಇಂತಹ ಸಂದರ್ಭ ಒದಗಿದುದು ನನ್ನ ಪುಣ್ಯವೆಂದು ನಾನು ಭಾವಿಸಿಕೊಂಡಿದ್ದೇನೆ. ನಾನು ಆ ರೀತಿ ಮಾಡದಿದ್ದರೆ ಜವರೇಗೌಡರು ವಿದ್ಯಾವಂತರಾಗುತ್ತಿರಲಿಲ್ಲವೆಂದು ನಾನು ತಿಳಿದುಕೊಂಡಿಲ್ಲ. ದೇವರು ನನಗೆ ಬದಲಾಗಿ ಇನ್ಯಾರಾದರೂ ಒಬ್ಬರನ್ನು ಅವರಿಗೆ ತೋರಿಸುತ್ತಿದ್ದ ಎಂಬುದೇ ನನ್ನ ನಂಬಿಕೆ. ಆದರೆ ನನಗೆ ಅಂಥ ಅವಕಾಶ ದೊರೆತದ್ದು ನನ್ನ ಪೂರ್ವಪುಣ್ಯ ಇದಕ್ಕಾಗಿ ದೇವರಿಗೆ ಅನಂತ ವಂದನೆಗಳು"[೨೪] ಎಂದು ಗೌಡರು ತಮ್ಮ ಆತ್ಮಕಥೆಯಲ್ಲಿ ವ್ಯಕ್ತಪಡಿಸಿದ್ದಾರೆ.

ವೀರಣ್ಣಗೌಡರು ಸ್ಕೌಟ್ ತರಬೇತಿ ಪಡೆದಿದ್ದುದರಿಂದ ತಾವೇ ವಿದ್ಯಾರ್ಥಿಗಳಿಗೆ ಡ್ರಿಲ್ ಮಾಡಿಸುತ್ತಿದ್ದರು. ಪಾಶ್ಚಾತ್ಯ ಕ್ರೀಡೆಗಳಿಗಿಂತ ಹೆಚ್ಚಾಗಿ ಗರಡಿ ಮನೆ ವ್ಯಾಯಾಮ, ದೊಣ್ಣೆವರಸೆ, ಕೊಕ್ಕೊ, ಕಬಡ್ಡಿ, ಈಜು ಮೊದಲಾದ ಗ್ರಾಮೀಣ ಕ್ರೀಡೆಗಳಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿ ಹುಟ್ಟುವಂತೆ ತರಬೇತಿ ನೀಡುತ್ತಿದ್ದರು. ದೇಸೀಯತೆಯನ್ನು ಉಳಿಸಿಕೊಂಡು ಬರಬೇಕೆಂಬ ಮಹದಾಸೆ ಅವರಲ್ಲಿತ್ತು.

ಒಮ್ಮೆ ಹೊಸದಾಗಿ ಬಂದಿದ್ದ ಅಸಿಸ್ಟೆಂಟ್ ಸ್ಕೂಲ್ ಇನ್ಸ್‌ಪೆಕ್ಟರವರನ್ನು ಅವರ ಕಚೇರಿಯಲ್ಲಿ ಕಂಡು ನಮಸ್ಕಾರ ತಿಳಿಸಲು ವೀರಣ್ಣಗೌಡರು ಪಂಚೆ ಮತ್ತು ನೆಹರು ಬನಿಯನ್ ತೊಟ್ಟು ರೇಷ್ಮೆ ಶಲ್ಯವನ್ನು ಹಾಕಿಕೊಂಡು ಕೈಯಲ್ಲೊಂದು ವಾಕಿಂಗ್ ಸ್ಟಿಕ್ ಹಿಡಿದು ಹೋದಾಗ, ಆ ಅಧಿಕಾರಿ ಇವರ ವೇಷಭೂಷಣವನ್ನು ಕಂಡು ಇಂಗ್ಲೀಷಿನಲ್ಲಿ 'ನೀವೇನ್ ರಾಷ್ಟ್ರೀಯ ಭಾವನೆಯವರೋ?ಎಂದು ಪ್ರಶ್ನಿಸಿದಾಗ, ಪ್ರತಿ ಭಾರತೀಯನೂ ರಾಷ್ಟ್ರೀಯ ಮನೋಭಾವನೆಯುಳ್ಳವನಾಗಿಯೇ ಇರಬೇಕು ಎಂಬ

---

[೨೪] ಬದುಕು-ಮೆಲುಕು. ಎಚ್.ಕೆ.ವೀರಣ್ಣಗೌಡ. ೧೯೭೪. ಪುಟ-೯೬

ದಿಟ್ಟ ಉತ್ತರವನ್ನು ಹೇಳಿ ತಮ್ಮ ದೇಶಿಯ ಸ್ವಭಾವ ಮತ್ತು ಅಭಿಮಾನವನ್ನು ಸಮರ್ಥಿಸಿಕೊಂಡಿದ್ದಾರೆ.[೨೯] ಆ ವೇಳೆಗಾಗಲೇ ಅಂದರೆ ಸುಮಾರು ೧೯೨೬-೨೭ ರ ಆಸುಪಾಸಿನ ಹೊತ್ತಿಗೆ ಗಾಂಧಿಯುಗ ಪ್ರಾರಂಭವಾಗಿ ರಾಷ್ಟ್ರೀಯ ಹೋರಾಟಕ್ಕೆ ಎಲ್ಲರಲ್ಲೂ ಸಂಚಲನ ಉಂಟುಮಾಡಿದ್ದ ಕಾಲ. ಅಂದಿನ ಸಂದರ್ಭದಲ್ಲಿ ರಾಷ್ಟ್ರನಾಯಕರ ವೇಶಭೂಷಣಗಳು ರಾಷ್ಟ್ರೀಯತೆಯ ಸಂಕೇತವಾಗಿತ್ತು.

ಹೀಗೆ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆಯ ಕಲ್ಪನೆ, ದೇಶಭಕ್ತಿ, ಸ್ವದೇಶಾಭಿಮಾನ ಶಿಸ್ತು, ನೈತಿಕತೆಯ ಅರಿವನ್ನು ಮೂಡಿಸುತ್ತಿದ್ದರು. ಉದಾಹರಣೆಗೆ ಕೆಲದಿನಗಳ ನಂತರ ಶಾಲಾ ವೀಕ್ಷಣೆಗೆಂದು ಬಂದ ಅಸಿಸ್ಟೆಂಟ್ ಸ್ಕೂಲ್ ಇನ್ಸ್‌ಪೆಕ್ಟರ್ ಶಾಲೆಗೆ ಭೇಟಿ ನೀಡಿದ ಸಂದರ್ಭದಲ್ಲಿ ವೀರಣ್ಣಗೌಡರ ಶಿಕ್ಷಣ ವಿಧಾನವನ್ನು ಕಣ್ಣಾರೆಕಂಡು ಮತ್ತು ಅವರ ಶಿಸ್ತು, ಶ್ರದ್ಧೆಗೆ ಮಾರು ಹೋಗಿ ಅವರ ಕಾರ್ಯತತ್ಪರತೆಯನ್ನು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ. ವಿದ್ಯಾರ್ಥಿಗಳಲ್ಲಿ ಪಠ್ಯಪುಸ್ತಕದ ಶಿಕ್ಷಣದ ಜೊತೆಗೆ ರಾಷ್ಟ್ರೀಯತೆ, ದೇಶಭಕ್ತಿ ಮೂಡಿಸಲು ತಮ್ಮ ನಡವಳಿಕೆ, ವೇಷಭೂಷಣಗಳ ಮೂಲಕ ಸ್ವತಃ ವೀರಣ್ಣಗೌಡರೇ ಮಾದರಿಯಾಗಿದ್ದರು. ಆಗಿನ ನಿಯಮದಂತೆ ವೀರಣ್ಣಗೌಡರನ್ನು ಚಕ್ಕೆರೆಯಿಂದ ಅಂಡರ್‌ಗ್ರ್ಯಾಜುಯೇಟ್ಸ್ ಟ್ರೈನಿಂಗ್‌ಗಾಗಿ ಮೈಸೂರು ಟ್ರೈನಿಂಗ್ ಕಾಲೇಜಿಗೆ ವರ್ಗಮಾಡಿದರು. ಸ್ವಲ್ಪ ಕಾಲ ಅಲ್ಲಿದ್ದು ಶಿಕ್ಷಣ ಪದ್ಧತಿಯ ವಿಷಯಗಳನ್ನು ಮನನ ಮಾಡಿದರು. ಅಲ್ಲಿ ಪ್ರಿನ್ಸಿಪಾಲರಾಗಿದ್ದ ಕಳಲೆ ಕೃಷ್ಣರಾಯರ ಅಪೇಕ್ಷೆಯಂತೆ 'ವಿರಾಮ ಕಾಲದಲ್ಲಿ ಉಪಾಧ್ಯಾಯರು ಹೇಗೆ ಕಾಲ ಕಳೆಯುತ್ತಾರೆ' ಎಂಬ ವಿಷಯದ ಬಗೆಗೆ ವೀರಣ್ಣಗೌಡರು ಉತ್ತಮ ಪ್ರಬಂಧ ಬರೆದು ಮೆಚ್ಚಿಕೆ ಗಳಿಸಿದರು.

ಅಷ್ಟರಲ್ಲಿ ಬೆಂಗಳೂರು ಒಕ್ಕಲಿಗರ ಸಂಘದ ಪದಾಧಿಕಾರಿಗಳು ವೀರಣ್ಣಗೌಡರನ್ನು ಒಕ್ಕಲಿಗರ ಪತ್ರಿಕೆಯ ಸಂಪಾದಕನನ್ನಾಗಿ ಆಯ್ಕೆ ಮಾಡಿದ ವಿಷಯ ಹೊರಬಿತ್ತು. ಪತ್ರಿಕೋದ್ಯಮಿಯಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು ತೀವ್ರತರವಾಗಿ ತುಂಬಿಕೊಂಡಿದ್ದ ವೀರಣ್ಣಗೌಡರು ಶಿಕ್ಷಣ ತರಬೇತಿಯನ್ನು ಪೂರ್ಣಗೊಳಿಸದೆ ಬೆಂಗಳೂರಿಗೆ ಬಂದು ಒಕ್ಕಲಿಗರ ಪತ್ರಿಕೆಯ ಸಂಪಾದಕ ವೃತ್ತಿಯನ್ನು ಪ್ರಾರಂಭಿಸಿದರು

### ೩.೨ ಪತ್ರಿಕಾ ರಂಗ : –

ಭಾಷಿಕ ಮಾಧ್ಯಮದ ಮೂಲಕ ವಿಷಯವನ್ನು ಜನತೆಯ ಕಡೆ ಕೊಂಡೊಯ್ಯುವ ಕೆಲಸ ಪತ್ರಿಕೆಗಳದು. ಎಲ್ಲಾ ಬಗೆಯ ಸುದ್ದಿ ತಿಳುವಳಿಕೆಯನ್ನು, ಆಲೋಚನೆಗಳನ್ನು ಸಂವಹನಗೊಳಿಸುವಲ್ಲಿ ಪತ್ರಿಕೆಗಳ ಪಾತ್ರ ಬಹಳ ಮುಖ್ಯವಾದುದು. ಇಲ್ಲಿ ಭಾಷೆಯ ಎಲ್ಲಾ ಸಾಧ್ಯತೆಗಳ ಬಳಕೆಯಾಗುತ್ತದೆ. ಒಂದು ಪರಿಸರವನ್ನು ಉತ್ತಮವಾಗಿ ನಿರ್ಮಿಸುವಲ್ಲಿ ಬಹಳ ಪರಿಣಾಮಕಾರಿಯಾದ ಕೆಲಸವನ್ನು ಪತ್ರಿಕೆಗಳು ಮಾಡುತ್ತವೆ. ಜನರಲ್ಲಿ ಹೊಸ ಆಲೋಚನೆಗಳನ್ನು ಹುಟ್ಟಿಸಿ ತನ್ಮೂಲಕ ಕ್ರೀಯಾಶೀಲತೆಯನ್ನು ಮೈಗೂಡಿಸಿಕೊಳ್ಳುವಂತೆ ಮಾಡುವ ಹೊಣೆಗಾರಿಕೆ ಪತ್ರಿಕೆಗಳದ್ದಾಗಿರುತ್ತದೆ.

---

[೨೯] ಬದುಕು-ಮೆಲುಕು. ಎಚ್.ಕೆ. ವೀರಣ್ಣಗೌಡ. ೧೯೭೪. ಪುಟ-೬೭

ಪ್ರಜಾಪ್ರಭುತ್ವದಲ್ಲಿ ಪತ್ರಿಕೆಗಳ ಪಾತ್ರ ಬಹಳ ಮಹತ್ತರವಾದದ್ದು. ಕನ್ನಡ ಸಾಹಿತ್ಯಕ್ಕೆ ದೀರ್ಘವಾದ ಇತಿಹಾಸವಿದೆ. ಹೊಸಗನ್ನಡ ಸಾಹಿತ್ಯದ ಕಾಲಾವಧಿಯಲ್ಲಿ ಒಮ್ಮೆಗೇ ಗದ್ಯ ಸಾಹಿತ್ಯದ ಮಹಾಪೂರವೇ ಹರಿಯತೊಡಗಿತು. ಇದಕ್ಕೆ ಕಾರಣವಾಗಿದ್ದು ಬಹಳ ಮಟ್ಟಿಗೆ ಪತ್ರಿಕೆಗಳು. ಗದ್ಯದ ಹರಹು ಕನ್ನಡ ಸಾಹಿತ್ಯದಲ್ಲಿ ಸಾಧ್ಯವಾಗಿದ್ದೇ ಪತ್ರಿಕೆಗಳ ಮೂಲಕ. ಕನ್ನಡ ಗದ್ಯ ಸಾಹಿತ್ಯದ ಪ್ರಕಾರಗಳಾದ ಕಾದಂಬರಿ, ಕತೆಗಳು ಬೆಳವಣಿಗೆಯ ಪ್ರಾರಂಭಿಕ ಹಂತದಲ್ಲಿದ್ದಾಗ ಅವುಗಳಿಗೆ ಪ್ರಕಟಗೊಳ್ಳುವ ಅವಕಾಶಕೊಟ್ಟದ್ದೇ ಅಂದಿನ ಪತ್ರಿಕೆಗಳು.

ಅನ್ವೇಷಕ ದೃಷ್ಟಿ, ಸಾಹಸಪ್ರಿಯತೆ ಕಾರಣಕ್ಕಾಗಿ ಆರಂಭಗೊಂಡು ಭಾರತ ತಲುಪಿದ ಐರೋಪ್ಯದ ಪಯಣ ತದನಂತರದಲ್ಲಿ ವ್ಯಾಪಾರ ಕೇಂದ್ರಿತವಾಗಿ ಕ್ರಮೇಣ ವಸಾಹತು ಸ್ಥಾಪನೆ ಮಾಡುವಷ್ಟರ ಮಟ್ಟಿಗೆ ಬೆಳೆಯಿತು. ಕೈಗಾರಿಕಾ ಕ್ರಾಂತಿಯ ಫಲದಿಂದಾಗಿ ಯೂರೋಪಿನಲ್ಲಿ ಬಳಕೆಗೆ ಬಂದ ಮುದ್ರಣ ಯಂತ್ರ ಭಾರತಕ್ಕೂ ಕಾಲಿಟ್ಟಿತು. ತಮ್ಮ ಧರ್ಮ ಪ್ರಚಾರಕ್ಕಾಗಿ ಮತ್ತು ಆಡಳಿತದ ಅನುಕೂಲಕ್ಕಾಗಿ ಮುದ್ರಣಾಲಯಗಳನ್ನು ಸ್ಥಾಪಿಸಿದರು. ಕಾಲಾಂತರದಲ್ಲಿ ಜೇಮ್ಸ್ ಆಗಸ್ಟನ್ ಹಿಕ್ಕಾಯು ಕಲ್ಕತ್ತದಲ್ಲಿ ೧೭೮೦ ರಲ್ಲಿ 'ಬೆಂಗಾಲ್ ಗೆಜೆಟ್' ಎಂಬ ಮೊದಲ ವಾರಪತ್ರಿಕೆ ಆರಂಭಿಸಿ ಭಾರತೀಯ ಪತ್ರಿಕಾ ರಂಗದ ಹರಿಕಾರನೆನಿಸಿದನು.[೨೬]

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪತ್ರಿಕೆಗಳ ಪಾತ್ರ ಗಣನೀಯವಾದುದು. ಪತ್ರಿಕೋದ್ಯಮ ಮುಕ್ತವಾಗಿದ್ದಾಗ ಮಾತ್ರ ಅಲ್ಲಿ ಪ್ರಜಾಪ್ರಭುತ್ವ ಇದೆಯೆಂದರ್ಥ. ಭಾರತಕ್ಕೆ ಸ್ವಾತಂತ್ರ್ಯ ಬಂದು ಪ್ರಜಾಪ್ರಭುತ್ವ ವ್ಯವಸ್ಥೆ ನೆಲೆಗೊಂಡ ಮೇಲೆ ಸಾಕಷ್ಟು ಪತ್ರಿಕೆಗಳು ಬಂದವು. ಪತ್ರಿಕಾ ಸ್ವಾತಂತ್ರ್ಯ ಇಲ್ಲಿ ಸಹಜವೇ ಆಯಿತು. ಆದರೆ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಸರ್ಕಾರದ ಆಳ್ವಿಕೆಯಲ್ಲಿ ಧೈರ್ಯದಿಂದ ಮುಕ್ತವಾಗಿ ಪತ್ರಿಕೆ ನಡೆಸುವುದು ಒಂದು ಸವಾಲಿನ ವಿಷಯವಾಗಿತ್ತು. ಈ ಸವಾಲನ್ನು ಅಂದು ದೇಶದಲ್ಲಿ ಅನೇಕ ಮಂದಿ ಸ್ವೀಕರಿಸಿದ್ದರು. ಅಂತಹ ಸವಾಲು ಸ್ವೀಕರಿಸಿದವರಲ್ಲಿ ವೀರಣ್ಣಗೌಡರೂ ಒಬ್ಬರಾಗಿದ್ದದ್ದು ವಿಶೇಷ. ಅಜ್ಞಾನದ ಸಂಬಂಧವನ್ನು ನೀಗಿಸುವಲ್ಲಿ ಜ್ಞಾನದೀವಿಗೆಯಾಗುವ ಶಕ್ತಿ ಇರುವುದು ಪತ್ರಿಕೆಗಳಿಗೆ. ಇದನ್ನು ಮನಗಂಡು ಈ ನಿಟ್ಟಿನಲ್ಲಿ ಪ್ರಯತ್ನ ಪಡುವವರು ಜ್ಞಾನದೀವಿಗೆಗಳಂತೆ ಎಂದರೆ ಅತಿಶಯೋಕ್ತಿಯಲ್ಲ. ಇಂತಹ ಒಂದು ಜ್ಞಾನದ ದೀವಿಗೆ ವೀರಣ್ಣಗೌಡರಾದುದು ಇಲ್ಲಿ ಅನನ್ಯವಾದ ಸಂಗತಿ.

ಸಾಕ್ಷರತೆ ಎಂಬ ಫಲವತ್ತಾದ ಭೂಮಿಕೆ ಇದ್ದಾಗ ಮಾತ್ರ ಪತ್ರಿಕೋದ್ಯಮ ಬೆಳೆಯಲು ಸಾಧ್ಯ. ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದಾಗ ಈ ಉದ್ಯಮ ನಡೆಸುವುದು ಕಷ್ಟದ ಸಂಗತಿ. ಇಂತಹ ಸನ್ನಿವೇಶದಲ್ಲಿ ಪತ್ರಿಕೋದ್ಯಮ ನಡೆಸಿದವರು ವೀರಣ್ಣಗೌಡರು. ಇದನ್ನೊಂದು ಉದ್ಯಮ ಎಂದು ಭಾವಿಸಿದ್ದರೆ ವೀರಣ್ಣಗೌಡರಿಗೆ ಇದು ಸಾಧ್ಯವಾಗುತ್ತಿರಲಿಲ್ಲವೇನೋ? ಕಾರಣ ಉದ್ಯಮ ಎಂದಾಕ್ಷಣ

---

26 ಕನ್ನಡ ವಿಶ್ವಕೋಶ. ಸಂ-೧೦.ಪು-೭೬೯. ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ. ಮೈಸೂರು-೧೯೮೦.

ಗಳಿಕೆ, ಲಾಭದ ಪ್ರಶ್ನೆ ಉದ್ಭವಿಸುತ್ತದೆ. ವೀರಣ್ಣಗೌಡರು ಲಾಭ ನಷ್ಟದ ಪ್ರಶ್ನೆ ಲೆಕ್ಕಿಸದೆ ಜನರಲ್ಲಿ ಉತ್ತಮ ಆಲೋಚನೆಗಳನ್ನು ಬಿತ್ತುವ, ಸ್ವಾತಂತ್ರ್ಯ ಚಳುವಳಿಗೆ ಅಣಿಗೊಳಿಸುವ ಒಂದು ಅಸ್ತ್ರವನ್ನಾಗಿ ಪತ್ರಿಕೆಯನ್ನು ಬಳಸಿಕೊಂಡರು.

ವಿದ್ಯಾರ್ಥಿ ದೆಸೆಯಿಂದಲೂ ಎಚ್.ಕೆ. ವೀರಣ್ಣಗೌಡರಿಗೆ ಬರೆಯುವ ಹಂಬಲ ಮತ್ತು ಆಸಕ್ತಿ ಎರಡು ಇತ್ತು. ಚಿಕ್ಕಂದಿನಲ್ಲಿ ವೃತ್ತ ಪತ್ರಿಕೆಗಳನ್ನು ಓದುವ ಹವ್ಯಾಸದಿಂದಾಗಿ ಅವರಲ್ಲಿ ಸಾಮಾನ್ಯಜ್ಞಾನ ಹೆಚ್ಚಿತು. ಈ ಕಾರಣದಿಂದ ವಿವಿಧ ವಿಷಯಗಳ ಬಗ್ಗೆ ತಮ್ಮ ಅನಿಸಿಕೆ, ಅಭಿಪ್ರಾಯಗಳು, ಜ್ಞಾನವನ್ನು ಅಭಿವ್ಯಕ್ತಗೊಳಿಸಬೇಕೆಂಬ ಹಂಬಲ ಅವರು ಲೇಖನಗಳನ್ನು ಬರೆಯುವಂತೆ ಮಾಡಿತೆನ್ನಬಹುದು. ಪತ್ರಿಕೆಗಳಿಗೆ ಶುದ್ಧ ಸಾಹಿತ್ಯವನ್ನು ಅಥವ ಸಾಮಾಜಿಕ ವಿಷಯಗಳನ್ನು ಕುರಿತಂತೆ ಲೇಖನಗಳನ್ನು ಬರೆದು ಕಳುಹಿಸುತ್ತಿದ್ದರು. ಪತ್ರಿಕಾ ಬರಹಗಳಿಗೆ ಗರಿಷ್ಠ ಪ್ರಮಾಣದ ಸಮಯವನ್ನು ಮೀಸಲಿಡುವುದು ಗೌಡರಿಗೆ ಹವ್ಯಾಸವಾಗಿತ್ತು. ಸಮಾಜ ಸೇವೆಗೆ ಪತ್ರಿಕೆ ಉತ್ತಮ ಸಾಧನವೆಂದು, ಸ್ವಾತಂತ್ರ್ಯ ಹೋರಾಟದಲ್ಲಿ ಪತ್ರಿಕೆಗಳ ಪಾತ್ರ ಮಹತ್ವದ್ದೆಂದೂ, ಜನ ಜಾಗೃತಿಗೆ ದೇಶಾಭಿವೃದ್ಧಿಗೆ ಪತ್ರಿಕೆ ಅನಿವಾರ್ಯವೆಂದೂ, ಪತ್ರಿಕೆಗಳ ಮೂಲಕ ಜನರ ಮನಸ್ಸನ್ನು ಪರಿವರ್ತಿಸಿ ಅವರಲ್ಲಿ ಬದಲಾವಣೆ ತರಲು ಸಾಧ್ಯ ಎಂಬ ಖಚಿತವಾದ ನಂಬಿಕೆ ವೀರಣ್ಣಗೌಡರಿಗೆ ಇತ್ತು. "ಪತ್ರಿಕಾರಂಗ ಹಲವು ಬಗೆಯ ಪ್ರತಿಭೆಯ ರಂಗ, ಹೀಗಾಗಿ ವೀರಣ್ಣಗೌಡರು ನೇರವಾಗಿ ಅಧಿಕೃತವಾಗಿ ಸಾರ್ವಜನಿಕ ಕ್ಷೇತ್ರವನ್ನು ಪತ್ರಕರ್ತರಾಗಿ, ಸಂಪಾದಕರಾಗಿ ಪ್ರವೇಶಿಸಿದ್ದು ಆಶ್ಚರ್ಯವಲ್ಲ. ಅದೊಂದು ಸಹಜ ಬೆಳವಣಿಗೆ."[೨೭]

ವಿದ್ಯಾರ್ಥಿಯಾಗಿದ್ದಾಗಲೇ ವೀರಣ್ಣಗೌಡರು ಇತರ ಸಾಮಾನ್ಯ ವಿದ್ಯಾರ್ಥಿಗಳಂತೆ ಇರದೆ ತಮ್ಮ ವಯಸ್ಸಿಗೂ ಮೀರಿದ ಬುದ್ಧಿಮತ್ತೆಯಿಂದ ಜವಾಬ್ದಾರಿಯುತವಾಗಿ ನಡೆದುಕೊಳ್ಳುತ್ತಿದ್ದುದು ವಂಶಪಾರಂಪರ್ಯವಾಗಿ ಬಂದಿದ್ದ ಲಕ್ಷಣವೆಂದು ಪರಿಗಣಿಸಿದರೂ ಸಾಮಾನ್ಯವಾಗಿ ವಿಶೇಷ ಗುಣಲಕ್ಷಣವೆಂದೇ ಹೇಳಬೇಕು. ತಮ್ಮ ವೈಯಕ್ತಿಕ ಅಭಿವೃದ್ಧಿಯ ಕಡೆ ಆಸಕ್ತಿ ವಹಿಸುವುದಕ್ಕಿಂತಲೂ ತನ್ನಂತೆ ಕಲಿಯಲು ಬರುತ್ತಿದ್ದ ವಿದ್ಯಾರ್ಥಿಗಳ ಜ್ಞಾನಾಭಿವೃದ್ಧಿಗೆ ಮತ್ತು ಅವರ ಅಭಿವ್ಯಕ್ತಿಗೆ ಒಂದು ಮಾಧ್ಯಮದ ಅವಶ್ಯಕತೆಯನ್ನು ಮನಗಂಡು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ತನ್ನ ಸಹಪಾಠಿಗಳಾದ ವಿ.ವೆಂಕಟಪ್ಪ ಮತ್ತು ಟಿ.ಮಾದೇಗೌಡ ಅವರೊಂದಿಗೆ ಸೇರಿ ಪತ್ರಿಕೆಯೊಂದನ್ನು ಪ್ರಾರಂಭಿಸಲು ನಿರ್ಧರಿಸಿದ್ದರು. ಅಲ್ಲದೆ ಬಡವಿದ್ಯಾರ್ಥಿಗಳು ದೂರದೂರಿನಿಂದ ಬಂದು ಕಲಿಯಲು ಅನುಕೂಲವಾಗಲೆಂದು ಒಕ್ಕಲಿಗರ ವಿದ್ಯಾರ್ಥಿನಿಲಯವನ್ನು ಶ್ರೀಮಂತ ವಿದ್ಯಾರ್ಥಿಗಳ ಸಹಾಯದಿಂದ ಪ್ರಾರಂಭಿಸಿದರು. ವಿದ್ಯಾರ್ಥಿನಿಯಲದ ವಿದ್ಯಾರ್ಥಿಗಳಿಗೆ ಪ್ರತಿನಿತ್ಯ ವ್ಯಾಯಾಮ ಮಾಡಿಸುವ ಮೂಲಕ ಅವರು ಶಿಸ್ತಿನಿಂದ ವರ್ತಿಸುವಂತೆ ಮಾಡಿತ್ತಿದ್ದರು. ಸ್ಕೌಟ್ ತರಬೇತುದಾರರಾಗಿ ಇತರ ಸಹಪಾಠಿಗಳಿಗೆ ಕಲಿಸುತ್ತಿದ್ದ ರೀತಿನೀತಿ– ಇವೆಲ್ಲ ಅವರ ಚಿಕ್ಕಂದಿನ ವಿಶೇಷ ಗುಣಕ್ಕೆ ಸಾಕ್ಷಿಯಾಗಿವೆ.

---

[27] ಎಂ,ಎಚ್.ಕೃಷ್ಣಯ್ಯ. ಚಿರಂತರ ಚೈತನ್ಯ. ೧೯೯೯. ಪುಟ–೮.

ಹೈಸ್ಕೂಲ್ ವಿದ್ಯಾರ್ಥಿ ಸಮೂಹದಲ್ಲಿ ಪತ್ರಿಕೆಯೊಂದನ್ನು ಪ್ರಾರಂಭಿಸುವುದಕ್ಕೆ ನಿರ್ಧರಿಸಿದ ವೀರಣ್ಣಗೌಡರು ಆ ಪತ್ರಿಕೆಗೆ 'ಒಕ್ಕಲಿಗರ ಪತ್ರಿಕೆ ಎಂಬ ಹೆಸರಿಡಬೇಕೆಂದು ನಿಶ್ಚಯಿಸಿ, ತಮ್ಮ ಪ್ರಥಮ ಸಂಚಿಕೆಗೆ ಸಂದೇಶ ಕೇಳಲು ಅಂದಿನ ಗಣ್ಯವ್ಯಕ್ತಿ ಕೆ.ಎಚ್.ರಾಮಯ್ಯ ಅವರಲ್ಲಿಗೆ ಹೋದರು. ಪೂರ್ವಭಾವಿಯಾಗಿ ಪತ್ರಿಕೆ ಆರಂಭಿಸಲು ವಿದ್ಯಾರ್ಥಿಗಳು ಹೊಂದಿದ್ದ ಅಭಿಪ್ರಾಯವನ್ನೆಲ್ಲಾ ಕೇಳಿ ಪತ್ರಿಕೆ ಹೊರಡಿಸುವುದು ಸರಿಯಾದರೂ ಅದರ ಹೆಸರಿನ ವಿಷಯದಲ್ಲಿ ಅವರು ಬಹಳ ಅಸಮಧಾನ ಸೂಚಿಸಿದರು. ಆಗ ಒಕ್ಕಲಿಗರ ಒಳಪಂಗಡಗಳಲ್ಲಿ ಒಗ್ಗಟ್ಟು ಮೂಡಿಸಲು ಒಕ್ಕಲಿಗರ ಸಂಘ, ಒಕ್ಕಲಿಗರ ಪತ್ರಿಕೆ ಇವುಗಳ ಅಗತ್ಯವಿದೆ ಎಂಬುದು ವೀರಣ್ಣಗೌಡ ಮತ್ತು ಸಂಗಡಿಗರ ಅಭಿಪ್ರಾಯವಾಗಿತ್ತು. ಆದರೆ ಕೆ.ಎಚ್.ರಾಮಯ್ಯನವರು 'ಕಾಲಕ್ಕೆ ತಕ್ಕಂತೆ ನಾವು ನಡೆಯಬೇಕು. ಈ ಕಾಲದಲ್ಲಿ ಜಾತಿಯ ಹೆಸರುಗಳು ಹೆಚ್ಚಾಗಿರಬಾರದು ನಮ್ಮಲ್ಲಿ ವಿಶಾಲಭಾವನೆ ಮೂಡಬೇಕು. ಬೇರೆ ಬೇರೆ ಜಾತಿ ಮತಗಳ ವಿದ್ಯಾರ್ಥಿಗಳೊಡನೆ ಸಮರಸದಿಂದ ಬಾಳಬೇಕೆಂಬುದು ನಮ್ಮ ಅಭಿಪ್ರಾಯವಾಗಿರಬೇಕು. ನೀವು ಅದನ್ನು ಚನ್ನಪಟ್ಟಣದ ಒಕ್ಕಲಿಗ ವಿದ್ಯಾರ್ಥಿ ಸಂಘದ ಉದ್ದೇಶದಲ್ಲಿ ತಿಳಿಸಿದ್ದೀರಿ. ಸಂತೋಷ, ಆದರೆ ನಿಮ್ಮದನ್ನು ಅಂತಹ ಜಾತಿ ವಿದ್ಯಾರ್ಥಿ ಪತ್ರಿಕೆ ಎಂದೇಕೆ ಕರೆಯಬೇಕು. ಅದಕ್ಕಿಂತ ವಿಶಾಲವಾದ 'ಕರ್ನಾಟಕ 'ವಿದ್ಯಾರ್ಥಿ' ಎಂಬ ಹೆಸರು ಎಷ್ಟು ಶೋಭಾಯಮಾನವಾಗಿರುತ್ತೆ? ಅಪ್ಪ ಹಾಕಿದ ಆಲದ ಮರ ಎಂದು ಜಾತಿ ಹೆಸರಿಗೇ ಅಂಟಿಕೊಳ್ಳಬೇಕೆ? ಉದಾರಭಾವನೆ ನಿಮ್ಮಲ್ಲಿ ಬೆಳೆಯಬೇಕಾದರೆ ಜಾತಿ, ಮತ, ಸ್ಥಳಭಾವನೆ ಹೋಗಬೇಕು! ಆದುದರಿಂದ ಪತ್ರಿಕೆಯ ಹೆಸರು ಬದಲಾಯಿಸದಿದ್ದರೆ ಸಂದೇಶ ನೀಡುವುದಿಲ್ಲ'[28] ತಮ್ಮ ಅಭಿಪ್ರಾಯ ಸ್ಪಷ್ಟಪಡಿಸಿದರು. ಕೆ.ಎಚ್.ರಾಮಯ್ಯನವರ ಮಾತಿನಿಂದ ಪ್ರಭಾವಿತರಾದ ಹೆಚ್.ಕೆ.ವೀರಣ್ಣಗೌಡರಿಗೆ ಇದು ಸತ್ಯ ಹಾಗೂ ಸಮಂಜಸವೆನಿಸಿತು. ತಮ್ಮ ಮತ್ತು ಸಂಗಡಿಗರೊಂದಿಗಿನ ಒಕ್ಕಲಿಗರ ಪತ್ರಿಕೆ ಹೆಸರಿನ ಲೆಟರ್ ಹೆಡ್‌ಗಳನ್ನು ನಾಶಗೊಳಿಸಿ ' ಕರ್ನಾಟಕ ವಿದ್ಯಾರ್ಥಿ' ಎಂಬ ಹೆಸರಿನಿಂದ ಪತ್ರಿಕೆ ಪ್ರಾರಂಭಿಸಿದರು. ಆ ಪತ್ರಿಕೆ ವೀರಣ್ಣಗೌಡರ ವಿದ್ಯಾಭ್ಯಾಸದ ನಂತರ ಅಂದರೆ ಮೂರು ವರ್ಷಗಳು ನಡೆದು ನಿಂತು ಹೋಯಿತು. ಕಾರಣ ವೀರಣ್ಣಗೌಡರಂತಹ ಸಾಮಾಜಿಕ ಕಾಳಜಿಯನ್ನು ಹೊತ್ತ ಯೊವೊಬ್ಬ ವಿದ್ಯಾರ್ಥಿಯು ಪತ್ರಿಕೆಯ ನಿರ್ವಹಣೆಗೆ ಮುಂದೆ ಬರದೆ ಹೋದರು. ಆ ಪತ್ರಿಕೆಗೆ ಅಂದಿನ ಪ್ರಸಿದ್ಧ ಸಾಹಿತಿಗಳು, ಲೇಖಕರು ಆಗಿದ್ದ ಸಾಲಿ ರಾಮಚಂದ್ರರಾವ್, ಕಡೆಂಗೋಡ್ಲು ಶಂಕರಭಟ್ಟರು ತಮ್ಮ ಲೇಖನಗಳನ್ನು ನೀಡಿ ಸಹಕರಿಸುತ್ತಿದ್ದರು ಇದರಿಂದ 'ಕರ್ನಾಟಕ ವಿದ್ಯಾರ್ಥಿ' ಪತ್ರಿಕೆ ತನ್ನ ಮೊದಲ ವರ್ಷ ಪೂರೈಸಿದ ಸಂದರ್ಭದಲ್ಲಿ ತಮ್ಮ 'ಆಶಾ' ನೀಳ್ಗತೆಯ ಪುಸ್ತಕವನ್ನು ಎಲ್ಲಾ ಚಂದಾದಾರರಿಗೂ ಉಚಿತವಾಗಿ ವಿತರಿಸಲಾಯಿತು ಆ ಪತ್ರಿಕೆ ಕೈಬರಹದ ಪತ್ರಿಕೆಯಾಗಿತ್ತು ಎಂದು ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ಸ್ಮರಿಸಿದ್ದಾರೆ.

ವಿದ್ಯಾಭ್ಯಾಸದ ನಂತರ ಉಪಾಧ್ಯಾಯ ವೃತ್ತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ವೀರಣ್ಣಗೌಡರು, ಬೆಂಗಳೂರು ಒಕ್ಕಲಿಗರ ಪತ್ರಿಕೆಯ ಸಂಪಾದಕ ಹುದ್ದೆಗೆ ಅರ್ಜಿ ಸಲ್ಲಿಸಿದರು. ರಾಜ್ಯದಿಂದ ಮತ್ತು

---

[28] ಬದುಕು- ಮೆಲುಕು, ಎಚ್.ಕೆ.ವೀರಣ್ಣಗೌಡ, ೧೯೭೪, ಪುಟ -೭

ರಾಜ್ಯದ ಹೊರಗಡೆಯಿಂದ ಬಂದ ಪದವೀಧರರು,ಸ್ನಾತಕೋತ್ತರ ಪದವೀಧರರು, ಹಲವು ಪದವಿಗಳನ್ನು ಪಡೆದಿದ್ದ ಅರ್ಜಿದಾರರಲ್ಲಿ ಹೆಚ್.ಕೆ.ವೀರಣ್ಣಗೌಡರು ಆಯ್ಕೆಯಾಗಿದ್ದರು. ಕಾರಣ ಒಕ್ಕಲಿಗರ ಸಂಘದ ಕಾರ್ಯಕಾರಿ ಸಮಿತಿ ಮೊದಲಿನಿಂದ ವೀರಣ್ಣಗೌಡರಿಗಿದ್ದ ಜಾತಿ ಸಂಬಂಧಿತ ಅರ್ಹತೆಗಿಂತ ಅವರ ಪತ್ರಿಕಾ ಸಂವೇದನೆ ಮತ್ತು ಸೇವೆಯನ್ನು ಗುರ್ತಿಸಿ ಆಯ್ಕೆಮಾಡಿದ್ದರು. ವೀರಣ್ಣಗೌಡರಿಗಿದ್ದ ಸಂಪಾದಕತ್ವದ ಅನುಭವ ಹಾಗು ಅವರ ಲೇಖನಗಳ ಮೂಲಕ ಅವರ ಆಸಕ್ತಿಯನ್ನು ಗುರ್ತಿಸಲಾಗಿತ್ತು. ವೀರಣ್ಣಗೌಡರಿಗೆ ಮೊದಲಿನಿಂದಲೂ ಪತ್ರಿಕೆಯಬಗ್ಗೆ ಹೆಚ್ಚು ಆಸಕ್ತಿ ಇದ್ದುದ್ದರಿಂದ ತಮ್ಮ ಮನದಾಳದ ಆಸೆ-ಆಸಕ್ತಿಗೆ ಹೆಚ್ಚು ಒತ್ತು ನೀಡಿದ್ದರಿಂದ ಉಪಾಧ್ಯಾಯ ವೃತ್ತಿಯನ್ನು ಬಿಟ್ಟು ಪತ್ರಿಕಾ ಸಂಪಾದಕರಾಗಿ ಸೇವೆ ಪ್ರಾರಂಭಿಸಿದರು. ಇದರಿಂದ ಗೌಡರು ಪತ್ರಿಕೋಧ್ಯಮದಲ್ಲಿ ಮತ್ತಷ್ಟು ಪ್ರಬುದ್ಧನಾಗಲು ಅನುಕೂಲಕರ ವಾತಾವರಣ ದೊರೆತಂತಾಯಿತು. 'ಒಕ್ಕಲಿಗರ ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡು ಪತ್ರಿಕಾ ವೃತ್ತಿಗೆ ಧುಮುಕಿದುದು ಅವರ ಬಾಳಿನಲ್ಲೊಂದು ನಿರ್ಣಾಯಕ ತಿರುವೆಂದು ಹೇಳಬಹುದು. ಮೊದಲೇ ಅವರಲ್ಲಿ ಸುಪ್ತವಾಗಿದ್ದ ಸರ್ವಂಕಷ ಪ್ರತಿಭೆ ವಿಕಾಸಗೊಳ್ಳಲು ಅನುಕೂಲವಾದ ಪರಿಸರ ದೊರಕಿದಂತಾಯಿತು. ಸಂಪಾದಕತ್ವ ಅವರ ಆಲೋಚನಾ ಶಕ್ತಿ-ಸಾಮರ್ಥ್ಯಗಳಿಗೆ ಒರೆಗಲ್ಲಾಯಿತು. ಎಳವೆಯಿಂದ ರೂಪುಗೊಳ್ಳುತ್ತಿದ್ದ ಅವರ ಲೇಖನ ಕಲೆಗೆ ಸ್ಫೂರ್ತಿ ಪ್ರೋತ್ಸಾಹಗಳು ದೊರೆತಂತಾಯಿತು. ಅವರ ಲೇಖಾನುಭವ ವಿಸ್ತಾರಗೊಂಡುದಲ್ಲದೆ ಕರ್ನಾಟಕದಲ್ಲೆಲ್ಲ ಅವರ ಹೆಸರು ಹರಡುವಂತಾಯಿತು'[29]_ಎಂದು ದೇ.ಜವರೇಗೌಡರು ತಮ್ಮ ಅಕ್ಷರ ಜ್ಞಾನಕ್ಕೆ ದಾರಿ ತೋರಿದ ಗುರು ಹೆಚ್.ಕೆ.ವೀರಣ್ಣಗೌಡರ ಬಗ್ಗೆ ವ್ಯಕ್ತಪಡಿಸಿರುವ ಈ ಅಭಿಪ್ರಾಯ ವೀರಣ್ಣಗೌಡರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

**ಒಕ್ಕಲಿಗರ ಪತ್ರಿಕೆ:-** ಒಕ್ಕಲುತನ ಎಂದರೆ ವ್ಯವಸಾಯ, ಕೃಷಿ ಎಂದರ್ಥ. ನಮ್ಮ ದೇಶದ ಶೇ.೭೫ಕ್ಕೂ ಹೆಚ್ಚು ಮಂದಿಯ ತಮ್ಮ ಜೀವನೋಪಾಯಕ್ಕೆ ಕೃಷಿಯನ್ನೇ ಅವಲಂಬಿಸಿದ್ದಾರೆ. ಆದರೆ ಈ ರೈತಾಪಿ ಸಮುದಾಯದಲ್ಲಿ ಬಹಳ ಮಂದಿ ಅನಕ್ಷರಸ್ಥರು. ಅಕ್ಷರಲೋಕದ ತಿಳುವಳಿಕೆಯನ್ನು ಪಡೆದ ಕೆಲವರು ತಮ್ಮ ಸಮುದಾಯಗಳ ಅಜ್ಞಾನ ಅನಕ್ಷರತೆ ಬಗ್ಗೆ ಚಿಂತಿಸಿದರು. ಶ್ರಮಜೀವಿಗಳಾದ ತಮ್ಮ ಬಾಂಧವರೂ ವಿದ್ಯೆಯ ಅರಿವನ್ನು ಪಡೆದು ಹೊರಪ್ರಪಂಚದ ವಿದ್ಯಮಾನಗಳನ್ನು ಅರಿಯಬೇಕೆಂಬ ಆಶಯ ಇವರಲ್ಲಿ ಮೂಡಿತು. ಹಾಗಾಗಿ ಅವರ ಕಷ್ಟನಷ್ಟಗಳು ಪರಿಹಾರವಾಗಬೇಕಾದರೆ ಅವರಿಗೆ ಸೂಕ್ತ ಮಾರ್ಗದರ್ಶನ ಕೊಡುವ ವ್ಯವಸ್ಥೆಯ ಅಗತ್ಯವಿದೆ ಎಂದು ಭಾವಿಸಿದರು. ಈ ಎಲ್ಲಾ ವಿಚಾರಗಳನ್ನು ಕುರಿತು ಆಲೋಚಿಸುವ ಒಂದು ಸಂಘಟನೆಯ ಬಗ್ಗೆ ಮನಗಂಡ ವಿದ್ಯಾವಂತ ಒಕ್ಕಲಿಗರು ೧೯೦೬ರಲ್ಲಿ ಒಕ್ಕಲಿಗರ ಸಂಘವನ್ನು ಸ್ಥಾಪಿಸಿದರು. ಇವರಲ್ಲಿ ಬಯ್ಯಣ್ಣ, ಬಿ.ಎನ್.ಚನ್ನಿಗಪ್ಪ, ಕೆ.ಎಚ್.ರಾಮಯ್ಯ ಸೇರಿದಂತೆ ಒಂಬತ್ತು ಜನ ಗಣ್ಯ ಒಕ್ಕಲಿಗರು ಪ್ರಮುಖರಾದವರು. ಹೀಗೆ ಒಕ್ಕಲಿಗರ ಸಂಘ ಪ್ರಾರಂಭವಾದ ಆರಂಭಿಕ ಹಂತದಲ್ಲಿ ಶ್ರೀ ರಾಮಯ್ಯನವರು ಊರು ಊರನ್ನು ಸುತ್ತಿ ತಮ್ಮ

---

[29] ಬದುಕು-ಮೆಲುಕು, ೧೯೭೪, ಪುಟ-V

ಉಪನ್ಯಾಸಗಳಿಂದ ಜನರಲ್ಲಿ ಸ್ಫೂರ್ತಿಯನ್ನು ತುಂಬಿ ಒಕ್ಕಲಿಗರ ಸಂಘದ ಸ್ಥಾಪನೆಯ ಉದ್ದೇಶ ತಿಳಿಸಿ ಆ ಮೂಲಕ ಒಕ್ಕಲಿಗರ ಏಳಿಗೆ ಸಾಧ್ಯ ಎಂದು ಜನರಿಗೆ ಸ್ಪಷ್ಟಪಡಿಸಿದರು. ನಂತರ ಸಂಘದ ಧ್ಯೇಯೋದ್ದೇಶಗಳನ್ನು ಜನಸಾಮಾನ್ಯರಿಗೆ ತಲುಪಿಸುವ ದೃಷ್ಟಿಯಿಂದ ಪತ್ರಿಕೆಯ ಅಗತ್ಯವನ್ನು ಮನಗಂಡರು. ಹೀಗಾಗಿ ೧೯೦೭ರಲ್ಲಿ ಒಕ್ಕಲಿಗರ ಪತ್ರಿಕೆಯನ್ನು ಸ್ಥಾಪಿಸಿದರು. ಈ ಪತ್ರಿಕೆ ಪ್ರಾರಂಭದಲ್ಲಿ ಆ ಕಾಲದ ಸ್ಟ್ಯಾಂಡರ್ಡ್ 'ನುಡಿ ಗನ್ನಡಿ' ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದ ಶ್ರೀನಿವಾಸ ಅಯ್ಯರ್ ಅವರ ಬೆಂಗಳೂರು ಕೋಟೆ ಪ್ರದೇಶದ ಮುದ್ರಣಾಲಯದಲ್ಲಿ ಪ್ರಕಟವಾಗುತ್ತಿತ್ತು. ೧೯೨೩ರ ವೇಳೆಗೆ ಸಂಘದಲ್ಲಿ ಮುದ್ರಣಾಲಯ ಕಟ್ಟಡ ನಿರ್ಮಾಣ ಮಾಡಿ ಅಲ್ಲಿಗೆ ಸ್ಥಳಾಂತರವಾಯಿತು. ವಿದೇಶದಲ್ಲಿ ತಜ್ಞತೆ ಪಡೆದು ಬಂದಿದ್ದ ಬಿ.ಪುಟ್ಟಯ್ಯನವರು ಪತ್ರಿಕೆ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಬಿ.ಪುಟ್ಟಯ್ಯನವರ ಸಂಪಾದಕತ್ವದಲ್ಲಿ ಟ್ಯಾಬ್ಲಾಲ್ಡ್ (೨೮ಸೆಂ. ಮೀ. ಅಗಲವಾದ ೬೧ ಸೆಂ. ಮೀ. ಉದ್ದದ ಅಳತೆಯ ನಿಯತ ಕಾಲಿಕ) ಮಾದರಿಯ ಪತ್ರಿಕೆ, ಸಮಾಚಾರ, ಸುದ್ದಿವಿಶ್ಲೇಷಣೆ, ಸಂಪಾದಕೀಯ ಲೇಖನಗಳಿಂದಾಗಿ ಸಂಸ್ಥಾನದಾದ್ಯಂತ ಪ್ರಸಿದ್ಧವಾಗಿತ್ತಲ್ಲದೆ ಮಹಾರಾಜರ ಮನ್ನಣೆಗೂ ಒಳಗಾಗಿತ್ತು.

ಜನವರಿ ೧, ೧೯೨೭ರಂದು 'ಒಕ್ಕಲಿಗರ ಪತ್ರಿಕೆ'ಯ ಸಂಪಾದಕತ್ವ ವಹಿಸಿಕೊಂಡ ವೀರಣ್ಣಗೌಡರಿಗೆ ಮೊದಲಿಗೆ ಪತ್ರಿಕೆಯ ಚಂದಾದಾರರ ಸಂಖ್ಯೆ ಮತ್ತು ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿ, ಆ ಮೂಲಕ ಪತ್ರಿಕೆಯನ್ನು ಆರ್ಥಿಕವಾಗಿ ಗಟ್ಟಿಗೊಳಿಸುವ ಮತ್ತು ಹೆಚ್ಚು ಜನ ಸಾಮಾನ್ಯರನ್ನು ತಲುಪುವಂತಹ ಅಂಶಗಳ ಕಡೆ ಹೆಚ್ಚು ಒತ್ತು ನೀಡ ಬೇಕೆಂದೆನಿಸಿತು. ಅವರ ಪ್ರಯತ್ನದ ಫಲವಾಗಿ ಒಕ್ಕಲಿಗರ ಪತ್ರಿಕೆ ಶ್ರೀಸಾಮಾನ್ಯನಿಗೂ ತಲುಪುವಂತೆ ಆಗಿದ್ದು ಗಮನಾರ್ಹವಾದುದು. ಆ ಕಾಲದಲ್ಲಿ ಪತ್ರಿಕೆಯ ಪ್ರಧಾನ ಲೇಖನ(ಸಂಪಾದಕೀಯ) ವನ್ನು ಇಂಗ್ಲೀಷಿನಲ್ಲಿ ಬರೆದು ಪ್ರಕಟಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಒಕ್ಕಲಿಗರ ಪತ್ರಿಕೆಯ ಪ್ರಧಾನ ಲೇಖನವನ್ನು ಸಂಘದ ಅಧ್ಯಕ್ಷರಾಗಿದ್ದ ಬಿ.ಕೆಂಪಣ್ಣನವರ ಹಿರಿಯ ಮಗ ಬಿ.ಕೆ.ಶಾಮಣ್ಣನವರು ಬರೆಯುತ್ತಿದ್ದರು. ಅವರು ನ್ಯಾಯಶಾಸ್ತ್ರ ಪದವೀಧರರಾಗಿದ್ದರು. ಅವರ ಇಂಗ್ಲೀಷ್ ಬರವಣಿಗೆ ಮತ್ತು ಮಾತು ಥೇಟ್ ಇಂಗ್ಲೀಷಿನವರಂತೆಯೇ ಇರುತ್ತಿತ್ತು ಎಂದು ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ಸ್ಮರಿಸಿದ್ದಾರೆ. ಇಂಗ್ಲೀಷಿನಲ್ಲಿದ್ದ ಪ್ರಧಾನ ಸಂಪಾದಕೀಯವನ್ನು ವೀರಣ್ಣಗೌಡರು ಕನ್ನಡಕ್ಕೆ ಅನುವಾದಿಸಿ, ಆ ಅನುವಾದಿತವನ್ನು ಮೊದಲು ಬಿ.ಕೆ.ಶಾಮಣ್ಣನವರಿಗೆ ತೋರಿಸಬೇಕೆಂಬ ಆದೇಶವಿದ್ದಿದ್ದರಿಂದ ಅವರಿಗೆ ತೋರಿಸುತ್ತಿದ್ದರು. ನಂತರ ಭಾಷಾಂತರ ಬಹಳ ಉತ್ತಮವಾಗಿದ್ದು, ಪ್ರಧಾನ ಲೇಖನದ ಅಭಿಪ್ರಾಯಕ್ಕೆ ಕುಂದಿಲ್ಲದಂತೆ ಸ್ವತಂತ್ರ ಲೇಖನದಂತೆ ಇದ್ದುದರಿಂದ, ಬಿ.ಕೆ.ಶಾಮಣ್ಣನವರು ವೀರಣ್ಣಗೌಡರಿಗೆ ಇನ್ನು ಮುಂದೆ ಲೇಖನದ ಭಾಷಾಂತರವನ್ನು ತೋರಿಸಬೇಕಾದ ಅಗತ್ಯವಿಲ್ಲವೆಂದು ತಾವೇ ಭಾಷಾಂತರ ಮಾಡಿದ್ದರೆ ನಿಮ್ಮಷ್ಟು ಚೆನ್ನಾಗಿ ಬರೆಯುತ್ತಿರಲಿಲ್ಲವೆಂಬ ಅಭಿಪ್ರಾಯ ವ್ಯಕ್ತ ಪಡಿಸಿದರು. ಇದರಿಂದ ಇಂಟರ್ ಮೀಡಿಯೆಟ್ ಓದಿದ್ದ ವೀರಣ್ಣಗೌಡರಿಗೆ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳ ಮೇಲಿನ ಹಿಡಿತ ಮತ್ತು ಜ್ಞಾನ ಮತ್ತಷ್ಟು ವೃದ್ಧಿಗೊಳ್ಳಲು ಅನುಕೂಲವಾಯಿತು.

ಒಕ್ಕಲಿಗರ ಪತ್ರಿಕೆಯಲ್ಲಿ ತಮ್ಮ ಸ್ವಂತ ಅಭಿಪ್ರಾಯಾನುಸಾರ ಪ್ರಚಲಿತ ವಿಷಯಗಳನ್ನು ಕುರಿತು ಪ್ರತಿವಾರವೂ ಎರಡು ಉಪಸಂಪಾದಕೀಯ ಲೇಖನಗಳನ್ನು ಕನ್ನಡದಲ್ಲಿ ಬರೆಯುತ್ತಿದ್ದರು. 'ಅವು ಓದುಗರ ಮೆಚ್ಚಿಗೆ ಪಡೆದಿದ್ದವು ಎಂಬುದಕ್ಕೆ ಅವರ ಸ್ನೇಹಿತರು ಅವರಿಗೆ ಪತ್ರ ಬರೆದು ತಿಳಿಸಿದ್ದರು' ಎಂದು ವೀರಣ್ಣಗೌಡರು ತಮ್ಮ ಆತ್ಮಕಥೆ ಬದುಕು-ಮೆಲುಕಿನಲ್ಲಿ ಹೇಳಿಕೊಂಡಿದ್ದಾರೆ. ನಂತರದಲ್ಲಿ 'ಬೀದಿ ಮಾತು', 'ಮಾತುಗಾರ ಮಲ್ಲನಿಂದ' ಎಂಬ ಲೇಖನ ಮಾಲೆ ಓದುಗರನ್ನು ಬಹಳವಾಗಿ ಆಕರ್ಷಿಸಿದವು. ಇದರಿಂದ ಪತ್ರಿಕೆ ಜನಪ್ರಿಯವಾಯಿತು ಜೊತೆಗೆ ಪತ್ರಿಕೆಯ ಚಂದಾದಾರರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಚಿತ್ರಗುಪ್ತ ಸ್ಮರಣೆ ಕೃತಿಯಲ್ಲಿ ಉಲ್ಲೇಖಿತವಾಗಿರುವಂತೆ ತಮ್ಮ ಬೀದಿಮಾತು ಲೇಖನ ಮಾಲೆ ಓದುಗರಲ್ಲಿ ಒಂದು ಆಂದೋಲನವನ್ನೇ ಉಂಟು ಮಾಡಿತ್ತು.[30] ಒಟ್ಟಾರೆ ಪತ್ರಿಕೆ ಅರ್ಥ ಪೂರ್ಣವಾಗಿ ಪ್ರಕಟವಾಗುವುದರ ಕಡೆಗೆ ವೀರಣ್ಣಗೌಡರು ಗಮನ ಕೊಟ್ಟರು. ಬೆಂಗಳೂರು ಒಕ್ಕಲಿಗರ ಪತ್ರಿಕೆ ಮೈಸೂರು ಸಂಸ್ಥಾನದ ಪ್ರಮುಖ ವಾರ ಪತ್ರಿಕೆಗಳಲ್ಲಿ ಒಂದಾಗಿತ್ತು. 'ಯಜಮಾನ್ ವೀರಬಸಪ್ಪನವರು ಪ್ರಾರಂಭಿಸಿದ 'ಮೈಸೂರು ಸ್ಟಾರ್', ತಿರುಮಲೆ ತಾ. ಶರ್ಮರ 'ವಿಶ್ವಕರ್ನಾಟಕ', ಬಿ.ಎನ್.ಗುಪ್ತರ 'ಪ್ರಜಾಮತ' ಜೊತೆಗೆ ಒಕ್ಕಲಿಗರ ಸಂಘದ ಪ್ರಕಟಣೆಯಾದ 'ಒಕ್ಕಲಿಗರ ಪತ್ರಿಕೆ' ೧೯೨೦ ರ ದಶಕದ ಮೈಸೂರು ಸಂಸ್ಥಾನದ ಉಲ್ಲೇಖನಾರ್ಹವಾದ ಕೆಲವು ಪ್ರಮುಖ ವಾರಪತ್ರಿಕೆಗಳಾಗಿದ್ದವು'[31]

ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ವೀರಣ್ಣಗೌಡರ ಬರಹಗಳು ರೈತ ಸಮುದಾಯದ ಸಂಘಟನೆಗೆ ಸ್ಫೂರ್ತಿಯಾಗಿ ಪರಿಣಮಿಸಿದ್ದವು. ಪತ್ರಿಕೆಗಳಲ್ಲಿ ದೇಶದ ಆಗುಹೋಗುಗಳೇ ಬಹುಪಾಲು ಪ್ರಕಟಗೊಳ್ಳುವುದು ವಾಡಿಕೆ. ಆದರೆ ಈ ವಿಷಯಗಳೊಂದಿಗೆ ವ್ಯವಸಾಯಕ್ಕೆ ಸಂಬಂಧಿಸಿದಂತೆ, ರೈತರ ಸಮಸ್ಯೆಗಳನ್ನು ಕುರಿತಂತೆ ಪತ್ರಿಕೆಗಳಲ್ಲಿ ವರದಿ, ಚರ್ಚೆ ನಡೆಯುತ್ತಿದ್ದದು ವಿರಳ. ಕೃಷಿಕರಲ್ಲಿ ಸಾಮಾನ್ಯವಾಗಿದ್ದ ಬಡತನ, ಅನಕ್ಷರತೆಯಿಂದಾಗಿ ಸಾಂಪ್ರದಾಯಿಕ ಕೃಷಿಯಲ್ಲದೆ ಇತರೆ ಸಾಧ್ಯತೆಗಳ ಬಗ್ಗೆ ತಿಳಿವಳಿಕೆ ಕಡಿಮೆಯಿದ್ದ ಕಾಲವದು. ಈ ಕೊರತೆಯನ್ನು ಮನಗಂಡು ಕೃಷಿಗೆ ಸಂಬಂಧಿಸಿದ ಸಂಗತಿಯನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟ ಮಾಡುತ್ತಿದ್ದ ಪತ್ರಿಕೆಗಳು ಒಂದೆರಡು ಮಾತ್ರವಾಗಿದ್ದವು. ಉದಾ: ಮೈಸೂರು ಸ್ಟಾರ್, ಸಾಧ್ವಿ ಎಂಬ ದಿನಪತ್ರಿಕೆಗಳು. ವೀರಣ್ಣಗೌಡರ ಸಂಪಾದಕತ್ವದಲ್ಲಿ ವಾರಕ್ಕೊಮ್ಮೆ ಹೊರಬರುತ್ತಿದ್ದ ಒಕ್ಕಲಿಗರ ಪತ್ರಿಕೆಯಲ್ಲಿ ರೈತ ಸಮುದಾಯದ ಬಗ್ಗೆಯೂ ಚರ್ಚೆಗಳನ್ನು ಏರ್ಪಡಿಸುವ ಪ್ರಯತ್ನ ಮಾಡಿದ್ದರು. ಕನ್ನಡದಲ್ಲಿ ಕೃಷಿಪತ್ರಿಕೆಗಳು ಇಲ್ಲದೇ ಇದ್ದ ಕಾಲದಲ್ಲಿ ಒಕ್ಕಲಿಗರ ಪತ್ರಿಕೆ ಕೃಷಿಯ ಬಗ್ಗೆ ಗಮನಹರಿಸಿದ್ದು ವಿಶೇಷವಾಗಿತ್ತು.

ಪ್ರಸಾರ ಮಾಧ್ಯಮವಾಗಿ ಪತ್ರಿಕೆಗಳ ಪಾತ್ರ ಹಿರಿದು ಎಂಬುದನ್ನು ನಾವಿಂದು ಕಾಣುತ್ತಿದ್ದೇವೆ. ಅಕ್ಷರ ಬಲ್ಲವನಿಗೆ ಪ್ರಪಂಚವನ್ನೇ ತೋರಿಸಬಲ್ಲ ಅಂತಃಶಕ್ತಿಯನ್ನುಳ್ಳ ಪತ್ರಿಕೆಗಳು ನಾನಾ ಕ್ಷೇತ್ರಗಳಲ್ಲಿ

---

[30] ಚಿತ್ರಗುಪ್ತ ಸ್ಮರಣೆ, ಪು-೧೬೫

[31] ಹ.ಕ.ರಾಜೇಗೌಡ. ಚಿತ್ರಗುಪ್ತ ಸ್ಮರಣೆ, ೧೯೯೪, ಪುಟ-೧೮೭,೧೮೮

ತಮ್ಮ ಹಸ್ತವನ್ನು ಚಾಚಿವೆ. ರಾಜಕೀಯ, ಆರ್ಥಿಕ, ಸಾಮಾಜಿಕ ವಿಚಾರಧಾರೆಗಳಿಂದ ಜನರಲ್ಲಿ ಜಾಗೃತಿಯನ್ನುಂಟು ಮಾಡುವ ಚೇತನವನ್ನು ಹೊಂದಿವೆ. ಈ ಮೂಲಕ ಪತ್ರಿಕೆಗಳು ಇಂದಿನ ಪ್ರಜ್ಞಾವಂತ ಜನಜೀವನದ ಅವಿಭಾಜ್ಯ ಅಂಗಗಳಾಗಿವೆ.

ಪ್ರಚಲಿತ ವಿಷಯಗಳ ಬಗ್ಗೆ ಚುರುಕು ಮುಟ್ಟಿಸುವ ರೀತಿಯಲ್ಲಿ ವೀರಣ್ಣಗೌಡರ ಲೇಖನಗಳಿರುತ್ತಿದ್ದವು. ಅವರ ಟೀಕಾಸ್ತ್ರ ಯಾರನ್ನು ಬಿಡುತ್ತಿರಲಿಲ್ಲ. ಆ ಕಾಲದ ಶೃಂಗೇರಿ ಮಠದ ಸ್ವಾಮಿಗಳು ಬೆಂಗಳೂರಿಗೆ ಆಗಮಿಸಿದಾಗ ನಡೆದ ವೈಭವಯುತ ಮೆರವಣಿಗೆಯಲ್ಲಿ ದೇವದಾಸಿಯರನ್ನು ಸರ್ಕಾರ ಮೆರವಣಿಗೆಗೆ ಅಲಂಕಾರ ಪ್ರಿಯರನ್ನಾಗಿ ಮಾತ್ರ ಬಳಸಿಕೊಂಡಿತ್ತು. ಇದನ್ನು ಮಠದಂತಹ ಒಂದು ಉನ್ನತ ಸಾಮಾಜಿಕ ಸಂಸ್ಥೆ ಪ್ರಶ್ನಿಸದೇ ಒಪ್ಪಿಕೊಂಡಿತ್ತು. ಸ್ವಾಮ್ಜಿಜಿಗಳು ದೇವದಾಸಿಯರಿಂದ ಕಾಣಿಕೆ ಸ್ವೀಕರಿಸಿ ಆಶೀರ್ವದಿಸಿದ ಪದ್ದತಿಯನ್ನು ಪತ್ರಿಕೆಯ ಬೀದಿ ಮಾತಿನಲ್ಲಿ ಟೀಕಿಸಿ ಬರೆದಾಗ ಅದರ ಪರ ವಿರೋಧ ಗದ್ದಲವೇ ಉಂಟಾಯಿತು. ವಿಚಾರವಾದಿ ವೀರಣ್ಣಗೌಡರು ಮೌಢ್ಯತೆಯಿಂದ ಕೂಡಿದ ಸಂಪ್ರದಾಯಗಳು, ಅವುಗಳ ಪರಿಣಾಮವನ್ನು ಟೀಕಿಸಿದ್ದು ಸ್ವಾಭಾವಿಕವೆ ಆಗಿತ್ತು. ಇಂಥ ವಿಡಂಬನ ಅಂಕಣ ಪರಂಪರೆಯನ್ನು ಇತರ ಪತ್ರಿಕೆಗಳವರೂ ಅನುಸರಿಸಿದರು. ಅದರಲ್ಲಿ ಪ್ರಜಾವಾಣಿಯ 'ಛೂ ಬಾಣ' ಅಂಕಣ ಪ್ರಸಿದ್ದವಾದುದು. ಇಂದಿಗೂ ಎಲ್ಲ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಈ ಪರಂಪರೆ ಇಂದಿಗೂ ಮುಂದುವರಿಯುತ್ತಿದೆ.

ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಾಗ ಆ ಕಾಲದ ಪತ್ರಿಕೆಗಳು ಜನರನ್ನು ಎಚ್ಚರಿಸಿ ಚಳುವಳಿಯೆಡೆಗೆ ಪ್ರೇರೇಪಿಸುವುದರ ಜೊತೆಗೆ ಜನತೆಗೆ ಸೂಕ್ತ ಮಾಹಿತಿ ನೀಡಿ, ಮಾರ್ಗದರ್ಶನ ಮಾಡುವ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾಗಿದ್ದಿತು. ಈ ನಿಟ್ಟಿನಲ್ಲಿ ಬದ್ಧತೆಯಿಂದ ವೀರಣ್ಣಗೌಡರು ಕಾರ್ಯನಿರ್ವಹಿಸಿದರು. ಒಕ್ಕಲಿಗರ ವಾರ್ಷಿಕ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿರುವ ಅನೇಕ ಲೇಖನಗಳು ನಾಡು, ನುಡಿಯ ಬಗೆಗೆ ಆಲೋಚನೆ ಮಾಡಿ, ಅಭಿಮಾನ ಉಂಟಾಗಿ ನಾಡನ್ನು ರಕ್ಷಿಸಿಕೊಳ್ಳಬೇಕಾದ ಅರಿವನ್ನು ಮೂಡಿಸುವಂತಹ ಬರಹಗಳಾಗಿದ್ದವು.

ಪತ್ರಿಕೋದ್ಯಮಿಯಾಗಿ ಇವರು ಕನ್ನಡ ಪತ್ರಿಕಾ ವ್ಯವಸಾಯಕ್ಕೆ ನೀಡಿದ ಮತ್ತೊಂದು ಕೊಡುಗೆಯೆಂದರೆ ಒಕ್ಕಲಿಗರ ಪತ್ರಿಕೆಯ ವಾರ್ಷಿಕ ಸಂಚಿಕೆಯನ್ನು ತಂದದ್ದು. ಇಂದು ಇಂತಹ ವಾರ್ಷಿಕ ಸಂಚಿಕೆಗಳು ಅಪರೂಪವೇನಲ್ಲ. ದೀಪಾವಳಿ, ಯುಗಾದಿ ಸಂಚಿಕೆಗಳು ಸಾಮಾನ್ಯವಾಗಿ ಎಲ್ಲಾ ಪತ್ರಿಕೆಗಳಿಂದಲೂ ಪ್ರಕಟವಾಗುತ್ತವೆ. ಆದರೆ ವೀರಣ್ಣಗೌಡರು ಈ ವಾರ್ಷಿಕ ಸಂಚಿಕೆಯನ್ನು ಹೊರ ತಂದ ಸಂದರ್ಭದಲ್ಲಿ ಅಂದರೆ ೧೯೨೦ರ ದಶಕದಲ್ಲಿ ಅದುವರೆಗೂ ಯಾವುದೇ ಸ್ಥಳೀಯ ಕನ್ನಡ ಪತ್ರಿಕೆಗಳು ಬಹುಶಃ ಇಂತಹ ವಿಶೇಷ ಸಂಚಿಕೆಯ ಪ್ರಕಟಣೆ ಮಾಡಿರಲಿಲ್ಲ ಎಂದು ಹೇಳಬಹುದು. ಹಾಗಾಗಿ 'ಈ ಬಗೆಯ ಪ್ರಯತ್ನಗಳು ನಮ್ಮಲ್ಲಿ ಮೊಟ್ಟ ಮೊದಲನೆಯದಾದುದರಿಂದ ಇದರಲ್ಲಿ ನ್ಯೂನಾತಿರೇಕಗಳು ಇರುವುದಾದರೆ ಅದು ಸ್ವಾಭಾವಿಕವೆ' ಎಂದು ವೀರಣ್ಣಗೌಡರು ಪ್ರಥಮ ವಿಶೇಷ ಸಂಚಿಕೆಯ ಬಿನ್ನಹದಲ್ಲಿ ಹೇಳಿಕೊಂಡಿದ್ದಾರೆ. ವಾರಪತ್ರಿಕೆಗಿಂತ ಗಾತ್ರದಲ್ಲಿ ಪುಸಂಖ್ಯೆಯಲ್ಲಿ ದೊಡ್ಡದಾಗಿದ್ದ ಈ ಸಂಚಿಕೆಯಲ್ಲಿ ಹಲವು ಬಗೆಯ ವೈವಿಧ್ಯಮಯವಾದ ಲೇಖನಗಳನ್ನು ಪ್ರಕಟಿಸಿದ್ದರು. ನಾಡು, ನುಡಿಗೆ ಸಂಬಂಧಿಸಿದಂತೆ

ಭಾರತೀಸುತರ 'ತಾಯಿನಾಡು' ಕವನ, ಶ್ರೀರಂಗನಾಥ ದಿವಾಕರರ 'ಕರ್ನಾಟಾಕ ಏಕೀಕರಣ' , ದತ್ತಾತ್ರೇಯ ಕೃಷ್ಣಭಾರಧ್ವಾಜರ ಕರ್ನಾಟಕ ವಿಶ್ವರೂಪದರ್ಶನ ಇತ್ಯಾದಿ ಲೇಖನಗಳು ಪ್ರಕಟವಾಗಿದ್ದವು. ಹಾಗೆಯೇ ನಿರುದ್ಯೋಗ, ಒಕ್ಕಲಿಗ ಮಕ್ಕಳ ವಿದ್ಯಾಭ್ಯಾಸ, ಬಡತನ, ಮನೆಬೇಸಾಯ ಹೀಗೆ ಜಾನಪದ ಚಿಂತನೆಗಳನ್ನೊಳಗೊಂಡ ಪ್ರಬುದ್ಧ ಲೇಖನಗಳನ್ನು ಬರೆಸಿ ಪ್ರಕಟಿಸಿದ್ದರು. ವಿಶೇಷವೆಂದರೆ ಮಹಿಳಾ ಬರಹಗಾರ್ತಿಯರಿಗೆ ತಮ್ಮ ಈ ವಿಶೇಷ ಸಂಚಿಕೆಯಲ್ಲಿ ಬರೆಯಲು ಅವಕಾಶ ಮಾಡಿಕೊಟ್ಟಿದ್ದು, ಮಹಿಳೆಚುರು ಪತ್ರಿಕೆಗಳಲ್ಲಿ ಬರೆಯುವುದೇ ಅಸಂಭವ ಎಂಬಂತಹ ಕಾಲಾವಧಿಯಲ್ಲಿ ಶ್ರೀಮತಿ ಬಿ.ಇಂದಿರಮ್ಮ, ಶ್ರೀಮತಿ ಆರ್.ಕಲ್ಯಾಣಮ್ಮನವರಿಂದ ಸ್ತ್ರೀ ವಿದ್ಯಾಭ್ಯಾಸ, ಸ್ತ್ರೀಯರಿಗನುಕೂಲವಾದ ಸಮಾಜಸೇವೆ ಇಂತಹ ಸಂಗತಿಗಳ ಬಗ್ಗೆ ಬರೆಸಿ ಪ್ರಕಟಿಸಿದ್ದರು.

ಆ ಸಂಚಿಕೆಯಲ್ಲಿ ಕುವೆಂಪು ಅವರ ಕವನ, ಕಥನಕವನಗಳು, ಪ್ರಸಿದ್ಧ ವ್ಯಕ್ತಿಗಳ ಭಾವಚಿತ್ರಗಳಿವೆ. ಪ್ರತ್ಯೇಕ ರಟ್ಟು ಕಾಗದದ ಮೇಲೆ ಆರ್ಟ್ ಕಾಗದದ ಮೇಲೆ ಮುದ್ರಿಸಿ ಅಂಟಿಸಿದ ವರ್ಣ ಚಿತ್ರಗಳಿವೆ. ಈ ಎಂಬತ್ತು ವರ್ಷಗಳಲ್ಲಿ ಪತ್ರಿಕೋದ್ಯಮ ಮತ್ತು ಮುದ್ರಣ ಕಲೆಯಲ್ಲಿ ಕ್ರಾಂತಿಕಾರಕ ಬದಲಾವಣೆಗಳಾಗಿವೆ. ಆದರೆ ವೀರಣ್ಣಗೌಡರು ಹಾಕಿಕೊಟ್ಟ ಪರಂಪರೆ ಇಂದಿನ ಯುಗಾದಿ, ದೀಪಾವಳಿ ವಿಶೇಷ ಸಂಚಿಕೆಗಳಲ್ಲಿ ಮುಂದುವರೆದಿರುವುದನ್ನು ಕಾಣಬಹುದು. ಆ ಸಂಚಿಕೆಯಲ್ಲಿ ಆ ಕಾಲಕ್ಕೆ ಅವರು ಬರೆದಿದ್ದ 'ಶಿವಾಜಿ ವಿಜಯ' ಮತ್ತು 'ಬುದ್ಧದೇವ' ಎಂಬ ಗೌಡರ ಸ್ವರಚಿತ ನಾಟಕಗಳು ಪ್ರಕಟವಾಗಿವೆ. ೧೯೨೦ ರ ದಶಕದಲ್ಲಿ ಹೀಗೆ ವಿಶೇಷ ಸಂಚಿಕೆಗಳ ಆರಂಭಕ್ಕೆ ಮುನ್ನುಡಿ ಹಾಡಿದವರಲ್ಲಿ ಹೆಚ್.ಕೆ.ವೀರಣ್ಣಗೌಡರೆ ಮೊದಲಿಗರಿರಬಹುದು. ಅದುವರೆಗೂ ಯಾವುದೇ ಸ್ಥಳೀಯ ಪತ್ರಿಕೆಗಳು ಇಂತಹ ವಿಶೇಷ ಸಂಚಿಕೆಯ ಪ್ರಕಟಣೆ ಮಾಡಿರಲಿಲ್ಲ.

ನಗರೀಕರಣ, ಸ್ಕೌಟು ಇತ್ಯಾದಿ ಅರಿವಿನ ವರ್ತಮಾನದ ವಿಶೇಷ ಸಂಗತಿಗಳ ಬಗ್ಗೆ ತಾವೇ ಬರೆದ ಬುದ್ದದೇವ, ಶಿವಾಜಿ ಕುರಿತ ನಾಟಕ ಹಾಗೂ ಕೆಲವು ಕತೆ, ಕವನ, ಹಾಸ್ಯ ಲೇಖನ ಇತ್ಯಾದಿ ಹೀಗೆ ವೈವಿಧ್ಯಮಯವಾದ ಬರಹಗಳಿಗೆ ಅನುವು ಮಾಡಿಕೊಟ್ಟು ಈ ಮೂಲಕ ನಾಡಿನ ಜನ ಈ ಎಲ್ಲಾ ಸಂಗತಿಗಳ ಬಗ್ಗೆ ತಿಳುವಳಿಕೆ ಪಡೆಯುವಂತೆ ಮಾಡಿದರು. ಇದು ವೀರಣ್ಣಗೌಡರ ಅಭಿರುಚಿಯನ್ನು ತೋರಿಸುತ್ತದೆಯಲ್ಲದೆ ಓದುಗರ ಆಸಕ್ತಿಗೆ ಇವರು ಸ್ಪಂದಿಸಿ ಹೆಚ್ಚಿನ ಓದುಗ ಬಳಗವನ್ನು ಬೆಳೆಸಲು ಸಾಧ್ಯವಾಯಿತು. ಪತ್ರಿಕೆಯೊಂದು ಇಂತಹ ಹಲವು ವಿಶೇಷಗಳೊಂದಿಗೆ ಹೊರಬಂದರೆ ಹಲವರ ಆಸಕ್ತಿಯನ್ನು ಕೆರಳಿಸಿ ಜನರಲ್ಲಿ ಚಿಂತನಶೀಲತೆ ಬೆಳೆಯುತ್ತದೆಂಬುದು ಇವರ ಆಶಯವಾಗಿತ್ತು. ಇದರೊಂದಿಗೆ ಪ್ರಕಟಣೆಯ ಅನುಕೂಲಕ್ಕಾಗಿ ಅಂದೇ ತುಂಬಾ ವ್ಯವಹಾರಿಕವಾಗಿ ಯೋಚಿಸಿ ಕೆಲವು ಜಾಹೀರಾತುಗಳ ಪ್ರಕಟಣೆಗೂ ಅವಕಾಶ ಮಾಡಿಕೊಟ್ಟಿದ್ದರು. ಹೀಗೆ ಪತ್ರಿಕಾ ಲೋಕಕ್ಕೆ ಒಂದು ಹೊಸತನವನ್ನು ತಂದು ಕೊಟ್ಟ ಕೀರ್ತಿ ಇವರಿಗೆ ಸಲ್ಲುತ್ತದೆ. ಇದನ್ನೆಲ್ಲಾ ಗಮನಿಸಿದಾಗ ಕನ್ನಡದಲ್ಲಿ ಈ ಬಗೆಯ ಪತ್ರಿಕೆಯೊಂದು ಇಲ್ಲದೇ ಇದ್ದ ಸಂದರ್ಭದಲ್ಲಿ ಹೊಸತೊಂದು ಪ್ರಯತ್ನಕ್ಕೆ ಕೈಹಾಕಿ ಯಶಸ್ವಿಯಾಗಿ ಮುಂದಿನ ಈ ಬಗೆಯ ಪತ್ರಿಕೆಗಳ ಪ್ರಕಟಣೆಗೆ ಒಂದು ಮಾದರಿಯನ್ನು ಇವರು ರೂಪಿಸಿಕೊಟ್ಟರು.

ಒಕ್ಕಲಿಗರ ಪತ್ರಿಕೆ ಸಂಪಾದಕರಾಗಿದ್ದ ಸಮಯದಲ್ಲಿ ಒಮ್ಮೆ ಪತ್ರಿಕೆಯಲ್ಲಿ ಒಂದು ಕೊಲೆ ಕೇಸಿಗೆ ಸಂಬಂಧಿಸಿದಂತೆ, ಆ ಕೇಸು ಕೋರ್ಟಿನಲ್ಲಿ ವಿಚಾರಣೆಯಲ್ಲಿದ್ದಂತೆಯೇ ಯಾರೋ ಬಾತ್ಮೀದಾರರು ಕಳುಹಿಸಿದ ವರದಿಯನ್ನು ವೀರಣ್ಣಗೌಡರು ಪ್ರಕಟಿಸಿದರ ಪರಿಣಾಮ ಕೋರ್ಟ್ ನಿಂದನೆಯ ಕೇಸಿಗೆ ಒಳಗಾಗಬೇಕಾಯಿತು. ಈ ಸಂದರ್ಭದಲ್ಲಿ ಒಕ್ಕಲಿಗರ ಸಂಘದ ಕಾನೂನು ಸಲಹೆಗಾರರನ್ನು ಭೇಟಿ ಮಾಡಿದ ವೀರಣ್ಣಗೌಡರಿಗೆ ಆತ ಕೇಸು ನಡೆಸಲು ಪ್ರತ್ಯೇಕ ಹಣ ಕೇಳಿದ್ದು ಕಂಡು ಆಶ್ಚರ್ಯವಾಯಿತು. ನಂತರ ವೀರಣ್ಣಗೌಡರ ವ್ಯಕ್ತಿತ್ವವನ್ನು ಮತ್ತು ಅವರ ಪ್ರತಿಭೆಯನ್ನು ಕಂಡಿದ್ದ ಆಗಿನ ಪ್ರಸಿದ್ಧ ವಕೀಲರಾಗಿದ್ದ ಬೇಲೂರು ಶ್ರೀನಿವಾಸಯ್ಯಂಗಾರ್ಯರ ಸೂಕ್ತ ನೆರವು ವೀರಣ್ಣಗೌಡರು ಆ ಕೇಸಿನಿಂದ ಪಾರಾಗುವಂತೆ ಮಾಡಿದತು. ಈ ಪ್ರಸಂಗವನ್ನು ಗಮನಿಸಿದಾಗ ಒಬ್ಬ ಜವಾಬ್ದಾರಿಯುತ ಪತ್ರಿಕಾ ಸಂಪಾದಕ ಜನಸೇವೆ ಮಾಡುವಲ್ಲಿ ಸತ್ಯಪರತೆ, ಪ್ರಾಮಾಣಿಕತೆ, ಪಾರದರ್ಶಕತೆಯನ್ನೊಳಗೊಂಡಿರುವುದಷ್ಟೇ ಅಲ್ಲದೆ ಕಾನೂನಿನ ಅರಿವು ಸಹ ಇರಬೇಕಾದುದು ಅವಶ್ಯಕ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.

ಇನ್ನೊಮ್ಮೆ ಬೇಲೂರು ಶ್ರೀನಿವಾಸಯ್ಯಂಗಾರ್ಯರು ಕೋರ್ಟು ನಿಂದನೆ ಕೇಸಿನಲ್ಲಿ ಮತ್ತು ಚಿತ್ರಗುಪ್ತ ಪತ್ರಿಕೆಯ ಪ್ರಾರಂಭದಲ್ಲಿ ಪಡೆದ ಸಾಲದ ಬಗ್ಗೆ ಮೈಸೂರು ಬ್ಯಾಂಕಿನವರು ಮರು ಪಾವತಿಗಾಗಿ ವೀರಣ್ಣಗೌಡರ ಮೆಲೆ ಕೇಸು ದಾಖಲಿಸಿದ್ದರು. ಈ ವಿಚಾರದಲ್ಲಿ ವೀರಣ್ಣಗೌಡರಿಗೆ ಮತ್ತೊಮ್ಮೆ ತಮ್ಮ ಸಹಾಯಹಸ್ತ ನೀಡಿದರು. ಕಷ್ಟದ ಸಮಯದಲ್ಲಿ ಸಹಾಯ ಮಾಡಬೇಕೆಂಬ ಕನಿಷ್ಟ ಧ್ಯೇಯ ಹೊಂದಿದ್ದ ಬೇಲೂರು ಶ್ರೀನಿವಾಸಯ್ಯಂಗಾರ್ಯರಂತವರ ಬಗ್ಗೆ ಪ್ರಸ್ತಾಪಿಸಿರುವ ವೀರಣ್ಣಗೌಡರು ವಕೀಲಿ ವೃತ್ತಿಯಲ್ಲಿ ಕೇವಲ ಹಣ ಪಿಪಾಸುಗಳು ಮಾತ್ರ ಇರುವುದಿಲ್ಲ, ಬದಲಾಗಿ ಹೃದಯವಂತರೂ ಇರುತ್ತಾರೆಂಬ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ವೀರಣ್ಣಗೌಡರ ಜೀವನದಲ್ಲಿ ಎದುರುಗೊಂಡ ಇಂತಹ ಅನುಭವಗಳೇ ಅವರ ವ್ಯಕ್ತಿತ್ವವನ್ನು ಮತ್ತಷ್ಟು ಪಕ್ವಗೊಳಿಸುತ್ತಾ ಸಾಗಿತ್ತೆನ್ನಬಹುದು.

ಆಳುವ ಸರ್ಕಾರವನ್ನು ಟೀಕಿಸಿದರೆ ತಮಗೆ ಉಳಿಗಾಲವಿಲ್ಲ. ಆದ್ದರಿಂದ ಸರ್ಕಾರವನ್ನು ಟೀಕಿಸದೆ ಆಶ್ರಯಿಸಿಕೊಂಡು ಹೋಗಬೇಕೆನ್ನುವುದು ಒಕ್ಕಲಿಗರ ಸಂಘದ ಅಪ್ರಕಟಿತ ನೀತಿಯಾಗಿತ್ತು. ಆದರೆ ಪತ್ರಿಕಾ ಸ್ವಾತಂತ್ರ್ಯ ಮತ್ತುಪತ್ರಿಕೆಯ ಧ್ಯೇಯ –ಧೋರಣೆಗಳ ಅರಿವಿದ್ದ ವೀರಣ್ಣಗೌಡರು ಪತ್ರಿಕೆಯ ಮೂಲಕ ಸರ್ಕಾರದ ಆಡಳಿತ ವಿಧಾನದಲ್ಲಿದ್ದ ಲೋಪದೋಷಗಳನ್ನು ನಿರ್ಭೀಡೆಯಿಂದ ಟೀಕಿಸುತ್ತಿದ್ದರು. ಇದನ್ನು ಸಹಿಸದ ಜನರಿಂದ ಆಕ್ಷೇಪಣೆಗಳು ಮತ್ತು ಸರ್ಕಾರದಿಂದ ಒಕ್ಕಲಿಗರ ಸಂಘದ ಮೇಲೆ ಒತ್ತಡ ಬಂದಿತು. ಪತ್ರಿಕೆ ಇರುವುದು ಜನಹಿತಕ್ಕಾಗಿ ಹೊರತು ಆಳುವ ಸರ್ಕಾರವನ್ನು ಹೊಗಳುವ ಹೊಗಳುಭಟರ ಕೆಲಸ ಮಾಡುವುದಕ್ಕಲ್ಲ ಎಂಬುದು ವೀರಣ್ಣಗೌಡರ ನಿಲುವಾಗಿತ್ತು. ಸರ್ಕಾರವನ್ನು ಎದುರು ಹಾಕಿಕೊಳ್ಳಲು ಇಷ್ಟಪಡದ ಸಂಘದ ಅಧ್ಯಕ್ಷರು ನೀನು ಸಂಘದ ಸಂಬಳ ಪಡೆದು ಪತ್ರಿಕೆಯ ಕೆಲಸ ಮಾಡುತ್ತಿರುವೆ. ಆದ್ದರಿಂದ ಸಂಘದ ಉದ್ದೇಶ, ನಿಯಮ ಪಾಲಿಸಬೇಕು ಎಂದು ಆದೇಶಿಸಿದರು. ಸಂಘದ ಉದ್ದೇಶ ಮುಖ್ಯವಾಗಿ ಒಕ್ಕಲಿಗರ ಉದ್ಧಾರ, ಜನಹಿತಕ್ಕಾಗಿ ಪತ್ರಿಕೆ ಕಾರ್ಯ ನಿರ್ವಹಿಸುವುದೆಂದರೆ ಈ ಜನರಲ್ಲಿ ಒಕ್ಕಲಿಗರೂ ಇದ್ದಾರೆ. ಹಾಗಾಗಿ ಅವರ ಹಿತವನ್ನು ಕಾಪಾಡುವುದು

ಪತ್ರಿಕೆಯ ಜವಾಬ್ದಾರಿ ಎಂಬುದು ವೀರಣ್ಣಗೌಡರ ವಾದವಾಗಿತ್ತು. ಮತ್ತು ಸಂಬಳ ಪಡೆಯುತ್ತೇನಾದರೂ ಅದಕ್ಕಾಗಿ ಆತ್ಮವನ್ನೇ ಮಾರಿಕೊಳ್ಳುವ ವ್ಯಕ್ತಿ ನಾನಲ್ಲ ಎಂದು ಅವರು ಹೇಳುತ್ತಿದ್ದರು. ಪತ್ರಿಕಾ ಸ್ವಾತಂತ್ರ್ಯ, ಅದರಲ್ಲಿ ಸಂಪಾದಕನ ಜವಾಬ್ದಾರಿ ಇವುಗಳ ಬಗ್ಗೆ ವೀರಣ್ಣಗೌಡರಿಗೆ ಸ್ಪಷ್ಟ ಕಲ್ಪನೆಯಿತ್ತು. ಒಬ್ಬರನ್ನು ಓಲೈಸಲೆಂದು ಪತ್ರಿಕೆ ನಡೆಸುವುದಾದರೆ ಅದರ ಸಾರ್ಥಕತೆ ಏನು? ಎಂಬ ಪ್ರಶ್ನೆ ಇವರದಾಗಿತ್ತು. ಸುತ್ತಣ ಜಗತ್ತಿನಲ್ಲಿ ನಡೆಯುವ ವಿದ್ಯಮಾನಗಳ ಬಗ್ಗೆ ನಿಷ್ಪಕ್ಷಪಾತವಾದ ಒಂದು ಚಿತ್ರಣವನ್ನು ಪತ್ರಿಕೆಯೊಂದು ಕಟ್ಟಿಕೊಡುವಲ್ಲಿ ವಿಫಲವಾದರೆ ಪತ್ರಿಕೋದ್ಯಮದ ಧ್ಯೇಯಧೋರಣೆಗೆ ಚ್ಯುತಿಬಂದಂತಾಗುತ್ತದೆ, ಅದರ ಘನತೆ ಹಾಳಾಗುತ್ತದೆ ಎಂಬ ಸ್ಪಷ್ಟತೆ ವೀರಣ್ಣಗೌಡರಿಗಿತ್ತು. ಹಾಗಾಗಿಯೇ ನೇರವಾಗಿ ತಮ್ಮ ಅಭಿವ್ಯಕ್ತಿಗೆ ಇದನ್ನೊಂದು ಮಾಧ್ಯಮವನ್ನಾಗಿ ಮಾಡಿಕೊಂಡರು. ಸ್ವಾಭಿಮಾನಿಯಾಗಿದ್ದ, ಪತ್ರಿಕಾಸ್ವಾತಂತ್ರ್ಯದ ಅರಿವಿದ್ದ ಸಾಮಾಜಿಕ ಬದ್ಧತೆಯಿಂದ ಆ ಕೆಲಸ ನಿರ್ವಹಿಸುತ್ತಿದ್ದ ವೀರಣ್ಣಗೌಡರಿಗೆ ನಿರಂಕುಶ ಮತಿಗಳೊಡನೆ ಹೊಂದಾಣಿಕೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ವಾದ ವಿವಾದ ನಡೆದು ಕೊನೆಗೆ ಈ ಸಂಘರ್ಷದಲ್ಲಿಯೇ ಸಂಪಾದಕರ ಕೆಲಸಕ್ಕೆ ರಾಜೀನಾಮೆ ಕೊಟ್ಟರು.

ಹೆಚ್.ಕೆ.ವೀರಣ್ಣಗೌಡರ ಸಂಪಾದಕತ್ವದಲ್ಲಿ 'ಒಕ್ಕಲಿಗರ ಪತ್ರಿಕೆ' ೧೯೪೦ರ ವರೆಗೂ ನಡೆದು ನಿಂತು ಹೋಯಿತು. ಪತ್ರಿಕೆಯೊಂದು ತನ್ನ ಉತ್ಕರ್ಷವನ್ನು ಕಂಡಷ್ಟೇ ವೇಗವಾಗಿ ತದನಂತರದಲ್ಲಿ ಜನಮನದಿಂದ ಕಣ್ಮರೆಯಾದುದು ವಿಪರ್ಯಾಸವೇ ಸರಿ. ಇಲ್ಲಿ ವೀರಣ್ಣಗೌಡರಂತಹ ಒಬ್ಬ ಸಮರ್ಥ, ವೃತ್ತಿಪರ ಶ್ರದ್ಧೆಯುಳ್ಳ ಸಾಮಾಜಿಕ ಕಳಕಳಿಯನ್ನು ಹೊಂದಿದ್ದು, ಬದ್ಧತೆಯುಳ್ಳ ಒಬ್ಬ ಸಂಪಾದಕನನ್ನು ಮತ್ತೆಂದೂ ಆ ಪತ್ರಿಕೆ ಕಾಣದೇ ಹೋದುದು ವೀರಣ್ಣಗೌಡರ ಪತ್ರಿಕಾರಂಗದಲ್ಲಿನ ಅವರ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

**ಚಿತ್ರಗುಪ್ತ ಪತ್ರಿಕೆ:–** ಒಕ್ಕಲಿಗರ ಪತ್ರಿಕೆಯಿಂದ ಹೊರಬಂದ ವೀರಣ್ಣಗೌಡರು ಕೈಚೆಲ್ಲಿ ಕುಳಿತುಕೊಳ್ಳಲಿಲ್ಲ. ಅವರ ಪತ್ರಿಕೆ ನಡೆಸುವ ಹಂಬಲ ಅಷ್ಟು ಬೇಗ ಬತ್ತುವಂತಿರಲಿಲ್ಲ. ಹಾಗಾಗಿ ಅವರನ್ನು ಪತ್ರಿಕಾರಂಗ ಮತ್ತಷ್ಟು ಆವರಿಸಿಕೊಂಡಿತು. ಪತ್ರಿಕೆಗಳಿಂದ ಜನಜಾಗೃತಿ ಮೂಡಿಸುವ ಮೂಲಕ ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿ ತಮ್ಮದೇ ಆದ ಪರೋಕ್ಷ ಪಾತ್ರ ವಹಿಸಬೇಕೆಂಬ ಹಂಬಲವಿತ್ತು. ವೀರಣ್ಣಗೌಡರು ಜನಜಾಗೃತಿ ಮೂಡಿಸಿ ಜನಾಂದೋಲನಕ್ಕೆ ಎಡೆಮಾಡಿಕೊಡಬೇಕೆಂಬ ಉದ್ದೇಶ ಹೊಂದಿದ್ದರು. ಆದಕಾರಣ ಒಂದು ಪ್ರಿಂಟಿಂಗ್ ಪ್ರೆಸ್ಸನ್ನು ಆರಂಭಿಸಿದರು. ಪ್ರಿಂಟಿಂಗ್ ಪ್ರೆಸ್ ಪ್ರಾರಂಭಿಸಲು ಆಗತ್ಯ ಹಣಕ್ಕಾಗಿ ವೀರಣ್ಣಗೌಡರಿಗೆ ಅವರ ಸ್ನೇಹಿತರಾದ ಡಿ.ಎಸ್.ಮಲ್ಲಪ್ಪ ಮತ್ತು ವಿ.ವೆಂಕಟಪ್ಪನವರ ಜಂಟಿ ಜವಾಬ್ದಾರಿ ಮೇಲೆ ಮೈಸೂರು ಬ್ಯಾಂಕಿನವರು ನಾಲ್ಕು ಸಾವಿರದ ಇನ್ನೂರು ರೂ.ಗಳ ಸಾಲ ನೀಡಿದರು. ಇದರಿಂದ ಆರ್ಕಾಟ್ ಶ್ರೀನಿವಾಸಚಾರ್ಯರ ಬೀದಿಯಲ್ಲಿ 'ಗ್ರಾಮಸೇವಾ ಮುದ್ರಣಾಲಯ' ಎಂಬ ಪ್ರಿಂಟಿಂಗ್ ಪ್ರೆಸ್ಸನ್ನು ಪ್ರಾರಂಭಿಸಿದರು. ಈ ಮುದ್ರಣಾಲಯಕ್ಕೆ ಬರುತ್ತಿದ್ದವರಲ್ಲಿ ಪ್ರಸಿದ್ಧ ಪತ್ರಿಕೋದ್ಯಮಿ ಬಿ.ಎನ್.ಗುಪ್ತರು ಮತ್ತು ಬ್ರಾಹ್ಮಣೇತರ ಮುಂಖಡರಲ್ಲಿ ಒಬ್ಬರಾಗಿದ್ದ ನೀಲಗಿರಿ ಸಂಜೀವಯ್ಯನವರ ಪರಿಚಯವಾಯಿತು. ಈ ಮಿತ್ರರ ಸಹಕಾರ ಸಲಹೆಯ ಮೇರೆಗೆ ವೀರಣ್ಣಗೌಡರು

'ಚಿತ್ರಗುಪ್ತ' ಎಂಬ ಪತ್ರಿಕೆಯನ್ನು ೧೯೨೬ರ ಡಿಸೆಂಬರ್ ಅಂತ್ಯದಲ್ಲಿ ಅಮಾವಸ್ಯೆಯ ದಿನದಂದು ಬೆಳಕಿಗೆ ತಂದರು. ಇಲ್ಲಿಯೂ ತಮ್ಮ ವೈಚಾರಿಕ ನಿಲುವಿಗೆ ಬದ್ಧರಾಗಿದ್ದುದನ್ನು ಸ್ಪಷ್ಟಪಡಿಸಿದರು.

ಚಿತ್ರಗುಪ್ತ ಪತ್ರಿಕೆ ಈಗಿನ ಪ್ರಜಾವಾಣಿ ಪತ್ರಿಕೆ ಆಕಾರದಲ್ಲಿ ನಾಲ್ಕು ಪುಟಗಳನ್ನು ಹೊಂದಿತ್ತು. ಅದರ ಬೆಲೆ ಮೂರು ಕಾಸು. ಚಿತ್ರಗುಪ್ತ ಪತ್ರಿಕೆ ಆರಂಭವಾದ ಮೇಲೆ ಅಶ್ವತ್ಥ ನಾರಾಯಣರರ 'ಜನಜೀವನ' ಪತ್ರಿಕೆ, ಪಿ.ಆರ್.ರಾಮಯ್ಯರ 'ತಾಯಿನಾಡು' ಪತ್ರಿಕೆ, ಪ್ರೊ.ಕೃಷ್ಣರಾವ್‌ರ 'ಲೋಕಮತ' ಎಂಬ ದಿನ ಪತ್ರಿಕೆಗಳು ಬೆಂಗಳೂರಿನಲ್ಲಿ ಪ್ರಾರಂಭವಾದವು. ಈ ಪತ್ರಿಕೆಗಳಲ್ಲಿ ಪರಸ್ಪರ ಪೈಪೋಟಿ ಆರೋಗ್ಯಕರವಾಗಿದ್ದುದ್ದನ್ನು ವೀರಣ್ಣಗೌಡರು ಆತ್ಮಕಥೆಯಲ್ಲಿ ಮೆಲುಕು ಹಾಕಿದ್ದಾರೆ. ಚಿತ್ರಗುಪ್ತ ಪತ್ರಿಕೆಯ ಮೊದಲನೆ ಪುಟದ ಮೇಲ್ಭಾಗದಲ್ಲಿ 'ಚಿತ್ರಗುಪ್ತ' ಎಂಬ ದಪ್ಪಕ್ಷರದ ಹೆಸರಿನ ಕೆಳಗೆ 'ನಿರ್ಭಯ, ನಿಷ್ಪಕ್ಷಪಾತ, ನಿರ್ದಾಕ್ಷಿಣ್ಯ ಕನ್ನಡ ದಿನಪತ್ರಿಕೆ' ಎಂಬ ವಾಕ್ಯವಿದೆ. ಆ ಧ್ಯೇಯವಾಕ್ಯದ ಕೆಳಗೆ 'ಸಂಪಾದಕ – ಹೊಸಹಳ್ಳಿ ಕೆ.ವೀರಣ್ಣಗೌಡ' ಎಂದಿರುತ್ತಿತ್ತು. ಚಿತ್ರಗುಪ್ತನನ್ನು ನಮಲ್ಲಿ ನೆನೆಯಲೂ ಭಯಪಡುವುದು ಸಹಜ. ಕಾರಣ ಯಮಧರ್ಮನ ಕಿಂಕರನಾದ ಈತ ಯಮನಿಗೆ ಲೆಕ್ಕ ಒಪ್ಪಿಸಿ ಆಯುಶ್ ನಿರ್ಣಯ ಮಾಡಲು, ಸ್ವರ್ಗ–ನರಕಗಳ ಸ್ಥಾನ ನಿರ್ದೇಶನ ಮಾಡಲು ಅನುವು ಮಾಡಿಕೊಡುತ್ತಾನೆ. ಈ ಚಿತ್ರಗುಪ್ತನ ಹೆಸರನ್ನು ವೀರಣ್ಣಗೌಡರು ತಮ್ಮ ಪತ್ರಿಕೆಗೆ ಆರಿಸಿದ್ದು ಬಹಳ ವಿಶೇಷ. ತಮ್ಮ ಪತ್ರಿಕೆಯೂ ಚಿತ್ರಗುಪ್ತನಂತೆ ನಿರ್ದಾಕ್ಷಿಣ್ಯವಾಗಿ ನಿರ್ಭಯವಾಗಿ ಜನರ, ಸರ್ಕಾರದ ತಪ್ಪು–ಒಪ್ಪುಗಳನ್ನು ಅನಾವರಣಗೊಳಿಸುವ ಒಂದು ಮಾಧ್ಯಮವಾಗಬೇಕು. ಅದೇ ನಿಜವಾದ ಪತ್ರಿಕೆಯ ಜವಾಬ್ದಾರಿ ಎಂದು ಆಲೋಚಿಸಿಯೇ ಈ ಹೆಸರನ್ನು ಆರಿಸಿ ತಲೆಬರಹವಾಗಿ ನಿರ್ದಾಕ್ಷಿಣ್ಯ, ನಿರ್ಭೀತ ಪತ್ರಿಕೆ ಎಂದು ನಮೂದಿಸಿರಬಹುದೆನಿಸುತ್ತದೆ. ಚಿತ್ರಗುಪ್ತ ಪತ್ರಿಕೆ ಅಲ್ಪಕಾಲದಲ್ಲಿಯೆ ಜನಾದರಣೆಗೆ ಪಾತ್ರವಾಗಿತ್ತು. ಅದಕ್ಕೆ ಕಾರಣ ಪತ್ರಿಕೆಯ ಧ್ಯೇಯ ವಾಕ್ಯದಂತೆ ವೀರಣ್ಣಗೌಡರು ನಡೆದುಕೊಳ್ಳಬೇಕೆಂದು ಸಂಕಲ್ಪಿಸಿಕೊಂಡಿದ್ದ ಉದ್ದೇಶವನ್ನು ಮರೆಯದೆ ಕರ್ತವ್ಯ ನೆರವೇರಿಸುತ್ತಿದ್ದುದೇ ಕಾರಣವೆಂದು ಹೇಳಿದರೆ ಅದೇನೂ ಉತ್ಪ್ರೇಕ್ಷೆಯ ಮಾತಲ್ಲ. ಆ ಕಾಲದಲ್ಲಿ ಸಂಸ್ಥಾನದಲ್ಲಿ ನಡೆದ ಒಂದೆರಡು ಘಟನೆಗಳು ವೀರಣ್ಣಗೌಡರ ಸಾಹಸ ಪ್ರವೃತ್ತಿಯನ್ನು ಸತ್ಯ ಹೇಳುವ ಎದೆಗಾರಿಕೆಯನ್ನು ಹೊರಹೊಮ್ಮಿಸಿದವು.

ಗಣಪತಿ ಕುರಿತಾದ ಹಿಂದು–ಮುಸ್ಲಿಂ ಗಲಭೆಗೆ ಸಂಬಂಧಿಸಿದ ಘಟನೆ; ೧೯೨೬ರಲ್ಲಿ ಬೆಂಗಳೂರಿನ ಸುಲ್ತಾನ್‌ಪೇಟೆಯಲ್ಲಿ ವಿದ್ಯಾಗಣಪತಿ ಪೂಜೆಯ ಸಮಯದಲ್ಲಿ ಮಾಧ್ಯಮಿಕ ಶಾಲೆಯ ಆವರಣದಲ್ಲಿ ಕೆಲವು ಮುಸ್ಲಿಂರು ಸ್ವಲ್ಪ ಮಟ್ಟಿಗೆ ಗಲಭೆ ನಡೆಸಿದರೆಂದೂ ಆದರೆ ಅದು ಹರಡದಂತೆ ಪೊಲೀಸರು ತಡೆಗಟ್ಟಿದರೆಂದೂ ಹಬ್ಬಿದ್ದ ವಿಷಯವನ್ನು ವೀರಣ್ಣಗೌಡರು ಒಕ್ಕಲಿಗರ ಪತ್ರಿಕೆಯಲ್ಲಿ ಸಂಕ್ಷಿಪ್ತವಾಗಿ ವರ್ತಮಾನ ರೂಪದಲ್ಲಿ ಪ್ರಕಟಿಸಿದ್ದಕ್ಕೆ ಅನೇಕರು ಸತ್ಯಾಂಶವುಳ್ಳ ಪೂರ್ಣ ವರದಿ ಪ್ರಕಟಿಸಲಿಲ್ಲವೆಂದು ಆಕ್ಷೇಪ ವ್ಯಕ್ತಪಡಿಸಿ ಪತ್ರ ಬರೆದಿದ್ದರು. ಆ ಪತ್ರಗಳಲ್ಲಿ ಬೆಂಗಳೂರಿನಲ್ಲಿ ನಡೆದ ಹಿಂದೂ ಮುಸ್ಲಿಂ ಗಲಭೆ ವಿವರಗಳನ್ನು ವೀರಣ್ಣಗೌಡರು ಬೇಕಾಗಿಯೇ ತೇಲಿಸಿ ಪ್ರಕಟಿಸಿರುವರೆಂದು, ಗೌಡರು ಚನ್ನಪಟ್ಟಣ ತಾಲ್ಲೂಕಿನವರಾಗಿದ್ದರಿಂದ ಚನ್ನಪಟ್ಟಣದಲ್ಲಿ ಮುಸ್ಲಿಮರ ಸಂಖ್ಯೆ

ಹೆಚ್ಚಾಗಿರುವುದರಿಂದ ಅವರಿಗೆ ಹೆದರಿ ಆ ರೀತಿ ಪ್ರಕಟಿಸಿರುವರೆಂದು ಟೀಕಿಸಿದ್ದರು. ಆದರೆ ವೀರಣ್ಣಗೌಡರಿಗೆ ಆ ಗಲಭೆ ವಿಚಾರವನ್ನು ಅತಿಯಾಗಿ ಬೆಳೆಸದೆ ಸ್ವಲ್ಪ ತೇಲಿಸಿ, ಕೇವಲ ಹೀಗಾಯಿತೆಂದು ಮಾತ್ರ ಒಂದು ಸಣ್ಣ ಸುದ್ದಿರೂಪದಲ್ಲಿ ಮಾತ್ರ ಪ್ರಕಟಿಸಬೇಕೆಂದು ಒಕ್ಕಲಿಗರ ಸಂಘದ ಅಧ್ಯಕ್ಷರಾಗಿದ್ದ ಬಿ.ಕೆಂಪಣ್ಣ ಅವರ ಆದೇಶವಾಗಿತ್ತು.

೧೯೨೮ರಲ್ಲಿ ದಾವಣಗೆರೆಯಲ್ಲಿ ಹಿಂದು-ಮುಸ್ಲಿಮರ ಗಲಭೆ ದೊಡ್ಡ ಪ್ರಮಾಣದಲ್ಲಿಯೇ ನಡೆಯಿತು. ಆ ವೇಳೆಗಾಗಲೇ ಚಿತ್ರಗುಪ್ತ ಪತ್ರಿಕೆಯ ಸಂಪಾದಕರಾಗಿದ್ದ ವೀರಣ್ಣಗೌಡರಿಗೆ ದಾವಣಗೆರೆಯ ಮೋತಿವೀರಪ್ಪ ಎಂಬುವರು ಗಲಭೆಗಳ ವಿವರಗಳನ್ನೊಳಗೊಂಡ ಒಂದು ದೊಡ್ಡ ತಂತಿ ಸಮಾಚಾರವನ್ನು ಗೌಡರಿಗೆ ಕಳುಹಿಸಿದ್ದರು. ಅದರಲ್ಲಿ ಸ್ಥಳೀಯ ಸರ್ಕಾರಿ ಅಧಿಕಾರಿಗಳು ಕೆಲವರ ಮೇಲೂ ಕೆಲವು ಆಪಾದನೆಗಳನ್ನು ಮಾಡಿದ್ದರು. ಈ ಎಲ್ಲ ವಿವರಗಳನ್ನೊಳಗೊಂಡ ಲೇಖನವನ್ನು ವೀರಣ್ಣಗೌಡರು ಚಿತ್ರಗುಪ್ತದಲ್ಲಿ ಪ್ರಕಟಿಸಿದರು. ಇದರಿಂದ ಚಿತ್ರಗುಪ್ತ ಪತ್ರಿಕೆಯು ಬಿಸಿದೋಸೆಯಂತೆ ಮಾರಾಟವಾಗಿ ಅಧಿಕ ಬೇಡಿಕೆಯನ್ನು ಹುಟ್ಟು ಹಾಕಿತ್ತು. ದಾವಣಗೆರೆ ಏಜೆಂಟರು ಐವತ್ತು ಪತ್ರಿಕೆಗೆ ಬದಲಾಗಿ ಐನೂರು ಪತ್ರಿಕೆಗಳನ್ನು ಕಳುಹಿಸಿಕೊಡಬೇಕೆಂದು ವೀರಣ್ಣಗೌಡರಿಗೆ ಪತ್ರ ಬರೆದರೆಂದು ಗೌಡರು ಆತ್ಮಕಥೆಯಲ್ಲಿ ಸ್ಮರಿಸುತ್ತಾರೆ. ದಾವಣಗೆರೆಯಲ್ಲಿ ಮಾತ್ರವಲ್ಲದೆ ಇಡೀ ಕರ್ನಾಟಕದಾದ್ಯಂತ ಚಿತ್ರಗುಪ್ತ ಪತ್ರಿಕೆಯ ಪ್ರಚಾರ ಬೇಗ ಬೆಳೆಯಿತು. ಒಂದು ಸಾವಿರ ಪ್ರತಿಗಳಿಗೆ ಬದಲಾಗಿ ಐದು ಸಾವಿರ ಪ್ರತಿಗಳನ್ನು ಅಚ್ಚು ಮಾಡಿಸುವುದಕ್ಕೆ ಏರಿತು. ಅಲ್ಲದೆ ದಾವಣಗೆರೆ ಕೆಲವು ಮುಖಂಡ ವರ್ತಕರು ಹೆಚ್ಚಿನ ವಂತಿಗೆ ಸಹಾಯ ನೀಡುವುದಾಗಿ ದಾವಣಗೆರೆಗೆ ವೀರಣ್ಣಗೌಡರನ್ನು ಆಹ್ವಾನಿಸಿದರು. ಆದರೆ ವೀರಣ್ಣಗೌಡರಿಗೆ ಸತ್ಯ ಸಂಗತಿ ಪ್ರಕಟ ಮಾಡಿದುದಕ್ಕಾಗಿ ಪ್ರತಿಫಲ ನಿರೀಕ್ಷಿಸುವುದು ನ್ಯಾಯವಲ್ಲವೆಂದೆನಿಸಿತು. "ಬೆಂಗಳೂರಲ್ಲಿ ೧೯೨೮ನೇ ಇಸವಿಯಲ್ಲಿ ನಡೆದ ಗಣಪತಿ ಗಲಭೆಯಲ್ಲಿ ಚಿತ್ರಗುಪ್ತ ಪತ್ರಿಕೆ ಎಷ್ಟು ಜನಾದರಣೀಯವಾಯಿತೋ ಅಷ್ಟೇ ನಾನೂ ಸರ್ಕಾರದ ವಕ್ರದೃಷ್ಟಿಗೆ ಪಾತ್ರನಾದೆ' ಎಂದು ಹೇಳುತ್ತಾ ವೀರಣ್ಣಗೌಡರು ತಮ್ಮ ಪತ್ರಿಕಾ ಜೀವನದ ಏರುಪೇರುಗಳನ್ನು ತಮ್ಮ ಆತ್ಮಕಥೆಯಲ್ಲಿ ವಿವರಿಸಿದ್ದಾರೆ.

ಸುಲ್ತಾನ್‌ಪೇಟೆ ಮಾಧ್ಯಮಿಕ ಶಾಲೆಯ ಆವರಣದಲ್ಲಿದ್ದ ವಿದ್ಯಾಗಣಪತಿಯ ದೇವಸ್ಥಾನದ ಎದುರು ಸಾಲಿನಲ್ಲಿ ಮಹಮದ್ ಅಬ್ಬಾಸ್‌ಖಾನ್ ಎಂಬುವರ ಮನೆಯಿತ್ತು. ಅಬ್ಬಾಸ್‌ಖಾನರು ಆಗ ಬೆಂಗಳೂರು ನಾಗರೀಕರಲ್ಲಿ ಒಬ್ಬ ಪ್ರತಿಭಾವಂತ ವ್ಯಕ್ತಿಯಾಗಿದ್ದರು. ಆಗಿನ ಪ್ರಜಾಪ್ರತಿನಿಧಿ ಮತ್ತು ನ್ಯಾಯವಿದಾಯಕ ಸಭೆಗಳ ಸದಸ್ಯರಾಗಿದ್ದುಕೊಂಡು, ಸರ್ಕಾರದ ವಾರ್ಷಿಕ ಆಯವ್ಯಯಗಳ ಅಂದಾಜು ಪಟ್ಟಿಯ ಮೇಲೆ ಪ್ರತಿಭಾನ್ವಿತವಾದ ಟೀಕೆ ಮಾಡುತ್ತಿದ್ದವರಲ್ಲಿ ಅಬ್ಬಾಸ್‌ಖಾನ್ ಒಬ್ಬರಾಗಿದ್ದರು. ಆದರೆ ಅಬ್ಬಾಸ್‌ಖಾನರೇ ಗಣಪತಿ ಗಲಭೆಗೆ ಕಾರಣರೆಂಬ ವದಂತಿ ಹಬ್ಬಿತ್ತು. ಗಲಭೆಯ ರಾತ್ರಿ ಪೊಲೀಸರು ಗುಂಡು ಹಾರಿಸಿದ್ದರಿಂದ ಕೆಲವರು ಸತ್ತರೆಂದು, ಮುಸ್ಲಿಮರಲ್ಲಿ ಗೂಂಡಾಗಳಾಗಿದ್ದವರು ಕೆಲವು ಹಿಂದೂಗಳನ್ನು ಅಬ್ಬಾಸ್‌ಖಾನರ ಮನೆಯೊಳಗೆ ಎಳೆದುಕೊಂಡು ಹೋಗಿ ಹತ್ಯೆ ಮಾಡಿದರೆಂದೂ ಮೊದಲಾದ ವದಂತಿಗಳು ಕಾಳ್ಗಿಚ್ಚಿನಂತೆ ಊರಲ್ಲೆಲ್ಲ ಹಬ್ಬಿದ್ದು, ಜನತೆಯಲ್ಲಿ ಅಸಮಾಧಾನ, ಅಶಾಂತತೆ

ತಾಂಡವಾಡುತ್ತಿತ್ತು. ಆ ರಾತ್ರಿ ಚಿತ್ರಗುಪ್ತ ಪತ್ರಿಕೆಗೆ ರಾತ್ರಿ ೧೨ ಗಂಟೆಯ ನಂತರ ಪತ್ರಿಕೆ ಅಚ್ಚಾಗುವುದು ನಿಂತ ಮೇಲೂ ಪತ್ರಿಕೆ ಪ್ರತಿಯೊಂದಕ್ಕೆ ಮೂರು ಕಾಸಿಗೆ ಬದಲಾಗಿ ನಾಲ್ಕು ಆಣೆವರೆಗೂ ಮಾರಾಟವಾಗುತ್ತಿತ್ತಂತೆ.

ಮಾರನೆ ದಿನ ಸಾಯಂಕಾಲ ನಾಲ್ಕು ಗಂಟೆ ಸುಮಾರಿಗೆ ಚಿಕ್ಕಪೇಟೆ ಚೌಕದಲ್ಲಿ ಜನರು ಕಿಕ್ಕಿರಿದು ಸೇರಿದ್ದರು. ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯಲ್ಲಿದ್ದ ದೊಡ್ಡ ಪೋಸ್ಟ್ ಆಫೀಸ್‌ವರೆಗೂ ಜನರ ಗುಂಪು ಮುನ್ನುಗ್ಗಲು ತಳ್ಳಾಡುತ್ತಿತ್ತು. ಅವರೆದುರಿಗೆ ಪೊಲೀಸರು ಹಳೆ ಸಂತೇಪೇಟೆವರೆಗೆ ಗುಂಡು ಹಾರಿಸಲು ಸಿದ್ದರಾಗಿ ನಿಂತಿದ್ದರು. ವೀರಣ್ಣಗೌಡರು ಆರ್ಕಾಟ್ ಶ್ರೀನಿವಾಸಚಾರ್ ಬೀದಿಯ ಮನೆಯೊಂದರಲ್ಲಿ ಗ್ರಾಮ ಸೇವಾ ಪ್ರೆಸ್ ಮತ್ತು ಚಿತ್ರಗುಪ್ತ ಪತ್ರಿಕೆಯ ಆಫೀಸುಗಳನ್ನು ನಡೆಸುತ್ತ ಮಹಡಿಯ ಮೇಲೆ ವಾಸ ಮಾಡುತ್ತಿದ್ದರು. ಜನರ ಅಶಾಂತ ಗುಂಪನ್ನು ಚದುರಿಸಲು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ ಮತ್ತು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರವರು ವೀರಣ್ಣಗೌಡರ ಆಫೀಸಿನ ಬಳಿ ಬಂದು ಕೂಗಿ "ಗೌಡರೇ ದಯಮಾಡಿ ಹೊರಗೆ ಬನ್ನಿ, ಜನರನ್ನು ಶಾಂತಗೊಳಿಸಿ, ನಿಮ್ಮ ದೇಶಭಿಮಾನ ತೋರಿಸಿ" ಎಂದು ಹೇಳಿದರು. ಹೊರಗೆ ಬಂದ ವೀರಣ್ಣಗೌಡರು ಜನರ ಗುಂಪಿದ್ದ ಕಡೆಗೆ ಹೋಗಿ, ಅವರಿಗೆ ಕೈ ಮುಗಿಯುತ್ತಾ 'ದಯಮಾಡಿ ಹಿಂದಕ್ಕೆ ಸರಿಯಿರಿ, ಗಲಭೆಗೆ ಅವಕಾಶ ಕೊಡಬೇಡಿ, ಅನಾಹುತವಾಗಬಾರದು' ಎಂದು ಬೇಡಿಕೊಳ್ಳುತ್ತಿದ್ದರು. ಆಗ ಜಿಲ್ಲಾ ಮ್ಯಾಜಿಸ್ಟ್ರೇಟರು ಇದ್ದಕ್ಕಿದ್ದಂತೆ ವೀರಣ್ಣಗೌಡರ ಬಳಿ ಬಂದು 'ಈಗ ಪೊಲೀಸರು ಗುಂಡು ಹಾರಿಸುತ್ತಾರೆ, ನಾವು ಯಾರ ಮುಖವನ್ನೂ ನೋಡುವುದಿಲ್ಲ. ತಂತಮ್ಮ ಪ್ರಾಣ ಉಳಿಸಿಕೊಳ್ಳಲು ಇದೇ ಕಡೇ ಅವಕಾಶ' ಎಂದು ಸಾರಿಯೇ ಬಿಟ್ಟರು! ದಿಗ್ಭ್ರಾಂತರಾದ ವೀರಣ್ಣಗೌಡರು ತಮ್ಮ ಆಫೀಸಿಗೆ ಹಿಂದಿರುಗುತ್ತಿದ್ದರು. ಅಷ್ಟರಲ್ಲಿ ಪೊಲೀಸರ ಗುಂಡಿನ ಸುರಿ ಮಳೆ ನಿಂತು, ಗುಂಪು ಪೊಲೀಸರನ್ನು ಬೆನ್ನಟ್ಟಿದ್ದು ಕಂಡರು. ಘರ್ಷಣೆಯ ಸ್ಥಳಕ್ಕೆ ಪುನಃ ದಾವಿಸಿದ ವೀರಣ್ಣಗೌಡರು ಏಟು ಬಿದ್ದು ರಕ್ತ ಸೋರುತ್ತಿದ್ದ ಸಿಟಿ ಮ್ಯಾಜಿಸ್ಟ್ರೇಟರನ್ನು ತಮ್ಮ ಆಫೀಸಿಗೆ ಪೊಲೀಸ್ ವ್ಯಾನಿನಲ್ಲಿ ಕರೆದೊಯ್ದು ಗಾಯಗಳಿಗೆ ಬಟ್ಟೆ ಸುತ್ತಿ ಅವರನ್ನು ಅದೇ ವ್ಯಾನಿನಲ್ಲಿ ಆಸ್ಪತ್ರೆಗೆ ಕಳುಹಿಸಿಕೊಟ್ಟರು. ಅಷ್ಟರಲ್ಲಿ ಗುಂಪು ಶಾಂತವಾಗಿ ಚದುರಿತ್ತು. ಇದಾದ ನಂತರ ಈ ಘಟನೆಯಲ್ಲಿ ವೀರಣ್ಣಗೌಡರು ಭಾಗಿಯಾಗಿ ಕಲ್ಲು ಎಸೆಯುತ್ತಿದ್ದರೆಂದು ಆಪಾದನೆ ಹೊರಿಸಿ ಶ್ರೀ ಪಿ.ಆರ್.ರಾಮಯ್ಯನವರು ಮತ್ತು ಟಿ.ಟಿ.ಶರ್ಮನವರನ್ನೊಳಗೊಂಡಂತೆ ಮೊಕದ್ದಮೆ ಹೂಡಿದರು. ಈ ಮೊಕದ್ದಮೆಗಳು ಸುಮಾರು ಒಂದು ವರ್ಷ ಕಾಲದವರೆಗೂ ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ನಡೆದು ನಂತರ ಒಂದು ದಿನ ಸರ್ಕಾರದವರು ಆ ಕೇಸುಗಳನ್ನು ವಾಪಸು ತೆಗೆದುಕೊಂಡರು. ಆಗ ವೀರಣ್ಣಗೌಡರು ಕೋರ್ಟಿನಲ್ಲಿ ಒಂದು ಹೇಳಿಕೆಯನ್ನು ಓದಿ ಜಿಲ್ಲಾಧಿಕಾರಿ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್‌ರವರ ಅನ್ಯಾಯವಾದ ನಡವಳಿಕೆ ಮತ್ತು ಪೊಲೀಸರ ಅಸಹಾಯಕತೆ ಕುರಿತು ಕಟುವಾಗಿ ಟೀಕಿಸಿ, ' ಸರ್ಕಾರದವರು ನನ್ನ ಮೇಲಿನ ಕೇಸುಗಳನ್ನು ಮುಂದುವರಿಸಲಿ' ಎಂದು ಕೆಂಡ ಮಂಡಲವಾಗಿ ನುಡಿದರು.

ಬೆಂಗಳೂರು ಗಲಭೆಯನ್ನು ಕುರಿತು ವಿಚಾರಣೆ ನಡೆಸಲು ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಏಳು ಜನ ಸದಸ್ಯರನ್ನೊಳಗೊಂಡ ಒಂದು ವಿಚಾರಣಾ ಸಮಿತಿ ನೇಮಕವಾಯಿತು. ವಿಶ್ವೇಶ್ವರಯ್ಯ ಸಮಿತಿ ಒಂದು ವರ್ಷ ಕಾಲ ವಿಚಾರಣೆ ನಡೆಸಿ ಸರ್ಕಾರಕ್ಕೆ ಒಂದು ವರದಿಯನ್ನು ಕೊಟ್ಟಿತು. ಆ ವರದಿಯಲ್ಲಿ ಗಲಭೆಯ ಸಮಯದಲ್ಲಿ ಸರ್ಕಾರ ಗಲಭೆ ತಡೆಯಲು ವಿಫಲವಾಯಿತೆಂದು ಟೀಕಿಸಿ, ಜನತೆಯ ರಾಜಕೀಯ ಆಶೋತ್ತರಗಳನ್ನು ಅಂದರೆ ಆಡಳಿತದಲ್ಲಿ ಜನತಾ ಪ್ರತಿನಿಧಿಗಳಿಗೆ ಅಧಿಕಾರವಿರಬೇಕೆಂಬ ಅಭಿಪ್ರಾಯವನ್ನು ಸೂಚಿಸಿದರು. ಇನ್ನೂ ಹೆಚ್ಚು ಕಾಲ ಜನರ ರಾಜಕೀಯ ದಾಹವನ್ನು ತೃಪ್ತಿ ಪಡಿಸದೆ ಮುಂದುವರೆದರೆ ಜನತೆಯ ಅಸಮಾಧಾನವನ್ನು ತಡೆಗಟ್ಟಲು ಸಾಧ್ಯವಾಗಲಾರದೆಂದು ವಾದಿಸಿದ್ದರು. ಆ ವರದಿಯನ್ನು ಪ್ರಕಟಿಸಲು ಸರ್ಕಾರದವರು ನಿರಾಕರಿಸಿದರು. ಆ ವರದಿಯ ಕೇವಲ ೧೨ ಪ್ರತಿಯನ್ನು ಮಾತ್ರ ಅಚ್ಚು ಮಾಡಿಸಿದ್ದರೆಂದೂ, ಮುದ್ರಣ ಸಮಯದಲ್ಲಿ ಬಿಗಿ ಭದ್ರತೆಯನ್ನು ನೀಡಿದ್ದರೆಂದು ವಿಚಾರಣ ಸಮಿತಿ ಸದಸ್ಯರಿಗೆ ತಲಾ ಒಬ್ಬರಿಗೆ ಒಂದೊಂದು ಪ್ರತಿಯನ್ನು, ದಿವಾನರಿಗೆ ಒಂದು ಚೀಫ್ ಸೆಕ್ರೆಟರಿಯವರಿಗೆ ಒಂದು – ಹೀಗೆ ಒಂಬತ್ತು ಪ್ರತಿಗಳನ್ನು ಹಂಚಿ ಉಳಿದ ಮೂರು ಪ್ರತಿಗಳನ್ನು ಮೊಹರು ಮಾಡಿಸಿ ಬಿಗಿಯಾಗಿ ಇಟ್ಟಿದ್ದರಂತೆ. ಇದನ್ನರಿತ ಪ್ರತಿನಿಧಿಗಳು ಪ್ರಜಾಪ್ರತಿನಿಧಿ ಸಭೆ ನ್ಯಾಯ ವಿದಾಯಕ ಸಭೆಗಳಲ್ಲಿ ವಿಶ್ವೇಶ್ವರಯ್ಯ ಸಮಿತಿ ವರದಿಯನ್ನು ಪ್ರಕಟಿಸಬೇಕೆಂದು ಒತ್ತಾಯ ಪಡಿಸುತ್ತಿದ್ದರು. ಆದರೂ ಸರ್ಕಾರದವರು ಮೌನವಾಗಿ ಇದ್ದರೇ ಹೊರತು ವರದಿಯನ್ನು ಪ್ರಕಟಿಸಲು ಒಪ್ಪಲಿಲ್ಲ. ಇದನ್ನರಿತ ವೀರಣ್ಣಗೌಡರು ಸಾಹಸಿ ಪ್ರವೃತ್ತಿಯವರಾದ್ದರಿಂದ ಆ ವರದಿಯನ್ನು ಹೇಗಾದರೂ ಮಾಡಿ ಸಂಪಾದಿಸಿ ಪ್ರಕಟಿಸಬೇಕೆಂಬ ಹಠ ತೊಟ್ಟರು. ವೀರಣ್ಣಗೌಡರ ಈ ವಿಚಾರಕ್ಕೆ ಪತ್ರಿಕಾರಂಗದ ಗಣ್ಯರಾದ ಬಿ.ಎನ್.ಗುಪ್ತರವರು ಬೆಂಬಲ ಸೂಚಿಸಿದ ಹಿನ್ನೆಲೆಯಲ್ಲಿ ವಿಚಾರಣಾ ಸಮಿತಿಯ ೭ ಸದಸ್ಯರಲ್ಲೊಬ್ಬರು ವೀರಣ್ಣಗೌಡರ ಪರಿಚಯಸ್ಥರೊಬ್ಬರಾಗಿದ್ದರು. ಅವರನ್ನು ಒಂದು ದಿನ ರಾತ್ರಿ ಹನ್ನೊಂದು ಗಂಟೆಯಲ್ಲಿ ಭೇಟಿ ಮಾಡಿ ವರದಿಯ ವಿಚಾರವಾಗಿ ತಮ್ಮ ಮನಸ್ಸಿನ ನಿರ್ಧಾರವನ್ನು ಅವರಿಗೆ ತಿಳಿಸಿ, ಅವರಲ್ಲಿರುವ ವರದಿಯನ್ನು ತನಗೆ ೩ ದಿನಗಳ ಮಟ್ಟಿಗೆ ಎರವಲು ಕೊಡಬೇಕೆಂದು ಕೇಳಿಕೊಂಡರು. ವರದಿಯು ತಮ್ಮಲ್ಲಿ ಇಲ್ಲವೆಂದು ವಾದಿಸಿದ ಸದಸ್ಯರಿಗೆ ವೀರಣ್ಣಗೌಡರು ವರದಿಯ ಪ್ರತಿ ಅವರಲ್ಲಿ ಇದೆಯೆಂದು ನನಗೆ ಖಚಿತವಾಗಿ ತಿಳಿದಿದೆಯೆಂದೂ, ಅದರಲ್ಲಿರುವ ಕೆಲವು ಮುಖ್ಯಾಂಶಗಳೂ ನನ್ನ ಕಿವಿಗೆ ಬಿದ್ದಿವೆಯೆಂದೂ, ಅಧಿಕೃತವಾಗಿ ಅದನ್ನು ಪ್ರಕಟಿಸಿ ಜನತೆಯ ಗಮನವನ್ನು ವರದಿಯಲ್ಲಿರುವ ಶಿಫಾರಸ್ಸುಗಳ ಕಡೆಗೆ ಸೆಳೆಯುವುದಾದರೆ, ಜನರಲ್ಲಿ ರಾಜಕೀಯ ಪ್ರಜ್ಞೆ ಬೆಳೆದು ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಸಹಕಾರಿಯಾಗುವುದೆಂದೂ ಆದುದರಿಂದ ವರದಿಯನ್ನು ದೊಡ್ಡ ಮನಸ್ಸು ಮಾಡಿ ತಮಗೆ ಕೇವಲ ಮೂರು ದಿನಗಳ ಮಟ್ಟಿಗೆ ಕೊಡಬೇಕೆಂದೂ ಒತ್ತಾಯ ಮಾಡಿದರು. ಅದಕ್ಕೆ ಆ ಸದಸ್ಯರು 'ಸರ್ಕಾರದ ಉಪ್ಪು ತಿಂದು ಸರ್ಕಾರಕ್ಕೇ ದ್ರೋಹ ಮಾಡು ಎಂದು ನನಗೆ ಬೋಧಿಸುತ್ತಿದ್ದೀಯಲ್ಲ, ಇದು ನಿನಗೆ ಸರಿಯೇ?' ಎಂದು ಅವರು ಕೇಳಿದರು. ವೀರಣ್ಣಗೌಡರು ಅದಕ್ಕೆ 'ನೋಡಿ ಸಾರ್ ನೀವು ಸರ್ಕಾರದ ಉಪ್ಪು ತಿನ್ನುತ್ತಿರುವುದು ನಿಜ. ಆದರೆ ಆ ಉಪ್ಪು ಎಲ್ಲಿಂದ ಬರುತ್ತಿದೆಯೆಂಬುದು ನಿಮಗೆ ತಿಳಿಯದೆ ಸಾರ್? ಜನತೆ ವಿವಿಧ ರೂಪಗಳಲ್ಲಿ ಕೊಡುವ ತೆರಿಗೆ, ಸುಂಕ,

ಕಂದಾಯ, ಕೌಳಿಗೆಗಳಿಂದ ಬರುವ ಆದಾಯವೇ ನಿಮಗೆ ಸರ್ಕಾರ ಕೊಡುತ್ತಿರುವ 'ಉಪ್ಪು', ಸರ್ಕಾರಕ್ಕೆ ಜನತೆ ಕೊಟ್ಟಿರುವುದೇ ಆಗಿದೆ. ಜನತೆಯ ಆಶೋತ್ತರಗಳನ್ನು ಈಡೇರಿಸಲು ಸಹಾಯಕವಾಗುವ ವಿಷಯಗಳನ್ನೊಳಗೊಂಡಿರುವ ವರದಿಯನ್ನು ಪ್ರಕಟಿಸಿದರೆ 'ಉಪ್ಪು' ಕೊಟ್ಟ ಒಡೆಯನಿಗೆ ಉಪಕಾರ ಮಾಡಿದಂತಾಗುವುದು' ಎಂದು ಮಾತನಾಡಿ ಸದಸ್ಯರ ಮನವೊಲಿಸಿದರು. 'ಪ್ರಜಾಪ್ರಭುತ್ವ ಸ್ಥಾಪನೆಗಾಗಿ ನೀನು ನಡೆಸುತ್ತಿರುವ ಧೈರ್ಯದ ಹೋರಾಟ ನನಗೆ ಹೆಮ್ಮೆಯನ್ನುಂಟು ಮಾಡಿದೆ ಎಂದು ಪ್ರಶಂಸಿಸಿದ ಸದಸ್ಯರು ತಾವು ಆ ವರದಿಯನ್ನು ಕೊಡುವುದಾಗಿ, ಆದರೆ ಎಲ್ಲೂ ನನ್ನ ಹೆಸರನ್ನು ಬಹಿರಂಗ ಪಡಿಸಬಾರದು' ಎಂದು, ಶರತ್ತು ವಿಧಿಸಿ ಎರಡೇ ದಿನಗಳಲ್ಲಿ ಹಿಂದಿರುಗಿಸಬೇಕೆಂದು' ಹೇಳಿ ವರದಿಯನ್ನು ವೀರಣ್ಣಗೌಡರಿಗೆ ನೀಡಿದರು.

ಆ ರಾತ್ರಿಯೇ ವೀರಣ್ಣಗೌಡರು ಮತ್ತು ಬಿ.ಎನ್.ಗುಪ್ತರು ಜೊತೆಗೂಡಿ ಮೂರು ಮಂದಿ ಟೈಪ್ ಮಾಡುವವರನ್ನೂ ಟೈಪರೈಟರ್ ಸಮೇತ ಆಫೀಸಿಗೆ ಬರುವಂತೆ ಏರ್ಪಡಿಸಿ ವರದಿಯನ್ನು ಮೂರು ಭಾಗವಾಗಿ ಹರಿದು ಒಬ್ಬೊಬ್ಬರಿಗೆ ನಾಲ್ಕು ಪ್ರತಿಗಳನ್ನು ಟೈಪ್ ಮಾಡಿಕೊಡಬೇಕೆಂದು ಒಬ್ಬೊಬ್ಬರಿಗೂ ಒಂದು ನೂರು ರೂಪಾಯಿಗಳನ್ನು ಕೊಡುವುದಾಗಿ ಹೇಳಿ ಒಪ್ಪಿಸಿದರು. ಮಾರನೆ ದಿನ ಸಾಯಂಕಾಲದೊಳಗೆ ವರದಿ ಪೂರ್ಣ ಟೈಪ್ ಮಾಡಿಸಿ ಒಂದು ಪ್ರತಿಯನ್ನು ವೀರಣ್ಣಗೌಡರು ತಮ್ಮ ಆಫೀಸಿನಲ್ಲೂ ಇನ್ನೊಂದನ್ನು ಅವರ ದಿಂಬಿನ ಕೆಳಗೂ ಮೂರನೆಯದನ್ನು ವಿ.ವೆಂಕಟಪ್ಪನವರ ಬಳಿಯೂ ನಾಲ್ಕನೆಯದನ್ನು ಬಿ.ಎನ್.ಗುಪ್ತರ ಬೇರೊಂದು ಮನೆಯಲ್ಲೂ ಇಟ್ಟರು. ಕಾರಣ ಒಂದು ವೇಳೆ ಪೊಲೀಸರು ದಾಳಿ ನಡೆಸಿ ಗೌಡರ ಬಳಿ ಇರುವ ಪ್ರತಿಯನ್ನು ಕಿತ್ತುಕೊಂಡು ಹೋದರೂ ಬೇರೆ ಬೇರೆ ಸ್ಥಳಗಳಲ್ಲಿ ಇಟ್ಟಿರುವ ಪ್ರತಿಗಳಿಂದ ಪತ್ರಿಕೆಯಲ್ಲಿ ಅದರ ಪ್ರಕಟಣೆಯನ್ನು ಮುಂದುವರಿಸಬೇಕೆಂದು ನಿರ್ಧರಿಸಿದರು. ಇಲ್ಲಿ ಅವರ ಮುಂಜಾಗರೂಕತೆ ಮೆಚ್ಚುವಂತಹುದು. ವರದಿಯನ್ನು ಕನ್ನಡಕ್ಕೆ ಅನುವಾದ ಮಾಡಿ ಹರಿದ ವರದಿಯನ್ನು ಬೈಂಡ್ ಮಾಡಿಸಿ ಕೃತಜ್ಞತೆಯಿಂದ ಆ ಸದಸ್ಯರಿಗೆ ಹಿಂದಿರುಗಿಸಿದರು. ನಂತರ ದಿನಪತ್ರಿಕೆಯಲ್ಲಿ ಒಂದನೇ ಪರಿಚ್ಛೇಧದಿಂದ ಪ್ರಾರಂಭಿಸಿ ಹಂತ ಹಂತವಾಗಿ ಪ್ರಕಟಿಸುತ್ತಾ ಬಂದರು. ಎರಡು ದಿನದ ನಂತರ ದಿವಾನ್ ಸರ್ ಮಿರ್ಜಾ ಇಸ್ಮಾಯಿಲರ ಆಪ್ತರೊಬ್ಬರು ವೀರಣ್ಣಗೌಡರನ್ನು ಕಂಡು 'ವರದಿಯನ್ನು ಅಷ್ಟು ಗೋಪ್ಯವಾಗಿಟ್ಟಿದ್ದರೂ ಅದು ನಿಮಗೆ ಹೇಗೆ ದೊರೆಯಿತು' ಎಂದು ಕೇಳಿದರು. 'ಸರ್ಕಾರದವರು ಮೊಹರು ಮಾಡಿ ಇಟ್ಟಿದ್ದ ಮೂರು ಪ್ರತಿಗಳಲ್ಲಿ ಒಂದನ್ನು ಕದ್ದಿದ್ದೇನೆ, ಹೇಗೆ ಕಳವು ಮಾಡಿದೆ ಎಂಬುದನ್ನು ನಾನು ಹೇಳುವುದಿಲ್ಲ. ಕಳ್ಳತನ ಹೇಗಾಯಿತು ಎಂಬುದನ್ನು ಪತ್ತೆ ಮಾಡುವ ಕೆಲಸ ಸರ್ಕಾರದ್ದು' ಎಂದು ವೀರಣ್ಣಗೌಡರು ಉತ್ತರ ಕೊಟ್ಟರು. ಮತ್ತೆ ಮಾರನೆಯ ದಿನ ದಿವಾನರ ಸಲಹೆಯಂತೆ ಅವರು ವೀರಣ್ಣಗೌಡರಿಗೆ 'ವರದಿಯನ್ನು ಅನುಕ್ರಮವಾಗಿ ಪ್ರಕಟಿಸದೆ ಪರಿಚ್ಛೇದ ಒಂದು ನಂತರ ನಾಲ್ಕು ನಂತರ ಎರಡು ಈ ರೀತಿಯಾಗಿ ಕಲಸು ಮೇಲೋಗರವಾಗಿ ಪ್ರಕಟಿಸಬೇಕೆಂದು ದಿವಾನ್ ಸರ್ ಮಿರ್ಜಾರವರ ಕೋರಿಕೆಯಾಗಿದೆ, ಇದನ್ನು ನೆರವೇರಿಸಿ ಕೊಡುವುದರಿಂದ ನಿಮ್ಮ ಉದ್ದೇಶಕ್ಕೇನೂ ಭಂಗ ಬರುವುದಿಲ್ಲ ಹೇಗೆ ಪ್ರಕಟಿಸಿದರೂ ವಿಷಯ

ಜನರಿಗೆ ತಿಳಿದು ಹೋಗುವುದು' ಎಂದು ಕೇಳಿಕೊಂಡರು. ವೀರಣ್ಣಗೌಡರಿಗೆ ಅವರು ಆಪ್ತರಾದುದರಿಂದ ಅದಕ್ಕೆ ಒಪ್ಪಿಕೊಂಡರು. ಆದಾದ ಕೆಲವು ವಾರಗಳಲ್ಲಿ ಸರ್ಕಾರದವರೇ ಇಂಗ್ಲಿಷ್ ವರದಿಯನ್ನು ಪ್ರಕಟಿಸಿ ಬಹಿರಂಗ ಪಡಿಸಿದರು. ಅದರ ಕನ್ನಡ ಅನುವಾದವನ್ನೂ ಸರ್ಕಾರದವರೇ ಪ್ರಕಟಿಸಬೇಕೆಂದು ನ್ಯಾಯವಿದಾಯಕ ಸಭೆಯಲ್ಲಿ ಕೆಲವು ಮಂದಿ ಸದಸ್ಯರು ಒತ್ತಾಯಿಸಿದಾಗ ಖಾಸಗಿಯಾಗಿ ಕನ್ನಡ ಅನುವಾದವನ್ನು ಈಗಾಗಲೇ ಬೇರೆಯವರು ಪ್ರಕಟಿಸುತ್ತಿರುವುದರಿಂದ ಸರ್ಕಾರದವರು ಪುನಃ ಅದೇ ಕಾಯಕ ಮಾಡಬೇಕಾದ ಅಗತ್ಯವಿಲ್ಲವೆಂದು ದಿವಾನ್ ಸರ್ ಮಿರ್ಜಾ ಸಾಹೇಬರು ತಿಳಿಸಿದರು. ಆಗ ವೀರಣ್ಣಗೌಡರು ಪತ್ರಿಕಾ ವರದಿಗಾರರಾಗಿ ಆ ಸಭೆಯಲ್ಲಿದ್ದರು.

ಹೆಚ್.ಕೆ.ವೀರಣ್ಣಗೌಡರಿಗೆ ಅಂದಿನ ಪ್ರಭುತ್ವದ ವ್ಯವಸ್ಥೆಯಲ್ಲಿನ ಕುಂದುಕೊರತೆಗಳ ಬಗ್ಗೆ ಆಕ್ರೋಶವಿತ್ತೇ ಹೊರತು ವ್ಯವಸ್ಥೆಯ ಬಗ್ಗೆ ಒಲವು, ಗೌರವವಿತ್ತು. ಹಾಗಾಗಿ ದಿವಾನ್ ಸರ್ ಮಿರ್ಜಾ ಸಾಹೇಬರು ತಮ್ಮನ್ನು ಬಂದು ಕಾಣುವಂತೆ ಇತರರೊಂದಿಗೆ ಹೇಳಿಕಳುಹಿಸಿದರೂ ದಿವಾನರ ಮೇಲಿನ ಗೌರವದಿಂದ, ಆರ್ಥಿಕ ಮುಗ್ಗಟ್ಟಿನ ಸ್ಥಿತಿಯಲ್ಲಿರುವ ತಾನು ಎಲ್ಲಿ ದಿವಾನರ ದಾಕ್ಷಿಣ್ಯಕ್ಕೆ ಬಲಿಯಾಗುವೇನೋ? ಎಂಬ ಸಂಶಯದಿಂದ ವೀರಣ್ಣಗೌಡರು ಕಡೆಯವರೆಗೂ ದಿವಾನರನ್ನು ಭೇಟಿಯಾಗಲೇ ಇಲ್ಲ. ಅವರ ಮನಸ್ಸಿನಲ್ಲಿ ಮೂಡಿದ ಮತ್ತೊಂದು ಸಂಶಯವೆಂದರೆ ದಿವಾನರ ದಾಕ್ಷಿಣ್ಯದಿಂದ ಅನುಕೂಲವೇನಾದರೂ ಪಡೆದರೆ ಯಾವ ಧ್ಯೇಯೋದ್ದೇಶಗಳಿಂದ ಕಷ್ಟ ನಷ್ಟಗಳಿಗೆ ಗುರಿಯಾಗಿ ಪತ್ರಿಕೆ ನಡೆಸುತ್ತಿರುವೆನೋ ಅದು ನೀರುಪಾಲಾದಂತೆಯೇ ಸರಿ ಎಂದು ಭಾವಿಸಿದರು. ಎಂತಹ ಸಂಕಷ್ಟ, ಸಂದಿಗ್ದ ಪರಿಸ್ಥಿತಿಯಲ್ಲೂ ತಾವು ನಂಬಿದ್ದ ತತ್ವ ಸಿದ್ಧಾಂತ ಗಳಿಗೆ ಬದ್ಧರಾಗಿ ನಡೆದುಕೊಂಡರು. ಇದು ಅವರಲ್ಲಿನ ಸಮಾಜ ಸೇವೆಯ ದೃಢನಿಲುವನ್ನು ವ್ಯಕ್ತಗೊಳಿಸುತ್ತದೆ. ಜನತೆಯಲ್ಲಿ ರಾಜಕೀಯ ಪ್ರಜ್ಞೆ ಮೂಡಿಸುವ ಮೂಲಕ ಸಮಾಜ ಸುಧಾರಣೆಯ ಕಾರ್ಯದಲ್ಲಿ ತಮ್ಮ ಅಳಿಲು ಸೇವೆ ಸಲ್ಲಿಸಬಹುದೆಂಬ ನಿರ್ಧಾರ ಅವರದಾಗಿತ್ತು.

ನಿಷ್ಪಕ್ಷಪಾತ, ನಿರ್ಭಯ, ಪ್ರಾಮಾಣಿಕ ಪತ್ರಿಕೆ ಎಂಬ ಧ್ಯೇಯ ವಾಕ್ಯವನ್ನೊಳಗೊಂಡಿದ್ದ ಚಿತ್ರಗುಪ್ತ ಪತ್ರಿಕೆ ದಿವಾನ್ ಆಡಳಿತದ ಕೆಲವು ಕೆಲಸ ಕಾರ್ಯಗಳ ಬಗ್ಗೆ ಕಟು ಟೀಕಾ ಪ್ರಹಾರ ಮಾಡುತ್ತಿತ್ತು. ದಿನ ದಿನಕ್ಕೂ ಪ್ರವರ್ಧಮಾನಕ್ಕೆ ಬಂದು ಹೆಚ್ಚು ಜನಾನುರಾಗ ಸಂಪಾದಿಸುತ್ತಾ ಬಂದಂತೆಲ್ಲಾ ಚಿತ್ರಗುಪ್ತ ಪತ್ರಿಕೆ ಮೇಲೆ ಸರ್ಕಾರದ ಹಾಗು ದಿವಾನರ ಅಸಮಾದಾನ ಹೆಚ್ಚುತ್ತಾ ಬಂತು. ಪತ್ರಿಕೆಗೆ ಸರ್ಕಾರದ ಪ್ರಕಟಣೆಗಳನ್ನು ಕೊಡಕೂಡದೆಂದು ತೀರ್ಮಾನ ಮಾಡಿದರು. ಅಲ್ಲದೆ ಪ್ರಕಟಣೆ ಕೊಟ್ಟ ಅಧಿಕಾರಿಯನ್ನು ಕರೆದು ಬೆದರಿಸುತ್ತಿದ್ದರು. ಈ ರೀತಿ ದಿವಾನರ ಬೆದರಿಕೆಗೆ ಒಳಪಟ್ಟ ಅಧಿಕಾರಿಗಳ ಪೈಕಿ ಮೈಸೂರು ಗಂಧದ ಎಣ್ಣೆ ಮತ್ತು ಸಾಬೂನು ಕಾರ್ಖಾನೆಯ ಅಧಿಕಾರಿಯಾಗಿದ್ದ ಗರಳಪುರಿ ಶಾಸ್ತ್ರಿಗಳು ಒಬ್ಬರು. ಸರ್ಕಾರದ ಈ ಕೂಟದ ಜೊತೆಗೆ ಬೇರೆ ಬೇರೆ ಪಟ್ಟಣಗಳಲ್ಲಿದ್ದ ಪತ್ರಿಕಾ ಏಜೆಂಟರುಗಳು ಪ್ರತಿ ತಿಂಗಳು ಪೂರ್ತಿ ಹಣ ನೀಡದೆ ಪ್ರತಿ ತಿಂಗಳು ಬಾಕಿ ಉಳಿಸಿಕೊಳ್ಳುತ್ತಿದ್ದರು. ಹೀಗಾಗಿ ಸುಮಾರು ಎಂಟು, ಹತ್ತು ಸಾವಿರ ರೂಪಾಯಿಗಳು ಏಜೆಂಟರುಗಳಿಂದ ಬಾಕಿ ಉಳಿಯಿತು. ಒಂದೊಂದು ದಿನ ಪತ್ರಿಕೆ ಅಚ್ಚು ಮಾಡಿಸಲು ಕಾಗದ ಕೊಂಡುಕೊಳ್ಳುವುದಕ್ಕೂ ಹಣವಿರುತ್ತಿರಲಿಲ್ಲ.

ಕಂಪಾಜಿಟರುಗಳು ಮತ್ತು ಆಫೀಸಿನ ಸಿಬ್ಬಂದಿ ವರ್ಗದವರ ಸಂಬಳ ಕೊಡುವುದಕ್ಕೂ ಹಣವಿರುತ್ತಿರಲಿಲ್ಲ. ಈ ಸಮಯದಲ್ಲಿಯೇ ಹಣಕಾಸಿನ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಮತ್ತು ತಿಂಗಳಿಗೆ ೫೦ ರೂಪಾಯಿ ಸಹಾಯ ಧನ ಕೊಡಲು ಒಪ್ಪಿದ್ದ ಬಿ.ಎನ್.ಗುಪ್ತರು ಕಾರಣಾಂತರದಿಂದ ಪತ್ರಿಕೆ ಪ್ರಾರಂಭವಾಗಿ ಕೆಲವು ತಿಂಗಳಲ್ಲಿ ಪತ್ರಿಕೆಯೊಂದಿಗಿನ ತಮ್ಮ ಸಂಬಂಧವನ್ನು ಕಳೆದುಕೊಂಡಿದ್ದರು. ಒಂದು ವರ್ಷದವರೆಗೆ ಆಗುವ ನಷ್ಟ ಭರ್ತಿಮಾಡಿಕೊಡಲು ಒಪ್ಪಿದ್ದ ನೀಲಗಿರಿ ಸಂಜೀವಯ್ಯನವರೂ ತಮ್ಮ ಮಾತಿನಂತೆ ನಡೆದುಕೊಳ್ಳಲು ನಿರಾಕರಿಸಿದರು. ಅದಕ್ಕೆ ಕಾರಣ ಬ್ರಾಹ್ಮಣ – ಬ್ರಾಹ್ಮಣೇತರ ರಾಜಕೀಯ. ಒಂದು ಸಾರಿ ಹೊಸಕೊಪ್ಪ ಕೃಷ್ಣರಾಯರು ಬೆಂಗಳೂರಲ್ಲಿ ಒಂದು ಬಹಿರಂಗ ಸಭೆಯಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಯ ಅಗತ್ಯ ಕುರಿತು ವಿಚಾರಪೂರಿತ ಭಾಷಣ ಮಾಡಿದರು. ಆಗ ರಾಯರು ಪ್ರಜಾ ಪ್ರತಿನಿಧಿ ಸಭೆ ಸದಸ್ಯರಾಗಿದ್ದರು. ಉಗ್ರ ರಾಷ್ಟ್ರೀಯ ಭಾವನೆ ಹೊಂದಿದ್ದವರಲ್ಲಿ ಅವರು ಅಗ್ರಗಣ್ಯರಾಗಿದ್ದರು. ಅವರ ಭಾಷಣವನ್ನು ವೀರಣ್ಣಗೌಡರು ಚಿತ್ರಗುಪ್ತ ಪತ್ರಿಕೆಯಲ್ಲಿ ಪೂರ್ಣವಾಗಿ ಪ್ರಕಟಿಸಿದ್ದರು. ಅದರ ಮಾರನೆ ದಿನ ನೀಲಗಿರಿ ಸಂಜೀವಯ್ಯನವರು ವೀರಣ್ಣಗೌಡರನ್ನು ಕಂಡು 'ನೀವು ಪತ್ರಿಕೆಯಲ್ಲಿ ಬ್ರಾಹ್ಮಣ ರಾಜಕೀಯ ವ್ಯಕ್ತಿಗೆ ಬಹು ಪ್ರಾಧಾನ್ಯತೆ ಕೊಟ್ಟಿದ್ದೀರಿ, ಆದುದರಿಂದ ತಮ್ಮ ಪತ್ರಿಕೆಗೂ ನನಗೂ ಇನ್ನು ಮುಂದೆ ಯಾವುದೇ ಸಂಬಂಧವೂ ಇಲ್ಲವೆಂದು' ಹೇಳಿ ಸಂಪರ್ಕ ಕಳೆದುಕೊಂಡರು. ಇತರರು ತಾವು ಮಾಡುವ ಕಾರ್ಯದಲ್ಲಿ ಜಾತಿ ರಾಜಕೀಯಕ್ಕೆ ಹೆಚ್ಚು ಒಲವು ತೋರುತ್ತಿದ್ದವರ ಮಧ್ಯೆ ವೀರಣ್ಣಗೌಡರು ಅದಕ್ಕೆ ಹೊರತಾಗಿದ್ದರು. ನಿಜವಾದ ದೇಶಪ್ರೇಮಿ, ದೇಶಭಕ್ತನಾಗಿದ್ದರಿಂದ ಬ್ರಾಹ್ಮಣರಾದರೇನಂತೆ ಕೃಷ್ಣರಾಯರ ಉಗ್ರ ರಾಷ್ಟ್ರೀಯ ಭಾವನೆಗೆ ಮನಸೋತು ಅವರ ಭಾಷಣ ಪ್ರಕಟಿಸಿದ್ದರು. ಅವರು ೧೯೩೦ರ ದಶಕದಲ್ಲಿ ಸ್ವಾತಂತ್ರ್ಯ ಹೋರಾಟದ ಹಾದಿಯಲ್ಲಿ ಜಾತ್ಯತೀತ ಮನೋಭಾವನೆಯಿಂದ ಹೆಚ್.ಕೆ.ವೀರಣ್ಣಗೌಡರು ಹೋರಾಡುತ್ತಿದ್ದುದು ಇಲ್ಲಿ ಕಂಡುಬರುತ್ತದೆ.

ನೀಲಗಿರಿ ಸಂಜೀವಯ್ಯನವರು ನಷ್ಟ ಭರ್ತಿಗಾಗಿ ಎಂದು ಕೊಡುತ್ತಿದ್ದ ಹಣವನ್ನು ಬ್ಯಾಂಕಿನ ಕಂತು ಕಟ್ಟುವುದಕ್ಕೆ ವೀರಣ್ಣಗೌಡರು ಉಪಯೋಗಿಸುತ್ತಿದ್ದರು. ಅವರು ಹಣ ಕೊಡುವುದನ್ನು ನಿಲ್ಲಿಸಿದ ಮೇಲೆ ಬ್ಯಾಂಕಿನ ಕಂತು ಕಟ್ಟುವುದಕ್ಕೆ ಕಷ್ಟವಾಯಿತು. ಕಡೆಗೊಮ್ಮೆ ಬ್ಯಾಂಕಿನವರು ವೀರಣ್ಣಗೌಡರ ಮೇಲೆ ದಾವ ಹೂಡಿ, ಡಿಕ್ರಿ ಪಡೆದು ಸಿವಿಲ್ ವಾರೆಂಟ್ ಸಹ ಹೊರಡಿಸಿದ್ದರು. ಹಣದ ಮುಗ್ಗಟ್ಟು ಅತಿಯಾದಾಗ ಒಮ್ಮೆ ವೀರಣ್ಣಗೌಡರಿಗೆ ಪ್ರಸಿದ್ದ ಸಂಗೀತ ವಿದುಷಿ ಎಂ.ಎಸ್.ಸುಬ್ಬಲಕ್ಷ್ಮಿಯವರ ಪತಿ ಸದಾಶಿವನ್‌ರವರು ಶ್ರೀಮಂತ ಮಹಿಳೆಯೊಬ್ಬರಿಂದ ಚಂದಾ ತಂದುಕೊಟ್ಟು ಆ ಪರಿಸ್ಥಿತಿಯಿಂದ ಪಾರು ಮಾಡಿದ್ದರು. ಆದರೆ ಅಂತಿಮವಾಗಿ ಸಹಾಯ ಹಸ್ತ ನೀಡುವವರ್‍ಯಾರು ಇಲ್ಲದೆ ಮತ್ತು ಸರ್ಕಾರದ ಕ್ರಮದಿಂದ ಚಿತ್ರಗುಪ್ತ ಪತ್ರಿಕೆ ಮುಚ್ಚುವ ಸ್ಥಿತಿಗೆ ತಲುಪಿತು. ಅನ್ಯಾಯ ಅಸಮಾನತೆಗಳ ವಿರುದ್ದ ಗುಡುಗಿ ಸರ್ಕಾರಕ್ಕೆ ತಲ್ಲಣ ಉಂಟು ಮಾಡುತ್ತಿದ್ದ ಚಿತ್ರಗುಪ್ತ ಪತ್ರಿಕೆ ಪತ್ರಿಕಾರಂಗದಲ್ಲಿ ಮುಂಗಾರು ಮಳೆಯ ಮಿಂಚಿನಂತೆ ಕಾಣಿಸಿಕೊಂಡು ಜನಮನವನ್ನು ಬೆಳಗಿ ಕಣ್ಮರೆಯಾಯಿತು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂದು ಇಂತಹ ಅನೇಕ ನಿರ್ಭೀತ ಪತ್ರಿಕೆಗಳು ನಮ್ಮ ಮಧ್ಯೆ ಇರಬಹುದು. ಆದರೆ ಪರಕೀಯರ ಆಳ್ವಿಕೆ ಇದ್ದಂತಹ ಸಂದರ್ಭದಲ್ಲಿ ಯಾವ ರಾಜಕೀಯ ವಶೀಲಿಯ (Influence) ಹಿನ್ನೆಲೆಯೂ ಇಲ್ಲದೆ ವ್ಯಕ್ತಿಯೊಬ್ಬರು ಇಂತಹ ಪತ್ರಿಕೆ ನಡೆಸಲು ಸ್ವತಃ ನಿರ್ಭೀತನಾಗಿದ್ದಾಗ ಮಾತ್ರ ಸಾಧ್ಯ. ಇಂತಹ ನಿರ್ಭೀತ, ನಿರ್ದಾಕ್ಷಿಣ್ಯ ಮತ್ತು ಯಾರ ಮುಲಾಜಿಗೂ ಕಟ್ಟುಬೀಳದ ವ್ಯಕ್ತಿ ವೀರಣ್ಣಗೌಡರಾಗಿದ್ದರೆಂಬುದು ಉತ್ಪ್ರೇಕ್ಷೆಯ ಮಾತೇನಲ್ಲ. ಪತ್ರಿಕೆಗೆ ಬರೀ ಶೀರ್ಷಿಕೆಯನ್ನು ಕೊಟ್ಟಿದ್ದಲ್ಲ, ನುಡಿದಂತೆ ನಡೆದರು. ಪತ್ರಿಕೆಯಲ್ಲಿ ರಂಜನೀಯವಾಗಿ ಬರೆದು ಪತ್ರಿಕೆ ಹೆಚ್ಚು ಮಾರಾಟವಾಗುವ ಹಾಗೆ ಮಾಡಿ ಹಣ ಗಳಿಸಬಹುದಾಗಿತ್ತು. ಆದರೆ ಹಣಗಳಿಕೆ ಇವರ ಉದ್ದೇಶವಾಗಿರಲಿಲ್ಲ. ಇವರಿಗೆ ಮುಖ್ಯವಾದದ್ದು ಸಾಮಾಜಿಕ ಬದ್ಧತೆ, ಸುದ್ದಿಯನ್ನು ಹೆಚ್ಚಿಸಿ ಜನರ ಭಾವನೆ ಕೆರಳಿಸಿದರೆ ಆಗಬಹುದಾದ ಅನಾಹುತವನ್ನು ಊಹಿಸಿದ ವೀರಣ್ಣಗೌಡರು ಗಲಭೆ ತಡೆಯಲು ತಮ್ಮ ಲೇಖನಿಯನ್ನು ಬಳಸಿಕೊಡರು.

**ವಾರ್ತಾ ಪತ್ರಿಕೆ:-** ಹೆಚ್.ಕೆ.ವೀರಣ್ಣಗೌಡರಿಗೂ ಪತ್ರಿಕಾರಂಗಕ್ಕೂ ಬಿಡಿಸಲಾಗದ ಸಂಬಂಧ. ವಿಶಿಷ್ಟ ಶೈಲಿಯ ವೀರ ಅಭಿವ್ಯಕ್ತಿಯ ಜನಪ್ರಿಯ ದಿನ ಪತ್ರಿಕೆಯಾಗಿದ್ದ 'ಚಿತ್ರಗುಪ್ತ'ವನ್ನು ಸಾಲ ಸೋಲಗಳಿಂದ ನಿಲ್ಲಿಸಿದರೂ ಪತ್ರಿಕಾ ಸಂಬಂಧ ಕಡಿದು ಹೋಗಲಿಲ್ಲ. ೧೯೪೯ರಲ್ಲಿ 'ವಾರ್ತಾ' ಎಂಬ ಸಂಜೆ ದಿನಪತ್ರಿಕೆಗೆ ಸಂಪಾದಕರಾಗಿ ಸುಮಾರು ೨ ವರ್ಷ ನಡೆಸಿದರು. ಅದು ಕಂಪನಿಯೊಂದರ ಪತ್ರಿಕೆ. ಆ ಕಂಪನಿಯಲ್ಲಿ ಮೂಲತಃ ವೀರಕೇಸರಿ ಸೀತಾರಾಮಶಾಸ್ತ್ರಿಗಳು 'ವಾರ್ತಾ' ಪತ್ರಿಕೆಯನ್ನು ನಡೆಸುತ್ತಿದ್ದರು. ಎಸ್.ಚನ್ನಯ್ಯನವರು ಆ ಪತ್ರಿಕೆಯನ್ನು ಕೊಂಡುಕೊಂಡರು. ಆ ಪತ್ರಿಕೆ ಮತ್ತು ಪ್ರೆಸ್ಸಿಗೆ ಸಾಹುಕಾರ್ ಚನ್ನಯ್ಯನವರು ಪ್ರೊಪ್ರೈಟರಾಗಿ, ಹೆಚ್.ಕೆ.ವೀರಣ್ಣಗೌಡರು ಸಂಪಾದಕರಾಗಿ, ಜಿ.ನಾರಾಯಣರು ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದರು.

ಜವಾಬ್ದಾರಿ ಸರ್ಕಾರ ಸ್ಥಾಪಿಸುವ ನಿಟ್ಟಿನಲ್ಲಿ ಜನಜಾಗೃತಿ ಮೂಡಿಸುವುದು ವಾರ್ತಾ ಪತ್ರಿಕೆಯ ಮುಖ್ಯ ಗುರಿಯಾಗಿತ್ತು. ಅಂದಿನ ಕಾಂಗ್ರೆಸ್ಸಿನ ಧ್ಯೇಯವೂ ಅದೇ ಆಗಿತ್ತು. ಹಾಗಾಗಿ ಕಾಂಗ್ರೆಸ್ ಸಂಸ್ಥೆಯ ಮುಖವಾಣಿಯಾಗಿ ವಾರ್ತಾ ಪತ್ರಿಕೆ ಪ್ರಕಟವಾಗುತ್ತಿತ್ತು. ಕಾಂಗ್ರೆಸ್‌ನ ಧ್ಯೇಯ ಧೋರಣೆಗಳನ್ನು ಪ್ರಚಾರ ಪಡಿಸುವುದು. ರಾಷ್ಟ್ರೀಯ ಭಾವನೆಗಳನ್ನು ಬಿತ್ತುವುದು. ಜವಾಬ್ದಾರಿ ಸರ್ಕಾರ ಲಭ್ಯವಾಗುವವರೆಗೆ ನಿರಂತರವಾಗಿ ಹೋರಾಡುವುದು ವಾರ್ತಾ ಪತ್ರಿಕೆಯ ಉದ್ದೇಶವಾಗಿತ್ತು.

ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ಸಂಸ್ಥಾನಕ್ಕೆ ಸ್ವಾತಂತ್ರ್ಯ ಲಭ್ಯವಾಗಿರಲಿಲ್ಲ. ಮೈಸೂರು ಮಹಾರಾಜರು ಭಾರತ ಒಕ್ಕೂಟಕ್ಕೆ ಸೇರಿಕೊಳ್ಳಲಿಲ್ಲ. ಕೆ.ಸಿ.ರೆಡ್ಡಿಯವರು ಕಾಂಗ್ರೆಸ್ ಅಧ್ಯಕ್ಷರಾದ ಮೇಲೆ ಜವಾಬ್ದಾರಿ ಸರ್ಕಾರದ ಹೋರಾಟವನ್ನು ತೀವ್ರಗೊಳಿಸಿದರು. ಅಂತಹ ಸಂದರ್ಭದಲ್ಲಿ ರಾಷ್ಟ್ರೀಯವಾದಿಗಳ ದೇಶಭಕ್ತರ, ಸ್ವಾತಂತ್ರ್ಯಪ್ರಿಯರ ಆಶೋತ್ತರಗಳ ಅಮರವಾಣಿಯಾಗಿ ವಾರ್ತಾ ಸಂಜೆ ದಿನ ಪತ್ರಿಕೆ ತನ್ನ ಪಾಲಿನ ಕರ್ತವ್ಯವನ್ನು ಅರ್ಥಪೂರ್ಣವಾಗಿ ನಿಭಾಯಿಸಿತು. ಹುಟ್ಟು ಹೋರಾಟಗಾರರೂ ರಾಷ್ಟ್ರೀಯವಾದಿಗಳೂ ದೇಶಭಕ್ತರೂ ಆದ ವೀರಣ್ಣಗೌಡರ

ಲೇಖನ ತನ್ನ ಎಂದಿನ ಹುಮ್ಮಸ್ಸಿನಿಂದ ವಾರ್ತಾ ಪತ್ರಿಕೆಯಲ್ಲಿ ಅದ್ಭುತ ಜನಾಭಿಪ್ರಾಯ ಮೂಡಿಸುವುದರಲ್ಲಿ ಯಶಸ್ವಿಯಾಯಿತು. ಜವಾಬ್ದಾರಿ ಸರ್ಕಾರ ಬರುವವರೆಗೆ ಪತ್ರಿಕೆ ನಿರಂತರವಾಗಿ ನಡೆಯಿತು. ಪತ್ರಿಕೆ ಉತ್ತಮವಾಗಿದ್ದರೂ ಆರ್ಥಿಕವಾಗಿ ನಷ್ಟ ಅನುಭವಿಸಿತು. ಹಲವು ತೊಂದರೆಗಳಿಗೂ ಸಿಕ್ಕಿ ಕೊಂಡಿತು.

"ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ಜೋರಾದಂತೆ 'ವಾರ್ತಾ' ಪತ್ರಿಕೆಯ ಮೇಲೆ ಸರ್ಕಾರದ ಕ್ರೂರ ದೃಷ್ಟಿ ಬಿತ್ತು. ಸಂಪಾದಕರಾದ ವೀರಣ್ಣಗೌಡರನ್ನು ದಸ್ತಗಿರಿ ಮಾಡಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇಟ್ಟರು. ಮುಂದೆ ಕೆಲವು ವಾರ ಪತ್ರಿಕೆ ನಡೆಯಲಿಲ್ಲ. ಸ್ವಲ್ಪ ದಿನಗಳಲ್ಲೇ ಶ್ರೀಮಾನ್ ಮಹಾರಾಜರಿಂದ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಘೋಷಣೆಯಾಗಿ ಜೈಲಿನಲ್ಲಿದ್ದವರೆಲ್ಲ ಬಿಡುಗಡೆಯಾದರು. ಕೆ.ಸಿ.ರೆಡ್ಡಿಯವರು ಮುಖ್ಯಮಂತ್ರಿಗಳಾದರು"[32] ಜವಾಬ್ದಾರಿ ಸರ್ಕಾರದ ಸ್ಥಾಪನೆಯ ಉದ್ದೇಶ ನೆರವೇರಿದುದರಿಂದ ವೀರಣ್ಣಗೌಡರು ವಾರ್ತಾ ಸಂಜೆ ದಿನಪತ್ರಿಕೆಯ ಪ್ರಕಟಣೆಗಳನ್ನು ನಿಲ್ಲಿಸಿದರು. ಮೈಸೂರು ಅರಮನೆ ಚಲೋ ಚಳುವಳಿಯ ಸಂದರ್ಭದಲ್ಲಿ ಪ್ರಕಟವಾಗುತ್ತಿದ್ದ ರಾಷ್ಟ್ರೀಯ ಭಾವನೆಯ ಪತ್ರಿಕೆಗಳಲ್ಲಿ 'ವಾರ್ತಾ' ಪತ್ರಿಕೆಯ ಪಾತ್ರ ಗಮನಾರ್ಹವಾಗಿತ್ತು.

೧೯೪೭ರಲ್ಲಿ ವೀರಣ್ಣಗೌಡರು ಬಂಧನವಾಗಿ ಸೆರೆಮನೆವಾಸ ಅನುಭವಿಸಿ ಹೊರ ಬಂದ ಮೇಲೆ ಹಿಂದೆ ತಾವು ನಡೆಸಿ ನಿಲ್ಲಿಸಿದ್ದ 'ಚಿತ್ರಗುಪ್ತ' ದಿನಪತ್ರಿಕೆಯನ್ನು ಪುನಃ ಪ್ರಾರಂಭಿಸಿ ನಡೆಸಿದರು. ಹಿಂದಿನ ಧ್ಯೇಯಧೋರಣೆಗಳಲ್ಲೇ ಪತ್ರಿಕೆ ಮುಂದುವರಿಯಿತು. ಪತ್ರಿಕೆಗೆ ಟೆಲಿಪ್ರಿಂಟರ್ ವ್ಯವಸ್ಥೆಯನ್ನು ಹೊಂದಿಸಿದ್ದರು. ಆದರೆ ಎಂದಿನಂತೆ ಆರ್ಥಿಕ ಮುಗ್ಗಟ್ಟು ಕಾಣಿಸಿಕೊಂಡಿತು. ಒಂದು ವರ್ಷ ಕಳೆದ ಮೇಲೆ ಪತ್ರಿಕೆಯನ್ನು ಎಂ.ಎಸ್.ಭಾರದ್ವಜರಿಗೆ ಮಾರಿ ಬಿಟ್ಟರು. ಮುಂದೆ ಅದು ಸಾಪ್ತಾಹಿಕವಾಗಿ ಮುಂದುವರೆಯಿತು.

ಸಮಾಜ ಸೇವೆಯ ಸ್ಪಷ್ಟವಾದ ಗುರಿಯನ್ನಿಟ್ಟುಕೊಂಡು ವೀರಣ್ಣಗೌಡರು ಪತ್ರಿಕಾರಂಗದಲ್ಲಿ ಕೆಲಸ ಮಾಡಿದರು. ಒಕ್ಕಲಿಗರ ಪತ್ರಿಕೆ ಅಂದಿನ ಸರ್ಕಾರದ ಪರವಾಗಿದ್ದು, ಯಾವುದೇ ಘರ್ಷಣೆಗೆ ಇಳಿಯದಿದ್ದರೂ ವೀರಣ್ಣಗೌಡರು ತಮ್ಮ ಸಂಪಾದಕತ್ವದ ಅವಧಿಯಲ್ಲಿ ಅದನ್ನು ದೇಶದ ವಾಸ್ತವ ಸ್ಥಿತಿಯ ಅಭಿವ್ಯಕ್ತಿಯ ಮಾಧ್ಯಮವನ್ನಾಗಿಸಲು ಪ್ರಯತ್ನಿಸಿದರು. ಆದಷ್ಟು ಸೌಮ್ಯವಾಗಿ ಜನಜಾಗೃತಿ ಮೂಡಿಸಲು ತೊಡಗಿದರು. ಚಿತ್ರಗುಪ್ತ ಪತ್ರಿಕೆಯಲ್ಲಿ ಹೆಚ್ಚು ಸ್ವತಂತ್ರರಾಗಿ ನಿರ್ಭೀತಿಯಿಂದ, ದಿಟ್ಟ ನಿಲುವಿನಿಂದ ಕಾರ್ಯ ನಿರ್ವಹಿಸಿದರು. ಅಂದಿನ ಬ್ರಿಟಿಷ್ ಸರ್ಕಾರಕ್ಕೆ ಮುಖಾಮುಖಿಯಾಗಿ ಅವರ ದಬ್ಬಾಳಿಕೆಯನ್ನು ಉಗ್ರವಾಗಿ ಖಂಡಿಸಿ ಸ್ವಾತಂತ್ರ್ಯ ಗಳಿಕೆಯತ್ತ ಜನಸ್ತೋಮವನ್ನು ಪ್ರೇರೇಪಿಸುವುದರತ್ತ ಶ್ರಮಿಸಿದರು. ರಾಷ್ಟ್ರೀಯವಾದದ ಪಡೆ ನಿರ್ಮಾಣವಾಗಲು ಮಹಾತ್ಮ ಗಾಂಧೀಜಿಯವರ ಕೈ ಬಲಪಡಿಸಲು ತಮ್ಮದೇ ಆದ ರೀತಿಯಲ್ಲಿ ಹೋರಾಡಿದರು. ಅವರ ಸ್ವಾತಂತ್ರ್ಯದ ಅಭೀಪ್ಸೆ ಪತ್ರಿಕೆಯ ಪುಟ ಪುಟಗಳಲ್ಲೂ

---

[32] ಜಿ.ನಾರಾಯಣ ವಿಚಾರ. ೧೯೮೪, ಪುಟ-೯

ತುಂಬಿತು. ಸತ್ಯಾಗ್ರಹಿಗಳು ದೈಹಿಕವಾಗಿ ಹೋರಾಟಕ್ಕಿಳಿದರೆ, ಚಿತ್ರಗುಪ್ತ ಬರಹಗಳ ಮೂಲಕ ವೀರಣ್ಣಗೌಡರು ದೈಹಿಕವಾಗಿ, ಮಾನಸಿಕವಾಗಿ ಹೋರಾಟಗಾರರಾದರು.

ಜೈಲಿನಿಂದ ಹೊರಬಂದು ಗಳಿಸಿದ ಸ್ವಾತಂತ್ರ್ಯವನ್ನು ಅನುಭವಿಸಲಾಗದ ಅಸಹಾಯಕ ಪರಿಸ್ಥಿತಿಯಲ್ಲಿ ಉಗ್ರವಾಗಿ ಪ್ರತಿಕ್ರಿಯಿಸುವುದರತ್ತ ವಾರ್ತಾ ಪತ್ರಿಕೆಯ ವೀರಣ್ಣಗೌಡರು ಕಣಕ್ಕಿಳಿದರು. ಹಿಂದಿನ ಧೋರಣೆ ಮತ್ತಷ್ಟು ಉಗ್ರವಾಗಿ, ವ್ಯಗ್ರವಾಗಿ, ಆತ್ಮಶಕ್ತಿಯ ಸಂಕೇತವಾಗಿ ಪ್ರಕಟಗೊಂಡಿತು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸತ್ಯಾಗ್ರಹಿಗಳು ಎಷ್ಟು ಮುಖ್ಯವೋ ಪತ್ರಿಕೆಗಳೂ ಅಷ್ಟೇ ಮುಖ್ಯ ಎನ್ನುವುದನ್ನು ವೀರಣ್ಣಗೌಡರು ತೋರಿಸಿ ಕೊಟ್ಟರು. ವೃತ್ತಾಂತ ಪತ್ರಿಕೆ, ಅರ್ಥಸಾದಕ ಪತ್ರಿಕೆ, ಡಿ.ಕೆ.ಭಾರಧ್ವಜರ ರಂಗಭೂಮಿ ಮೊದಲಾದ ಪತ್ರಿಕೆಗಳಿಗೆ ಬರೆಯುತ್ತಿದ್ದ ಹೆಚ್.ಕೆ.ವೀರಣ್ಣಗೌಡರ ದೃಷ್ಟಿ ಬೇರೆಯಾದುದು. ಬರವಣಿಗೆಯ ಶೈಲಿಯಲ್ಲಿ ಅಭಿವ್ಯಕ್ತಿಯ ಧೋರಣೆಯಲ್ಲಿ ಭಿನ್ನತೆಯಿದ್ದರೂ ಎಲ್ಲ ಬರವಣಿಗೆಯ ಮುಖ್ಯ ಆಶಯ ಒಂದೇ. ಎಲ್ಲದರಲ್ಲೂ ರಾಷ್ಟ್ರಭಕ್ತಿ, ಜನಜಾಗೃತಿ ಮುಖ್ಯ ತಿರುಳಾಗಿತ್ತು.

ಪತ್ರಿಕೋದ್ಯಮದ ಭೀಷ್ಮರೆಂದು ಪ್ರಸಿದ್ಧರಾಗಿದ್ದ ತಿ.ತಾ.ಶರ್ಮರಂತೆ ಹೆಚ್.ಕೆ.ವೀರಣ್ಣಗೌಡರು ಪತ್ರಿಕಾರಂಗದಲ್ಲಿ ಕೆಲವು ಪ್ರಥಮಗಳನ್ನು ಸಾಧಿಸಿದ್ದಾರೆ. ಪತ್ರಿಕಾ ಕ್ಷೇತ್ರ ನಡೆದು ಬಂದ ದಾರಿಗೆ ಸ್ಪಷ್ಟವಾದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ. ಹೆಚ್.ಕೆ.ವೀರಣ್ಣಗೌಡರು ತಮ್ಮ ಪತ್ರಿಕಾ ಸಂಪಾದಕೀಯಗಳಿಗೆ ಹೆಚ್ಚು ಗಮನಕೊಡುತ್ತಿದ್ದರು. ತನ್ಮಯತೆಯಿಂದ ಬರೆಯುತ್ತಿದ್ದರು. ಅವುಗಳಲ್ಲಿ ಆತ್ಮವಿಶ್ವಾಸ, ನಿರ್ಭಯ, ವಿಷಯ ಬಾಹುಳ್ಯ, ವಿವೇಚನಾ ತೀಕ್ಷ್ಣತೆ, ಬಹುಜನ ಮನದ ಇಂಗಿತ, ಸಮಾಜದ ಸ್ವಾಸ್ಥ್ಯ, ಜನರ ಏಳಿಗೆ ಪ್ರಧಾನವಾಗಿರುತ್ತಿದ್ದವು. ಬರೆಯುವುದನ್ನು ಸ್ಫುಟವಾಗಿ, ಅಸ್ಖಲಿತವಾಗಿ ಬರೆಯುತ್ತಿದ್ದರು. ಬರೆದ ಮೇಲೆ ತಿದ್ದುವುದು, ಬದಲಾಯಿಸಿ ಬರೆಯುವುದು ಮಾಡದೆ ಅತ್ಯಂತ ಏಕಾಗ್ರವಾಗಿ, ಪ್ರಜ್ಞಾಪೂರ್ವಕವಾಗಿ ಬರೆಯುತ್ತಿದ್ದರು. ಅವರ ಮನದಾಳದಿಂದ ಮೂಡಿಬಂದ ಸಂಪಾದಕೀಯಗಳು ನೇರವಾಗಿ, ಸರಳವಾಗಿ, ಸ್ಪಷ್ಟವಾಗಿ ಅಭಿವ್ಯಕ್ತಿಗೊಂಡು ಓದುಗರನ್ನು ತಲುಪುತ್ತಿದ್ದವು. ಆಗ ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಕನ್ನಡ ಪತ್ರಿಕೆಗಳಲ್ಲಿ ಗಮನಿಸಲೇಬೇಕಾದಂತಹ ಸಂಪಾದಕೀಯಗಳಲ್ಲಿ ವೀರಣ್ಣಗೌಡರ ಸಂಪಾದಕೀಯಗಳು ಆದರ್ಶಪ್ರಾಯವಾಗಿದ್ದವು ಎಂಬುದರಲ್ಲಿ ಉತ್ಪ್ರೇಕ್ಷೆ ಇಲ್ಲ.

'೧೯೦೦ ರಿಂದ ೧೯೪೭ರವರೆಗೆ ರಾಜಕೀಯ ಮತ್ತು ಸಾಮಾಜಿಕ ಪರಿವರ್ತನೆಯ ಹೊಸ್ತಿಲ ಮೇಲಿದ್ದ ಮೈಸೂರು ಸಂಸ್ಥಾನದಲ್ಲಿ ಪ್ರತಿಯೊಂದು ಪತ್ರಿಕೆಯು ಒಂದಲ್ಲ ಒಂದು ಚಳುವಳಿ, ಆಂದೋಲನ ಮತ್ತು ಬದಲಾವಣೆಯ ಜೊತೆಗೆ ತನ್ನನ್ನು ತಾನು ಗುರುತಿಸಿಕೊಂಡಿತು. ಮೈಸೂರ್ ಸ್ಟಾರ್, ವಿಶ್ವ ಕರ್ನಾಟಕ, ಒಕ್ಕಲಿಗರ ಪತ್ರಿಕೆ, ಪ್ರಜಾಮತ ಮೊದಲಾದ ಮುಖ್ಯ ವಾರಪತ್ರಿಕೆಗಳೆಲ್ಲವೂ ಈ ಉದ್ದಿಶ್ಯಗಳಿಗಾಗಿಯೇ ಆರಂಭವಾದವುಗಳು ಎನ್ನುವುದು ಗಮನಿಸಬೇಕಾದ ಅಂಶ. ತಮ್ಮ ನಿರ್ಭೀತ ಬರವಣಿಗೆಯಿಂದ ವ್ಯಕ್ತಿ ಸ್ವಾತಂತ್ರ್ಯ ಮತ್ತು ಪತ್ರಿಕಾ ಸ್ವಾತಂತ್ರ್ಯಗಳೆರಡನ್ನೂ ಎತ್ತಿ ಹಿಡಿಯುವುದರಲ್ಲಿ ಅವು ತೋರಿದ ದಿಟ್ಟತನ ಸರ್ವಕಾಲಕ್ಕೂ ಅನುಕರಣೀಯ'.[೩೩]

---

[೩೩] ( ಚಿತ್ರಗುಪ್ತ, ಪುಟ –

ಪ್ರೌಢಶಾಲೆಯ ಹಂತದಲ್ಲಿದ್ದಾಗಲೇ ಪತ್ರಿಕಾರಂಗವನ್ನು ಪ್ರವೇಶಿಸಿ ತಮ್ಮ ಜೀವನದ ಬಹುಮುಖ್ಯ ಕಾಲಾವಧಿಯನ್ನು ಈ ಕ್ಷೇತ್ರಕ್ಕೆ ಬಳಸಿಕೊಂಡ ಕೀರ್ತಿ ಹೆಚ್.ಕೆ.ವೀರಣ್ಣಗೌಡರದು. ಹಾಗೆಯೇ ಈ ಮಾಧ್ಯಮವನ್ನೇ ತಮ್ಮ ಹೋರಾಟದ ಕಣವನ್ನಾಗಿಸಿಕೊಂಡು ತಮ್ಮ ಬರಹಗಳ ಮೂಲಕ ಜನಶಕ್ತಿಯನ್ನು ಸಂಘಟಿಸಿ ದೇಶಪರ ಚಿಂತನೆಗಳನ್ನು ಅವರಲ್ಲಿ ತುಂಬಿ ಅವರು ಸಮಾಜ ಮುಖಿಯಾಗುವಂತೆ ಹಾಗೆಯೇ ರಾಜಕೀಯ ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳುವಂತಹ ಸಾರ್ಥಕ ಕೆಲಸವನ್ನು ಮಾಡಿದವರು ಶ್ರೀಯುತ ವೀರಣ್ಣಗೌಡರು.

ಅವಕಾಶ ಒದಗಿ ಅಕ್ಷರ ಲೋಕದ ಅರಿವು ಪ್ರಾಪ್ತವಾದರೆ ನೇಗಿಲಯೋಗಿಗಳಾದ ರೈತರ ಮಕ್ಕಳೂ ಎಂತಹ ದೈತ್ಯ ಪ್ರತಿಭೆಯನ್ನೂ ಮೆರೆಯಬಲ್ಲರು ಎಂಬುದಕ್ಕೆ ಹೆಚ್.ಕೆ.ವೀರಣ್ಣಗೌಡರ ಪತ್ರಿಕಾ ವ್ಯವಸಾಯ ಉದಾಹರಣೆಯಾಗಿತ್ತು.

### ೩.೩ ಸಾಹಿತ್ಯಿಕ ಅಭಿರುಚಿ:

ವ್ಯಕ್ತಿಯೊಬ್ಬ ನಿರ್ದಿಷ್ಟವಾಗಿ ಒಂದು ಕ್ಷೇತ್ರದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡು ಆಮಟ್ಟಿಗೆ ಪ್ರತಿಭೆಯನ್ನು ಹೊಂದಿರುವುದು ಸಾಮಾನ್ಯ. ಆದರೆ ಹಲವು ವಿಷಯಗಳಲ್ಲಿ ಪ್ರತಿಭೆಯನ್ನು ಹೊಂದಿರುವವರು ವಿರಳ. ಈ ವಿರಳರ ಸಾಲಿಗೆ ಸೇರಿದವರು ಹೆಚ್.ಕೆ.ವೀರಣ್ಣಗೌಡರು. ಬಹುಮುಖ ಪ್ರತಿಭೆಯನ್ನು ಹೊಂದಿದ್ದ ವ್ಯಕ್ತಿ ಇವರೆಂಬುದು ಹೆಮ್ಮೆಯ ಸಂಗತಿ. ಸಂಘಟನಾಚತುರರಾಗಿ, ನುರಿತ ರಾಜಕಾರಣಿಯಾಗಿ, ಸಮಾಜಸೇವಾ ಧುರೀಣರಾಗಿ, ವಾಗ್ಮಿಯಾಗಿ, ಪತ್ರಿಕೋದ್ಯಮಿಯಾಗಿ ಹಾಗೆಯೇ ಸಾಹಿತಿಯಾಗಿ ಪ್ರತಿಭೆಯನ್ನು ಮೆರೆದ ವ್ಯಕ್ತಿ ಹೆಚ್.ಕೆ.ವೀರಣ್ಣಗೌಡರು.

ಬಾಲ್ಯದಲ್ಲಿ ಇವರ ತಂದೆಯವರು ಮನೆಗೆ ತರುತ್ತಿದ್ದ ಹಲವು ಪುಸ್ತಕ, ಪತ್ರಿಕೆಗಳನ್ನು ಓದುವ ಅಭ್ಯಾಸವನ್ನು ಹೆಚ್.ಕೆ.ವೀರಣ್ಣಗೌಡರು ರೂಢಿಸಿಕೊಂಡಿದ್ದರು. ಹಾಗೆ ಪುಸ್ತಕ ಪ್ರೇಮವನ್ನು ಬೆಳೆಸಿಕೊಂಡ ಇವರಿಗೆ ಕ್ರಮೇಣ ಶಾಲೆಯ ದಿನಗಳಲ್ಲಿ ನಡೆಯುತ್ತಿದ್ದ ಸಾಹಿತ್ಯ ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನ ಗಳಿಸುವಷ್ಟು ಸಾಹಿತ್ಯದ ಬಗೆಗೆ ಅಭಿರುಚಿ ಉಂಟಾಗತೊಡಗಿತ್ತು. ತನ್ನ ಸುತ್ತಣ ಜಗತ್ತಿನ ವ್ಯಾಪಾರಗಳನ್ನು ಸೂಕ್ಷ್ಮವಾಗಿ ಗ್ರಹಿಸಬಲ್ಲ ಸಂವೇದನಶೀಲನಾಗಿ ಯೋಚಿಸಬಲ್ಲ ವ್ಯಕ್ತಿ ಮಾತ್ರ ಹೊಸದಾಗಿ ಅದನ್ನು ಮರು ನಿರ್ಮಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ. ತಮ್ಮ ಓದಿನ ಮತ್ತು ಸುತ್ತಣ ಪರಿಸರದ ಸೂಕ್ಷ್ಮವಾದ ಅವಲೋಕನದ ಮೂಲಕ ಪಡೆಯುತ್ತಿದ್ದ ಜ್ಞಾನ ಇವರನ್ನು ಪ್ರತಿಭಾಶಾಲಿಯನ್ನಾಗಿ ರೂಪಿಸಿದವು. ಹಾಗೆಯೇ ತಮ್ಮ ಚಿಂತನೆಗಳಿಗೆ ಒಂದು ಅಭಿವ್ಯಕ್ತಿ ರೂಪವನ್ನು ಕೊಡುವಷ್ಟು ಎತ್ತರಕ್ಕೆ ಇವರನ್ನು ಬೆಳೆಸಿದವು.

ಭಾರತವನ್ನು ಆಳಲು ಬಂದ ಸಾರ್ವಭೌಮ ೫ನೇ ಜಾರ್ಜ್ ದೆಹಲಿಯಲ್ಲಿ ಸಿಂಹಾಸನವೇರಿದ ದಿನದ ಸ್ಮರಣಾರ್ಥ ಡಿಸೆಂಬರ್ ತಿಂಗಳಿನಲ್ಲಿ 'ನಮ್ಮ ದಿನ' ಎಂಬ ಸಮಾರಂಭವನ್ನು ದೇಶಾದ್ಯಂತ ಆಚರಿಸುತ್ತಿದ್ದರು. ಶಾಲೆ, ಕಾಲೇಜುಗಳಲ್ಲೂ ಈ ಆಚರಣೆ ಇರುತ್ತಿತ್ತು. ಈ 'ನಮ್ಮ ದಿನ'ವನ್ನು ಕುರಿತು ಹೆಚ್.ಕೆ.ವೀರಣ್ಣಗೌಡರು ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗ ಕೆ.ಹನುಮಂತರಾವ್ ಎಂಬ ಕನ್ನಡ

ಪಂಡಿತರ ಪ್ರೋತ್ಸಾಹದಿಂದ ಪ್ರಬಂಧ ರಚಿಸಿ ಮೆಚ್ಚುಗೆ ಗಳಿಸಿದ್ದರು. ಬೆಳೆಯುವ ಸಿರಿ ಮೊಳಕೆಯಲ್ಲಿ ಎಂಬಂತೆ ಇವರಲ್ಲಿದ್ದ ಬರಹಗಾರ ಹೀಗೆ ಮೊಳಕೆಯೊಡೆಯುತ್ತಿದ್ದ.

ಬೆಂಗಳೂರಿನ ಒಕ್ಕಲಿಗರ ಸಂಘದ ವಿದ್ಯಾರ್ಥಿ ನಿಲಯದ ವಾರ್ಷಿಕೋತ್ಸವ ಸಮಾರಂಭದ ಸಂದರ್ಭದಲ್ಲಿ ನಡೆದ ಪ್ರಬಂಧ ಸ್ಪರ್ಧೆಯಲ್ಲೂ ಹೆಚ್.ಕೆ.ವೀರಣ್ಣಗೌಡರು ಭಾಗವಹಿಸಿದರು. ಪ್ರಬಂಧ ಸ್ಪರ್ಧೆಯಲ್ಲಿ ಅಮೇರಿಕಾ ದೇಶದ ನೀಗ್ರೋ ಜನಾಂಗದಲ್ಲಿ ಹುಟ್ಟಿ ಆ ದೇಶದ ಅಧ್ಯಕ್ಷನಾಗಿ ಸೇವೆ ಸಲ್ಲಿಸಿದ 'ಬೂಕರ್-ಟಿ ವಾಷಿಂಗ್‌ಟನ್' ಎಂಬ ಮಹನೀಯರ ಜೀವನ ಚರಿತ್ರೆಯನ್ನು ಆರಿಸಿಕೊಂಡು ಪ್ರಬಂಧ ರಚಿಸಿ ಮೊದಲ ಬಹುಮಾನ ಗಳಿಸಿದ್ದರು. ಇದಲ್ಲದೆ ಪ್ರೌಢಶಾಲೆಯಲ್ಲಿದ್ದಾಗಲೇ 'ಆಶಾ ' ಎಂಬ ನೀಳ್ಗತೆ ಬರೆದು ಪ್ರಕಟಿಸಿ ತಾವು ಈಗಾಗಲೇ ಸಂಪಾದಿಸುತ್ತಿದ್ದ 'ಕರ್ನಾಟಕ ವಿದ್ಯಾರ್ಥಿ' ಎಂಬ ದ್ವೈಮಾಸಿಕ ಪತ್ರಿಕೆಯ ಚಂದಾದಾರರಿಗೆ ಉಚಿತವಾಗಿ ವಿತರಿಸಿದ್ದರು. (ಹೆಚ್.ಕೆ.ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ತಾವು ಚಿಕ್ಕಂದಿನಲ್ಲಿ ಬರೆದ ಆಶಾ ನೀಳ್ಗತೆಯ ನಕಲುಪ್ರತಿಯೊಂದನ್ನು ಇಟ್ಟುಕೊಳ್ಳದೇ ಹೋದುದರ ಬಗ್ಗೆ ವ್ಯಸನಪಟ್ಟುಕೊಂಡಿದ್ದಾರೆ) ಸರ್ಕಾರದ ನಿಷೇಧಾಜ್ಞೆಯನ್ನು ಉಲ್ಲಂಘಿಸಿ ಕೆ.ಜಿ.ಎಫ್‌ನಲ್ಲಿ ದಸ್ತಗಿರಿಯಾಗಿ ಸೆರೆಮನೆಯಲ್ಲಿದ್ದಾಗ ಈ ವೇಳೆಗೆ ರಷ್ಯಾದ ಕ್ರಾಂತಿ, ಅಲ್ಲಿನ ಸಮಾಜವಾದದ ಬಗ್ಗೆ ಆಸಕ್ತಿ ತಳೆದಿದ್ದ ಗೌಡರು, 'ರಷ್ಯಾ ದೇಶದ ಇಣುಕು ನೋಟಗಳು'ಎಂಬ ಕೃತಿಯನ್ನು ಬರೆದಿದ್ದರಂತೆ. ಅಲ್ಲದೆ ದೇಶದಲ್ಲಿ ನಡೆಯಬೇಕಾಗಿದ್ದ ಮತ್ತು ನಡೆಯುತ್ತಲಿದ್ದ ವಿವಿಧ ಚಳುವಳಿಗಳ ಬಗ್ಗೆ ಕೆಲವು ಕಿರುಪುಸ್ತಕಗಳನ್ನು ಬರೆದು ತನ್ಮೂಲಕ ಜನಜಾಗೃತಿಯನ್ನು ಉಂಟುಮಾಡಿದರು. 'ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಶಿಕ್ಷೆಗೆ ಒಳಗಾಗಿ ಶಿವಮೊಗ್ಗ ಜೈಲಿನಲ್ಲಿದ್ದಾಗ ಸತ್ಯಾಗ್ರಹಿಗಳಿಗೆ ಜವಾಬ್ದಾರಿ ಸರ್ಕಾರದ ಬಗ್ಗೆ ಭಾಷಣಗಳನ್ನು ಮಾಡುವುದರ ಜೊತೆಗೆ ಅಚ್ಯುತ ಪಟವರ್ಧನರ 'Communal Triangle' ಎಂಬ ಇಂಗ್ಲೀಷ್ ಪುಸ್ತಕದ ಅನುವಾದವನ್ನು ಕನ್ನಡಕ್ಕೆ ತರುತ್ತಿದ್ದರು. ಅದರ ಕನ್ನಡ ಅನುವಾದ ಪ್ರಕಟವಾಗಲಿಲ್ಲ'[೩೪] ಎಂದು ಗೌಡರೊಂದಿಗೆ ಜೈಲಿನಲ್ಲಿದ್ದು ಶಿಕ್ಷೆ ಅನುಭವಿಸಿದ್ದ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀಯುತ ಪಿ.ಎನ್.ಜವರಪ್ಪಗೌಡರು ಚಿತ್ರಗುಪ್ತ ಸ್ಮರಣೆ ಕೃತಿಯಲ್ಲಿ ಸ್ಮರಿಸಿದ್ದಾರೆ. ಹೀಗೆ ತಮ್ಮ ಬಿಡುವಿಲ್ಲದ ರಾಜಕೀಯ ಚಟುವಟಿಕೆಗಳ ಮಧ್ಯೆಯೂ ಸಾಹಿತ್ಯ ರಚನೆಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದುದು ಇವರ ವಿಶೇಷ.

ಹೆಚ್.ಕೆ.ವೀರಣ್ಣಗೌಡರು ಓದಿದ್ದು ಪ್ರಥಮ ಬಿ.ಎ.ವರೆಗಾದರೂ ಅವರ ಇಂಗ್ಲೀಷ್ ಬರಹಗಳನ್ನು ನೋಡಿದರೆ ಇದನ್ನು ನಂಬುವುದೇ ಕಷ್ಟವಾದೀತು. ಕನ್ನಡವನ್ನು ಹೇಗೋ ಇಂಗ್ಲೀಷನ್ನು ಹಾಗೆಯೇ ಸಲೀಸಾಗಿ, ಸಮರ್ಥವಾಗಿ ಪಳಗಿಸಿಕೊಂಡಿರುವುದನ್ನು ನಾವು ಕಾಣಬಹುದು. ಭಾಷೆಯ ಪ್ರೌಢಿಮೆ, ಪದಪ್ರಯೋಗ, ಇಂಗ್ಲೀಷಿನ ಕೃತಿಗಳ ಆಳವಾದ ಅರಿವು ಎದ್ದು ಕಾಣುತ್ತವೆ. ಶೈಲಿ ಸ್ವಲ್ಪ ಪೆಡಸು, ವಾಕ್ಯ ರಚನೆ ಗಡಸು ಎಂದು ತೋರುವುದಾದರೂ ವಿಷಯ ಪ್ರತಿಪಾದನೆಯ ದೃಷ್ಟಿಯಿಂದ ಅಸಹಜವೆನಿಸುವುದಿಲ್ಲ, ಅವರ ಬರಹಗಳಲ್ಲಿ ಒಂದು ವಿಷಯ ಸ್ಪಷ್ಟ, ಬರೆದದ್ದು ಪಾಂಡಿತ್ಯ

---

[34] ಚಿತ್ರಗುಪ್ತ ಸ್ಮರಣೆ, ಪು-೭೮

ಪ್ರದರ್ಶನಕ್ಕಾಗಿಯೇನೂ ಅಲ್ಲ. ವಿಷಯ ಪ್ರತಿಪಾದನೆ ಮಾತ್ರ ಅವರ ಗುರಿ, ಅದಕ್ಕೆ ಯಾವ ಶೈಲಿ ಸೂಕ್ತ ಎಂದು ಅವರಿಗೆ ತೋರಿದೆಯೊ ಅದನ್ನೆ ಸಹಜವಾಗಿ ಬಳಸಿಕೊಂಡಿದ್ದಾರೆ.

ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಇವರ ಲೇಖನಗಳಲ್ಲಿ ಸಾಹಿತ್ಯಾಂಶ ಇರುತ್ತಿತ್ತಾದರೂ ವೈಚಾರಿಕ ಚಿಂತನೆಗೆ ಹೆಚ್ಚು ಇವರು ಆದ್ಯತೆ ಕೊಡುತ್ತಿದ್ದರು. ಈ ಕಾರಣದಿಂದಾಗಿ ಇವರ ಸಾಹಿತ್ಯದ ಕೆಲವು ಭಾಗಗಳನ್ನು ವಿಚಾರ ಸಾಹಿತ್ಯದ ಪಟ್ಟಿಗೆ ಸೇರಿಸಬಹುದೆನಿಸುತ್ತದೆ. ವಿವಿಧ ವಸ್ತು ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಇವರು ಸಾಕಷ್ಟು ಓದುತ್ತಿದ್ದ ಕಾರಣ ಲೋಕಜ್ಞಾನ ಚೆನ್ನಾಗಿತ್ತು. ಈ ಲೋಕಜ್ಞಾನದೊಂದಿಗೆ ತಮ್ಮ ಸೃಜನಶೀಲತೆಯನ್ನು ಮೇಳೈಸಿಕೊಂಡು ನಾಟಕ, ಕತೆ, ಪ್ರಬಂಧಗಳನ್ನು ಬರೆಯುವ ಪ್ರವೃತ್ತಿಯನ್ನು ಬೆಳೆಸಿಕೊಂಡದ್ದು ಸಹಜವಾಗಿತ್ತು.

ಹೆಚ್.ಕೆ.ವೀರಣ್ಣಗೌಡರು ಒಕ್ಕಲಿಗರ ಪತ್ರಿಕೆ ಮತ್ತು ಚಿತ್ರಗುಪ್ತ ಪತ್ರಿಕೆಗೆ ಬರೆಯುತ್ತಿದ್ದ ಸಂಪಾದಕೀಯದಲ್ಲಿಯೂ ಸಾಹಿತ್ಯಿಕ ಅಂಶಗಳು ಹೇರಳವಾಗಿರುತ್ತಿದ್ದವು. ಪತ್ರಿಕೆಯಲ್ಲಿ ಇವರು ಬರೆಯುತ್ತಿದ್ದ ವರದಿಗಳು ಕೇವಲ ನೀರಸವಾದ ವಿಷಯ ನಿರೂಪಣೆಯಾಗಿರಲಿಲ್ಲ. ಕಲಾತ್ಮಕತೆ ಈ ಬರವಣಿಗೆಯಲ್ಲಿರುತ್ತಿತ್ತು. ಆದ್ದರಿಂದಲೇ ಜನಮನವನ್ನು ಸುಲಭವಾಗಿ ಇವು ಪ್ರವೇಶಿಸುತ್ತಿದ್ದವು. ಹೆಚ್.ಕೆ.ವೀರಣ್ಣಗೌಡರು ರಾಜಕೀಯ ಕ್ಷೇತ್ರದಲ್ಲಿ ಕೆಲವು ರಾಷ್ಟ್ರೀಯ ನಾಯಕರನ್ನು ಮೆಚ್ಚುತ್ತಿದ್ದಂತೆ ಸಾಹಿತ್ಯಕ್ಷೇತ್ರದಲ್ಲಿಯೂ ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಡಿ.ವಿ.ಗುಂಡಪ್ಪ, ಕುವೆಂಪು ಮೊದಲಾದವರನ್ನು ಇಷ್ಟ ಪಡುತ್ತಿದ್ದರು. ಬಳ್ಳಾರಿಯಲ್ಲಿ ಮತ್ತು ಮದ್ದೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನಗಳಲ್ಲಿ ತಮ್ಮ ಬಿಡುವಿರದ ರಾಜಕೀಯ ಚಟುವಟಿಕೆಗಳ ಮಧ್ಯೆಯೂ (ಕರ್ನಾಟಕ ಸರ್ಕಾರದಲ್ಲಿ ಕಾಮಗಾರಿ ಮಂತ್ರಿಯಾಗಿದ್ದ ಅವಧಿಯಲ್ಲಿ) ಹೋಗಿ ಪಾಲ್ಗೊಂಡು ಕಾರ್ಯಕ್ರಮ ನಡೆಸಿಕೊಡುವಷ್ಟರ ಮಟ್ಟಿಗೆ ಇವರು ಸಾಹಿತ್ಯಾಸಕ್ತರಾಗಿದ್ದರು. ಮದ್ದೂರಿನ ಸಾಹಿತ್ಯ ಸಮ್ಮೇಳನದಲ್ಲಿ ಬಿಡುಗಡೆಯಾದ 'ಇಕ್ಷುಗಂಗ' ಹೊತ್ತಿಗೆಗೆ 'ಪ್ರಗತಿಶೀಲ ಮಂಡ್ಯಜಿಲ್ಲೆ' ಎಂಬ ವಿಶೇಷ ಲೇಖನವನ್ನು ಬರೆದುಕೊಟ್ಟಿದ್ದರು. ಇದರಲ್ಲಿ ಮಂಡ್ಯ ಜಿಲ್ಲೆಯ ತನ್ನ ಎಲ್ಲಾ ಕ್ಷೇತ್ರಗಳಲ್ಲಿ ಯಾವ ರೀತಿ ಅಭಿವೃದ್ಧಿ ಸಾಧಿಸಿದೆ ಮತ್ತು ಸಾಧಿಸುತ್ತಿದೆ ಎಂಬುದರ ಬಗ್ಗೆ ನಿಖರವಾದ ಮಾಹಿತಿಗಳೊಂದಿಗೆ ವಿವರಿಸಿದ್ದಾರೆ.

ಒಕ್ಕಲಿಗರ ಪತ್ರಿಕೆಯ ವಿಶೇಷ ವಾರ್ಷಿಕ ಸಂಚಿಕೆಯಲ್ಲಿ ಇವರು ಪ್ರಕಟಿಸಿದ ಕೆಲವು ಲೇಖನಗಳು, ಕವನ, ನಾಟಕ, ಕತೆ ಇತ್ಯಾದಿ ಇವರ ಸಾಹಿತ್ಯಾಸಕ್ತಿಯನ್ನು ಪರಿಚಯಿಸುತ್ತವೆ. ಕೇವಲ ಪತ್ರಕರ್ತನ ಆಲೋಚನೆ, ಆಯ್ಕೆಯ ವಿಧಾನವೇ ಬೇರೆ. ಆ ಪತ್ರಕರ್ತನಲ್ಲಿ ಸಾಹಿತಿಯೂ ಅಡಗಿದ್ದರೆ ಆಗ ಆತ ಮಾಡುವ ಆಯ್ಕೆಯೇ ವಿಭಿನ್ನವಾಗಿರುತ್ತದೆ. ಈ ಮನೋಸ್ಥಿತಿಯ ಹಿನ್ನೆಲೆಯಲ್ಲಿ ಗೌಡರು ಒಕ್ಕಲಿಗರ ಪತ್ರಿಕೆಯಲ್ಲಿ ಭಾರತೀಸುತರ 'ತಾಯ್ನಾಡು' , ಕುವೆಂಪುರವರ 'ದುಃಖದಾನಂದ', 'ಗೊಮಟೇಶ್ವರ', 'ಹಾಳೂರು', ಸಾಲಿ ರಾಮಚಂದ್ರರಾಯರ 'ಪೊಸಮಳೆ', 'ನೇಗಿಲಯೋಗಿ', ಕೃಷ್ಣಬೆಟಗೇರಿಯವರ 'ರಾಮರಾಜನ ರಣದುಂಬಿ', ಇಂತಹ ಅತ್ಯುತ್ತಮ ಕವನಗಳನ್ನು ಆಯ್ಕೆ ಮಾಡಿ ಪ್ರಕಟಿಸಿದ್ದರು. ಮನೆಬೇಸಾಯ, ನಿರುದ್ಯೋಗ, ಹಿಂದೀಭಾಷೆಯ ಕಲಿಕೆ, ಕರ್ನಾಟಕದ ವಿಶ್ವರೂಪದರ್ಶನ, ಕರ್ನಾಟಕ ಏಕೀಕರಣ, ಸ್ತ್ರೀಯರೇ ಬರೆದ ಸ್ತ್ರೀವಿದ್ಯಾಭ್ಯಾಸದ ವಿಷಯ ಕುರಿತ ಲೇಖನ ಮತ್ತು ಸ್ತ್ರೀಯರಿಗನುಕೂಲವಾದ

ಸಮಾಜಸೇವೆ, ಕೈಗಾರೀಕರಣ, ಸ್ಕೌಟು, ಇತ್ಯಾದಿ ಈ ಎಲ್ಲಾ ಲೇಖನಗಳೂ ಬರೀ ನೀರಸವಾದ ಲೇಖನಗಳಾಗಿರಲಿಲ್ಲ. ಸಾಹಿತ್ಯಿಕ ಅಂಶದಿಂದ ಕೂಡಿದ್ದ ಲೇಖನಗಳಾಗಿದ್ದವು. ವೈಚಾರಿಕವಾಗಿ ಜನರನ್ನು ಆಲೋಚಿಸುವಂತೆ ಮಾಡಿದ್ದವು. ಪತ್ರಿಕೆಯಲ್ಲಿ ಇವರೇ ಬರೆದು ಪ್ರಕಟಿಸಿದ್ದ 'ಭೂತದ ಭಯ' ಎಂಬ ಕತೆ, 'ಶಿವಾಜಿ ವಿಜಯ' ಮತ್ತು 'ಬುದ್ದದೇವ' ಎಂಬ ನಾಟಕಗಳು ಶುದ್ದ ಸಾಹಿತ್ಯಿಕ ಅಂಶದಿಂದ ಕೂಡಿದ್ದವು. ಇತರರ ಲೇಖನಗಳ, ಕವನಗಳ ಆಯ್ಕೆಯಲ್ಲಾಗಲೀ, ಅಥವಾ ಇವರ ಸ್ವರಚಿತ ಬರಹ, ಕತೆ, ನಾಟಕದಲ್ಲಾಗಲೀ ಎದ್ದು ಕಾಣುವ ಅಂಶವೆಂದರೆ ಶುದ್ಧ ವೈಚಾರಿಕತೆ. ಸಾಹಿತ್ಯದ ಯಾವುದೇ ರೂಪವಾಗಿರಲಿ ತಮ್ಮ ಬರವಣಿಗೆಯ ಶೈಲಿಯ ಮೂಲಕ ಓದುಗನನ್ನು ವಿಚಾರಶೀಲತೆಯ ಕಡೆ ಕೊಂಡೊಯ್ಯಬೇಕೆಂಬುದೇ ಇವರ ಉದ್ದೇಶವಾಗಿತ್ತು ಎಂಬುದನ್ನು ಈ ಆಯ್ಕೆಗಳ ಮೂಲಕ ಗ್ರಹಿಸಬಹುದು. ಇವೆಲ್ಲವನ್ನು ಗಮನಿಸಿದಾಗ ಇವರ ಪ್ರಕಾರ ಸಾಹಿತ್ಯವೆಂಬುದು ಕೇವಲ ಮನರಂಜನೆಗೆ ಅಲ್ಲ. ಮತ್ತು ಸೌಂದರ್ಯದ ಅನಾವರಣಕ್ಕಾಗಿಯೂ ಅಲ್ಲ. ಅಂದರೆ ಕಲೆ ಕಲೆಗಾಗಿ ಅಲ್ಲ, ಅದು ಒಂದು ಉದ್ದೇಶಕ್ಕಾಗಿ ಎಂಬ ತತ್ವವನ್ನು ಅರಿತವರಂತೆ ಹೆಚ್.ಕೆ.ವೀರಣ್ಣಗೌಡರ ಬರಹಗಳು ಚಿಂತನಶೀಲ ಸಾಹಿತ್ಯವೆನಿಸುವಂತಹವು. ಸಾಹಿತಿಗಿರಬೇಕಾದ ಸಾಮಾಜಿಕ ಜವಾಬ್ದಾರಿ ಇವರಿಗಿತ್ತು. ಇವರ ಸಾಹಿತ್ಯದಲ್ಲಿ ಒಂದು ಸೂಕ್ಷ್ಮವಾದ ಒಳನೋಟ ಸದಾ ಇರುತ್ತಿತ್ತು.

ಸಾಹಿತ್ಯವೆಂದರೆ ಸಮಸ್ತ ಸಂಗತಿಗಳನ್ನು ಒಳಗೊಳ್ಳುವಂತಹದು ಎಂದಾಗುತ್ತದೆ. ಸಾಹಿತಿಯಾದವ ತನ್ನ ಅನುಭವಕ್ಕೆ ನಿಲುಕದ ಸಂಗತಿಯನ್ನು ಹೇಳುವ ವಿಧಾನ ವಿಶಿಷ್ಟವಾದುದಾಗಿರುತ್ತದೆ. ಇಲ್ಲಿ ಭಾಷೆಯ ಕಲಾತ್ಮಕವಾದ ಬಳಕೆಯಾಗಿ, ಇದು ರಸಾನುಭೂತಿಗೆ ಕಾರಣವಾಗುತ್ತದೆ. ಪ್ರತಿಭೆಯಿದ್ದವ ಮಾತ್ರ ಇಂತಹವುದನ್ನು ರಚಿಸಬಲ್ಲ. ಹಾಗೇ ಹೊಸ ವಿಚಾರ ಶಕ್ತಿ ಓದುಗನಲ್ಲಿ ಸಂಚಯಿಸುವಂತೆ ಮಾಡಬಲ್ಲ. ಇವೆಲ್ಲವು ಸಾಹಿತ್ಯಕ್ಕಿರುವ ಸಾಧ್ಯತೆಗಳು. ಕತೆ, ಕಾದಂಬರಿ, ನಾಟಕ, ಕವಿತೆ ಹೀಗೆ ಹಲವು ಪ್ರಕಾರಗಳನ್ನು ಸಾಹಿತ್ಯದಲ್ಲಿ ಕಾಣಬಹುದು. ಹೆಚ್.ಕೆ.ವೀರಣ್ಣಗೌಡರದು ಬಹುಮಟ್ಟಿಗೆ ಪತ್ರಿಕಾ ಸಾಹಿತ್ಯ, ಪತ್ರಿಕೆಗಳನ್ನು ಹುಟ್ಟು ಹಾಕಿ ಬರೆದು ಪ್ರಕಟಮಾಡಿ ಜನಮನವನ್ನು ವಿಚಾರಗಳು ತಲುಪುವ ಹಾಗೆ ಮಾಡಿದವರು. ಹಾಗೆಯೇ ಶುದ್ದ ಸಾಹಿತ್ಯ ಎಂದು ಕರೆಯಬಹುದಾದ ನಾಟಕ, ಕತೆಯಂತಹ ಪ್ರಕಾರದಲ್ಲೂ ಬರೆದವರು. ಇವರು ಬರೆದ ಎರಡು ನಾಟಕಗಳು ಒಕ್ಕಲಿಗರ ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ನಾಟಕಕ್ಕೆ ಇವರು ಆರಿಸಿಕೊಂಡ ವಿಷಯಗಳು ಬಹಳ ವಿಶಿಷ್ಟವಾಗಿವೆ. ಉದಾಹರಣೆಗೆ ;

<u>ಶಿವಾಜಿ ವಿಜಯ</u>: ಶಿವಾಜಿ ಒಬ್ಬ ಅಪ್ರತಿಮ ದೇಶ ಭಕ್ತ, ಪರಕೀಯರ ಅದಿಪತ್ಯಕ್ಕೆ ನಾಡನ್ನು ಒಪ್ಪಿಸಬಾರದೆಂದು ಅಹರ್ನಿಶಿ ಹೆಣಗಿದ ವ್ಯಕ್ತಿ. ದೇಸೀಯ ಪ್ರಜ್ಞೆ ಇತನಲ್ಲಿ ಸದಾ ಜಾಗೃತವಾಗಿರುತ್ತಿತ್ತು. ವಿರೋಧಿಗಳಿಗೆ ಸಿಂಹಸ್ವಪ್ನವಾಗಿದ್ದು, ತನ್ನ ಯುದ್ದ ತಂತ್ರ ಮತ್ತು ಚಾಣಾಕ್ಷ ಬುದ್ಧಿಮತ್ತೆಯ ಮೂಲಕ ಅವರನ್ನು ಮಣಿಸುತ್ತಿದ್ದ ಮಹಾನ್ ವೀರನಾದ ಈ ಶಿವಾಜಿ ವೀರಣ್ಣಗೌಡರಿಗೆ ಇಷ್ಟವಾದುದರಲ್ಲಿ ಆಶ್ಚರ್ಯವಿಲ್ಲ. ಕಾರಣ ಹೆಚ್.ಕೆ.ವೀರಣ್ಣಗೌಡರು ಸ್ವತಃ ದೇಶಾಭಿಮಾನಿ ತಮ್ಮದೇ ಆದ ನೆಲೆಯಲ್ಲಿ ಬ್ರಿಟಿಷ್ ಅದಿಪತ್ಯವನ್ನೇ ವಿರೋಧಿಸುತ್ತಾ ಪತ್ರಿಕೆಯ ಮೂಲಕ ಜನವನವನ್ನು ಚಳುವಳಿಯ ಕಡೆ ಪ್ರೇರೇಪಿಸಲು ಪ್ರಯತ್ನಿಸುತ್ತಿದ್ದರು. ದೇಸೀಯವಾದ ರೈತ ಚಳುವಳಿಗಳನ್ನು ಹುಟ್ಟಿ ಹಾಕಿ ಸರ್ಕಾರದ

ಅನ್ಯಾಯಗಳನ್ನು ವಿರೋಧಿಸಿ ಧೈರ್ಯದಿಂದ ಪ್ರತಿಭಟಿಸಿ ನ್ಯಾಯಕ್ಕಾಗಿ ಹೋರಾಟ ಮಾಡಿದವರು. ಈ ಕಾರಣದಿಂದಾಗಿಯೇ ಶಿವಾಜಿಯಂತಹ ಅಪ್ರತಿಮ ದೇಶಭಕ್ತ ವೀರಣ್ಣಗೌಡರಿಗೆ ಇಷ್ಟವಾಗಿ ಆತನ ಮೌಲ್ಯ, ಆತನ ಆಲೋಚನಾ ವಿಧಾನ, ಕಾರ್ಯತಂತ್ರಗಳನ್ನು ವಿವರಿಸಲು ಸಾಧ್ಯವಾಗುವಂತೆ ನಾಟಕದಲ್ಲಿ ಅದನ್ನು ನಿರ್ವಹಿಸಿದ್ದಾರೆ. ನಾಟಕ ಪ್ರಕಾರದಲ್ಲಿ ಬಳಕೆಗೊಳ್ಳುವ ಶೈಲಿ ಸಂಭಾಷಣಾಯುಕ್ತವಾದುದು. ಎಲ್ಲಿಯೂ ನೀರಸ ಎನಿಸದಂತೆ ಕೃತಕವಾಗಿರದಂತೆ ಸಹಜವೆನಿಸುವಂತೆ ಓದುಗನ ಮುಂದೆ ದೃಶ್ಯವನ್ನು ಕಟ್ಟಿಕೊಡುವುದರಲ್ಲಿ ಈ ಮೂಲಕ ಈ ನಾಟಕದ ಆವರಣದೊಳಗೆ ಓದುಗ/ಪ್ರೇಕ್ಷಕನನ್ನೇ ಪ್ರೇರೇಪಿಸುವಂತೆ ಮಾಡಿ ಅಲ್ಲಿಯೇ ಹಿಡಿದಿಡುವುದರಲ್ಲಿ ನಾಟಕಕಾರನ ಸಾಮರ್ಥ್ಯ ಅಡಗಿರುತ್ತದೆ. ಪ್ರತಿಭೆ ಇರುವ ನಾಟಕಕಾರ ಮಾತ್ರ ಇದನ್ನು ಸಾಧ್ಯವಾಗಿಸಬಲ್ಲ. ಹೆಚ್.ಕೆ.ವೀರಣ್ಣಗೌಡರು ಇಂತಹ ಪ್ರತಿಭೆಯನ್ನು ಪಡೆದಿದ್ದರೆಂಬುದೊಂದು ವಿಶೇಷವಾದ ಸಂಗತಿ. ಹೋರಾಟದ ಬಿರುಸು, ಪ್ರತಿಭಟನೆಯ ಕೆಚ್ಚು, ಹರಿತವಾದ ಲೇಖನಿಯಿಂದ ಪತ್ರಿಕಾ ವ್ಯವಸಾಯ, ಜೊತೆಗೆ ಸೃಜನಶೀಲತೆಗೆ ಸಾಕ್ಷಿಯೆನಿಸುವ ಸಾಹಿತ್ಯ ನಿರ್ಮಾಣದ ಶಕ್ತಿ ಇವೆಲ್ಲವನ್ನು ಒಬ್ಬ ರೈತಾಪಿ ಸಮುದಾಯದಿಂದ ಬಂದ ಹಳ್ಳಿಗಾಡಿನ ವ್ಯಕ್ತಿಯೊಬ್ಬರಲ್ಲಿ ಒಟ್ಟಿಗೆ ಮೇಳೈಸಿದ್ದು ಬಹಳ ಅಪರೂಪವೆನಿಸುತ್ತದೆ.

**ಬುದ್ಧದೇವ ನಾಟಕ:** ಜಗತ್ತು ಕಂಡ ಒಬ್ಬ ಶ್ರೇಷ್ಠ ಮಾನವತಾವಾದಿ ಬುದ್ಧ. ಜನರ ತಲ್ಲಣ, ನೋವುಗಳಿಗೆ ಮರುಗಿದ, ಕಷ್ಟ ಕಾರ್ಪಣ್ಯಗಳನ್ನು ನಿವಾರಿಸಲು ಪ್ರಯತ್ನಿಸಿದ ಸಹೃದಯಿ. ಕ್ರಿ.ಪೂ.೬ನೇ ಶತಮಾನದ ಆಧ್ಯಾತ್ಮಿಕ ಅಶಾಂತಿಯ ಕಾಲ ಮತ್ತು ಸಮುದಾಯಿಕ ಜೀವನಕ್ರಮದಿಂದ ಖಾಸಗೀ ಆಸಕ್ತಿಯ ಒಡೆತನದ ಕಡೆಗೆ ಸರಿಯುತ್ತಿದ್ದ ಸನ್ನಿವೇಶ ಕಾರಣ. ವರ್ಗ ಅಸಮಾನತೆಯಂತಹ, ಜಾತಿ ಅಸಮಾನತೆಯಂತಹ ದಳ್ಳುರಿಯಲ್ಲಿ ಜನತೆ ಬೇಯುತ್ತಿದ್ದಾಗ ಈ ಉರಿಯನ್ನು ಆರಿಸುವ, ತನ್ನ ತಿಳುವಳಿಕೆಯ ವರ್ಷಧಾರೆಯನ್ನು ಸುರಿಸಿ ತಂಪು ಮಾಡಲು ಪ್ರಯತ್ನಿಸಿದವನೀತ. ಸ್ವಾರ್ಥಪ್ರೇರಿತ ಅಧಿಕಾರರೂಢರು, ಆಸ್ತಿಗಳ ಮಾಲೀಕರು, ಬಂಡವಾಳಶಾಹಿಗಳು–ಇವರ ದುರಾಚಾರಗಳ ನಿರ್ಮೂಲನೆಯ ಕಡೆ ಆಲೋಚಿಸುವಂತೆ ಮಾಡಾಬಲ್ಲ ಶಕ್ತಿ ಉಪನಿಷತ್ತುಗಳಿಂದ ಪ್ರೇರಿತನಾದ ಬುದ್ಧನ ಆಲೋಚನೆಗಳಿಗೆ ಇದೆ. ಸ್ವತಃ ಮೌಲ್ಯಯುತ ಜೀವನವನ್ನಪ್ಪಿಕೊಂಡಿದ್ದ, ಮೌಲ್ಯಾಧಾರಿತ ರಾಜಕಾರಣ ಮಾಡುತ್ತಿದ್ದ ಜನಪರ ಕಾಳಜಿ ಇದ್ದ ಹೆಚ್.ಕೆ.ವೀರಣ್ಣಗೌಡರು ಬುದ್ಧನ ತತ್ವಗಳಿಂದ ಪ್ರಭಾವಿತರಾದದ್ದರಲ್ಲಿ ಆಶ್ಚರ್ಯವಿಲ್ಲ. ಹಾಗೆಯೇ ಈ ವಿಚಾರಧಾರೆ ಜನಮನವನ್ನು ತಲುಪಲಿ ಎಂಬ ಉದ್ದೇಶ ಕಾರಣವಾಗಿಯೇ ಬುದ್ದನನ್ನು ಕುರಿತಾದ ನಾಟಕ ಬರೆದಿರಬಹುದೆನಿಸುತ್ತದೆ.

<u>**ಭೂತದ ಭಯ**</u>**;–** ಶುದ್ಧ ವೈಚಾರಿಕತೆಯಿಂದ ಆಲೋಚಿಸಿದ ಮನಸ್ಸು ಕಟ್ಟಿದ ಕತೆಯಿದು. ಭೂತ ಪ್ರೇತದ ಹೆಸರಿನಲ್ಲಿ ಮುಗ್ಧ ಜನರಲ್ಲಿ ಭಯವನ್ನೇ ಭಿತ್ತಿ ಅವರ ಅಜ್ಞಾನ ಮೌಢ್ಯದ ದುರ್ಬಳಕೆ ಮಾಡಿಕೊಂಡು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುವ ದುರುಳರ ಚಿತ್ರಣವನ್ನೇ ಈ ಕಥೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಕಟ್ಟಿಕೊಡುತ್ತಾರೆ. ಉಪಾಯದಿಂದ ಇದನ್ನೇ ಬಯಲಿಗೆಳೆಯುವ ಸನ್ಯಾಸಿಯ ಜಾಣತನವಂತೂ ಮೆಚ್ಚುವಂತಹವುದು. ಗ್ರಾಮೀಣ ಪ್ರದೇಶದಲ್ಲಿರುವ ಮುಗ್ಧ ಜನರ ಮೂಢನಂಬಿಕೆಗಳು ಅದನ್ನೇ ಬಳಸಿಕೊಳ್ಳುತ್ತಿದ್ದ ಧೂರ್ತರ ಪ್ರಯತ್ನಗಳನ್ನು ಹೆಚ್.ಕೆ.ವೀರಣ್ಣಗೌಡರು ಅರಿತಿರಲೇಬೇಕು.

ಮಾಯಮಂತ್ರ, ತಂತ್ರ–ಮಾಟಗಳ ಹೆಸರಿನಿಂದ ಜನರಲ್ಲಿ ಭಯ ಭಿತ್ತಿ ತಮ್ಮ ಕಾರ್ಯಸಾಧನೆ ಮಾಡುವುದು ಗ್ರಾಮೀಣ ಪರಿಸರದಲ್ಲಿ ಸಾಮಾನ್ಯ. ಬಹುಶಃ ಹೀಗೆ ತಾವು ಕಂಡ ಘಟನೆಗಳೇ ಅವರಿಗೆ ಈ ಬಗೆಯ ಕತೆ ರಚಿಸಲು ಪ್ರೇರಣೆ ಒದಗಿಸಿರಬಹುದು. ಈ ಮೂಲಕ ಜನರ ಅಜ್ಞಾನ ನಿವಾರಿಸಿ ಅಲ್ಲಿ ಆರೋಗ್ಯಕರವಾದ ಚಿಂತನೆಗಳನ್ನು ಬೆಳೆಸಲು ಈ ಕತೆಯನ್ನು ಹೆಚ್.ಕೆ.ವೀರಣ್ಣಗೌಡರು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಸೃಜನಶೀಲ ಸಾಹಿತಿಯೊಬ್ಬ ತನ್ನ ಸುತ್ತಣ ಜಗತ್ತಿನಲ್ಲಿ ತಾನು ಪಡೆಯುವ ಅನುಭವಗಳನ್ನೇ ಬಳಸಿಕೊಂಡು ಮತ್ತೆ ಆ ಜಗತ್ತಿಗೆ ವೈಚಾರಿಕವಾಗಿ ಆಲೋಚಿಸಬಲ್ಲಂತಹ ತಿಳುವಳಿಕೆಯನ್ನೇ ತನ್ನ ಬರಹದ ಮೂಲಕ ನೀಡಬಲ್ಲನೆಂಬುದಕ್ಕೆ ಈ ಕತೆ ಉದಾಹರಣೆಯಾಗುತ್ತದೆ

ಹೆಚ್.ಕೆ.ವೀರಣ್ಣಗೌಡರು ಒಬ್ಬ ಉತ್ತಮ ನಾಟಕಕಾರರಾಗಿ ಮಾತ್ರವಲ್ಲ, ಅದಕ್ಕಿರುವ ಪ್ರದರ್ಶನ ಸಾಧ್ಯತೆಗಳು– ಬೇಕಾದ ಆಯಾಮ ಅಥವ ಪರಿಕರಗಳ ಬಗ್ಗೆಯೂ ಸಹ ಚರ್ಚೆ ಮಾಡಿದ್ದಾರೆ. ಒಕ್ಕಲಿಗರ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ನಾಟಕದಲ್ಲಿ ಸಂಗೀತವಿರಬೇಕೇ? ಎಂಬ ತಮ್ಮ ಲೇಖನದಲ್ಲಿ ಪ್ರದರ್ಶನ ಕಲೆಯಾದ ಈ ನಾಟಕ ಪ್ರಕಾರದಲ್ಲಿ ಸಂಗೀತ ಕಡ್ಡಾಯವೇ? ಎಂದು ತಾರ್ಕಿಕವಾಗಿ ಚಿಂತನೆ ನಡೆಸಿದ್ದಾರೆ. ಇಂದು ನಾಟಕ ಪ್ರದರ್ಶನಗೊಂಡಾಗ ಸಂಗೀತವೇನೂ ಕಡ್ಡಾಯವಾಗಿರುವುದಿಲ್ಲ. ಇದಕ್ಕೆ ಕಾರಣ ಹಿಂದೆ ನಡೆದಿರಬಹುದಾದ ಇಂತಹ ಚರ್ಚೆಗಳು ಮತ್ತು ಪ್ರಯೋಗಗಳೇ ಆಗಿವೆ. ಹಿಂದೆ ನಾಟಕದಲ್ಲಿ ಸಂಗೀತ ಕಡ್ಡಾಯವಾಗಿತ್ತು. ನಾಟಕ ಪ್ರದರ್ಶನದಲ್ಲಿ ಬಹುಪಾಲು ಸಂಭಾಷಣೆ ಕಂದಪದ್ಯಗಳಲ್ಲಿಯೇ ನಡೆಯುತ್ತಿತ್ತು. ಇದರಿಂದಾಗಿ ನಟರು ಅನಿವಾರ್ಯವಾಗಿ ಗಾಯಕರೂ ಆಗಿರಬೇಕಾಗಿತ್ತು. ಇದಕ್ಕೆ ಹೊಂದುವಂತಹ ವಾದ್ಯ ಸಂಗೀತವೂ ಅನಿವಾರ್ಯವಾಗಿತ್ತು. ವಾದ್ಯ ಸಂಗೀತ ಮತ್ತು ಗೀತ ಸಂಗೀತ ನಾಟಕದ ಉದ್ದಕ್ಕೂ ಜೊತೆಗೂಡಿಯೇ ಸಾಗುತ್ತಿತ್ತು ಇದು ಅಗತ್ಯವೇ? ಎಂಬ ಪ್ರಶ್ನೆ ಹೆಚ್.ಕೆ.ವೀರಣ್ಣಗೌಡರದಾಗಿತ್ತು. ಸಂಗೀತ ನಾಟಕಕ್ಕೆ ಶೋಭೆಯನ್ನು ಕೊಡಬಹು, ಆದರೆ ಸಂಗೀತದಿಂದ ಕೂಡಿದ ಸಂಭಾಷಣೆಯಲ್ಲಿ ಸಹಜತೆ ಇರುತ್ತದೆಯೇ? ನಾವು ಮಾತನಾಡುವಾಗ ಸಂಗೀತದ ಮೂಲಕ ಮಾತನಾಡುತ್ತೇವೇ? ಇಲ್ಲ, ಹಾಗೆ ಮಾತನಾಡಿದರೆ ಅದು ಪ್ರಯತ್ನಪೂರ್ವಕ ಮತ್ತು ಕೃತಕ ವಸ್ತು ಸ್ಥಿತಿ. ಹೀಗಿರುವಾಗ ನಾಟಕದಲ್ಲಿ ಮಾತ್ರ ಏಕೆ ಸಂಗೀತದ ಮೂಲಕ ಸಂಭಾಷಿಸಬೇಕು ಎಂಬುದು ಹೆಚ್.ಕೆ.ವೀರಣ್ಣಗೌಡರ ವಾದವಾಗಿತ್ತು.

ಸಂಗೀತ ಪ್ರಾಸಂಗಿಕವಾಗಿ ಬಂದರೆ ನಾಟಕಕ್ಕೆ ಅಂದವನ್ನು ಕೊಡುತ್ತದೆ. ಒತ್ತಾಯವಾಗಿ ಸೇರಿಸಿದಾಗ ಅಲ್ಲ. ಪ್ರಾಚೀನ ಕಾಲದಲ್ಲಿ ನಾಟಕದಲ್ಲಿ ಸಂಗೀತ ಇದೆ ಎಂಬ ಕಾರಣಕ್ಕಾಗಿ ಗದ್ಯ ಸಪ್ಪೆಯಾಗಿ, ಪದ್ಯ ಮನೋರಂಜಕವಾಗಿರುತ್ತಿತ್ತು. ನಾಟಕಕ್ಕೆ ಆಕರ್ಷಣೆ ತರುತ್ತದೆ ಎಂಬ ಕಾರಣಗಳನ್ನೊಡ್ಡಿ ಸಂಗೀತವನ್ನು ಕಡ್ಡಾಯಗೊಳಿಸಿದ್ದಿರಬಹುದು. ಆದರೆ ಇದು ಅದರ ಅಗತ್ಯ, ಅನಿವಾರ್ಯ ಕುರಿತು ಚಿಂತಿಸಿದಾಗ ಅಗತ್ಯವಿಲ್ಲ ಎಂಬ ಅಂಶವೇ ಪ್ರಮುಖವಾಗುತ್ತದೆ. ಕಾಲಕ್ಕೆ ತಕ್ಕಂತೆ ರೂಪಾಂತರ ಹೊಂದಬೇಕಾದ ಅಗತ್ಯವಿದೆ. ಉಚಿತವಲ್ಲದ ಸಂದರ್ಭದಲ್ಲಿ ಸಂಗೀತ ಸೇರಿಸುವುದು ಅನುಚಿತವಾಗಬಲ್ಲುದು. ತಮ್ಮ ಈ ಕುರಿತ ಲೇಖನದಲ್ಲಿ ಹೆಚ್.ಕೆ.ವೀರಣ್ಣಗೌಡರು ನಾಟಕವೊಂದು ಪ್ರದರ್ಶನಕ್ಕೊಳಗಾಗಿ ಯಶಸ್ಸನ್ನು

ಕಾಣಬೇಕೆಂದಿದ್ದರೆ ನಾಟಕದ ಗ್ರಂಥ ರಚನಾ ಶಕ್ತಿ, ಅಭಿನಯಕಾರರ ವಾಕ್‌ಪಟುತ್ವ ಮತ್ತು ಭಾವಪ್ರದರ್ಶನ ಕೌಶಲ್ಯ ಇವು ಅತ್ಯಂತ ಅಗತ್ಯ, ಅಸ್ವಾಭಾವಿಕವಾದ ಸಂಗೀತ ಮುಖ್ಯವಲ್ಲ ಎಂದು ಹೇಳುತ್ತಾರೆ.

ಮನುಷ್ಯನಿಗೆ ಸ್ವಭಾವಜನ್ಯವಾದ ಸಂಗೀತ ರಂಗಸ್ಥಳದಲ್ಲಿ ಬಳಕೆಗೊಂಡರೆ ತಪ್ಪೇನು. ಇದು ಬಳಕೆಗೊಳ್ಳುವುದು ತಪ್ಪು ಎಂದು ಹೇಳುವದು ಅವಿವೇಕಿಗಳ ಮಾತು ಎಂದು ಅಂದಿನ ಸಂಪ್ರದಾಯವಾದಿಗಳ ವಿಚಾರವಾಗಿತ್ತು. ಸಂಗೀತ ಸ್ವಭಾವ ಜನ್ಯವಾದರೂ ಒಂದು ಮಿತಿಯಲ್ಲಿ ಎಲ್ಲರೂ ತಮ್ಮಲ್ಲೇ ಹಾಡಿಕೊಳ್ಳುವುದುಂಟು. ಬೇರೆಯವರ ಎದುರಿಗೆ ಹಾಡಲು ಎಲ್ಲರಿಗೂ ಸಾಧ್ಯವಾಗದು. ಸಂಗೀತಕ್ಕೂ ಸ್ಥಳ, ಕಾಲ, ತಕ್ಕ ಸಂದರ್ಭ ಅವಶ್ಯಕ. ಕೇವಲ ಸ್ವಭಾವಗುಣವೆಂದು ನಾಟಕದಲ್ಲಿ ಸಂಗೀತ ಕಡ್ಡಾಯಗೊಳಿಸಿದರೆ 'ಎತ್ತು ಈಯಿತೆಂದರೆ ಕೊಟ್ಟಿಗೆಯಲ್ಲಿ ಕಟ್ಟು' ಎಂದಂತಾಗುತ್ತದೆ ಎಂಬುದು ಹೆಚ್.ಕೆ.ವೀರಣ್ಣಗೌಡರು ಈ ಲೇಖನದಲ್ಲಿ ಮಾಡಿದ ವಾದವಾಗಿತ್ತು.
ಸಂಗೀತದಂತಹ ಕಲೆ ಈ ಮೂಲಕ ಅಭಿವೃದ್ಧಿಯಾಗುವುದಿಲ್ಲವೇ? ಎಂಬ ಪ್ರಶ್ನೆಯನ್ನು ಊಹಿಸಿ ಅದಕ್ಕೂ ಹೆಚ್.ಕೆ.ವೀರಣ್ಣಗೌಡರು ತಾರ್ಕಿಕವಾಗಿಯೇ ಉತ್ತರಕೊಡುತ್ತಾರೆ. ಪಾಂಡಿತ್ಯವಿದ್ದು ಹಾಡಿದರೆ ಸೊಗಸು. ಆದರಿಂದ ಆ ಕಲೆಯೂ ಅಭಿವೃದ್ಧಿ ಹೊಂದುತ್ತದೆ. ಕಡ್ಡಾಯವೆಂದು ಬಣ್ಣಹಚ್ಚಿದವರೆಲ್ಲ ಹಾಡಿದರೆ ನಿಜವಾದ ಸಂಗೀತ ಹಾಳಾಗುತ್ತದೆ. ಇದರಿಂದ ರಂಗಭೂಮಿಯ ಘನತೆಯೂ ಹಾಳಾಗುತ್ತದೆ. ಹಾಡಲು ಬರುತ್ತದೆ ಎಂಬ ಒಂದೇ ಕಾರಣಕ್ಕೆ ನಟಿಸಲು ಬಾರದಿದ್ದರೂ ವೇಶ್ಯೆಯರಿಗೆ ಪಾತ್ರವಹಿಸಲು ಅವಕಾಶ ಮಾಡಿಕೊಡಲಾಗುತ್ತದೆ. ಇಂತಹ ಮಹಿಳೆಯರು ಅಭಿನಯಿಸುವುದರಿಂದ ನಾಟಕ ಎಂದರೆ ಪೋಲಿಗಳ ಗುಂಪು ಮಾಡುವ ಅಭಿನಯ ಎಂಬ ಆಕ್ಷೇಪಣೆ ಕೇಳಿ ಬರುತ್ತದೆ. ಈ ಹಿನ್ನೆಲೆಯಿಂದ ವಿಚಾರ ಮಾಡಿ ನೋಡಿದಾಗ ನಾಟಕಕ್ಕೆ ಸಂಗೀತ ಕಡ್ಡಾಯ ಎಂಬ ವಿಚಾರದಿಂದ ಹೊರಬರಬೇಕು. ಸುವರ್ಣಕ್ಕೆ ಪುಟವಿಟ್ಟ ಹಾಗೆ ಗದ್ಯ ಸಂಭಾಷಣೆಯ ಮಧ್ಯೆ ಅಲ್ಲಲ್ಲಿ ಪದ್ಯ ಸಂಗೀತ ಬರಬೇಕೇ ಹೊರತು ಕಡ್ಡಾಯವಾಗಿಯಲ್ಲ. ಕ್ಷೇಮ ಸಮಾಚಾರ ವಿಚಾರಿಸಲು, ವಾದವಿವಾದ, ದುಃಖ, ಸಂತೋಷ, ಜಗಳ ಮಾಡುವಾಗ ಹೀಗೆ ಒಟ್ಟು ಮಾತೆತ್ತಿದರೆ ಸಂಗೀತ ಬಳಸುವುದು ಅಸಹಜವೆಂದು ತರ್ಕಬದ್ಧವಾಗಿ ವಿವರವಾಗಿ ವಿಚಾರ ಮಾಡುವುದರ ಮೂಲಕ ನಾಟಕಕ್ಕೆ ಸಂಗೀತವನ್ನು ಕಡ್ಡಾಯ ಮಾಡಬೇಡಿ ಎಂದು ಹೇಳುತ್ತಾರೆ.
ಹೆಚ್.ಕೆ.ವೀರಣ್ಣಗೌಡರ ಈ ಎಲ್ಲಾ ವಿಚಾರವನ್ನು ಗಮನಿಸಿದಾಗ ಇವರು ಕೇವಲ ನಾಟಕಕಾರರಷ್ಟೆ ಅಲ್ಲ, ನಾಟಕಕ್ಕಿರುವ ಪ್ರದರ್ಶನ ಸಾಧ್ಯತೆ, ರಂಗಭೂಮಿಯ ಇತಿಮಿತಿಗಳನ್ನು ಕುರಿತು ಪ್ರಬುದ್ಧವಾಗಿ ವಿಚಾರಮಾಡಿ ತಮ್ಮ ನಿಲುವನ್ನು ಸ್ಪಷ್ಟ ಪಡಿಸಬಲ್ಲವರಾಗಿದ್ದರು ಎಂಬ ಸಂಗತಿ ಸ್ಪಷ್ಟವಾಗುತ್ತದೆ. ಇವರಿಗಿದ್ದ ಬಹುಮುಖ ಚಿಂತನೆ, ಪ್ರತಿಭೆಯ ಪರಿಚಯವೂ ಆಗುತ್ತದೆ.
ತಮ್ಮ ಕೊನೆಯ ದಿನಗಳಲ್ಲಿ ಬರೆದ 'ಬದುಕು ಮೆಲುಕು' ಹೆಸರಿನ ಆತ್ಮಕತೆಯಲ್ಲಿಯೂ ಅವರ ಬದುಕಿನ ಒಳನೋಟಗಳನ್ನು ಮಾತ್ರ ಕೊಡದೆ ಅಂದಿನ ಮೈಸೂರು ಸಂಸ್ಥಾನದ ವಿದ್ಯಮಾನ, ಆಳಿದ ಜನನಾಯಕರ ಸ್ವಭಾವಗಳನ್ನೂ ಕುರಿತು ಚರ್ಚಿಸಿದ್ದಾರೆ. ಅಂದರೆ ಬರಹದ ಬಗ್ಗೆ ಇವರಿಗಿದ್ದ ಒಟ್ಟು ಆಶಯ ಅದು

ಓದುಗರ ಮನಮುಟ್ಟುವ ಮೂಲಕ ಸಾರ್ಥಕವಾಗಬೇಕೆನ್ನುವುದು ಇಲ್ಲಿ ಸ್ಪಷ್ಟವಾಗುತ್ತದೆ. ರಾಜಕೀಯ, ಸಾಮಾಜಿಕ ಮೌಲ್ಯಗಳ ಕಡೆ ಗಮನ ಹರಿಸಿದ್ದ ಹೆಚ್.ಕೆ.ವೀರಣ್ಣಗೌಡರು ಹಿಂದೆ ಇಂತಹ ಮೌಲ್ಯಗಳಿಗೆ ಬದ್ಧರಾಗಿ ಬದುಕಿದ ವ್ಯಕ್ತಿಗಳ ಬಗ್ಗೆ ಆಕರ್ಷಿತರಾಗಿದುದ್ದರಿಂದ, ಅವರ ಅಂದಿನ ಹೋರಾಟದ ಯಶೋಗಾಥೆಗಳನ್ನು ಕೃತಿಗಿಳಿಸಿದ್ದು ಸಹಜವೇ ಆಗಿದೆ.

# ಅಧ್ಯಾಯ – ೪

## ಹೆಚ್.ಕೆ. ವೀರಣ್ಣಗೌಡರು ತೊಡಗಿದ ಪ್ರಮುಖ ಚಳುವಳಿಗಳು

## ಅಧ್ಯಾಯ – ೪

# ಹೆಚ್.ಕೆ.ವೀರಣ್ಣಗೌಡರು ತೊಡಗಿದ ಪ್ರಮುಖ ಚಳುವಳಿಗಳು

**ಪೀಠಿಕೆ:**

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶದ ಆಗುಹೋಗುಗಳ ಬಗೆಗೆ ಮನತೆರೆದ ಯಾವುದೇ ವ್ಯಕ್ತಿಯೂ ಅಂದಿನ ರಾಜಕಾರಣದಿಂದ ದೂರ ಇರಲು ಸಾಧ್ಯವಾಗುತ್ತಿರಲಿಲ್ಲ. ನಾಡಿನ ಹೀನ ದೀನ ಸ್ಥಿತಿ, ಪಾರತಂತ್ರ್ಯ ಕಣ್ಣು ಕುಕ್ಕುವಷ್ಟು ಇತ್ತು. ಅದರ ನಿವಾರಣೆಗಾಗಿ, ಸ್ವಾತಂತ್ರ್ಯದ ಹಂಬಲ ರೂಪುಗೊಳ್ಳುತ್ತಿತ್ತು. ಇದಕ್ಕಾಗಿ ಕೆಲವು ಕಡೆ ಹಿಂಸಾತ್ಮಕ ಕ್ರಾಂತಿಯ ಪ್ರಯತ್ನಗಳು. ಇನ್ನೊಂದು ಕಡೆ ಜನ ಜಾಗೃತಿಯ ಕೆಲಸ ಸಂಧಾನದ, ಬಿನ್ನಹಗಳ ಕೆಲಸ. ಈ ಎರಡನೆಯದೇ ಪ್ರಧಾನವಾಗಿದ್ದ ಕಾಲ. ಕಾಂಗ್ರೆಸ್ ಸಂಸ್ಥೆ ಇಂಥ ಸೌಮ್ಯ ಮಾರ್ಗದಲ್ಲೇ ನಡೆದಿತ್ತು. ದಾದಾಭಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ ಮೊದಲಾದ ಮಹಾನುಭಾವರು ಈ ಪಂಥದ ಮುಂದಾಳುಗಳು. ಬಾಲಗಂಗಾಧರ ತಿಲಕರಂಥ ಉಗ್ರ ಪಂಥೀಯರು ಪ್ರಭಾವಶಾಲಿಗಳಾಗಿದ್ದರೂ, ಬಹುಪಾಲು ಇದ್ದುದು ಸೌಮ್ಯ ಪಂಥೀಯ ಮನೋಭಾವವೇ. ಗಾಂಧೀಜಿ ಸಹ ಮೊದಲು ಈ ಪಂಥದವರೇ ಆಗಿದ್ದರು. ಜಲಿಯನ್ ವಾಲಾಬಾಗಿನ ದುರಂತ ಈ ಮನೋಭೂಮಿಕೆಯನ್ನು ಬದಲು ಮಾಡಿತು. ಅವರಂಥ ಸೌಮ್ಯವಾದಿಗಳು ಕ್ರಾಂತಿಯ ಪಥ ಹಿಡಿದರು. ಆದರೆ ಆ ಕ್ರಾಂತಿ ಶಾಂತಿ–ಅಹಿಂಸೆಯ ಕ್ರಾಂತಿ. ಈ ವಾತಾವರಣ ತರುಣ ಹೆಚ್.ಕೆ.ವೀರಣ್ಣಗೌಡರ ಮೇಲೆ ಪ್ರಭಾವ ಬೀರಿದ್ದು ಸಹಜವೇ. ಸ್ವಭಾವತಃ ಗೌಡರು ವೈಚಾರಿಕ ಮನೋಭಾವದವರಾದರೂ ಬದಲಾವಣೆ ಸಹಜವಾಗಿ ಆಗಬೇಕೇ ಹೊರತು, ಒತ್ತಾಯದಿಂದ ಅಲ್ಲ ಎಂಬ ಮನೋಭೂಮಿಕೆಯನ್ನು ಹೊಂದಿದ್ದರು. ಹೀಗಾಗಿ ಸೌಮ್ಯಕ್ರಾಂತಿಯ ಬಗ್ಗೆ ಒಲವು. ಅಂತೆಯೆ ನವರೋಜಿ, ಗೋಖಲೆ ಅವರ ಸೌಮ್ಯವಾದ, ಮಿತವಾದ ಗೌಡರಿಗೆ ಹಿಡಿಸಿದ್ದು ಆಶ್ಚರ್ಯವಲ್ಲ. ಅಹಿಂಸಾತ್ಮಕ ಕ್ರಾಂತಿಯ ಮನೋಭೂಮಿಕೆಯ ಹಿನ್ನೆಲೆಯಿಂದ ಹೆಚ್.ಕೆ.ವೀರಣ್ಣಗೌಡರು ತಮ್ಮ ಜೀವಿತದಲ್ಲಿಯೇ ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರ ಜನಜಾಗೃತಿಯನ್ನುಂಟು ಮಾಡುವ ನಿಟ್ಟಿನಲ್ಲಿ ಮತ್ತು ಶ್ರಮಿಕ ವರ್ಗದ ಶೋಷಣೆಯ ವಿರುದ್ಧ ಹಲವು ಹೋರಾಟ/ಚಳುವಳಿಗಳನ್ನು ಕೈಗೊಂಡು ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಗೌಡರು ಒಳಗೊಂಡಿದ್ದ ಹೋರಾಟ/ಚಳುವಳಿಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಅವಲೋಕಿಸಲಾಗಿದೆ.

### ೪.೧ ಸ್ವಾತಂತ್ರ್ಯ ಪೂರ್ವ ಹೋರಾಟದಲ್ಲಿ : –

ಇಪ್ಪತ್ತನೇ ಶತಮಾನದ ಮೊದಲಭಾಗ ಭಾರತದ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಸಂಧಿಕಾಲ. ಭಾರತವನ್ನು ಪರಕೀಯ ಶಕ್ತಿಯಾದ ಬ್ರಿಟಿಷ್ ಪ್ರಭುತ್ವ ಆಳುತ್ತಾ ಕೇವಲ ರಾಜಕೀಯವಾಗಿ ಮಾತ್ರ ರಾಷ್ಟ್ರವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲಿಲ್ಲ ಬದಲಾಗಿ ಕ್ರಮೇಣ ಇಲ್ಲಿನ ಸಾಂಸ್ಕೃತಿಕ ಸಾಮಾಜಿಕ, ಶೈಕ್ಷಣಿಕ ಹೀಗೆ ಎಲ್ಲಾ ಕ್ಷೇತ್ರಗಳ ಮೇಲೂ ತನ್ನ ಹಿಡಿತವನ್ನು ಸಾಧಿಸುತ್ತಾ ಬಂದಿತು. ಬಹಳ

ಮುಖ್ಯವಾಗಿ ಇಲ್ಲಿ ಗುರುತಿಸುವಂತಹುದೆಂದರೆ ಪಾಶ್ಚಾತ್ಯ ಶಿಕ್ಷಣ ಬೀರಿದ ಪ್ರಭಾವ. ಇದು ಒಂದು ಮಹತ್ತರವಾದ ಬದಲಾವಣೆಯನ್ನೇ ಉಂಟು ಮಾಡಿತು ಎಂದರೆ ಅತಿಶಯೋಕ್ತಿಯಲ್ಲ.

ಪುರೋಹಿತಶಾಹಿ, ಜಮೀನ್ದಾರಿ ಪದ್ಧತಿ, ಬಂಡವಾಳಶಾಹಿಗಳು ಮತ್ತು ಸ್ಥಳೀಯ ಅರಸೊತ್ತಿಗೆಗಳ ಸ್ವಾರ್ಥಪೂರಿತ ಆಡಳಿತದಿಂದ ಭಾರತದ ಜನಸಾಮಾನ್ಯನ ಸ್ಥಿತಿ ಸಂಕಟದಲ್ಲಿಯೇ ದಿನ ದೂಡುತ್ತಿತ್ತು. ಇದೇ ನಮ್ಮ ಪರಿಸ್ಥಿತಿ ಎಂದು ಒಪ್ಪಿಕೊಂಡಿದ್ದಿತೇ ಹೊರತು ಇದಕ್ಕೆ ಕಾರಣ ನಿವಾರಣೆಗಳ ಬಗ್ಗೆ ಆಲೋಚನೆ ಇರಲಿಲ್ಲ. ಈ ಹಿಂದೆ ವೈಚಾರಿಕ ಹೋರಾಟಗಳು ನಡೆದಿರಲೇ ಇಲ್ಲವೆಂದಲ್ಲ. ಬುದ್ಧ, ಬಸವ, ಅಲ್ಲಮ, ಕನಕ, ಪುರಂದರರಂತಹ ವೈಚಾರಿಕ ಶಕ್ತಿಗಳ ಕಾರಣದಿಂದಾಗಿ ಬದಲಾವಣೆಯ ಗಾಳಿ ಬೀಸ ತೊಡಗಿದಂತೆ ಭಾಸವಾದರೂ ಅದು ಕೆಲವೇ ದಿನಗಳಲ್ಲಿ ಅವರೊಂದಿಗೇ ನಿಂತು ಹೋಗಿತ್ತು. ಆದರೆ ಬ್ರಿಟಿಷ್ ಶಿಕ್ಷಣ ಪದ್ಧತಿ ಅನಿವಾರ್ಯವಾಗಿ ಕಲಿಯಲೇ ಬೇಕಾದಂತಹ ಪರಿಸ್ಥಿತಿಯ ಒತ್ತಡವನ್ನುಂಟುಮಾಡಿದ್ದರಿಂದ ಬಹುಮಂದಿ ವೈಚಾರಿಕವಾಗಿ ಆಲೋಚಿಸಲು ಪ್ರಾರಂಭಿಸಿದರು. ತಮ್ಮ ದೇಶದ ಮತ್ತು ಯೂರೋಪಿನ ಇತರ ರಾಷ್ಟ್ರಗಳ ಜನ ಜೀವನದೊಂದಿಗೆ ತಮ್ಮನ್ನು ಹೋಲಿಸಿಕೊಳ್ಳಲು ಮೊದಲು ಮಾಡಿದರು. ಬ್ರಿಟಿಷ್ ಶೈಕ್ಷಣಿಕ, ಧಾರ್ಮಿಕ ಹಾಗು ರಾಜಕೀಯ ಚಿಂತನೆಗಳು ಭಾರತೀಯರ ಸ್ವಾತಂತ್ರ್ಯದ ಕನಸನ್ನು ದೇಶೀಯ ಸ್ವದೇಶೀಯ ಪ್ರಜ್ಞೆಯನ್ನು ಮೂಡಿಸಿದವು. ಆಗ ವೈರುಧ್ಯಗಳ ಅರಿವು ಉಂಟಾಯಿತು. ವಿಚಾರ ಶಕ್ತಿ ಪ್ರಬಲವಾಯಿತು. ಇದರ ಕಾರಣದಿಂದಾಗಿ ಮೌಢ್ಯದ ನಿವಾರಣೆ ಮಾಡುತ್ತಾ ಸಮಾಜವನ್ನು ಆರೋಗ್ಯಕರವಾದ ಚಿಂತನೆಗಳೊಂದಿಗೆ ಬೆಳೆಸುವ ಪ್ರಯತ್ನವನ್ನು ಮಾಡುವುದರೊಂದಿಗೆ ತಮ್ಮನ್ನು ಬಂದಿಸಿರುವ ಪರಕೀಯ ಆಳುವ ಶಕ್ತಿಗಳ ಸರಪಣಿಯಿಂದ ತಮ್ಮನ್ನು ಬಿಡಿಸಿಕೊಳ್ಳಲೇಬೇಕಾದ ಅಗತ್ಯವನ್ನು ಮನಗಂಡರು. ಈ ಎಲ್ಲಾ ಆಲೋಚನೆಗಳ ಫಲವಾಗಿ ಸ್ವಾತಂತ್ರ್ಯ ಹೋರಾಟ ಬಿರುಸುಗೊಂಡಿತು. ಹೋರಾಟದ ಕಣಕ್ಕಿಳಿದವರು ತಮ್ಮ ಚಿಂತನೆ, ಆಲೋಚನೆಗಳ ಮೂಲಕ ದೇಶದ ಜನತೆಯ ಮೇಲೆ ಪ್ರಭಾವ ಬೀರ ತೊಡಗಿದರು.

ಹೋರಾಟದ ಬಿರುಸಿನ ಹಿಂದಿರುವ ಶಕ್ತಿಗಳೇ ಪ್ರಚೋದನಕಾರಿಯಾದ ಬರಹಗಳು, ಭಾಷಣಗಳು. ರಷ್ಯಾದ ಕ್ರಾಂತಿಯನ್ನು ರೂಪಿಸುವಲ್ಲಿ ಗಾರ್ಕಿ, ಟಾಲ್‌ಸ್ಟಾಯ್, ಕಾರ್ಲ್‌ಮಾರ್ಕ್ಸ್‌ನ ಬರಹಗಳು ಬಹಳ ಮಹತ್ತರವಾದ ಪಾತ್ರವನ್ನು ವಹಿಸಿದ್ದು ನಮಗೆಲ್ಲಾ ತಿಳಿದಿರುವ ಸಂಗತಿಯೇ ಆಗಿದೆ. ಭಾರತದಲ್ಲೂ ಮಹಾತ್ಮ ಗಾಂಧೀಜಿ, ಲೋಕಮಾನ್ಯ ತಿಲಕರಂತಹವರ ಪ್ರಭಾವ ಯುವಜನತೆಯ ಮೇಲೆ ಬೀರತೊಡಗಿತು. ಕರ್ನಾಟಕದಲ್ಲಿಯೂ ಈ ಚಳವಳಿಯ ಗಾಳಿ ಬೀಸತೊಡಗಿ ಅನೇಕರು ಈ ಪ್ರಭಾವಕ್ಕೆ ಸಿಲುಕಿದರು. ಹೋರಾಟದ ಗುರಿ ಒಂದೇ ಆಗಿದ್ದರೂ ದಾರಿ ಹಲವಾಗಿದ್ದವು. ಕವಿ, ಲೇಖಕರು ತಮ್ಮದೇ ರೀತಿಯಲ್ಲಿ ಪ್ರತಿಭಟನೆಯನ್ನು ಕೈಗೊಂಡರು. ಕತ್ತಿಯ ಹರಿತದಷ್ಟೇ, ಕೆಲವೊಮ್ಮೆ ಅದಕ್ಕಿಂತಲೂ ಹರಿತವಾದದ್ದು ಲೇಖನಿ. ಭಾರತದಾದ್ಯಂತ ಚಳುವಳಿಯನ್ನು ಸಂಘಟಿಸುವಲ್ಲಿ ಪತ್ರಿಕೆಗಳ ಪಾತ್ರವೂ ಬಹಳ ಮುಖ್ಯವಾದುದಾಗಿತ್ತು.

ಈ ವೇಳೆಗಾಗಲೇ ಪತ್ರಿಕಾರಂಗವನ್ನು ಪ್ರವೇಶಿಸಿದ್ದ ಹೆಚ್.ಕೆ.ವೀರಣ್ಣಗೌಡು ತಮ್ಮ ಸಾರಥ್ಯದಲ್ಲಿ ಹೊರಬರುತ್ತಿದ್ದ ಒಕ್ಕಲಿಗರ ಪತ್ರಿಕೆ, ಚಿತ್ರಗುಪ್ತ ಮತ್ತು ವಾರ್ತಾ ಪತ್ರಿಕೆಗಳನ್ನೇ ಮಾಧ್ಯಮವನ್ನಾಗಿ

ಮಾಡಿಕೊಂಡು ಜನತೆಯಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬಿತ್ತುವ, ಸ್ವಾತಂತ್ರ್ಯ ಚಳವಳಿಯ ಕಡೆ ಸಂಘಟಿಸುವಂತಹ ಲೇಖನಗಳನ್ನು ಬರೆಯ ತೊಡಗಿದರು.

ಇಂದಿನಂತೆ ಅಂದು ಪತ್ರಿಕೆಗಳು ಪ್ರಸಾರದಲ್ಲಾಗಲಿ,ಸಂಖ್ಯೆಗಳಲ್ಲಾಗಲಿ ಅಧಿಕ ಸಂಖ್ಯೆಯಲ್ಲಿರಲಿಲ್ಲ. ಆರಂಭದಲ್ಲಿ ಬರೀ ಸಾಹಿತ್ಯ, ಧರ್ಮ ಮತ್ತು ಮನರಂಜನೆಗೆಂದೇ ಪತ್ರಿಕೆಗಳು ಪ್ರಕಟಣೆಯನ್ನು ಆರಂಭಿಸಿದವು. ಆದರೆ ೧೯೦೩ ರಿಂದ ೧೯೪೭ ರ ನಡುವೆ ಹುಟ್ಟಿಕೊಂಡ ಪತ್ರಿಕೆಗಳಿಗೆ ಆರಂಭದ ದಿನಗಳಂತೆ ಬರಿಯ ಸುದ್ದಿ ಪ್ರಸಾರವೋ ಅಥವಾ ಧರ್ಮ ಪ್ರಚಾರವೋ ಮುಖ್ಯ ಉದ್ದಿಶ್ಯವಾಗಿರಲಿಲ್ಲ. ದೇಶದ ಸ್ಥಿತಿಗತಿಗಳನ್ನು ಜನತೆಗೆ ಮುಟ್ಟಿಸುವ ಕಾರ್ಯವನ್ನು ಪತ್ರಿಕೆಗಳು ಮಾಡುತ್ತಿದ್ದವು. ಮೈಸೂರು ಸಂಸ್ಥಾನ, ಮುಂಬಯಿಕರ್ನಾಟಕ ಅಥವಾ ಉತ್ತರಕರ್ನಾಟಕ, ಮದರಾಸುಕರ್ನಾಟಕ ಮತ್ತು ಹೈದರಾಬಾದು ಕರ್ನಾಟಕಗಳಲ್ಲಿ ಆಗಿನ ಕಾಲಕ್ಕೆ ಕಾಣಿಸಿಕೊಂಡ ಪತ್ರಿಕೆಗಳಿಗೆ ಭಿನ್ನ ಭಿನ್ನವಾದ ಉದ್ದೇಶಗಳಿದ್ದವು. ತನ್ನ ಪ್ರಕಟಣೆಯ ಪ್ರದೇಶದ ಸಮಸ್ಯೆಗಳ ಬಗ್ಗೆ ಬರೆಯಲು ಕೆಲವು ಪತ್ರಿಕೆಗಳು ಆಶಿಸಿದರೆ, ತಮ್ಮ ಪರಿಸರದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ರಾಷ್ಟ್ರೀಯ ಹೋರಾಟಗಳಲ್ಲಿ ಪಾಲುಗೊಳ್ಳುವುದು ಇನ್ನು ಕೆಲವು ಪತ್ರಿಕೆಗಳ ಕಾಳಜಿಯಾಗಿತ್ತು.

ಆಗಿನ ಮೈಸೂರು ಸಂಸ್ಥಾನದಲ್ಲಿ ೧೯ನೇಯ ಶತಮಾನದ ಕೊನೆಯ ಹೊತ್ತಿಗೆ ಕಾಣಿಸಿಕೊಂಡ ಮದರಾಸಿ ವಿರೋಧಿ ಭಾವನೆ , ೧೯೧೦ ರಿಂದ ೧೯೨೪ರವರೆಗೆ ಜಾಗೃತವಾಗಿದ್ದ ಬ್ರಾಹ್ಮಣ ವಿರೋಧಿ ಚಳವಳಿ ಮತ್ತು ೧೯೨೪-೧೯೪೭ರವರೆಗೆ ಭುಗಿಲೆದ್ದ ಸ್ವಾತಂತ್ರ್ಯ ಚಳವಳಿಗಳು ಈ ಪ್ರದೇಶದಲ್ಲಿ ಪತ್ರಿಕೆಗಳು ಹುಟ್ಟಿಕೊಳ್ಳಲು ಮುಖ್ಯ ಕಾರಣವಾದವು. ೧೯೦೦ ರಿಂದ ೧೯೪೭ ರವರೆಗೆ ರಾಜಕೀಯ ಮತ್ತು ಸಾಮಾಜಿಕ ಪರಿವರ್ತನೆಯ ಹೊಸ್ತಿಲ ಮೇಲಿದ್ದ ಮೈಸೂರು ಸಂಸ್ಥಾನದಲ್ಲಿ ಪ್ರತಿಯೊಂದು ಪತ್ರಿಕೆಯು ಒಂದಲ್ಲ ಒಂದು ಚಳವಳಿ, ಆಂದೋಲನ ಮತ್ತು ಬದಲಾವಣೆಯ ಜೊತೆಗೆ ತನ್ನನ್ನು ತಾನು ಗುರುತಿಸಿಕೊಂಡಿತು. 'ಮೈಸೂರ್ ಸ್ಟಾರ್, ವಿಶ್ವ ಕರ್ನಾಟಕ, ಒಕ್ಕಲಿಗರ ಪತ್ರಿಕೆ, ಪ್ರಜಾಮತ,' ಮೊದಲಾದ ಮುಖ್ಯ ವಾರಪತ್ರಿಕೆಗಳೆಲ್ಲವೂ ಈ ಉದ್ದಿಶ್ಯಗಳಿಗಾಗಿಯೇ ಆರಂಭವಾದವುಗಳು ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ನಿರ್ಭೀತ ಬರವಣಿಗೆಯಿಂದ ವ್ಯಕ್ತಿ ಸ್ವಾತಂತ್ರ್ಯ ಮತ್ತು ಪತ್ರಿಕಾ ಸ್ವಾತಂತ್ರ್ಯಗಳೆರಡನ್ನೂ ಎತ್ತಿ ಹಿಡಿಯುವುದರಲ್ಲಿ ಅವು ತೋರಿದ ದಿಟ್ಟತನ ಸರ್ವಕಾಲಕ್ಕೂ ಅನುಕರಣೀಯ. ಹೆಚ್.ಕೆ.ವೀರಣ್ಣಗೌಡ ಸಂಪಾದಕತ್ವದಲ್ಲಿ ಆ ಸಂದರ್ಭದಲ್ಲಿ ಪ್ರಕಟವಾಗುತ್ತಿದ್ದ ಒಕ್ಕಲಿಗರ ಪತ್ರಿಕೆ, ಚಿತ್ರಗುಪ್ತ ಪತ್ರಿಕೆ, ಹಾಗೂ ವಾರ್ತಾ ಪತ್ರಿಕೆಗಳು ಈ ಸಾಲಿಗೇ ಸೇರುವಂತಹ ಪತ್ರಿಕೆಗಳಾಗಿದ್ದವು.

### ೪.೨ ಇರ್ವಿನ್ ನಾಲಾ ಚಳವಳಿ : –

ಯಾವುದೇ ಒಂದು ದೇಶ ಸ್ವತಂತ್ರ್ಯವಾಗಿರಲು ಅದರ ಪ್ರಗತಿಗೆ ಹೆಚ್ಚು ಮಹತ್ವ ಕೊಡಬೇಕೆನ್ನುವ ಅಥವಾ ದೇಶವೂ ಹಿಂದುಳಿದಿರುವುದಕ್ಕೆ ಆರ್ಥಿಕ ಪ್ರಗತಿಯಾಗದಿರುವುದೇ ಮುಖ್ಯಕಾರಣ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ "ಭಾರತೀಯರಾಗಿ"ಎಂಬ ಘೋಷಣೆಯ ಮೂಲಕ ವಸಾಹತುಶಾಹಿಯ ವಿರುದ್ದ ಹೋರಾಟ ಮಾಡುತ್ತಿದ್ದ ಸಂದರ್ಭದಲ್ಲಿಯೇ ವಸಾಹತುಶಾಹಿ ರಾಷ್ಟ್ರದ ಹಿಡಿತದಲ್ಲಿದ್ದ ದೇಶೀಯ ಸಂಸ್ಥಾನಗಳು ಅವರ ತಾಳಕ್ಕೆ ಕುಣಿಯಬೇಕಾದ ಪರಿಸ್ಥಿತಿ ಉಂಟಾಯಿತು. ಇದರ ಪರಿಣಾಮ ಶ್ರಮಿಕ ಜನತೆಯ ಮೇಲೆ ರೈತರು ಕಷ್ಟ–ನಷ್ಟಗಳಿಗೆ ಗುರಿಯಾದರು. ಇದಕ್ಕೆ ಸರಿಯಾದ ಪರಿಹಾರ ಕಂಡುಕೊಳ್ಳಲು ಪ್ರಜ್ಞಾವಂತರ ಅಡಿಯಲ್ಲಿ ಶ್ರಮಿಕ ವರ್ಗ ಸಂಘಟಿತರಾದರು.

ಸ್ವತಂತ್ರ್ಯ ಭಾರತದ ಇಂದಿನ ಸಂದರ್ಭದಲ್ಲಿಯೂ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೆಚ್ಚು ಯೋಜನೆಗಳು ರೂಪುಗೊಳ್ಳುವುದು ನಗರ ವಾಸಿಗಳಿಗಾಗಿಯೇ ಹೊರತು ಗ್ರಾಮೀಣ ಜನತೆಗಲ್ಲ. ದೇಶದ ಪ್ರಗತಿಯೆಂದರೆ ನಗರಗಳ ಪ್ರಗತಿ ಎಂದೋ ಅಥವಾ ಭಾರತೀಯರ ಪ್ರಗತಿ ಎಂದು ಭಾವಿಸಲಾಗಿರುವುದು ಭಾರತದ ಹಿನ್ನಡೆಗೆ ಮುಖ್ಯಕಾರಣವಾಗಿದೆ. ಭಾರತ ಹಳ್ಳಿಗಳಿಂದ ಕೂಡಿದ ದೇಶವಾಗಿದ್ದು ಶೇ,೭೩ ಕ್ಕಿಂತ ಹೆಚ್ಚು ಜನರು ಹಳ್ಳಿಗಳಲ್ಲಿ ನೆಲೆಸಿದ್ದಾರೆ. ಈ ಜನ ತಮ್ಮ ಜೀವನೋಪಾಯಕ್ಕೆ ಕೃಷಿಯನ್ನೇ ಅವಲಂಬಿಸಿದ್ದಾರೆ. ದೇಶದಲ್ಲಿ ಅಭಿವೃದ್ಧಿ ಹಳ್ಳಿಗಳಲ್ಲಿ ಅಡಗಿದೆ. ಆದರೆ ಸರ್ಕಾರ ಆ ರೀತಿಯಲ್ಲಿ ಮಹತ್ವ ಕೊಡದೇ ಇರುವುದು ಮತ್ತು ಸರ್ಕಾರದ ಧೋರಣೆಗಳು ರೈತರ ಶೋಷಣೆಗೆ ಕಾರಣವಾದಂತಹ ಘಟನೆಗಳು ಹಲವಾರು ಇತಿಹಾಸದ ಪುಟಗಳಲ್ಲಿ ಇಣುಕುತ್ತಿವೆ. ಯಾವುದೇ ವರ್ಗದ ಜನರಲ್ಲಿ ರೈತ ಕನಿಷ್ಟನಲ್ಲ. ಹಾಗಾಗಿ ಅವನ ಅಭಿಪ್ರಾಯವನ್ನು ನಾವು ಅಲಕ್ಷಿಸುವಂತಿಲ್ಲ. ಈ ಹಿನ್ನೆಲೆಯಲ್ಲಿ ರೈತರು ತಮ್ಮ ಸಂಕಟಗಳಿಂದ ಮುಕ್ತರಾಗಲು ತಮ್ಮನ್ನು ಸಂಘಟಿಸಿಕೊಳ್ಳಲು ಮುಂದಾದರು.[೩೪] ಸಮಗ್ರವಾಗಿ ಭಾರತದ ಅದರಲ್ಲೂ ನಿರ್ದಿಷ್ಟವಾಗಿ ಕರ್ನಾಟಕದ ರೈತ ಚಳವಳಿಗಳಿಗೆ ಇಂತಹ ರೈತ ಸಂಘಟನೆಗಳೇ ಸ್ಫೂರ್ತಿ ನೀಡಿ ತಮಗೆ ಸಮಸ್ಯೆ ಉಂಟಾದಾಗ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮಾಡಿದವು. ಆರ್ಥಿಕ ಸಮಸ್ಯೆಗಳೇ ಕಾರಣವಾಗಿ ಹುಟ್ಟಿಕೊಳ್ಳುವ ರೈತ ಚಳುವಳಿಯಂಥ ಚಳುವಳಿಗಳನ್ನು ರಾಜಕೀಯವೆಂದೇ ಪರಿಗಣಿಸಲಾಗಿದೆ. ಈ ಕಾರಣಗಳಿಂದ ಇಲ್ಲಿ ಜಾತಿ, ಭಾಷೆ, ಧರ್ಮ ಇತ್ಯಾದಿ ವಿಚಾರಗಳಿಂದ ಉದ್ಭವವಾಗುವ ಭಿನ್ನತೆಗಳು, ದ್ವೇಷ ಸಾಧನೆಗಳು ಕಡಿಮೆ ಎಂದು ಅಭಿಪ್ರಾಯ ಪಡಲಾಗಿದೆ. ಇದು ರೈತರೆಂಬ ಜಾತಿ ಅಷ್ಟೆ. ಇಲ್ಲಿ "ವರ್ಗಹಿತಾಸಕ್ತಿ" ಪ್ರಮುಖವಾಗಿರುವುದರಿಂದ ಈ ಚಳುವಳಿಯು ಹೆಚ್ಚಿನ ಬಾರಿ ಜಾತ್ಯಾತೀತ ಪ್ರಜ್ಞೆಯನ್ನು ಉಳಿಸಿಕೊಂಡಿದೆ. ಇಲ್ಲಿ "ವರ್ಗಾಹಿತಾಸಕ್ತಿ"

---

[೩೪] ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ. ಡಾ. ಎಸ್.ಚಂದ್ರಶೇಖರ್, ಅನು: ಸಿ.ನಾಗಣ್ಣ. ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯ ಪುಟ–೯೯.

ಎಂದರೆ, ಅದು ರೈತವರ್ಗವೇ ಆಗಿದೆ.[೨೬] ಹಾಗಾದರೆ ರೈತರೆಂದರೆ ಯಾರು ಎನ್ನುವ ಜಿಜ್ಞಾಸೆ ರೈತ ಚಳವಳಿಯ ಆಶಯಗಳನ್ನು ವ್ಯಕ್ತಪಡಿಸುತ್ತವೆಯೇ ಎನ್ನುವ ಚರ್ಚೆ ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಸಾಮಾನ್ಯ ಅರ್ಥದಲ್ಲಿ ಭೂಮಿಯ ಉಳುಮೆ ಮಾಡುವವ ರೈತ ಎಂಬುದು.

ಇಂತಹ ರೈತರ ಕಷ್ಟ ನಿವಾರಣೆಗೆ ಟೊಂಕಕಟ್ಟಿ ನಿಲ್ಲುವ ಮೊದಲು ಹೆಚ್.ಕೆ.ವೀರಣ್ಣಗೌಡು ತಾವು ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದ ಚಿತ್ರಗುಪ್ತ ಪತ್ರಿಕೆಯನ್ನು ಆರ್ಥಿಕ ಮುಗ್ಗಟ್ಟಿನ ಕಾರಣದಿಂದ ನಿಲ್ಲಿಸಬೇಕಾಯಿತು. ಮುದ್ರಣಾಲಯ ಹರಾಜಾಯಿತು. ಪತ್ರಿಕೋದ್ಯಮದ ಯೋಚನೆಯನ್ನು ಕೈಬಿಟ್ಟರು. ಮದುವೆಯಾದ ಮೇಲೆ ಕೆಲವು ಕಾಲ ಮದ್ದೂರಿನ ಮಾವನ ಮನೆಯಲ್ಲಿ ಉಳಿದರು. ಆಗ ಸಂಭವಿಸಿದ ಕೆಲವು ಅನಿರೀಕ್ಷಿತ ಘಟನೆಗಳಿಂದ ಮದ್ದೂರು ವೀರಣ್ಣಗೌಡರಿಗೆ ತಮ್ಮ ಭವಿಷ್ಯತ್ತಿನ ಕಾರ್ಯಕ್ಷೇತ್ರವಾಯಿತು. ಈ ಮೂಲಕ ಇವರು ಮದ್ದೂರಿನ ವೀರಣ್ಣಗೌಡರೆಂದು ಹೆಸರುವಾಸಿಯಾದರು. ನಾಯಕ ಪಟ್ಟ ಪಡೆದುಕೊಳ್ಳಲು ಯಾವ ವಿಶ್ವವಿದ್ಯಾನಿಲಯದ ಪ್ರಶಸ್ತಿಗಳ ಅವಶ್ಯಕತೆ ಇಲ್ಲ. ಅವುಗಳಿಂದ ಪ್ರಯೋಜನವೂ ಇಲ್ಲ. ಉಚ್ಚ ತರಗತಿಯ ವಿದ್ಯಾಭ್ಯಾಸವಾಗಲೀ, ಅಪಾರ ದ್ರವ್ಯವಾಗಲೀ ಮುಖಂಡತನ ತರಲಾರವು ಅದಕ್ಕೆ ವಿಶಾಲ ಹೃದಯ ಬೇಕು. ದೇಶಾಭಿಮಾನ ಮತ್ತು ಪ್ರಜಾಸೇವೆಯ ಇಚ್ಛೆ ಹೋರಾಡುವ ಸಾಮರ್ಥ್ಯ ಇರಬೇಕು. ಆಗ ಮುಂದಾಳುತನದ ಪಟ್ಟ ತಾನಾಗಿಯೇ ಹುಡುಕಿಕೊಂಡು ಬರುತ್ತದೆ.

೧೯೩೦ರ ಸುಮಾರಿಗೆ ಉತ್ತರ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟದ ಕಾವು ಹೆಚ್ಚಾಗಿತ್ತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಕರಾನಿರಾಕರಣೆಯ ಚಳವಳಿ ಭರದಿಂದ ಪ್ರಾರಂಭವಾಯಿತು. ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳವಳಿ ದೇಶವನ್ನೆಲ್ಲಾ ವ್ಯಾಪಿಸುತ್ತಿತ್ತು. ದೇಶೀಯ ಸಂಸ್ಥಾನಗಳಲ್ಲೂ ಜನಸಾಮಾನ್ಯರು ಸರಕಾರದ ವಿರುದ್ದದ ಹೋರಾಟಗಳಿಗೆ ಮುಂದಾಗುವ ಅವಕಾಶಗಳಿಗೆ ಸಿದ್ದರಾಗುತ್ತಿದ್ದರು. ಅಂತಹ ಸಂದರ್ಭದ ಹೋರಾಟಗಳಲ್ಲಿ ಇರ್ವಿನ್‌ನಾಲಾ ರೈತರ ಹೋರಾಟ ಇತಿಹಾಸ ಪ್ರಸಿದ್ದವಾಗಿದೆ.

ಕೃಷ್ಣರಾಜ ಸಾಗರ ಹೊಂದಿರುವ ಮೂರು ಕಾಲುವೆಗಳಲ್ಲಿ ಮುಖ್ಯವಾದ ಕಾಲುವೆ ಇರ್ವಿನ್ ನಾಲೆ ಅಥವ ವಿಶ್ವೇಶ್ವರಯ್ಯ ನಾಲೆ. ಕಟ್ಟೆಯ ಉತ್ತರ ಭಾಗದಿಂದ ಬರುವ ನೀರನ್ನು ಕೊಂಡೊಯ್ಯುವ ನಾಲೆ ೪೫ ಕಿ.ಮೀ ಉದ್ದವಾಗಿದ್ದು, ೩೦೦ ಕಿ.ಮೀ ಉದ್ದದ ಶಾಖೆಗಳಿಂದ ಕೂಡಿದೆ. ಎರಡು ಕಾಲುವೆಗಳು ಬಲದಂಡೆ ಮತ್ತು ಎಡದಂಡೆಯಲ್ಲಿದ್ದು ಇವು ಕ್ರಮವಾಗಿ ೩೨ ಕಿ.ಮೀ ಮತ್ತು ೨೧ ಕಿ.ಮೀ ಹರಿಯುತ್ತದೆ. ಈ ನಾಲೆಯ ನಿರ್ಮಾಣಕ್ಕೆ ಮೊದಲು ಬಹಳ ಕಾಲದವರೆಗೆ ತಾಂತ್ರಿಕ ಪರಿಶೀಲನೆ ನಡೆಯಿತು. ಮುಖ್ಯ ಸ್ಥಳದಿಂದ ಪ್ರಾರಂಭವಾಗುವ ಈ ಕಾಲುವೆಯ ಯೋಜನೆಯನ್ನು ೧೯೧೧ರಲ್ಲಿ Executive

---

[೨೬] ಅಸ್ತೋಷ್ ವರ್ಶ್ನಿ – ೧೯೯೫) ಉಲ್ಲೇಖ : ರೈತ ಚಳುವಳಿಗಳು: ಏಕೀಕರಣೋತ್ತರ ಕರ್ನಾಟಕ ಚಳುವಳಿ ಸಂ- ೬. ಡಾ.ತಂಬಂಡ ವಿಜಯ್ ಪೂಣಚ್ಚ. ಕನ್ನಡ ವಿ.ವಿ. ಹಂಪಿ. ಪುಟ-೧, ೧೯೯೯.

Engineer ಆಗಿದ್ದ ಬಿ.ಸುಬ್ಬರಾವ್ ತಯಾರಿಸಿದರು. ಮಂಡ್ಯ, ಮಳವಳ್ಳಿ, ನಾಗಮಂಗಲ, ಕುಣಿಗಲ್ ಹಾಗೂ ಚನ್ನಪಟ್ಟಣ ತಾಲ್ಲೂಕುಗಳಿಗೆ ನೀರನ್ನು ಕೊಂಡೊಯ್ಯುವ ಬೃಹತ್ ಯೋಜನೆ ಇದಾಗಿತ್ತು. ಹಾಗೆಯೇ ರಾಮನಗರ, ಕನಕಪುರದ ಕಡೆಗೆ ಮುಂದುವರಿಯಲು ಕಾವೇರಿ ಮತ್ತು ಅರ್ಕಾವತಿಯ ಸಂಗಮ ಸ್ಥಳದವರೆಗೂ ಈ ನಾಲೆಯನ್ನು ತೆಗೆದುಕೊಂಡು ಹೋಗಬೇಕೆಂಬ ಭವಿಷ್ಯದ ಆಲೋಚನೆ ಕೂಡ ಇತ್ತು. ೧೯೩೦ರಲ್ಲಿ ಮೊದಲು ೪ ಮೈಲಿ ಕಾಲುವೆ ತೋಡಿ ನೀರು ಬಿಡುವ ಮೊದಲು ಪರೀಕ್ಷೆಗೆ ಒಳಪಡಿಸಲಾಯಿತು. ಕಾಲುವೆಯಲ್ಲಿ ನೀರು ಹರಿಯುವ ಪ್ರಮಾಣವನ್ನು ಹಾಗೂ ರೀತಿಯನ್ನು ಗಮನಿಸಲಾಯಿತು.

ಜಲಾಶಯದಿಂದ ಆರಂಭವಾಗುವ ವಿ.ಸಿ.ನಾಲೆ (ಹಿಂದೆ ಇರ್ವಿನ್ ನಾಲೆ ಎಂಬ ಹೆಸರಿತ್ತು) ಪಾಂಡವಪುರದ ಲೋಕಪಾವನಿ ನದಿಯನ್ನು ಹಾದು ಅತ್ಯಂತ ದುರ್ಗಮವಾದ ಹುಲಿಕೆರೆ ಮತ್ತು ಕರೀ ಘಟ್ಟಗಳನ್ನು ಹಾದು ಮುಂದೆ ಹೋಗುತ್ತದೆ. ಈ ನಾಲೆಯ ನಿರ್ಮಾಣದ ಮೊದಲು ಪ್ರಾರಂಭದ ಹಂತದಲ್ಲಿ ಯಾವುದೇ ಕಾಲುವೆಗಳ ನಿರ್ಮಾಣಕ್ಕೂ ಕೈ ಹಾಕದೆ ಸಾಕಷ್ಟು ನೀರನ್ನು ಸಂಗ್ರಹಿಸಿ, ಶಿವನ ಸಮುದ್ರದ ವಿದ್ಯುಚ್ಛಕ್ತಿ ಕಾರ್ಯಾಗಾರಕ್ಕೆ ನೀರು ಸರಬರಾಜು ಮಾಡುವ ಕಾರ್ಯಕ್ಕೆ ಪ್ರಾಮುಖ್ಯತೆ ಕೊಡಲಾಯಿತು. ವಿಶ್ವೇಶ್ವರಯ್ಯ ನಾಲೆಯನ್ನು ಕಾವೇರಿ ಬ್ರಾಂಚ್ ಮತ್ತು ಮದ್ದೂರು ಬ್ರಾಂಚ್ ಎಂದು ಎರಡು ಭಾಗ ಮಾಡಿದ್ದಾರೆ. ಈ ಎರಡು ಬ್ರಾಂಚ್‌ಗಳಿಗೆ ಉಪಬ್ರಾಂಚ್‌ಗಳಿವೆ. ಅವುಗಳೆಂದರೆ ಲೋಕಸರ, ತುರಗನೂರು, ಶಿಂಷಾ, ಹೆಬ್ಬಕವಾಡಿ, ನಿಡಘಟ್ಟ, ಕರಗೋಡು, ಹೊಸ ಮದ್ದೂರು ಬ್ರಾಂಚ್‌ಗಳು.

ಇರ್ವಿನ್ ನಾಲಾ (ಈಗಿನ ವಿಶ್ವೇಶ್ವರಯ್ಯ ನಾಲೆ) ಅಚ್ಚುಕಟ್ಟು ಪ್ರದೇಶದ ರೈತರಿಗೆ ಸರ್ಕಾರ ಹಲವು ನಿರ್ಬಂಧಗಳನ್ನು ಹೇರಿತ್ತು. ಈ ವಿಷಯವಾಗಿ ರೈತರಿಗೆ ಆಗುತ್ತಿದ್ದ ಕಷ್ಟ ನಷ್ಟದ ಅರಿವನ್ನುಂಟು ಮಾಡಿ ರೈತರ ಜಾಥಾವನ್ನು ನಡೆಸಿ ಸರ್ಕಾರಕ್ಕೆ ತಮ್ಮ ಸಮಸ್ಯೆಗಳನ್ನು ಹೇಳಿಕೊಂಡು ಪರಿಹಾರ ಪಡೆಯುವ ಉದ್ದೇಶದಿಂದ ರೈತರುಗಳಾದ ಮಂಡ್ಯದ ಎಚ್.ಹೊನ್ನಯ್ಯ, ಹೊನಗಾನಹಳ್ಳಿ ಕೆ.ಪುಟ್ಟಣ್ಣನವರು ಬಂದು ಕ್ರಾಂತಿಕಾರಿ ಮನೋಭಾವದ ರೈತಪರ ಕಾಳಜಿ ಹೊಂದಿದ್ದ ಹೆಚ್.ಕೆ.ವೀರಣ್ಣಗೌಡನ್ನು ಭೇಟಿಮಾಡಿದರು. ಒಕ್ಕಲಿಗರ ಪತ್ರಿಕೆಯಲ್ಲಿ ಲೇಖನಗಳನ್ನು ಬರೆಯುವ ಮತ್ತು ಬೇರೆಯವರಿಂದ ಬರೆಸಿ ಪ್ರಕಟಿಸುತ್ತಿದ್ದ ಲೇಖನಗಳಲ್ಲಿ ಹೆಚ್.ಕೆ.ವೀರಣ್ಣಗೌಡ ರೈತಪರಕಾಳಜಿ ಎದ್ದು ಕಾಣುತ್ತಿತ್ತು. ನೇಗಿಲಯೋಗಿಯ ನಿಸ್ಪೃಹವಾದ ಸೇವೆಯಿಂದ ದೇಶ ಅನ್ನವನ್ನು ಪಡೆದರೂ ಅವನನ್ನು ಸರ್ಕಾರ ಕಡೆಗಣಿಸುತ್ತಿರುವ ಬಗ್ಗೆ ಇವರಿಗೆ ವಿಷಾದವಿತ್ತು, ನೋವಿತ್ತು. ಹಾಗಾಗಿ ಪುಟ್ಟಣ್ಣನವರು ರೈತರಿಗಾಗುವ ಅನ್ಯಾಯ, ಕಷ್ಟ ನಷ್ಟದ ಬಗ್ಗೆ ವಿವರಿಸಿ ರೈತರ ನೆರವಿಗೆ ಬರಬೇಕೆಂದು ಕೋರಿದರು. ಕೃಷ್ಣರಾಜಸಾಗರ (ಕನ್ನಂಬಾಡಿ) ದಿಂದ ಹೊರಡುವ ಕಾವೇರಿ ಶಾಖೆ, ಶಿಂಷಾ ಶಾಖೆಗಳ ರೈತರು ಅನುಸರಿಸಬೇಕಾದ ವ್ಯವಸಾಯ ಕ್ರಮ, ನೀರಾವರಿಯಾಗುವ ಜಮೀನುಗಳಿಗೆ ಅವರು ಕೊಡಬೇಕಾಗಿರುವ ಕಂದಾಯ, ಕಾಂಟ್ರಿಬ್ಯೂಷನ್(ಸಹಾಯ ಧನ), ಹಣ ಕೊಡುವುದು ತಡವಾದರೆ ಅದಕ್ಕೆ ಕೊಡಬೇಕಾಗಿರುವ ಬಡ್ಡಿ ಇತ್ಯಾದಿ ವಿಷಯಗಳ ಬಗ್ಗೆ ಸರ್ಕಾರದವರು ಹೊರಡಿಸಿದ್ದ ಹುಕ್ಕುಂನಿಂದ

ರೈತರು ಯಾವ ಯಾವ ಕಷ್ಟ ನಷ್ಟಗಳಿಗೆ ಗುರಿಯಾಗಬೇಕಾಗಿದೆ ಎಂಬುದನ್ನು ಸುದೀರ್ಘವಾಗಿ ವಿವರಿಸಿದರು. ಮತ್ತು ಈಗಾಗಲೇ ಸಂಕಷ್ಟದಲ್ಲಿರುವ ರೈತನ ಮುಂದಿನ ಭವಿಷ್ಯವೇನು? ಎಂದು ಚರ್ಚಿಸಿದರು. ಅವುಗಳ ನಿವಾರಣೆಗಾಗಿ ರೈತರು ಹೋರಾಟ ನಡೆಸಬೇಕಾಗಿರುವ ಅಗತ್ಯವನ್ನು ಮನಗಂಡು ಅದಕ್ಕೆ ವಿದ್ಯಾವಂತ ಬುದ್ದಿಜೀವಿಗಳ ಮಾರ್ಗದರ್ಶನದ ಅಗತ್ಯವಿದೆಯೆಂದು ಹೇಳಿ ಈ ಹೋರಾಟದ ಮುಂದಾಳುತನವನ್ನು ಹೆಚ್.ಕೆ.ವೀರಣ್ಣಗೌಡರು ವಹಿಸಿಕೊಳ್ಳಬೇಕೆಂದು ಪುಟ್ಟಣ್ಣನವರು ಸ್ಪಷ್ಟಪಡಿಸಿದರು. ಕರಾರುವಕ್ಕಾಗಿ ವಿಷಯ ಮನದಟ್ಟು ಮಾಡಿಕೊಡಲು ಸರ್ಕಾರಿ ಕಾಗದ ಪತ್ರ, ನಕ್ಷೆಗಳನ್ನು ಹೆಚ್.ಕೆ.ವೀರಣ್ಣಗೌಡರ ಮುಂದಿಟ್ಟರು. ಮೊದಲಿಗೆ ಹೆಚ್.ಕೆ.ವೀರಣ್ಣಗೌಡರು ಅವರ ಮಾತಿಗೆ ಸಮ್ಮತಿಸಲಿಲ್ಲ. ಆದರೆ ಹೆಚ್.ಕೆ.ವೀರಣ್ಣಗೌಡರ ಮನದಲ್ಲಿ ರೈತರ ಪರವಗಿ ನಿಂತು ಹೋರಾಡುವುದರಲ್ಲಿ ತಪ್ಪಿಲ್ಲವೆಂದು ಅನ್ನಿಸಿದರೂ, ತಾನು ಸ್ಥಳೀಯನಲ್ಲವೆಂದು(ಮಂಡ್ಯಜಿಲ್ಲೆಯವನಲ್ಲ) ಆ ಜಿಲ್ಲೆಯ ಯಾವ ತಾಲ್ಲೂಕಿನಿಂದಲೂ ತಾನು ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿಲ್ಲವೆಂದು, ಅಲ್ಲದೆ ಬೆಂಗಳೂರಿನಲ್ಲಿ ನಡೆದ ಗಣಪತಿ ಗಲಭೆ ಸಂಬಂಧವಾಗಿಯೂ, ಚಿತ್ರಗುಪ್ತ ಪತ್ರಿಕೆಯು ಸರ್ಕಾರದ ಆಡಳಿತದ ಬಗ್ಗೆ ತಳೆದಿದ್ದ ಧೋರಣೆಯಿಂದಲೂ ಸರ್ಕಾರದವರು ತನ್ನನ್ನು ಒಬ್ಬ ಚಳವಳಿಗಾರನೆಂದು ಭಾವಿಸಿಕೊಂಡು ತನ್ನ ಮೇಲೆ ಕಣ್ಣಿಟ್ಟಿದ್ದಾರೆ. ಇರ್ವಿನ್ ನಾಲಾ ರೈತರ ಬೇಡಿಕೆಗಳು ನ್ಯಾಯವಾಗಿದ್ದರೂ ತಾನು ಅವರ ಪರ ನಿಲ್ಲುವುದರಿಂದ ಸರ್ಕಾರದವರು ತನ್ನ ಬಗ್ಗೆ ತಳೆದಿದ್ದ ಧೋರಣೆಗೆ ಬೆಂಬಲ ಸಿಕ್ಕಿದಂತಾಗಿ, ತಾನೆಲ್ಲಿದ್ದರೆ ಅಲ್ಲಿ ಜನರನ್ನು ಎತ್ತಿಕಟ್ಟುವ ಚಳವಳಿಗಾರನೆಂದು ಭಾವಿಸಿಕೊಂಡು ರೈತರ ನ್ಯಾಯವಾದ ಬೇಡಿಕೆಗಳನ್ನು ಕಡೆಗಣಿಸುವ ಪರಿಸ್ಥಿತಿ ಬರಬಹುದು. ಇದರಿಂದ ರೈತರಿಗೂ ಅನ್ಯಾಯವಾಗಬಹುದು ಎಂಬ ಆಲೋಚನೆ ಇವರದಾಗಿತ್ತು. ಈ ರೀತಿ ಯೋಚಿಸಿ ತಾನು ಇರ್ವಿನ್ ನಾಲಾ ರೈತರ ಹೋರಾಟದಲ್ಲಿ ನಾಯಕನಾಗಿ ನಿಲ್ಲುವುದು ಸರಿಯಲ್ಲವೆಂದು ನಿರ್ಧರಿಸಿದರು. ತಮ್ಮ ನಿರ್ಧಾರವನ್ನು ಆ ಸ್ನೇಹಿತರಿಗೆ ತಿಳಿಸಿ ಕೆಲವು ದಿನಗಳಲ್ಲೇ ತಾನು ಬೆಂಗಳೂರಿಗೆ ಹಿಂದಿರುಗಿ ಸ್ಥಳೀಯ ಸಂಸ್ಥೆಗಳಿಗೆ ಉಪಯೋಗವಾಗುವಂತಹ ವಾರ ಅಥವ ಪಕ್ಷ ಪತ್ರಿಕೆಯನ್ನು ಹೊರಡಿಸಬೇಕೆಂದಿರುವೆ ಎಂದು ತಿಳಿಸಿದರು. ಆದರೆ ಹೆಚ್.ಕೆ.ವೀರಣ್ಣಗೌಡ ಪ್ರತಿಯೊಂದು ಕಾರಣಕ್ಕೂ ಪುಟ್ಟಣ್ಣನವರು ಉತ್ತರವನ್ನು ಇಟ್ಟೇ ಇದ್ದರು. ಸುಲಭವಾಗಿ ಸೋಲೊಪ್ಪುವ ಜಾಯಮಾನ ಇವರದಾಗಿರಲಿಲ್ಲ. ದಿವಾನರ ನಿರಂಕುಶ ಆಡಳಿತದಲ್ಲಿ ಜನಪ್ರತಿನಿಧಿಗಳು ಜನಪರ ಕಾಳಜಿಗಳ ಬಗ್ಗೆ ಅಷ್ಟಾಗಿ ಆಸ್ಥೆ ಹೊಂದಿಲ್ಲ. ಅಲ್ಲದೆ ಅವರೆಲ್ಲ ದಿವಾನರ ದಾಕ್ಷಿಣ್ಯಕ್ಕೆ ಒಳಗಾಗಿ ಬಿಟ್ಟಿದ್ದಾರೆ. ಅವರ್‍ಯಾರು ರೈತರನ್ನು ಹತ್ತಿರ ಸೇರಿಸಲಿಲ್ಲ. ಈ ಹಿನ್ನೆಲೆಯಲ್ಲಿ ತಾವು ರೈತರನ್ನು ಕೈಬಿಡದೆ ಮುಂದಾಳುಗಳಾಗಿ ನಿಲ್ಲಬೇಕೆಂದು ಹೆಚ್.ಕೆ.ವೀರಣ್ಣಗೌಡನ್ನು ಕೇಳಿಕೊಂಡರು. ಸ್ನೇಹಿತರ ಪ್ರಬಲ ಒತ್ತಾಯದ ಮೇರೆಗೆ ಅಂತಿಮವಾಗಿ ಎರಡು ದಿನಗಳ ನಂತರ ರೈತರ ಬಗ್ಗೆ ಸ್ವತಃ ಕಾಳಜಿ ಹೊಂದಿದ್ದ ಹೆಚ್.ಕೆ.ವೀರಣ್ಣಗೌಡು ರೈತರ ಹೋರಾಟದಲ್ಲಿ ಭಾಗಿಯಾಗುವೆನೆಂದು ಎಲ್ಲರು ತಾನು ಹೇಳಿದಂತೆ ಶಿಸ್ತಿನಿಂದ ನಡೆದುಕೊಳ್ಳಬೇಕೆಂದು ತಿಳಿಸಿದರು. ಹೀಗೆ ಹೇಳುವಲ್ಲಿ ತನ್ನ ಮಾತನ್ನು ಎಲ್ಲರೂ ಕೇಳಬೇಕು ಎಂಬ ಸರ್ವಾಧಿಕಾರಿ ಧೋರಣೆ ಇರಲಿಲ್ಲ. ಬದಲಾಗಿ

ವ್ಯವಸ್ಥಿತವಾಗಿ ಚಳುವಳಿ ನಡೆಸಬೇಕೆಂಬ ಆಶಯವಿದ್ದಿತು. ಕೂಡಲೆ ಮುಂದೇನು ಕಾರ್ಯ ಮಾಡಬೇಕೆಂದು ಚರ್ಚಿಸಿ ಕಾರ್ಯಕ್ರಮ ರೂಪಿಸಿದರು.

ಮುಗ್ಧ ರೈತರು ತಮಗಾಗುತ್ತಿರುವ ಅನ್ಯಾಯವನ್ನು ಕುರಿತು ಯೋಚಿಸದೇ ಕಾಯಕ ಮಗ್ನರಾಗಿರುವ ಸತ್ಯ ಅರಿತ ಹೆಚ್.ಕೆ.ವೀರಣ್ಣಗೌಡು ಮೊದಲು ಆ ಭಾಗದ ಸಮಸ್ತ ರೈತರಿಗೆ ತಮಗಾಗುತ್ತಿರುವ ಅನ್ಯಾಯದ ಬಗ್ಗೆ ಅರಿವು ಮೂಡಬೇಕು, ಆಗ ಮಾತ್ರ ಅವರು ಪ್ರತಿಭಟನೆಗಿಳಿಯಲು ಸಾಧ್ಯ ಎಂದು ನಿರ್ಧರಿಸಿ ಅವರನ್ನು ಈ ನಿಟ್ಟಿನಲ್ಲಿ ಎಚ್ಚರಿಸುವ ಪ್ರಯತ್ನ ಮಾಡಿದರು. ಇದರ ಅಂಗವಾಗಿ ಮೊದಲು ಸರ್ಕಾರದ ಹುಕ್ಕುಂನಿಂದ ರೈತರಿಗಾಗುವ ಕಷ್ಟ ನಷ್ಟಗಳನ್ನು ಕುರಿತು ನಾಲಾ ಪ್ರದೇಶದ ಎಲ್ಲ ತಾಲ್ಲೂಕುಗಳ ಪ್ರತಿಹಳ್ಳಿಗೂ ಹೋಗಿ ರೈತರಿಗೆ ತಿಳುವಳಿಕೆ ಹೇಳುವುದು ಮತ್ತು ಆ ವಿಷಯ ಕುರಿತು ಅಂಕಿ ಅಂಶಗಳನ್ನೊಳಗೊಂಡ ಒಂದು ಪ್ರಕಟಣೆ ಹೊರಡಿಸುವುದು. ಈ ಕಾರ್ಯವನ್ನು ಕೂಡಲೇ ಕೈಗೊಳ್ಳಬೇಕೆಂದು ತೀರ್ಮಾನಿಸಿದರು. ಈ ಕಾರ್ಯಗಳಿಗೆಲ್ಲ ಹಣ ಬೇಕಾಗಿದ್ದಿತು. ರೈತರಿಂದ ಚಂದಾ ರೂಪದಲ್ಲಿ ಹಣ ಸಂಗ್ರಹಿಸೋಣ ಎಂಬ ಸೂಚನೆ ಬಂತು. ಇದನ್ನು ಹೆಚ್.ಕೆ.ವೀರಣ್ಣಗೌಡರು ಒಪ್ಪಲಿಲ್ಲ. ಆ ಹಣ ರೈತರಿಂದ ಚಂದಾ ರೂಪದಲ್ಲಿ ಸಂಗ್ರಹಿಸಿದರೆ ವಿರೋಧಿಗಳ ಅಪಪ್ರಚಾರಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಹೆಚ್.ಕೆ.ವೀರಣ್ಣಗೌಡರು ನುಡಿದರು. ಹೊನ್ನಯ್ಯನವರು ತಾವು ಮನೆ ಕಟ್ಟಬೇಕೆಂದು ಇಟ್ಟುಕೊಂಡಿದ್ದ ಹಣವನ್ನು ಈ ಕಾರ್ಯಕ್ಕಾಗಿ ಕೊಡುವುದಾಗಿಯೂ ಕಾರ್ಯ ಸಾಧನೆಯ ನಂತರ ಆ ಹಣವನ್ನು ಹಿಂದಿರುಗಿಸಿಕೊಡಬೇಕಾಗಿಯೂ ಹೇಳಿದರು. ಇದಕ್ಕೆ ಒಪ್ಪಿದ ಗೌಡರು ಅದರಂತೆ ಹಣ ಪಡೆದು ಮಂಡ್ಯ ಸಹಕಾರ ಸಂಘದಲ್ಲಿ ಠೇವಣಿಯಾಗಿಟ್ಟು ಬೇಕಾದಾಗ ಅಗತ್ಯವಾದಷ್ಟು ಹಣವನ್ನು ಹೊನ್ನಯ್ಯನವರು, ಪುಟ್ಟಣ್ಣನವರು ರುಜುಮಾಡಿ ಪಡೆಯಬೇಕೆಂದು ತೀರ್ಮಾನಿಸಿದರು. ಪ್ರಚಾರ ಸಭೆ ನಡೆಸುವ ಹಳ್ಳಿಗಳಿಗೆ ಹೋಗುವ ವ್ಯವಸ್ಥೆಯ ವಿಚಾರದಲ್ಲಿ 'ರೈತರು ಊಟದ ವ್ಯವಸ್ಥೆಯೊಂದಿಗೆ ಗಾಡಿಯ ವ್ಯವಸ್ಥೆ ಮಾಡಿಕೊಡುತ್ತಾರೆಂಬ' ಸಲಹೆ ಬಂತು. ಆದರೆ ಹೆಚ್.ಕೆ.ವೀರಣ್ಣಗೌಡರು ಇದಕ್ಕೂ ಸಮ್ಮತಿಸಲಿಲ್ಲ. ಯಾವ ರೀತಿಯಲ್ಲೂ ಆರೋಪ ಕೇಳಲು ಅವರು ಸಿದ್ಧರಿರಲಿಲ್ಲ. ತಾವು ರೈತ ಸಂಘಟನೆಗೆ ಹೊರಟಾಗ ರೈತರನ್ನು ತಮಗೆ ವಿರುದ್ಧವಾಗಿ ಎತ್ತಿ ಕಟ್ಟಲು ವಿರೋಧಿಗಳು ಪ್ರಯತ್ನ ನಡೆಸಿದರೆ ಎಲ್ಲವೂ ವಿಫಲವಾಗುತ್ತದೆ ಎಂದು ಸದಾ ಜಾಗರೂಕರಾಗಿರುತ್ತಿದ್ದರು. ಹೀಗೆ ಗೌಡರು ತಮ್ಮ ಕಾರ್ಯ ಸಾಧನೆಗೆ ತೆಗೆದುಕೊಂಡ ಮುಂಜಾಗ್ರತಾ ಕ್ರಮಗಳು ಅವರ ಸಂಘಟನಾ ಚಾತುರ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

ಬಿಟ್ಟಿ ಊಟ, ಬಿಟ್ಟಿ ಗಾಡಿ ಪ್ರಯಾಣ ಸಿಗುವುದರಿಂದ ಮಾಡುವುದಕ್ಕೆ ಕೆಲಸವಿಲ್ಲದ ನಾಲ್ಕಾರು ಜನರು ರೈತರನ್ನು ತಪ್ಪುದಾರಿಗೆ ಎಳೆಯುವ ಕಾರ್ಯದಲ್ಲಿ ತೊಡಗಿದ್ದಾರೆಂಬ ಆಕ್ಷೇಪಣೆಗಳಿಗೆ ಅವಕಾಶ ಮಾಡಿ ಕೊಡಬಾರದೆಂದು ತೀರ್ಮಾನಿಸಿದರು. ಬೈಸಿಕಲ್‌ನಲ್ಲಿ ಹೋಗಲು ತೀರ್ಮಾನಿಸಿದರೂ ಕೊನೆಗೆ ಸಹ ಸಂಘಟಕರಾಗಿದ್ದ ಪುಟ್ಟಣ್ಣನವರಿಗೆ ಬೈಸಿಕಲ್ ಬಾರದ ಕಾರಣ ಮತ್ತು ತಮ್ಮೊಂದಿಗೆ ಇತರ ಜನರು ಬರುವುದರಿಂದ ನಡೆದುಕೊಂಡು ಹೋಗುವುದೇ ಸರಿ ಎಂದು ತೀರ್ಮಾನಿಸಿದರು. ರೈತರಿರುವ ನೆಲೆಗಳೆಡೆಗೆ ಕಾಲ್ನಡಿಗೆಯ ಪಯಣ ಆರಂಭವಾಯಿತು.

ಮೊದಲನೆ ಪ್ರಚಾರಸಭೆ ಮಳವಳ್ಳಿ ತಾಲ್ಲೂಕು ಮತ್ತಿಕಾಳೇಶ್ವರನ ತೋಪಿನಲ್ಲಿ ಹೆಚ್.ಕೆ.ವೀರಣ್ಣಗೌಡರು ಮಾವನವರಾದ ಎಂ.ಎಚ್.ಚನ್ನೇಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ತದನಂತರದಲ್ಲಿ ಚಿಕ್ಕ ಅರಸಿನಕೆರೆ, ಗೆಜ್ಜಲಗೆರೆ, ಗೌಡಗೆರೆ, ಹೊಳಲು, ಕರಗೋಡು ಗ್ರಾಮಗಳು, ಮಂಡ್ಯ, ಮದ್ದೂರು, ಮಳವಳ್ಳಿ, ಶ್ರೀರಂಗಪಟ್ಟಣ, ಫ್ರೆಂಚ್‌ರಾಕ್ಸ್(ಈಗಿನ ಪಾಂಡವಪುರ) ತಾಲ್ಲೂಕುಗಳಲ್ಲಿಯೂ ಮತ್ತಿತರ ಗ್ರಾಮಗಳಲ್ಲೂ ಸಭೆಗಳು ನಡೆದವು. ಅಲ್ಲದೆ ಮಡುಕುತೊರೆ ಜಾತ್ರೆ, ಚುಂಚನಟ್ಟೆ ಜಾತ್ರೆಗಳಲ್ಲಿ ಹೆಚ್ಚಿನ ಜನರ ಗಮನ ಸೆಳೆಯುವ ಉದ್ದೇಶದಿಂದ ಪ್ರಚಾರ ಸಭೆಗಳಲ್ಲಿ ಭಾಷಣವನ್ನು ಮಾಡಿದರು. ಜೊತೆಗೆ ರೈತರ ಕಷ್ಟ ನಷ್ಟಗಳ ಬಗೆಗೆ ಪ್ರಕಟಿಸಬೇಕೆಂದಿದ್ದ ಪುಸ್ತಕಕ್ಕೆ ಬೇಕಾದ ಅಂಕಿ ಅಂಶಗಳನ್ನು ಸಂಗ್ರಹಿಸುವುದಕ್ಕೂ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೂ ಬೇರೆ ಬೇರೆ ಸ್ಥಳಗಳಿಗೆ ಭೇಟಿಕೊಟ್ಟರು.

ಇರ್ವಿನ್ ನಾಲಾ ಪ್ರದೇಶದಲ್ಲಿ ಬ್ಲಾಕ್ ಸಿಸ್ಟಂ ವ್ಯವಸ್ಥೆ ಜಾರಿಗೆ ಬರುವಂತೆ ಸರ್ಕಾರದ ಹುಕ್ಕುಂ ಆಗಿತ್ತು. ಬ್ಲಾಕ್‌ಸಿಸ್ಟಂ ಅಂದರೆ ಒಂದು ನಿಗದಿಯಾದ ಪ್ರದೇಶದ ಜಮೀನಿನಲ್ಲಿ ಅಥವಾ ಒಂದು ನಾಲೆ ಹಾಗೂ ಸೀಳುನಾಲೆ ಕೆಳಗಿರುವ ಜಮೀನುಗಳಲ್ಲಿ ಒಂದು ವರ್ಷ ಕಬ್ಬು, ೨ನೇ ವರ್ಷ ಭತ್ತ, ೩ನೇ ವರ್ಷ ಕುಷ್ಕಿ ಬೆಳೆಯಬೇಕೆಂಬುದು. ಈ ರೀತಿ ನಿರ್ದಿಷ್ಟವಾದ ಬೆಳೆ ಮಾಡಬೇಕೆಂದು ಸರ್.ಎಂ.ವಿಶ್ವೇಶ್ವರಯ್ಯನವರು ಸ್ಥೂಲವಾಗಿ ತಿಳಿಸಿದ್ದರು. ಅವರ ಸಲಹೆಯನ್ನು ಯಾವ ರೀತಿ ಕಾರ್ಯಗತಗೊಳಿಸಬೇಕೆಂಬುದರ ವಿವರಗಳನ್ನು ಸಿದ್ಧಪಡಿಸಬೇಕೆಂದು ಸರ್ಕಾರದವರು ಸಂಬಂಧಪಟ್ಟ ಇಲಾಖೆಗಳ ಮುಖ್ಯಾಧಿಕಾರಿಗಳಿಗೆ ಸೂಚನೆ ಕೊಟ್ಟಿದ್ದರು. ವ್ಯವಸಾಯದ ಇಲಾಖೆಯ ಡೈರೆಕ್ಟರ್ ಆಗಿದ್ದ ಡಾ.ಲೆಸ್ಲಿ ಕೋಲ್ಮನ್‌ರವರು ವಿಶ್ವೇಶ್ವರಯ್ಯನವರ ಸಲಹೆಯನ್ನೇ ಸ್ವಲ್ಪ ಹೆಚ್ಚು ಕಡಿಮೆ ಎತ್ತಿಹಿಡಿದರು. ಅಷ್ಟರಲ್ಲಿ ಸರ್ಕಾರದವರೇ ನಾಲಾ ಪ್ರದೇಶದಲ್ಲೆಲ್ಲಾ ಸರ್ವೆ ನಡೆಸಿ ಯಾವ ಯಾವ ಪ್ರದೇಶದಲ್ಲಿ ಎಂತೆಂತಹ ಭೂಗುಣವಿದೆಂಬುದನ್ನು ಬೇರೆ ಬೇರೆ ಕಡೆಗಳಿಂದ ತರಿಸಿದ್ದ ಮಣ್ಣಿನ ಪರೀಕ್ಷೆ ಮಾಡಿಸಿದ್ದರು. ಮಂಡ್ಯ ಸಕ್ಕರೆ ಕಂಪನಿಯಲ್ಲಿ ಜನರಲ್ ಮ್ಯಾನೇಜರಾಗಿ ಕಾರ್ಯ ನಿರ್ವಹಿಸಿ ನಿವೃತ್ತರಾಗಿದ್ದ ಬಿ.ಜಿ.ದಾಸೇಗೌಡರು, ಪೊಲೀಸ್ ಇಲಾಖೆಯಲ್ಲಿ ದೊಡ್ಡ ಹುದ್ದೆಯಲ್ಲಿದ್ದು ನಿವೃತ್ತರಾಗಿದ್ದ ಎಸ್.ವಿ.ಬಾಬುರೆಡ್ಡಿಯವರು ಈ ಭೂಗುಣ ಸರ್ವೆ ಕಾರ್ಯದಲ್ಲಿ ನಿಯೋಜಿತರಾಗಿದ್ದರು. ಈ ಭೂಗುಣ ಪರೀಕ್ಷಾ ಫಲಿತಾಂಶಗಳನ್ನು ಗಮನಕ್ಕೆ ತೆಗೆದುಕೊಂಡು ವ್ಯವಸಾಯ ಇಲಾಖೆಯ ಡೈರೆಕ್ಟರ್ ಆಗಿದ್ದ ಡಾ. ಬಿ. ನರಸಿಂಹಯ್ಯಂರಾರ್‌ರವರು ಒಂಬತ್ತು ವಿಧಗಳನ್ನೊಳಗೊಂಡ ಬ್ಲಾಕ್ ಸಿಸ್ಟಂ ಒಂದನ್ನು ರೂಪಿಸಿ ಸರ್ಕಾರಕ್ಕೆ ವರದಿ ಮಾಡಿದ್ದರು. ಆ ವರದಿಯು ಡಾ.ಕೋಲ್ಮನ್‌ರವರ ಸಲಹೆಗಳಿಗಿಂತ ಉತ್ತಮವಾಗಿಯೂ ಹಾಗೂ ರೈತರಿಗೆ ಹೆಚ್ಚು ಅನುಕೂಲಕರವಾಗಿಯೂ ಇದ್ದಿತು. ಡಾ.ಕೋಲ್ಮನರ ಇಷ್ಟಾನುಸಾರ ಸರ್ಕಾರದವರು ಡಾ.ನರಸಿಂಹಯ್ಯಂಗಾರ್‌ರವರ ವರದಿಯನ್ನು ಬಹಿರಂಗ ಗೊಳಿಸದೆ ಹೋದರು. ಡಾ.ನರಸಿಂಹಯ್ಯಂಗಾರ್ರವರ ವರದಿಯ ಪ್ರತಿಯೊಂದನ್ನು ಮಂಡ್ಯಾ ಜಿಲ್ಲಾ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಫೀಸಿನಲ್ಲಿ ಇಟ್ಟಿರುವುದನ್ನು ಅರಿತ ಹೆಚ್.ಕೆ.ವೀರಣ್ಣಗೌಡರು ಹೇಗಾದರೂ ಆ ವರದಿಯನ್ನು ಜನರಿಗೆ ತಲುಪಿಸಬೇಕೆಂದು ಹಠತೊಟ್ಟು ಆ ಆಫೀಸಿನಲ್ಲಿ ಕೆಲಸಕ್ಕಿದ್ದ ತಮ್ಮ ಮಿತ್ರ ಎಂ.ಎಲ್.ಲಿಂಗಣ್ಣ ಎಂಬ

ಗುಮಾಸ್ತರ ಸಹಾಯದಿಂದ ವರದಿಯನ್ನು ಪಡೆದುಕೊಂಡು ರಾತ್ರೋರಾತ್ರಿ ಅದನ್ನು ಟೈಪ್ ಮಾಡಿಸಿ ಮಿತ್ರರ ಪ್ರತಿಯನ್ನು ಹಿಂದಿರುಗಿಸಿದರು. ನರಸಿಂಹಯ್ಯಂಗಾರ್‌ರವರ ವರದಿಯಲ್ಲಿ ಅಡಕವಾಗಿದ್ದ ಅಂಶಗಳನ್ನು ಹೆಚ್.ಕೆ.ವೀರಣ್ಣಗೌಡು ಜಿಲ್ಲೆಯಾದ್ಯಂತ ನಡೆಸುತ್ತಿದ್ದ ಬಹಿರಂಗ ಸಭೆಗಳಲ್ಲಿ ವಿವರಿಸುತ್ತಿದ್ದರು. ಅಲ್ಲದೆ ನ್ಯಾಯ ವಿಧಾಯಕ ಸಭಾ ಸದಸ್ಯರಾಗಿದ್ದ ಡಿ.ಎಸ್.ಮಲ್ಲಪ್ಪನವರ ಮೂಲಕ 'ನರಸಿಂಹಯ್ಯಂಗಾರರ ವರದಿಯಲ್ಲಿ ಉಪಯುಕ್ತ ಅಂಶಗಳಿವೆ ಎಂದು ಅದನ್ನು ಸರ್ಕಾರದವರೇಕೆ ಪ್ರಕಟಿಸಬಾರದೆಂದು' ಪ್ರಶ್ನಿಸುವಂತೆ ಮಾಡಿದರು. ಈ ಪ್ರಶ್ನೆಗೆ ಉತ್ತರವಾಗಿ ಸರ್ಕಾರದವರು ಸರ್ಕಾರಕ್ಕೆ ಅಂತಹ ಯಾವ ವರದಿಯನ್ನು ಯಾರು ಕಳುಹಿಸಲೇ ಇಲ್ಲವೆಂದು ಹೇಳಿಬಿಟ್ಟರು. ಹೊಣೆಗಾರಿಕೆಯಿಂದ ಜಾರಿಕೊಳ್ಳುವ ಪ್ರಯತ್ನ ಮಾಡಿದರು. ಇದರಿಂದ ಹೆಚ್.ಕೆ.ವೀರಣ್ಣಗೌಡು ಮತ್ತಷ್ಟು ವ್ಯಗ್ರರಾಗಿ ಚಳುವಳಿಯನ್ನು ಸಂಘಟಿಸಿ, ಹೋರಾಡಲೇಬೇಕು ಎಂದು ಪಣತೊಟ್ಟರು.

ಸರ್ಕಾರದ ಹುಕ್ಕುಂನಿಂದ ರೈತರಿಗಾಗುವ ಕಷ್ಟ ನಷ್ಟಗಳ ವಿವರಗಳನ್ನೆಲ್ಲಾ ತಿಳಿದುಕೊಂಡ ಮೇಲೆ ಗೆಜ್ಜಲಗೆರೆಯಲ್ಲಿ ಸೇರಿದ್ದ ಬೃಹತ್ ಸಭೆಯಲ್ಲಿ ಹತ್ತು ಸಾವಿರ ಮಂದಿ ರೈತರನ್ನು ಕಾಲು ನಡಿಗೆಯಲ್ಲಿ ಬೆಂಗಳೂರಿಗೆ ಜಾಥಾ ಹೊರಡಿಸಿ ದಿವಾನರಲ್ಲಿಗೆ ಹೋಗಿ ತಮ್ಮ ಬೇಡಿಕೆಗಳನ್ನು ಸಲ್ಲಿಸಬೇಕೆಂದು ತೀರ್ಮಾನಿಸಿದರು. ದಿವಾನರಿಗೆ ರೈತರ ತೀರ್ಮಾನವನ್ನು ತಿಳಿಸಿ ಅವರಿಗೆ ಅನುಕೂಲವಾದ ದಿನ ಮತ್ತು ಸಮಯವನ್ನು ತಿಳಿಸಿದರೆ ರೈತರು ದಿವಾನರನ್ನು ಕಾಣಬಯಸುವರೆಂದು ಕಾಗದ ಬರೆದರು. ಅದಕ್ಕೆ ಪ್ರತಿಯಾಗಿ ೧೯೩೨ನೇ ಇಸವಿ ಜನವರಿ ೪ನೇ ತಾರೀಖು ಮಧ್ಯಾಹ್ನ ೨ ಗಂಟೆಗೆ ಬೆಂಗಳೂರು ಅಠಾರ ಕಚೇರಿಯಲ್ಲಿ (ಅಂದಿನ ಮೈಸೂರು ಸಂಸ್ಥಾನ ಆಡಳಿತದ ಇಲಾಖಾ ಕಚೇರಿಗಳು ಇದ್ದ ಸ್ಥಳ) ರೈತರು ದಿವಾನರನ್ನು ಭೇಟಿ ಮಾಡಬಹುದೆಂದು ದಿವಾನರ ಆಪ್ತ ಕಾರ್ಯದರ್ಶಿಯವರಿಂದ ಉತ್ತರ ಬಂತು. ಬೆಂಗಳೂರಿಗೆ ಹೋಗುವ ಮೊದಲು ಹೊನ್ನಯ್ಯನವರೂ ಪುಟ್ಟಣ್ಣನವರೂ ಮುಂಚಿತವಾಗಿ ಕಾಲು ನಡಿಗೆಯಲ್ಲಿ ಬೆಂಗಳೂರಿಗೆ ಹೋಗಿ, ಯಾವ ಯಾವ ಸ್ಥಳದಲ್ಲಿ ಹಗಲು ಅಥವಾ ರಾತ್ರಿ ಬಿಡಾರ ಮಾಡಬೇಕೆಂಬುದನ್ನು ಅನುಭವದಿಂದ ತಿಳಿದು ಕೊಂಡು ಬಂದರು. ಸಮರ್ಥ ಸಂಘಟನಾ ಚಾತುರ್ಯ ಹೊಂದಿದ್ದ ಹೆಚ್.ಕೆ.ವೀರಣ್ಣಗೌಡು ತಮ್ಮ ಈ ಯೋಜಿತ ರೈತ ಸಮುದಾಯದ ಪಯಣದಲ್ಲಿ ಯಾವುದೇ ಅಭಾಸಗಳು ಏರ್ಪಡದಂತೆ ಮುಂಜಾಗರೂಕತೆ ವಹಿಸಿದ್ದರು. ಶಿಸ್ತಿನ ಕ್ರಮದಂತೆ ರೈತರು ಬೆಂಗಳೂರಿಗೆ ಜಾಥಾ ಹೊರಡಲು ಸಿದ್ಧರಾದರು. ಆ ಶಿಸ್ತಿನ ಕ್ರಮಗಳು ಈ ಕೆಳಗಿನಂತಿವೆ ;

೧. ನಾಲಾ ಪ್ರದೇಶದಲ್ಲಿರುವ ಪ್ರತಿ ಗ್ರಾಮದಿಂದಲೂ ರೈತರು ಆಯಾ ಗ್ರಾಮದ ಜನಸಂಖ್ಯೆಗನುಸಾರವಾಗಿ ಬೆಂಗಳೂರಿಗೆ ಹೊರಡಬೇಕು.

೨. ಆಯಾ ಗ್ರಾಮದಿಂದ ಹೊರಡುವ ಜನಸಂಖ್ಯೆಗನುಸಾರವಾಗಿ ಒಂದೋ ಎರಡೋ ಎತ್ತಿನಗಾಡಿಗಳನ್ನು ಕಟ್ಟಿಕೊಂಡು ಅವುಗಳಲ್ಲಿ ಎಂಟು ದಿನಗಳಿಗೆ ತಮ್ಮವರಿಗೆ ಬೇಕಾದ ಅಹಾರ ಪದಾರ್ಥಗಳು, ಸೌದೆ, ಪಾತ್ರೆಗಳು ಮುಂತಾದವುಗಳನ್ನು ತುಂಬಿಕೊಳ್ಳಬೇಕು. ದಾರಿಯಲ್ಲಿ ಯಾರಾದರೂ ಖಾಯಿಲೆಯಾದರೆ ಅಥವ ಮುದುಕರು ಮುಂತಾದವರು ಇದ್ದರೆ ಅಂಥವರಿಗೆ ಒಂದೊಂದು ಗಾಡಿಯಲ್ಲೂ ಒಬ್ಬೊಬ್ಬರನ್ನು ಕೂರಿಸಿಕೊಳ್ಳಲು ಸ್ಥಳವಿರಬೇಕು.

೩. ಪ್ರಯಾಣ ಮಾಡುವಾಗ ರಸ್ತೆ ಎಡಗಡೆ ಚರಂಡಿ ಪಕ್ಕದಲ್ಲೇ ಇಬ್ಬಿಬ್ಬರಂತೆ ಶಿಸ್ತಿನಿಂದ ಸಾಲಾಗಿ ನಡೆಯಬೇಕು.

೪. ದಾರಿಯಲ್ಲಿ ತಂಬುಲ ಉಗುಳುವುದು ಮುಂತಾದ ಹೊಲಸು ಮಾಡಬಾರದು.

೫. ರಸ್ತೆಯಲ್ಲಿ ಹೋಗಿಬರುವ ಗಾಡಿ, ಲಾರಿ, ಕಾರು ಮುಂತಾದವುಗಳಿಗೆ ಸ್ವಲ್ಪವೂ ಅಡ್ಡಿಯಾಗದಂತೆ ರಸ್ತೆಯ ಎಡಗಡೆ ಮಾತ್ರ ನಡೆಯಬೇಕು. ಯಾರೂ ಸಾಲು ಬಿಟ್ಟು ಕದಲಬಾರದು. ಹಾಗೂ ಇಬ್ಬರಿಗಿಂತ ಹೆಚ್ಚಾಗಿ ಒಂದು ಸಾಲಿನಲ್ಲಿ ಸೇರಬಾರದು.

೬. ದಾರಿಯಲ್ಲಿ ಸಿಕ್ಕುವ ಪಟ್ಟಣಗಳಲ್ಲಿ ಎಲೆ, ಅಡಿಕೆ, ಬೀಡಿ, ಸಿಗರೇಟು ಮುಂತಾದವುಗಳನ್ನು ಕೊಳ್ಳುವ ನೆಪದಿಂದ ಯಾರೂ ಸಾಲುಬಿಟ್ಟು ಕದಲಬಾರದು. ತಮಗೆ ಬೇಕಾದ ಅಂತಹ ಎಲ್ಲ ಪದಾರ್ಥಗಳನ್ನೂ ಪ್ರಯಾಣಿಕರ ಜತೆಯಲ್ಲೇ ಇರುವ ಗಾಡಿಯೊಂದರ ಅಂಗಡಿಯಲ್ಲೇ ಬಿಡಾರ ಮಾಡುವ ಸ್ಥಳ ಮತ್ತು ಕಾಲದಲ್ಲಿ ಕೊಂಡುಕೊಳ್ಳಬೇಕು.

೭. ಅದೇ ರೀತಿ ಬಿಡಾರ ಹೂಡುವ ಕಾಲದಲ್ಲಿ ಮಾತ್ರ ರಸ್ತೆಗೆ ದೂರವಾಗಿ ಹೋಗಿ ಜಲ, ಮಲ ಬಾಧೆಗಳನ್ನು ನಿವಾರಿಸಿಕೊಳ್ಳಬೇಕೇ ವಿನಃ ರಸ್ತೆ ಪಕ್ಕದಲ್ಲಿ ಕೊಳಕು ಮಾಡಲು ಅವಕಾಶ ಕೊಡಬಾರದು.
ನಮ್ಮ ಈಗಿನ ರಾಜಕೀಯ ಮುಖಂಡರು ಜನರನ್ನು ಕರೆತಂದು ನಡೆಸುವ ಸಭೆಗಳು ಮುಗಿದಾದ ನಂತರದ ಅವ್ಯವಸ್ಥೆಗೆ ಈ ಸಂದರ್ಭವನ್ನು ಹೋಲಿಸಿ ನೋಡಿದಾಗ ಹೆಚ್.ಕೆ.ವೀರಣ್ಣಗೌಡ ವ್ಯವಸ್ಥಿತ ಕಾರ್ಯಯೋಜನೆ ಮೆಚ್ಚುಗೆ ಗಳಿಸುವಂತಹುದಾಗಿದೆ. ಈ ಶಿಸ್ತಿನ ಕ್ರಮಗಳನ್ನು ಅಚ್ಚು ಹಾಕಿಸಿ ಸಾವಿರಾರು ಪ್ರತಿಗಳನ್ನು ನಾಲಾ ಪ್ರದೇಶದ ಎಲ್ಲಾ ಹಳ್ಳಿಗಳಿಗೆ ಹಂಚಲಾಯಿತು. ಬೆಂಗಳೂರಿಗೆ ಜಾಥಾ ಹೊರಡುವವರೆಲ್ಲಾ ೧೯೩೦ನೇ ಇಸವಿ ಡಿಸೆಂಬರ್ ೩೦ನೇ ತಾರೀಖಿನ ದಿನ ಉಪವಾಸವಿದ್ದು, ಸ್ನಾನ ಮಾಡಿಕೊಂಡು ತಂತಮ್ಮ ಗ್ರಾಮಗಳಲ್ಲಿರುವ ದೇವಸ್ಥಾನಗಳಿಗೆ ಹೋಗಿ ತಮ್ಮ ಕಷ್ಟ ನಷ್ಟಗಳು ಪರಿಹಾರವಾಗುವಂತೆ ಕರುಣಿಸಬೇಕೆಂದು ದೇವರನ್ನು ಪ್ರಾರ್ಥಿಸಿಕೊಂಡು ಹೊರಡುವ ಮೊದಲು ಮದ್ದೂರು ಸೇತುವೆ ಬಳಿ ಸಾಯಂಕಾಲ ಸೇರಬೇಕೆಂದು ನಿರ್ಧರಿಸಿದ್ದರು. ಆದರೆ ಅಷ್ಟರಲ್ಲಿ ಸರ್ಕಾರವೇನೂ ಕೈಕಟ್ಟಿ ಕುಳಿತಿರಲಿಲ್ಲ. ಈ ಜಾಥಾ ಹೊರಡುವುದನ್ನು ತಪ್ಪಿಸಬೇಕೆಂದು ಮಂಡ್ಯ ಪೊಲೀಸ್ ಅಧಿಕಾರಿಗಳು, ಮ್ಯಾಜಿಸ್ಟ್ರೇಟರು, ಇನ್ನಿತರ ಅಧಿಕಾರಿಗಳು ಮದ್ದೂರು ಸೇತುವೆ ಬಳಿ ಸೇರುವ ರೈತರನ್ನು ಆ ದಿನ ದಿವಾನರು ಬೆಂಗಳೂರಿನಲ್ಲಿರುವುದಿಲ್ಲವೆಂದು ಸುಳ್ಳು ಹೇಳಿ ಹೆದರಿಸಿ, ಬೆದರಿಸಿ, ಅವರೆಲ್ಲರೂ ಚದುರಿ ಹೋಗುವಂತೆ ಮಾಡಬೇಕೆಂದು ಹುನ್ನಾರ ಮಾಡಿದರು. ಆದರೆ ಕಾಕತಾಳಿಯವೆಂಬಂತೆ, ಹೆಚ್.ಕೆ.ವೀರಣ್ಣಗೌಡರು ಮದ್ದೂರು ಸೇತುವೆಗೆ ಹತ್ತಿರದ ಕೆಲವು ಹಳ್ಳಿಗಳಲ್ಲಿ ಕಾಲರ ರೋಗ (೧೯೩೦ರ ದಶಕದಲ್ಲಿ ಅಚ್ಚು ಕಟ್ಟು ಪ್ರದೇಶಗಳಲ್ಲಿ ಕಾಲುವೆಗಳಲ್ಲಿ ನೀರು ನಿಂತು ಕಾಲರ ರೋಗ ಕಾಣಿಸಿಕೊಂಡಿತ್ತು) ಹಬ್ಬಿದ್ದ ಕಾರಣ ಆ ಸ್ಥಳಕ್ಕೆ ಬದಲಾಗಿ ಅಲ್ಲಿಂದ ಒಂದು ಮೈಲಿ ದಕ್ಷಿಣಕ್ಕಿರುವ ಕೋಡಿಹಳ್ಳಿ ಗುಂಡುತೋಪಿನಲ್ಲಿ ಸೇರಬೇಕೆಂದು ತಿಳಿಸಿದರು. ಜಾಥಾ ಹೊರಡುವುದನ್ನು ತಡೆಯಲು ಕಾದಿದ್ದ ಅಧಿಕಾರಿಗಳು ಬಂದ ದಾರಿಗೆ ಸುಂಕವಿಲ್ಲ ಎಂದು ಹಿಂದಿರುಗಿದ್ದರು. ಬೆಳಗ್ಗೆ ಆರು

ಗಂಟೆಗೇ ಹೆಚ್.ಕೆ.ವೀರಣ್ಣಗೌಡು ರೈತರೆಲ್ಲರನ್ನು ಸಾಲಾಗಿ ಶಿಸ್ತಿನಿಂದ ನಿಲ್ಲಿಸಲು ಪಟ್ಟ ಪ್ರಯತ್ನ ಪ್ರಯೋಜನವಾಗಲಿಲ್ಲ. ಇದರಿಂದ ಹೆಚ್.ಕೆ.ವೀರಣ್ಣಗೌಡು ಬೇಶರಗೊಂಡರು. ಅಂತಹ ಬೃಹತ್ ಸಂಘಟನೆಯೊಂದನ್ನು ಮುನ್ನಡೆಸುವುದು ಸುಲಭದ ಸಂಗತಿಯಾಗಿರಲಿಲ್ಲ. ಆಗ ಮುಖಂಡರೆಲ್ಲ ಅವರು ಹೇಳಿದ ರೀತಿ ಶಿಸ್ತಿನಿಂದ ನಡೆದುಕೊಳ್ಳುತ್ತೇವೆ ಎಂದು ಗೌಡರ ಮನವೊಲಿಸಿದರು. ರೈತರು ನ್ಯಾಯಕ್ಕಾಗಿ ಬೆಂಗಳೂರಿನೆಡೆಗೆ ಪ್ರಯಾಣ ಪ್ರಾರಂಭಿಸಿದರು.

ಮೊದಲೇ ನಿರ್ಧರಿಸಿದಂತೆ ದಿನವೊಂದಕ್ಕೆ ಹನ್ನೆರಡು ಹದಿನೈದು ಮೈಲಿ ಪ್ರಯಾಣ ಮಾಡಿ ಗೊತ್ತು ಪಡಿಸಿದ್ದ ಸ್ಥಳಗಳಲ್ಲಿ ತಂಗಿದ್ದು ನಂತರ ಮುಂದುವರಿದು ಪ್ರಯಾಣ ಮಾಡಿ ೧೯೩೨ನೇ ಇಸವಿ ಜನವರಿ ೪ನೇ ತಾರೀಖು ಮಧ್ಯಾಹ್ನ ೧೨ ಗಂಟೆ ಸುಮಾರಿಗೆ ಬೆಂಗಳೂರು ಅಠಾರ ಕಚೇರಿಯನ್ನು ತಲುಪಿದರು. ಈ ಜಾಥಾದಲ್ಲಿ ನಾಲ್ಕು ಸಾವಿರ ರೈತರನ್ನೊಳಗೊಂಡ ಸಾಲು ಒಂದೂವರೆ ಮೈಲಿ ದೂರ ಪಸರಿಸಿತ್ತು. ತಮ್ಮ ಪ್ರಯಾಣದ ದಾರಿ ಮಧ್ಯದಲ್ಲಿ ಮೈಸೂರು ಜಿಲ್ಲಾಧಿಕಾರಿಗಳಾಗಿದ್ದ ಅಬ್ದುಲ್ ವಾಜಿದ್ ಸಾಹೇಬರು ಕಾರು ನಿಲ್ಲಿಸಿ ಹೆಚ್.ಕೆ.ವೀರಣ್ಣಗೌಡನ್ನು ಕರೆದು "ನೀವು ಇಷ್ಟು ಶಿಸ್ತಿನಿಂದ ರೈತರನ್ನು ಕರೆದೊಯ್ಯುತ್ತಿರುವುದು ದಿವಾನ್ ಸಾಹೇಬರಿಗೆ ತಿಳಿದು ಅವರು ಬಹಳ ಸಂತೋಷಪಟ್ಟುಕೊಂಡಿದ್ದಾರೆ. ಅಲ್ಲದೆ ನಿಮಗೆ ದಾರಿಯಲ್ಲಿ ಹಾವ ತೊಂದರೆಯೂ ಆಗದಂತೆ ಅಗತ್ಯವಾದ ಸಹಾಯ ಸೌಕರ್ಯಗಳನ್ನು ಏರ್ಪಡಿಸಿಕೊಡುವಂತೆ ಎಲ್ಲಾ ಸ್ಥಳೀಯ ಅಧಿಕಾರಿಗಳಿಗೂ ತಿಳಿಸಿದ್ದಾರೆ. ನಿಮ್ಮ ಪ್ರಯತ್ನಕ್ಕೆ ಯಶಸ್ಸು ಕೋರುತ್ತೇನೆ" ಎಂದು ಹೇಳಿದರು. ಈ ಹಿನ್ನೆಲೆಯಲ್ಲಿ ಅಷ್ಟು ಹೊತ್ತಿಗಾಗಲೇ ದಿವಾನರಿಗೆ ರೈತರ ಜಾಥಾದ ಬಗ್ಗೆ ಸುದ್ದಿ ಮುಟ್ಟಿ, ಅದು ಅಹಿಂಸಾತ್ಮಕವಾಗಿ, ಶಾಂತಿಯುತವಾಗಿ ಸಾಗಿ ಬರುತ್ತಿರುವುದಕ್ಕೆ ಸಂತಸ ವ್ಯಕ್ತಪಡಿಸಿ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಸ್ಥಳೀಯ ಅಧಿಕಾರಿಗಳು ನಡೆದುಕೊಳ್ಳುವಂತೆ ಸೂಚಿಸಿದ್ದರು. ಶಿಸ್ತಿನಿಂದ ಸಂಘಟನೆಯನ್ನು ಮುನ್ನಡೆಸಲು ಹೆಚ್.ಕೆ.ವೀರಣ್ಣಗೌಡು ಮುಂಜಾಗ್ರತೆಯಿಂದ ತೆಗೆದುಕೊಂಡ ನಿರ್ಧಾರಗಳಿಗೆ ಸಿಕ್ಕ ಮಾರ್ಯಾದೆ ಇದಾಗಿತ್ತು. ಜಾಥಾದುದ್ದಕ್ಕೂ ಎಲ್ಲ ಗ್ರಾಮ ಮತ್ತು ಪಟ್ಟಣಗಳವರು ಹಸಿರು ತೋರಣ ಚಪ್ಪರಗಳನ್ನು ಹಾಕಿ ರೈತ ಮುಖಂಡರಿಗೆ ಹಾರ ಹಾಕಿ ತುರಾಯಿಗಳನ್ನು ಕೊಟ್ಟು, ಆರತಿ ಬೆಳಗುವ ಮೂಲಕ ಶುಭಕೋರುತ್ತಿದ್ದರು. ಜಾಥಾದಲ್ಲಿನ ಸ್ಮರಣೀಯ ಘಟನೆಗಳನ್ನು ಹೆಚ್.ಕೆ.ವೀರಣ್ಣಗೌಡು ತಮ್ಮ ಆತ್ಮಕಥೆ 'ಬದುಕು ಮೆಲುಕಿ' ನಲ್ಲಿ ಓದುಗರ ಕಣ್ಣಿಗೆ ಕಟ್ಟುವಂತೆ ಕಟ್ಟಿ ಕೊಟ್ಟಿದ್ದಾರೆ. ಜಾಥಾದ ರೈತರಿಗೆ ಎಲ್ಲಾ ವಯೋಮಾನದವರು ತಮ್ಮ ಶುಭ ಹಾರೈಸುತ್ತಿದ್ದರು. ಹಾಗೆಯೇ ಗ್ರಾಮವೊಂದರ ಮುದುಕಿಯೊಬ್ಬಳು ರೈತರಿಗೆ, 'ದೇವರು ನಿಮಗೆ ಈ ಕಷ್ಟ ತಂದುಕೊಟ್ಟನಲ್ಲಾ! ನಿಮ್ಮ ಕಷ್ಟವನ್ನು ಕಡೆಗೆ ಅವನೇ ಕೊನೆಗಾಣಿಸುತ್ತಾನೆ ಹೋಗಿಬನ್ನಿ' ಎಂದು ಕಣ್ಣೀರಿಟ್ಟು ಆತ್ಮೀಯತೆಯಿಂದ ಸುಖ ಪ್ರಯಾಣ ಕೋರುತ್ತಿದ್ದ ದೃಶ್ಯ ಸ್ಮರಣೀಯವಾದುದು ಎಂದು ಹೆಚ್.ಕೆ.ವೀರಣ್ಣಗೌಡರು ವಿವರಿಸಿದ್ದಾರೆ.

ಬೆಂಗಳೂರಿಗೆ ತಲುಪುವ ಮುನ್ನಾ ರಾತ್ರಿ ಕೆಂಗೇರಿಯಲ್ಲಿ ನಾಗಣ್ಣ ಎಂಬುವವರ ಛತ್ರದಲ್ಲಿ ತಂಗಿದ್ದು, ಹೆಚ್.ಕೆ.ವೀರಣ್ಣಗೌಡ ಸಲಹೆಯಂತೆ ರಾತ್ರಿ ಸಭೆಯೊಂದನ್ನು ನಡೆಸಿ ಎಲ್ಲಾ ರೈತರ

ರುಜುಗಳನ್ನು, ಅನಕ್ಷರಸ್ಥರ ಹೆಬ್ಬೆರಳಿನ ಗುರುತುಗಳನ್ನು ಹಾಳೆಗಳಲ್ಲಿ ಸಂಗ್ರಹಿಸಿ ಅವುಗಳನ್ನು ಬೈಂಡ್ ಮಾಡಿಸಿ, ಇರ್ವಿನ್ ನಾಲಾ ರೈತರ ರುಜುಗಳ ಪುಸ್ತಕ ಎಂದು ಅಚ್ಚು ಮಾಡಿಸಿದರು. ಹಾಗೆಯೇ ದಿವಾನರಿಗೊಂದು ಅರ್ಜಿ ತಯಾರಿಸಿ ರೈತರ ಬೇಡಿಕೆಗಳನ್ನು ಅದರಲ್ಲಿ ನಮೂದಿಸಿ ಅದರ ಸಾವಿರಾರು ಪ್ರತಿಗಳನ್ನು ಅಚ್ಚು ಮಾಡಿಸಿದರು. ವಿಶೇಷವಾಗಿ ದಿವಾನರಿಗೆ, ಕೌನ್ಸಿಲರಿಗೆ, ಉನ್ನತಾಧಿಕಾರಿಗಳಿಗೆ ನೀಡಲು ಪ್ರತ್ಯೇಕ ಪ್ರತಿಗಳನ್ನು ಅಚ್ಚು ಹಾಕಿಸಿದರು.

ಶ್ರಮಜೀವಿಗಳಾದ ಈ ನೇಗಿಲಯೋಗಿಗಳು ತಮ್ಮ ನ್ಯಾಯಯುತ ಬೇಡಿಕೆಗಳನ್ನು ಹೊತ್ತು ರಾಜಧಾನಿಗೆ ಆಗಮಿಸಿದಾಗ ಬೆಂಗಳೂರು ಪೇಟೆಯಲ್ಲಿ ಜನರು ರೈತರ ಜಾಥಾವನ್ನು ದಾರಿಯುದ್ದಕ್ಕೂ ತಮ್ಮ ತಮ್ಮ ಮನೆಯ ಮುಂದೆ, ಮನೆಯ ಮೇಲೆ, ರಸ್ತೆಯ ಇಕ್ಕೆಲಗಳಲ್ಲಿ ಅಧಿಕ ಸಂಖ್ಯೆಯಲ್ಲಿ ನಿಂತು ಚಪ್ಪಾಳೆ ತಟ್ಟಿ ಸ್ವಾಗತಿಸಿದರು. ಮೈಸೂರು ರಸ್ತೆಯಿಂದ ಚಾಮರಾಜಪೇಟೆ ಒಂದನೇ ರಸ್ತೆಗೆ ಬಂದು ಕೋಟೆ ಮುಂದುಗಡೆ ಹಾದು ಅಠಾರ ಕಚೇರಿಯನ್ನು ತಲುಪಿ ರೈತರೆಲ್ಲರು ಮೈದಾನದಲ್ಲಿ ಶಿಸ್ತಿನಿಂದ ಕುಳಿತರು. ದಿವಾನರ ಆಪ್ತ ಕಾರ್ಯದರ್ಶಿಯವರು ಹೆಚ್.ಕೆ.ವೀರಣ್ಣಗೌಡರಲ್ಲಿ ಬಂದು 'ದಿವಾನ್ ಸಾಹೇಬರು ನಿಮ್ಮನ್ನು ನೋಡಬಯಸುತ್ತಾರೆ' ಎಂದು ಕರೆದೊಯ್ದರು. ಅವರೊಂದಿಗೆ ಹೋದ ಹೆಚ್.ಕೆ.ವೀರಣ್ಣಗೌಡರು ದಿವಾನರಿಗೆ ಕೈ ಮುಗಿದರು. ದಿವಾನರು 'ನಿಮ್ಮಲ್ಲಿ ಮುಖಂಡರಾಗಿರುವ ಎಂಟು-ಹತ್ತು ಮಂದಿ ಮಾತ್ರ ನನ್ನ ಛೇಂಬರಿಗೆ ಬಂದು ಮಾತನಾಡಬಹುದು'ಎಂದರು. ಅದಕ್ಕೆ ಹೆಚ್.ಕೆ.ವೀರಣ್ಣಗೌಡರು 'ತಮ್ಮ ಭೇಟಿಗಾಗಿ ಸಾವಿರಾರು ಮಂದಿ ರೈತರು ಅರವತ್ತು ಮೈಲಿಗಳಿಗೂ ಹೆಚ್ಚು ದೂರ ಅಹವಾಲುಗಳನ್ನು ಹೊತ್ತು ನಡೆದು ಬಂದಿದ್ದಾರೆ. ದಯವಿಟ್ಟು ತಾವು ಅವರೆಲ್ಲರನ್ನೂ ಭೇಟಿ ಮಾಡುವುದು ಅಗತ್ಯ. ಅಲ್ಲದೆ ನಮ್ಮಲ್ಲಿ ಮುಖಂಡರು ಯಾರೂ ಇಲ್ಲ, ನಾವೆಲ್ಲರೂ ರೈತರು. ನಮಗೆ ನಾವು ಮುಖಂಡರು. ಆದುದರಿಂದ ತಾವು ದಯಮಾಡಿ ಎಲ್ಲ ರೈತರನ್ನೂ ನೋಡಬೇಕು' ಎಂದರು. ಹೆಚ್.ಕೆ.ವೀರಣ್ಣಗೌಡರ ಸರಳತೆ, ಸೌಜನ್ಯಕ್ಕೆ ಈ ಮಾತು ಸಾಕ್ಷಿಯಾಗುತ್ತವೆ. ಈ ಸನ್ನಿವೇಶವನ್ನು ತಮ್ಮ ಲಾಭಕ್ಕಾಗಿ ಬಳಸಿಕೊಂಡು ರಾಜಕೀಯ ದೂರದೃಷ್ಟಿತನದಿಂದ ಮುಖಂಡರಾಗಿ ಬಿಂಬಿಸಲ್ಪಡಬೇಕೆಂಬ ಯಾವ ಸ್ವಾರ್ಥವೂ ಹೆಚ್.ಕೆ.ವೀರಣ್ಣಗೌಡರಿಗಿರಲಿಲ್ಲ. ಸಾವಿರಾರು ಮಂದಿಗೆ ನನ್ನ ಛೇಂಬರಿನಲ್ಲಿ ಸ್ಥಳವಿದೆಯೇ? ಎಂದು ದಿವಾನರು ಕೇಳಿದರು. ಹೆಚ್.ಕೆ.ವೀರಣ್ಣಗೌಡರು ದಿವಾನರಿಗೆ 'ತಾವೇ ಅವರಲ್ಲಿಗೆ ದಯಮಾಡಿಸಬಹುದಲ್ಲವೇ?'ಎಂದು ಧೈರ್ಯವಾಗಿ ನುಡಿದರು. ಅಷ್ಟರಲ್ಲಿ ದಿವಾನರು ಮತ್ತು ರೈತರ ಭೇಟಿಗೆ ವೇದಿಕೆ ಸಿದ್ದವಾಯಿತು. ದಿವಾನರು ರೈತರನ್ನು ೬೦, ೭೦ ಮೈಲಿ ದೂರ ನಡೆದು ಕೊಂಡು ಬರುವ ಬದಲು ರೈಲಿನಲ್ಲಿ ಬರಬಹುದಿತ್ತಲ್ಲ' ಎಂದರು. ಸಾವಿರಾರು ಬಡರೈತರು ರೈಲಿನಲ್ಲಿ ಬರುವ ಖರ್ಚು, ಊಟ ವಸತಿಗೆ ಸಾವಿರಾರು ರೂಪಾಯಿಗಳನ್ನು ಭರಿಸುವಷ್ಟು ಶಕ್ತರಲ್ಲವೆಂದು ಹೆಚ್.ಕೆ.ವೀರಣ್ಣಗೌಡರು ರೈತರ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿವರಿಸಿದರು. ಕೌನ್ಸಿಲರ್ ಕೆ.ಮ್ಯಾತನ್‌ರವರು 'ಸರ್ಕಾರದ ಹುಕ್ಕುಂ ಇರ್ವಿನ್ ನಾಲೆಯ ಬಗ್ಗೆ ಸರಿಯಾಗಿದೆ, ರೈತರಿಗೆ ತೊಂದರೆಯಿಲ್ಲ ಅದರಿಂದ ಅನುಕೂಲವಾಗುತ್ತದೆಂದು' ಹೇಳಿದರು. ಅಷ್ಟರಲ್ಲಿ ಹೆಚ್.ಕೆ.ವೀರಣ್ಣಗೌಡರ

ಮಾವ ಎಂ.ಎಚ್.ಚನ್ನೇಗೌಡರು ಎದ್ದು 'ಅಪ್ಪಣೆಯಾದಂತೆ ನಾವು ನಡೆದುಕೊಳ್ಳಲು ಸಿದ್ಧರಾಗಿದ್ದೇವೆ' ಎಂದು ಹೇಳಿಯೇ ಬಿಟ್ಟರು. ತಮ್ಮ ಉದ್ದೇಶ, ತೆಗೆದುಕೊಂಡ ಶ್ರಮ ವಿಫಲವಾಗುತ್ತಿರುವುದನ್ನು ಅರಿತ ಹೆಚ್.ಕೆ.ವೀರಣ್ಣಗೌಡರು 'ಚನ್ನೇಗೌಡರೇ ನೀವು ಸ್ವಲ್ಪ ದಯಮಾಡಿ ಕುಳಿತುಕೊಳ್ಳಿ ವಿಷಯ ಅಷ್ಟು ಸುಲಭವಲ್ಲ' ಎಂದು ಅವರನ್ನು ಸುಮ್ಮನಿರಿಸಿದರು. ನಂತರ ಅರ್ಜಿಯಲ್ಲಿ ನಮೂದಿಸಿದ್ದ ಬೇಡಿಕೆಗಳನ್ನು ಒಂದೊಂದಾಗಿ ಓದಿ ವಿಷಯ ಎಷ್ಟು ಗಹನವಾದುದು, ಎಷ್ಟು ತೊಡಕಾದುದು? ಇದರಿಂದ ರೈತರಿಗಾಗುವ ಅನಾನುಕೂಲಗಳೇನು? ಎಂಬುದನ್ನು ದಿವಾನರಿಗೆ ವಿವರಿಸಿದರು. ಮನವಿ ಅರ್ಜಿಯೊಂದಿಗೆ ರೈತರ ರುಜುವಿನ ಪುಸ್ತಕವನ್ನು ನೀಡಿದರು. ರೈತರ ಬೇಡಿಕೆಗಳಲ್ಲಿ ಬಹಳ ಮುಖ್ಯವಾದುದು; ಕಾಂಟ್ರಿಬ್ಯೂಷನ್ ಮೊಬಲಗನ್ನು ಒಂದೇ ಸಾರಿ ಕೊಡಬೇಕೆಂದು ಇಲ್ಲವಾದರೆ ಶೇ. ಆರೂಕಾಲರಂತೆ ಬಡ್ಡಿ ಕೊಡಬೇಕೆಂದು ಸರ್ಕಾರದವರು ಹುಕ್ಕುಂನಲ್ಲಿ ಹೇಳಿರುವುದು ಅನ್ಯಾಯವೆಂದು ಹೆಚ್.ಕೆ.ವೀರಣ್ಣಗೌಡರು ವಿವರಿಸಿದರು. ರೈತರ ಅನುಕೂಲಕ್ಕಾಗಿ ಮಾಡಿರುವ ಅಭಿವೃದ್ಧಿ ಕೆಲಸಗಳಿಗೆ ತೆರಿಗೆ/ಕಾಂಟ್ರಿಬ್ಯೂಷನ್ ಹಣ ಕೇಳಿರುವುದು ಸರಿಯಾದುದೆಂದು ವಾದಿಸಿದರು. ಆಗ ಹೆಚ್.ಕೆ.ವೀರಣ್ಣಗೌಡರು 'ರೈತರಿಗೆ ಅನುಕೂಲವಾಗಲೆಂದು ಘನ ಉದ್ದೇಶದಿಂದಲೇ ಸರ್ಕಾರದವರು ಕೋಟ್ಯಂತರ ರೂಪಾಯಿ ಖರ್ಚು ಮಾಡಿ ಅಣೆಕಟ್ಟು ಕಟ್ಟಿಸಿ ಕಾಲುವೆ ತೋಡಿಸಿರುವುದನ್ನು ನಾವು ಒಪ್ಪಿಕೊಳ್ಳುತ್ತೇವೆ. ಈ ಉಪಕಾರಕ್ಕಾಗಿ ನಾವು ಸರ್ಕಾರದವರಿಗೆ ಕೃತಜ್ಞರಾಗಿದ್ದೇವೆ. ಆದರೆ ಈ ಸಂದರ್ಭದಲ್ಲಿ ಉಂಟಾಗಿರುವ ತೊಡಕುಗಳ ಪರಿಹಾರಕ್ಕಾಗಿ ನಾವು ಇಷ್ಟು ದೂರ ನಡೆದು ಬಂದು ನಿಮ್ಮನ್ನು ಪ್ರಾರ್ಥಿಸಿಕೊಳ್ಳುತ್ತಿದ್ದೇವೆ. ಸರ್ಕಾರದವರು ರೈತರ ಪ್ರಯೋಜನಕ್ಕಾಗಿ ಮಾಡಿರುವ ಈ ಕೆಲಸದಿಂದ ಇದುವರೆಗೆ ರೈತರಿಗೆ ಒಂದು ಕಾಸಿನ ಉತ್ಪತ್ತಿಯೂ ಆಗಿಲ್ಲ. ಉತ್ಪತ್ತಿ ಬರುವವರೆಗೆ ಅಸಲು ಕೇಳುವುದನ್ನು ಸರ್ಕಾರ ನಿಲ್ಲಿಸಬೇಕು. ಈಗ ಖರ್ಚು ಮಾಡಿರುವ ಹಣದ ಮೇಲೆ ಕೊಡಬೇಕೆನ್ನುವ ಬಡ್ಡಿ ವಜಾ ಮಾಡಬೇಕೆಂಬುದೇ ರೈತರ ನ್ಯಾಯವಾದ ಬೇಡಿಕೆ [೩೭] ಎಂದು ವಿವರಿಸಿದರು.

ರೈತರ ಕಷ್ಟ-ನಷ್ಟದ ಬಗ್ಗೆ ಕೇಳಿದ ದಿವಾನರು "ತಮ್ಮ ಕಷ್ಟಗಳನ್ನು ಹೇಳಿಕೊಳ್ಳಲು ಇಷ್ಟು ದೂರ ಕಷ್ಟ ಪಟ್ಟು ಬಂದಿದ್ದೀರಿ. ನಿಮ್ಮ ಅಹವಾಲುಗಳನ್ನು ಸರ್ಕಾರದವರು ಸಹಾನುಭೂತಿಯಿಂದ ಪರಿಶೀಲಿಸಿ ಹುಕ್ಕುಂ ಹೊರಡಿಸುವರು. ಕಾಂಟ್ರಿಬ್ಯೂಷನ್ ಹಣದ ಮೇಲೆ ಬಡ್ಡಿ ಹಾಕಿರುವುದನ್ನು ವಜಾ ಮಾಡಬೇಕೆಂದು ನೀವು ಕೇಳಿರುವುದನ್ನು ಸರ್ಕಾರದವರು ಒಪ್ಪಿಕೊಳ್ಳುತ್ತಾರೆ. ಆದುದರಿಂದ ಕಂಟ್ರಿಬ್ಯೂಷನ್ ಹಣವನ್ನು ಬಡ್ಡಿಯಿಲ್ಲದೆ ಹತ್ತು ವಾರ್ಷಿಕ ಕಂತುಗಳಲ್ಲಿ ತೀರಿಸಬಹುದು. ಹತ್ತು ವರ್ಷ ಕಳೆದ ಮೇಲೆ ಉಳಿದುಕೊಳ್ಳುವ ಹಣದ ಮೇಲೆ ಬಡ್ಡಿ ಕೊಡಬೇಕಾಗುತ್ತದೆ"[೩೮] _ಎಂದು ಹೇಳಿದರು. ಮುಂದುವರೆದು 'ಕೆಲವು ದಿನಗಳಲ್ಲಿ ಮಂಡ್ಯಕ್ಕೆ ಬಂದು ಸ್ಥಳ ಪರಿಶೀಲನೆಯಿಂದ ವಿದ್ಯಮಾನಗಳನ್ನು ತಿಳಿದುಕೊಳ್ಳುತ್ತೇನೆ' ಎಂದರು. ಹೀಗೆ ಸರ್ಕಾರವನ್ನು ಮಣಿಸಿದ ರೈತರು ಸಂತಸದಿಂದ ಶಾಂತಿಯುತವಾಗಿ

---

[೩೭] ಬದುಕು ಮೆಲುಕು, ಹೆಚ್.ಕೆ.ವೀರಣ್ಣಗೌಡ, ಪುಟ-೧೪೨,

[೩೮] ಅದೇ. ಪುಟ -೧೪೨,೧೪೩

ಮಂಡ್ಯಕ್ಕೆ ಹಿಂದಿರುಗಿದರು. ಹಿಂದಿರುಗುವ ಮೊದಲು ಬೆಂಗಳೂರಿನ ಮಂಡಿ ವರ್ತಕರು ರೈತರಿಗೆ ಏರ್ಪಡಿಸಿದ್ದ ಆತಿಥ್ಯವನ್ನು ಸ್ವೀಕರಿಸಿ ಹೊರಟರು. ಪ್ರಯಾಣದಲ್ಲಿ ಸಣ್ಣ ಪುಟ್ಟ ಕಾಯಿಲೆಗಳು ಕಂಡು ಬಂದರೂ ರೈತರು ಧೈರ್ಯಗುಂದದೆ ಮುನ್ನೆಡೆದಿದ್ದರು. ರೈತರ ಜಾಥಾ ಯಾವ ತೊಂದರೆಯೂ ಇಲ್ಲದೆ ಯಶಸ್ವಿಯಾಗಿ ನಡೆಯಿತೆಂದು ಹೆಚ್.ಕೆ.ವೀರಣ್ಣಗೌಡು ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ. ಹೆಚ್.ಕೆ.ವೀರಣ್ಣಗೌಡರ ಲೆಕ್ಕಾಚಾರದಂತೆ ಇದರಿಂದ ರೈತರಿಗೆ ಒಂದು ಕೋಟಿ ರೂಪಾಯಿನಷ್ಟು ರಿಯಾಯಿತಿ ದೊರೆತಂತಾಯಿತು. ಈ ಜಾಥಾ ಕುರಿತು ಸರ್ಕಾರದವರು ಪ್ರಕಟಿಸಿರುವ ಮಂಡ್ಯ ಜಿಲ್ಲಾ ಗೆಜಟಿಯರ್‌ನಲ್ಲಿ ಇದನ್ನು ಬೇಸಾಯಗಾರರ ಚಳುವಳಿ (ಅಗ್ರೇರಿಯನ್ ರೆವಲ್ಯೂಷನ್) ಎಂದು ವರ್ಣಿಸಿದ್ದಾರೆ. ಮುಂದಾಳಾಗಿ ಕಾರ್ಯನಿರ್ವಹಿಸಿ ಮುಂದೆ ರಾಜಕೀಯ ಲಾಭ ಪಡೆಯಬೇಕೆಂಬ ಯಾವುದೇ ಆಕಾಂಕ್ಷೆ ಇಲ್ಲಿ ವೀರಣ್ಣಗೌಡರಿಗೆ ಇರಲಿಲ್ಲ ಎಂಬುದು ಗಮನಿಸುವ ಸಂಗತಿ.

ಹೆಚ್.ಕೆ.ವೀರಣ್ಣಗೌಡರು ಹೋರಾಟದ ಈ ಎಲ್ಲಾ ಸಂಗತಿಗಳು ಒಂದು ದಾಖಲೆಯಾಗಿ ಉಳಿಯಬೇಕು ಎಂದು ತೀರ್ಮಾನಿಸಿ ನಂತರದ ದಿನಗಳಲ್ಲಿ 'ಇರ್ವಿನ್ ನಾಲಾ ರೈತರ ಕಷ್ಟ ನಷ್ಟಗಳು' ಎಂದು ಪುಸ್ತಕವೊಂದನ್ನು ಬರೆದು ರೈತರ ಸಂಘದಿಂದ ಪ್ರಕಟಿಸಿದರು. ಈ ವಿಷಯ ದಿವಾನರ ಕಿವಿಗೆ ಬಿದ್ದು ಆ ಪುಸ್ತಕಗಳು ರೈತರಿಗೆ ಸಿಕ್ಕದ ಹಾಗೆ ಅವುಗಳನ್ನು ವಶಪಡಿಸಿಕೊಳ್ಳಬೇಕೆಂದು ಸರ್ಕಾರದವರು ಹವಣಿಸಿದರು. ಅದು ಎಲ್ಲಿ ಅಚ್ಚಾಗುತ್ತಿದೆಯೆಂಬುದನ್ನು ರೈತ ಮುಖಂಡರು ಬಹಿರಂಗ ಪಡಿಸಿರಲಿಲ್ಲ. ಸರ್ಕಾರದ ವಿರೋಧದ ನಡುವೆಯೂ ಪೊಲೀಸಿನವರ ಕಣ್ ತಪ್ಪಿಸಿ ನಾಲಾ ಪ್ರದೇಶದ ರೈತರಿಗೆ ಆ ಪುಸ್ತಕಗಳನ್ನು ಹಂಚಿದರು. ನಂತರ ಸರ್ಕಾರದವರಿಗೆ ವಿಷಯ ತಿಳಿಯಿತಾದರೂ ಏನೂ ಮಾಡಲಾಗದ ಅಸಹಾಯಕ ಪರಿಸ್ಥಿತಿಯಲ್ಲಿದ್ದರು. ದಿವಾನರು ಮಂಡ್ಯಕ್ಕೆ ಸ್ಥಳ ಪರಿಶೀಲನೆ ಮಾಡುವುದಕ್ಕೆ ಬರುವುದಾಗಿ ತಿಳಿಸಿದ್ದರು ಅಷ್ಟೆ. ಆದರೆ ಅವರು ಬರುವ ದಿನಾಂಕ, ವೇಳೆಯನ್ನು ನಿರ್ದಿಷ್ಟವಾಗಿ ತಿಳಿಸದೆ ಬಂದು ಕೆಲ ಸರ್ಕಾರದ ಬಾಲಬಡುಕ ರೈತರೊಂದಿಗೆ ಸಮಾಲೋಚಿಸಿ ಪರಿಸ್ಥಿತಿಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಸರ್ಕಾರದ ಪರವಾಗಿ ಬಳಸಿಕೊಳ್ಳಲು ಹವಣಿಸಿದ್ದರು. ಅದರಂತೆ ದಿವಾನರು ಜಿಲ್ಲಾಧಿಕಾರಿಗಳಿಗೆ ಬರುವ ವಿಷಯವನ್ನು ಗೌಪ್ಯವಾಗಿಟ್ಟು ಕೆಲ ರೈತರನ್ನು ಟ್ರಾವಲ್ಸ್ ಬಂಗಲೆ ಬಳಿ ಸೇರಿಸಬೇಕೆಂದು ತಿಳಿಸಿದ್ದರು. ಈ ವಿಷಯವನ್ನು ದಿವಾನರು ಬರುವ ಹಿಂದಿನ ದಿನ ತಿಳಿದ ಹೆಚ್.ಕೆ.ವೀರಣ್ಣಗೌಡು ರಾತ್ರೋರಾತ್ರಿ ಸುದ್ದಿಮುಟ್ಟಿಸಿ ರೈತರನ್ನು ಮಂಡ್ಯದಲ್ಲಿ ಬೆಳಿಗ್ಗೆ ೧೦ ಗಂಟೆಯೊಳಗೆ ಸೇರಬೇಕೆಂದು ತಿಳಿಸಿದರು. ಅದರಂತೆ ದಿವಾನರು ಮಂಡ್ಯಕ್ಕೆ ಬಂದ ದಿನ ಬೆಳಗಿನ ೧೦ ಗಂಟೆ ಒಳಗಾಗಿ ದಿವಾನರು ಆಶ್ಚರ್ಯಪಡುವಂತೆ ಸಾವಿರಾರು ಜನರು ಬಂದು ಸೇರಿದ್ದರು! ಆವೇಳೆಗಾಗಲೇ ಒಂದು ವಾರ ಕಾಲ ಮಂಡ್ಯ ಟೌನ್ ಮತ್ತು ಒಂದು ಮೈಲಿ ಸುತ್ತಳತೆಯಲ್ಲಿ ಐದುಮಂದಿಗಿಂತ ಹೆಚ್ಚು ಜನ ಒಂದು ಕಡೆ ಸೇರಬಾರದೆಂದು ಮ್ಯಾಜಿಸ್ಟ್ರೇಟರು ನಿಷೇದಾಜ್ಞೆ ಹೊರಡಿಸಿದ್ದರು. ಅದು ಪ್ರಯೋಜನವಾಗಲಿಲ್ಲ. ಸರ್ಕಾರದ ಯೋಜನೆ ಹೀಗೆ ತಲೆಕೆಳಗಾಯಿತು. ಅಷ್ಟರಲ್ಲಿ ಇರ್ವಿನ್ ನಾಲಾ ರೈತ ಸಂಘ ಕೃಷ್ಣರಾಜಸಾಗರದ ಹೆದ್ವಾರದ ಮಂಟಪದಲ್ಲಿ ಕಂಡುಬರುವ ಟಿಪ್ಪುಸುಲ್ತಾನರ ಶಾಸನದ ಕನ್ನಡ ಭಾಷಾಂತರದ ಹತ್ತು ಸಾವಿರ ಪ್ರತಿಗಳನ್ನು ಅಚ್ಚುಹಾಕಿಸಿ ಅಲ್ಲಿ ಸೇರಿದ್ದ ಜನರಿಗೆ ಹಂಚಿದರು. ಆ ಶಾಸನದಲ್ಲಿ ಟಿಪ್ಪುಸುಲ್ತಾನರು ತಾವು ಕಟ್ಟಿಸುತ್ತಿರುವ ಅಣೆಕಟ್ಟಿನ ನೀರಿನಿಂದ (ಕೃಷ್ಣರಾಜಸಾಗರ ನಿರ್ಮಾಣಕ್ಕೆ ಎಷ್ಟೋ ವರ್ಷಗಳು ಮೊದಲು ಟಿಪ್ಪುಸುಲ್ತಾನರು ೭೦ ಅಡಿಗಳ ಎತ್ತರದ ಒಂದು

ಅಣೆಕಟ್ಟು ನಿರ್ಮಿಸಿದ್ದು, ಅದು ಹಾಳಾಗಿ ಹೋಗಿದೆ) ಬೇಸಾಯ ಮಾಡುವ ರೈತರು ಬೇರೆ ಕಡೆಗಳಲ್ಲಿ ತರಿ ವ್ಯವಸಾಯದ ರೈತರು ಕೊಡುವ ಕಂದಾಯದಲ್ಲಿ ರೂಪಾಯಿಗೆ ಹನ್ನೆರಡಾಣೆಯಷ್ಟನ್ನು ಮಾತ್ರ ಕೊಟ್ಟರೆ ಸಾಕೆಂದು ಉಳಿದ ನಾಲ್ಕಾಣೆಯನ್ನು ದೇವರ ಹೆಸರಿನಲ್ಲಿ ಧರ್ಮವಾಗಿ ಬಿಟ್ಟಿರುವುದಾಗಿಯೂ ಇದಕ್ಕೆ ವಿರೋಧವಾಗಿ ನಡೆದುಕೊಳ್ಳುವವರು ಸೈತಾನರು ಎಂದು ಅರ್ಥ ಬರುವ ರೀತಿಯಲ್ಲಿ ಬರೆಸಿದ್ದರು. ಪರ್ಷಿಯನ್ ಭಾಷೆಯಲ್ಲಿದ್ದ ಮೂಲ ಶಾಸನವನ್ನು ಅದರ ಇಂಗ್ಲೀಷ್ ಮತ್ತು ಕನ್ನಡ ಭಾಷಾಂತರಗಳನ್ನು ಬೇರೆ ಬೇರೆ ಶಿಲೆಗಳಲ್ಲಿ ಕೆತ್ತಿಸಿ ಸರ್ಕಾರದವರೇ ಅದನ್ನು ಕೃಷ್ಣರಾಜ ಸಾಗರದ ಹೆಬ್ಬಾಗಿಲಿನ ಮಂಟಪದಲ್ಲಿ ಸ್ಥಾಪಿಸಿದ್ದಾರೆ. ಅದರ ಪೂರ್ಣ ಪಾಠ ಈ ರೀತಿ ಇದೆ.

ಶುಭಮಸ್ತು

(ಕರುಣಾಳುವಾದ ಭಗವಂತನ ಹೆಸರಿನಲ್ಲಿ ಸ್ಥಾಪಿತವಾದುದು)

ಪೈಗಂಬರ್ ಮಹಮ್ಮದರ ಜನ್ಮದಿನದಿಂದ ಪ್ರಾರಂಭವಾದ ಸಾರಮಾನ ಶಕೆಯ ಸಾವಿರದ ಇನ್ನೂರ ಇಪ್ಪತ್ತೊಂದನೆಯ ಸಂವತ್ಸರವಾದ ಷಾದಾಬ್ ಶುಭವರ್ಷದ ತಕಿ ಮಾಸದ ಇಪ್ಪತ್ತೊಂಭತ್ತನೆಯ ತೇದಿಯಾದ ಸೋಮವಾರ ಶುಭದಿವಸ ಸೂರ್ಯೋದಯಾತ್ಪೂರ್ವ ಅರುಣೋದಯ ಕಾಲದಲ್ಲಿ ಶುಕ್ರಗ್ರಹಬಲಯುಕ್ತವಾದ ವೃಷಭ ಲಗ್ನದಲ್ಲಿ ಭಗವಂತನ ಛಾಯಾ ಸ್ವರೂಪರಾದ ಹಜರತ್ ಟಿಪ್ಪೂಸುಲ್ತಾನರಾದ ನಾವು ಇಷ್ಟಾರ್ಥ ಪ್ರದಾಯಕವಾದ ಭಗವಂತನ ಕೃಪೆಯಿಂದಲೂ ಪವಿತ್ರವಾದ ಕಲೀಫ್ ಪದವಿಯಲ್ಲಿದ್ದು ಜಗತ್ತಿಗೇ ಸಾರ್ವಭೌಮಪ್ರಾಯರಾಗಿದ್ದ ಪೈಗಂಬರ ಮಹಮದರ ಪ್ರೇರಣಾ ರೂಪವಾದ ದಿವ್ಯ ಸಹಾಯದಿಂದಲೂ ರಾಜಧಾನಿಗೆ ಪಶ್ಚಿಮದಿಕ್ಕಿನಲ್ಲಿ ಕಾವೇರೀ ನದಿಗೆ ಅಡ್ಡವಾಗಿ ಚಿರಸ್ಥಾಯಿಯಾದ ಅಣೆಯನ್ನು ಕಟ್ಟಿಸಲು ಶಂಕುಸ್ಥಾಪನೆ ಮಾಡಿದ್ದೇವೆ. ಈ ಕಾರ್ಯವು ಪ್ರಾರಂಭವಾದುದು ನಮ್ಮಿಂದ, ಇದು ಪೂರೈಸುವಂತೆ ಅನುಗ್ರಹಿಸುವುದು ಭಗವಂತನ ಅಧೀನದಲ್ಲಿದೆ. ಈ ಕಾರ್ಯವು ಪ್ರಾರಂಭವಾದ ದಿವಸ ಸೂರ್ಯಚಂದ್ರರೂ ಶುಕ್ರನೂ ಗುರುವೂ ಶುಭಯೋಗವುಂಟಾಗುವಂತೆ ಸೇರಿ ಫಲದಾಯಕರಾಗಿದ್ದಾರೆ.

ಇಲ್ಲಿ ನಿರ್ಮಿಸಲ್ಪಡುವ ಅಣೆಕಟ್ಟೆಯು ಸರ್ವೇಶ್ವರನಾದ ಭಗವಂತನ ಅನುಗ್ರಹದಿಂದ ಧ್ರುವನ ಕ್ಷತ್ರಮಂಡಲದೋಪಾದಿಯಲ್ಲಿ ಶಾಸ್ವತವಾಗಿ ನಿಲ್ಲಲಿ; ಜಗನ್ನಿಯಾಮಕನಾದ ಭಗವಂತನ ಅನುಗ್ರಹದಿಂದ ದೊರಕಿರುವ ನಮ್ಮ ಸರ್ಕಾರವು ವೆಚ್ಚ ಮಾಡಿರತಕ್ಕ ಲಕ್ಷೋಪಲಕ್ಷ ದನವೂ ಸಹ ಭಗವತ್ಪಾದಶೀರ್ವಾದವಾಗಿಯೇ ವೆಚ್ಚಮಾಡಲ್ಪಟ್ಟಿದೆ. ಹಿಂದೆ ಕೃಷಿಯಾಗದೆ ಇದ್ದ ಭೂಮಿಯನ್ನು ಯಾವ ಮನುಷ್ಯನು ವ್ಯವಸಾಯ ಮಾಡಿ ಧಾನ್ಯವನ್ನಾಗಲಿ ಇತರ ಬೆಳೆಯನ್ನಾಗಲಿ ಬೆಳೆಯುತ್ತಾನೋ ಅಂಥ ಮನುಷ್ಯನು ಈ ಮೊದಲೇ ಕೃಷಿಯಾಗುತ್ತಿರುವ ಜಮೀನುಗಳ ರೈರತು ನಮ್ಮ ಸರ್ಕಾರಕ್ಕೆ ಕೊಡುವ ತೆರಿಗೆಯ ಮುಕ್ಕಾಲು ಭಾಗದಷ್ಟನ್ನು ಮಾತ್ರ ಕೊಟ್ಟರೆ ಸಾಕು. ಉಳಿದ ಕಾಲುಭಾಗವನ್ನು ಭಗವತ್ಪ್ರೀತ್ಯರ್ಥವಾಗಿ ಧರ್ಮಕ್ಕೆ ಬಿಟ್ಟಿದೆ. ಹೊಸದಾಗಿ ಭೂಮಿಯನ್ನು ಸಾಗುವಳಿ ಮಾಡುವವರೆಲ್ಲರೂ ಪುತ್ರ ಪಾತ್ರ ಪಾರಂಪರ್ಯವಾಗಿ ಆಚಂದ್ರಾರ್ಕವಾಗಿ ಅವರವರ ಭೂ ಸ್ಥಿತಿಯನ್ನು ಅನುಭವಿಸಿಕೊಂಡು ಬರಬಹುದಾಗಿದೆ. ಶಾಶ್ವತವಾಗಿ ಕೊಟ್ಟಿರುವ ಈ ಕೊಡುಗೆಗೆ ಯಾವ ಮನುಷ್ಯನಾದರೂ ವಿಘ್ನಾಚರಣೆ ಮಾಡಿದರೆ ಅಥವಾ ಅದನ್ನು ತಪ್ಪಿಸಿದರೆ ಅಂಥ ಕ್ರೂರಾತ್ಮನು ಪಾಪಿಷ್ಟನಾದ ಸೈತಾನನೋಪಾದಿಯಲ್ಲಿ ಮನುಷ್ಯವರ್ಗಕ್ಕೆ ಶತ್ರುವೆಂದು ಭಾವಿಸಲ್ಪಡುವನು. ಅವನು ಇಲ್ಲಿಯ ರೈತರಿಗೆ ಮಾತ್ರವೇ ಅಲ್ಲದೆ ಅಖಿಲ ಜಗತ್ತಿಗೂ ದ್ರೋಹ ಮಾಡಿದವನೆಂದು ಭಾವಿಸಲ್ಪಡುವನು.

ಈ ಶಾಸನದ ಸಾವಿರಾರು ಕನ್ನಡ ಪ್ರತಿಗಳನ್ನು ಇರ್ವಿನ್ ನಾಲಾ ರೈತ ಸಂಘದವರು ಹಂಚಿದುದು ಸರ್ಕಾರದವರ ಕಣ್ಣು ಕೆಂಪಾಗುವಂತೆ ಮಾಡಿತು. ದಿವಾನರು ಆ ಜನಜಂಗುಳಿಯಲ್ಲಿ ಏನೂ ಮಾತನಾಡಲು ಸಾಧ್ಯವಾಗದೆ ಹಿಂದಿರುಗಿದರು.

ಸರ್ಕಾರದ ಹುಕ್ಕುಂ ಕಾರ್ಯಗತ ಮಾಡಲು ಹುಕ್ಕುಂನಲ್ಲಿ ಸೂಚಿಸಿರುವ ಅಂಶಗಳು ರೈತರ ಹಿತಕ್ಕೆ ಅನುಕೂಲವಾಗಿವೆಯೆಂದು, ಸರ್ಕಾರದ ಪರವಿದ್ದ ಕೆಲ ರೈತರಿಂದ ಹೇಳಿಸಿಕೊಂಡು, ಅದರ ಪ್ರಚಾರ ಮಾಡಿ ಇರ್ವಿನ್ ನಾಲಾ ರೈತರ ಸಂಘದವರು ಕೇವಲ ಚಳವಳಿಗ್ಗರರೆಂದು, ಅವರ ವಿಚಾರದಲ್ಲಿ ರೈತರಿಗೆ ಅಭಿಮಾನವಿಲ್ಲವೆಂದು, ಜನರಿಗೆ ಸುದ್ದಿ ಹರಡುವಂತೆ ಮಾಡಿದ ಸರ್ಕಾರದ ಹುನ್ನಾರು ಫಲಕಾರಿಯಾಗಲಿಲ್ಲ. ಸರ್ಕಾರದ ಈ ಯೋಜನೆಯ ವೈಫಲ್ಯಕ್ಕೆ ಮೂಲತಃ ಕಾರಣವಾಗಿದ್ದದ್ದು ರೈತಸಂಘದ ಮುಖಂಡತ್ವ ವಹಿಸಿದ್ದ ಹೆಚ್.ಕೆ.ವೀರಣ್ಣಗೌಡ ಸಮಯೋಚಿತ ನಿರ್ಧಾರಗಳು.

ತಮ್ಮ ಪತ್ರಿಕೆಯ ಮೂಲಕ ಬೆಂಗಳೂರಿನ ಗಣಪತಿ ಗಲಾಟೆಯ ಸಂದರ್ಭದಲ್ಲಿ ಸರ್ಕಾರದ ವೈಫಲ್ಯವನ್ನು ಹೆಚ್.ಕೆ.ವೀರಣ್ಣಗೌಡರು ಟೀಕಿಸಿದ್ದರು. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರನ್ನು ಸರ್ಕಾರದ ವಿರೋಧಿ ಎಂದು ತೀರ್ಮಾನಿಸಿ ಈ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರನ್ನು ಕೋರ್ಟಿಗೆ ಎಳೆದರೆ ರೈತ ಸಂಘಟನೆ ತನ್ನ ಬಿಗಿ ಕಳೆದುಕೊಳ್ಳುತ್ತದೆ, ಒಂದು ಕಲ್ಲನ್ನು ಕಿತ್ತರೆ ಇಡೀ ಕಟ್ಟಡದಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ ಎಂದು ಸರ್ಕಾರ ಭಾವಿಸಿತ್ತು. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಸರ್ಕಾರ ವೀರಣ್ಣಗೌಡರು ಇರ್ವಿನ್ ನಾಲಾ ರೈತರನ್ನು ಸರ್ಕಾರದ ವಿರುದ್ಧ ಎತ್ತಿ ಕಟ್ಟುತ್ತಿದ್ದಾರೆಂದು ಅವರನ್ನು ಒಳಗೊಂಡಂತೆ ಇನ್ನಿತರ ರೈತರ ಮೇಲೆ ಮೊಕದ್ದಮೆ (ಕೇಸು) ಯನ್ನು ದಾಖಲು ಮಾಡಿದರು. ಆದರೆ ಇದರಿಂದ ವೀರಣ್ಣಗೌಡರಾಗಲಿ, ರೈತರಾಗಲೀ ದೃತಿಗೆಡಲಿಲ್ಲ. ಸರ್ಕಾರದವರು ನಂತರ ಇರ್ವಿನ್ ನಾಲಾ ರೈತರನ್ನು ಬಹುಮುಖ ಪ್ರಯತ್ನದಿಂದ ಒಲಿಸಲು ಪ್ರಯತ್ನಿಸಿದರು. ಆದರೆ ರೈತಪರವಾಗಿ ನಿಂತಿದ್ದ ಇರ್ವಿನ್ ನಾಲಾ ರೈತ ಸಂಘದವರ ಪಟ್ಟು ಬಿಗಿಯಾಗಿತ್ತು. ರೈತರು ಕೇಳಿರುವ ರಿಯಾಯಿತಿಗಳನ್ನು ಸರ್ಕಾರದವರು ನಡೆಸಿಕೊಡುವವರೆಗೆ ರೈತರು ನಾಲಾ ನೀರನ್ನು ಉಪಯೋಗಿಸಿಕೊಳ್ಳಬಾರದೆಂದು ನಿರ್ಣಯವೊಂದನ್ನು ಅಂಗೀಕರಿಸಿ ಪ್ರಕಟಿಸಿದರು. ಇದರಿಂದ ನಾಲೆಗಳಲ್ಲಿ ನೀರು ಕೆಲವು ತಿಂಗಳ ಕಾಲ ನಿರರ್ಥಕವಾಗಿ ಹರಿಯಿತು.

ಇರ್ವಿನ್ ನಾಲಾ ರೈತ ಸಂಘದ ವತಿಯಿಂದ ರೈತ ಜಾಥಾದ ಮುಖಂಡತ್ವ ವಹಿಸಿದ್ದ ಹೆಚ್.ಕೆ.ವೀರಣ್ಣಗೌಡರನ್ನು ಸರ್ಕಾರದ ಪರವಾಗಿ ಒಲಿಸಿ ಕೊಳ್ಳಲು ನಾನಾ ಮಾರ್ಗವಾಗಿ ಪ್ರಯತ್ನಿಸಿದರು. ಅದರಲ್ಲಿ ಮಂಡ್ಯದ ತಾಲ್ಲೂಕಿನ ಕೊಡಿಯಾಲ ಹಳ್ಳಿಯಲ್ಲಿ ಕ್ಯಾಂಪ್ ಮಾಡಿದ್ದ ಅಸಿಸ್ಟೆಂಟ್ ಇಂಜನಿಯರೊಬ್ಬರು ಹೆಚ್.ಕೆ.ವೀರಣ್ಣಗೌಡರ ಸ್ನೇಹಿತರಾಗಿದ್ದು, ಅವರ ಮೂಲಕ ವೀರಣ್ಣಗೌಡರಿಗೆ ನೂರು ಎಕರೆ ನೀರಾವರಿ ಸೌಲಭ್ಯವುಳ್ಳ ಭೂಮಿಯನ್ನು ಕೊಡುವುದಾಗಿ, ಮತ್ತು ಹೆಚ್.ಕೆ.ವೀರಣ್ಣಗೌಡರು ರೈತ ಚಳವಳಿಯಿಂದ ಹಿಂದೆ ಸರಿಯಬೇಕೆಂದು ಒಪ್ಪಿಸಲು ಪ್ರಯತ್ನಿಸಿದರು. ಆದರೆ ಹೆಚ್.ಕೆ.ವೀರಣ್ಣಗೌಡರು ಇದಕ್ಕೆ ಒಪ್ಪದೆ ತಾವು ರೈತರ ಹಿತಾಸಕ್ತಿಗಾಗಿ ಹೋರಾಡುವವರೆಂಬ ತಮ್ಮ

ನಿಲುವನ್ನು ವ್ಯಕ್ತಪಡಿಸಿ ಸರ್ಕಾರದ ಪ್ರಯತ್ನಕ್ಕೆ ತಣ್ಣೀರೆರಚಿದರು. ಆದರೆ ಆಮಿಷಗಳಿಗೆ ಒಳಗಾಗದ ಹೆಚ್.ಕೆ.ವೀರಣ್ಣಗೌಡರ ಪ್ರಾಮಾಣಿಕತೆಯನ್ನು ಅರಿತ ಮಂಡ್ಯ ರೈತರು ಹೆಚ್.ಕೆ.ವೀರಣ್ಣಗೌಡರನ್ನು ಮಂಡ್ಯದಲ್ಲೇ ಶಾಶ್ವತವಾಗಿ ಉಳಿಸಿಕೊಳ್ಳಲು ಉಚಿತವಾಗಿ ಸಾಗುವಳಿಗೆ ಭೂಮಿಯನ್ನು ನೀಡಲು ಮುಂದೆ ಬಂದರು. ಆದರೆ ಪ್ರಾಮಾಣಿಕ, ಸ್ವಾಭಿಮಾನ ಮನೋಭಾವದ ಹೆಚ್.ಕೆ.ವೀರಣ್ಣಗೌಡರು ತಾವೇ ಜಮೀನು ಖರೀದಿಸಿ ರೈತರ ಪ್ರೀತಿ ವಿಶ್ವಾಸಕ್ಕೆ ಮಣಿದು ಮದ್ದೂರಿನಲ್ಲೇ ನೆಲೆಗೊಳ್ಳಲು ತೀರ್ಮಾನಿಸಿದರು. ಇರ್ವಿನ್ ನಾಲಾ ರೈತ ಸಂಘ ಹೊರಡಿಸಿದ ನಿರ್ಣಯದಂತೆ ರೈತರು ನಾಲಾ ನೀರನ್ನು ಉಪಯೋಗಿಸದೆ ನಡೆದುಕೊಂಡರು. ಆದರೆ 'ಸರ್ಕಾರದಿಂದ ಮತ್ತು ಸಹಕಾರ ಸಂಘಗಳಿಂದ ಸಾಲ ಪಡೆದು ಅನೇಕ ವರ್ಷಗಳಾದರೂ ಸಾಲ ತೀರಸದಿದ್ದವರು ಮತ್ತು ರೈತರಿಂದ ವಸೂಲಾದ ಕಂದಾಯ ಕೌಳಿಗೆಗಳನ್ನು ಕಿಸ್ತುವಾರು ಸರ್ಕಾರಕ್ಕೆ ಕಟ್ಟದೆ ದಸ್ತು ಮಾಡಿರುವ ಪಟೇಲರು ಮತ್ತು ಶ್ಯಾನುಭೋಗರು, ವ್ಯವಸಾಯಾಭಿವೃದ್ಧಿಗೆ ಸಾಲ ಕೊಡಬೇಕೆಂದು ಅರ್ಜಿ ಹಾಕಿಕೊಂಡಿದ್ದದಂತಹ ಜನರನ್ನು ಸರ್ಕಾರದ ಸ್ಥಳೀಯ ಅಧಿಕಾರಿಗಳು ಕರೆಸಿಕೊಂಡು ಅವರು ನಾಲೆ ನೀರು ಉಪಯೋಗಿಸಿಕೊಳ್ಳುವುದಾದರೆ ಅವರ ಮೇಲೆ ಯಾವ ಕ್ರಮವನ್ನೂ ಜರುಗಿಸುವುದಿಲ್ಲವೆಂದು ಅದಕ್ಕೆ ಬದಲಾಗಿ ಸರ್ಕಾರದವರೇ ವ್ಯವಸಾಯದ ಇಲಾಖೆಯ ಮೂಲಕ ಎಲ್ಲಾ ಸಹಾಯಗಳನ್ನು ಅಂಥವರಿಗೆ ಒದಗಿಸಿಕೊಟ್ಟು ಅವರವರ ಜಮೀನುಗಳಲ್ಲಿ ಸಾಗುವಳಿ ಮಾಡಿಸಿ ಅದರಿಂದ ಬರುವ ಸಂಪಾದನೆಯಲ್ಲಿ ಕಂತುವಾರಾಗಿ ಸರ್ಕಾರದ ಸಾಲ ವಜಾ ಮಾಡಿಕೊಂಡು ಉಳಿದುದನ್ನು ಆಯಾ ರೈತರಿಗೆ ಕೊಡುವುದೇ ಸರ್ಕಾರದ ಅಭಿಪ್ರಾಯವೆಂದು ಭರವಸೆ ಕೊಟ್ಟರು. ನಾಲೆ ನೀರು ಉಪಯೋಗಿಸಿಕೊಳ್ಳಲು ಒಪ್ಪುವುದರಿಂದ ತಾವು ಜೈಲಿಗೆ ಹೋಗುವುದು ತಪ್ಪಿ ಸರ್ಕಾರದ ಹಿಡಿತದಿಂದ ಪಾರಾಗುವುದು ಮಾತ್ರವಲ್ಲದೆ ಹೆಚ್ಚು ಖರ್ಚಿಲ್ಲದೆ ಸರ್ಕಾರದ ಸಹಾಯದಿಂದ ಬೇಸಾಯ ಮಾಡಿ ಹಣ ಗಳಿಸುವುದಕ್ಕೆ ಇದಕ್ಕಿಂತಲೂ ಒಳ್ಳೆ ಅವಕಾಶ ಸಿಕ್ಕುವುದಿಲ್ಲವೆಂದು ಅಂತಹ ರೈತರು ಭಾವಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗೆ ನೋಡಿದರೆ ಸಾಗುವಳಿಗೆ ನೀರಿಲ್ಲದೆ ಒಣಪ್ರದೇಶದಲ್ಲಿ ಅರ್ಧಂಬರ್ಧ ಕುಷ್ಕಿ ಬೆಳೆಯಿಂದ ಜೀವನ ಮಾಡುತ್ತಿದ್ದವರು ತಮ್ಮ ಜಮೀನು ಪಕ್ಕದಲ್ಲೇ ಕಾವೇರಿ ತಾಯಿ ಹರಿಯುತ್ತಿರುವಾಗ ಸುಮಾರು ಎರಡು ವರ್ಷಗಳ ಕಾಲ ನಾಲೆ ನೀರಿಗೆ ಆಸೆ ಪಡದಿದುದೇ ಹೆಚ್ಚು. ೨ನೇಯದಾಗಿ ಸರ್ಕಾರ ಅನೇಕ ರೈತ ಮುಖಂಡರ ಮೇಲೆ ಕೇಸುಗಳನ್ನು ಹಾಕಿತ್ತು. ಮೊಕದ್ದಮೆಗಳಿಗೆ ಒಳಪಟ್ಟಿರುವ ಮನೆಯವರನ್ನು ಬಂಧುಗಳನ್ನು ಅಧಿಕಾರಿಗಳು ಸಂಧಿಸಿ ನೀರು ತೆಗೆದುಕೊಳ್ಳುತ್ತೇವೆಂದು ಮುಚ್ಚಳಿಕೆ ಬರೆದುಕೊಡುವುದಾದರೆ ಅಂತಹವರ ಮೇಲಿನ ಮೊಕದ್ದಮೆಗಳನ್ನು ಸರ್ಕಾರದವರು ಹಿಂದೆಗೆದುಕೊಳ್ಳುವರೆಂಬ ಆಮಿಷಗಳನ್ನು ತೋರಿಸಿದರು. ಅವರು ಆ ರೀತಿ ಮಾಡದಿದ್ದರೆ ರೈತರಿಗೆ ಜೈಲು ಶಿಕ್ಷೆಯಾಗುವುದು ಖಂಡಿತವೆಂದು ಹೆದರಿಸಿದರು. ಆಗಿನ ಕಾಲದಲ್ಲಿ ಜನರು ಜೈಲಿಗೆ ಹೋಗುವುದೆಂದರೆ ಅವಮಾನಕರ ಎಂದು ತಿಳಿದಿದ್ದರು. ಈ ರೀತಿಯ ಭಾವನೆಯಿಂದ ಅನೇಕ ರೈತರು ನಾಲಾ ನೀರು ಉಪಯೋಗಿಸಿಕೊಂಡು ಸಾಗುವಳಿ ಮಾಡಲು ಒಪ್ಪಿ ಮುಚ್ಚಳಿಕೆಗಳನ್ನು ಬರೆದುಕೊಟ್ಟರು. ಅಂತಹವರ ಜಮೀನುಗಳಲ್ಲಿ ವ್ಯವಸಾಯದ ಇಲಾಖೆಯವರು ಸರ್ಕಾರದಿಂದ ಕಬ್ಬಿಣದ ನೇಗಿಲು

ಮುಂತಾದ ಆಧುನಿಕ ವ್ಯವಸಾಯೋಪಕರಣಗಳನ್ನು ಉತ್ತಮವಾದ ಬೀಜಗೊಬ್ಬರಗಳನ್ನು ಒದಗಿಸಿಕೊಟ್ಟುದಲ್ಲದೆ, ತಾವೇ ಸ್ವತಃ ನಿಂತು ವ್ಯವಸಾಯ ಮಾಡಿಸಿಕೊಟ್ಟರು. ಇಂತಹ ಜಮೀನುಗಳಲ್ಲಿ ಕಡಲೆಕಾಯಿ, ಭತ್ತ ಮುಂತಾದ ಬೆಳೆಗಳು ಹುಲುಸಾಗಿ ಬೆಳೆದು ಅವು ಕಣ್ಮನಗಳನ್ನು ಆಕರ್ಷಿಸುತ್ತಿದ್ದವು. ಆ ಬೆಳೆಗಳನ್ನು ಕಟಾವು ಮಾಡಿಸಿ ಸರ್ಕಾರಕ್ಕೆ ಬರಬೇಕಾಗಿದ್ದ ಸಾಲಕ್ಕಾಗಿ ಸ್ವಲ್ಪ ಭಾಗ ಮಾತ್ರ ಹಿಡಿದುಕೊಂಡು ಉಳಿದ ಹಣವನ್ನು ಆಯಾ ರೈತರಿಗೆ ಕೊಡುತ್ತಿದ್ದರು. ಇದು ಇತರ ರೈತರ ಬಾಯಲ್ಲಿ ನೀರೂರುವಂತೆಯೂ ಮಾಡಿತು. ಅನೇಕ ರೈತರು ವೀರಣ್ಣಗೌಡರ ಮಾತು ಕೇಳದಿದ್ದರೆ ನಮಗೂ ಈ ರೀತಿ ಹಣ ಸಂಪಾದನೆಯಾಗುತ್ತಿತ್ತು, ಎಂದು ಬಹಿರಂಗವಾಗಿ ಗೊಣಗಿಕೊಳ್ಳುವುದಕ್ಕೂ ಪ್ರಾರಂಭಿಸಿದರು.'[೫೯] ಆದರೆ ರೈತರು ತಮ್ಮ ಚಳುವಳಿಯ ಫಲವಾಗಿ ಸರ್ಕಾರ ರೈತರಿಗೆ ಅನುಕೂಲ ಮಾಡಿಕೊಡಲು ಮತ್ತು ತಾವು ನಿರ್ಮಿಸಿದ ನಾಲೆಯ ನೀರು ವ್ಯರ್ಥವಾಗಿ ಹೋಗಬಾರದೆಂದು ಇಷ್ಟರ ಮಟ್ಟಿಗೆ ಮೃದು ಭಾವನೆ ಹೊಂದುವುದಕ್ಕೆ ಸಾಧ್ಯವಾಯಿತು ಎಂಬುದನ್ನು ಮರೆತು ವೀರಣ್ಣಗೌಡರ ಬಗ್ಗೆ ಆಡಿಕೊಳ್ಳಲಾರಂಭಿಸಿದರು.

ಅನೇಕ ರೈತ ಮುಖಂಡರ ಮೇಲೆ ಹೂಡಿದ್ದ ಮೊಕದ್ದಮೆಗಳ ವಿಚಾರಣೆ ನಡೆಯುತ್ತಲೇ ಇತ್ತು. ಸನ್ನಡತೆಗಾಗಿ ಹಾಕಿದ್ದ ಮೊಕದ್ದಮೆ ಫಸ್ಟ್ ಕ್ಲಾಸ್ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲೂ ನಿಷೇದಾಜ್ಞೆ ಉಲ್ಲಂಘನೆ ಕೇಸು ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲೂ ನಡೆಯುತ್ತಿದ್ದವು. ಅಲ್ಲಿ ವಿಚಾರಣೆ ನಡೆಸುತ್ತಿದ್ದ ಮ್ಯಾಜಿಸ್ಟ್ರೇಟರು ವೀರಣ್ಣಗೌಡರಿಗೆ ಗೊತ್ತಿದ್ದವರು. ಬೆಂಗಳೂರಿನ ಗಣಪತಿ ಗಲಭೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಪಾತ್ರವೇನೆಂದು ಅರಿತು ಅವರನ್ನು ಅಭಿನಂದಿಸಿದ್ದರು. ಆದರೆ ಕೋರ್ಟಿನಲ್ಲಿ ತಮ್ಮ ಸ್ಥಾನಕ್ಕೆ ತಕ್ಕಂತೆ ನಡೆದುಕೊಂಡು ಕೇಸಿನ ತೀರ್ಪಿನ ದಿನ ವೀರಣ್ಣಗೌಡರಿಗೆ ೫೫ ರೂಪಾಯಿ ಜುಲ್ಮಾನೆ ವಿಧಿಸುವುದರ ಮೂಲಕ ಹೆಚ್.ಕೆ.ವೀರಣ್ಣಗೌಡರು ಹೈಕೋರ್ಟಿಗೆ ಹೋಗುವುದನ್ನು ತಪ್ಪಿಸಿ ಜಿಲ್ಲಾ ಕೋರ್ಟಿಗೆ ಅಫೀಲು ಮಾಡಲು ತಿಳಿಸಿದ್ದರು. ಜಿಲ್ಲಾ ಕೋರ್ಟಿನಲ್ಲಿ ಹೆಚ್.ಕೆ.ವೀರಣ್ಣಗೌಡರ ಕೇಸು ವಜಾ ಮಾಡಲ್ಪಡುವುದರಿಂದ ಹೆಚ್.ಕೆ.ವೀರಣ್ಣಗೌಡರಿಗೆ ಈ ರೀತಿಯಾಗಿ ತಾವು ಸಹಾಯ ಮಾಡಿದಂತಾಗುತ್ತದೆಂದು ಜುಲ್ಮಾನೆ ವಿಧಿಸಿದ್ದರು. ಇದರಿಂದ ಒಬ್ಬ ಪ್ರಾಮಾಣಿಕ, ಸತ್ಪ್ರಜೆಯನ್ನು ಗುರ್ತಿಸಿದ ಉನ್ನತ ಅಧಿಕಾರಿ ತನ್ನ ಪರಿಮಿತಿಯಲ್ಲಿ ಆತನನ್ನು ರಕ್ಷಿಸುವ ಮೂಲಕ ಆತನ ಸೇವೆಯನ್ನು ದೇಶಕ್ಕೆ ಮತ್ತಷ್ಟು ಒದಗಿಸಿಕೊಟ್ಟರು. ಹೆಚ್.ಕೆ.ವೀರಣ್ಣಗೌಡರು ತಮ್ಮ ಭವಿಷ್ಯದ ಬದುಕಿನಲ್ಲಿ ಜನಪರವಾದ ನಿಲುವು ತಳೆಯುವ ಮೂಲಕ ಖ್ಯಾತಿಯಿಂದ ಕಾರ್ಯವೆಸಗಲು ಸಹಾಯಕವಾಯಿತು.

ಸನ್ನಡತೆ ಬಗ್ಗೆ ನಡೆಯುತ್ತಿದ್ದ ಮೊಕದ್ದಮೆ ಸಮಯದಲ್ಲಿ ವೇದವ್ಯಾಸಾಚಾರ್ ಎಂಬ ಮ್ಯಾಜಿಸ್ಟ್ರೇಟರ ಮುಂದೆ ವೀರಣ್ಣಗೌಡರು ತಮ್ಮ ಉದ್ಯೋಗದ ಬಗ್ಗೆ ವಿವರಣೆ ನೀಡುವಾಗ ನಿರ್ಭೀಡೆಯಿಂದ ಫ್ರೀಲ್ಯಾನ್ಸ್ ಜರ್ನಲಿಸಂನ ಬಗೆಗೆ ಮ್ಯಾಜಿಸ್ಟ್ರೇಟರಿಗಿದ್ದ ತಪ್ಪು ತಿಳುವಳಿಕೆಯನ್ನು

---

[೫೯] ಬದುಕು -ಮೆಲುಕು, ಹೆಚ್.ಕೆ.ವೀರಣ್ಣಗೌಡ. ೧೯೭೪ . ಪುಟ -೧೪೭,೧೪೯

ಅಲ್ಲಗಳೆದು ಫ್ರೀಲ್ಯಾನ್ಸ್ ಜರ್ನಲಿಸಂ ಎಂದರೆ 'ಮನಸ್ಸಿಗೆ ಬಂದಂತೆ ಹುಚ್ಚಾಪಟ್ಟೆ ಬರೆಯುವುದಲ್ಲ ಯಾವ ಪತ್ರಿಕೆಗೂ ಅಂಟಿಕೊಳ್ಳದೆ ಆಗಿಂದಾಗ್ಗೆ ಲೇಖನಗಳನ್ನು ವರದಿಗಳನ್ನು ಬರೆದು ಬೇರೆ ಬೇರೆ ಪತ್ರಿಕೆಗಳಿಗೆ ಕಳುಹಿಸುವುದು. ಅದಕ್ಕಾಗಿ ಗೊತ್ತಾಗಿರುವ ಸಂಭಾವನೆಯನ್ನು ಪಡೆದುಕೊಳ್ಳುವುದು, ಎಂದರ್ಥ' ಎಂದು ವಿವರಿಸಿದರು. ಹೆಚ್.ಕೆ.ವೀರಣ್ಣಗೌಡರು ಪತ್ರಿಕಾ ಮಾದ್ಯಮದ ಬಗ್ಗೆ ಸಾಕಷ್ಟು ತಿಳುವಳಿಕೆಯನ್ನು ಹೊಂದಿದ್ದ ಒಬ್ಬ ಜವಾಬ್ದಾರಿಯುತ ಪತ್ರಕರ್ತರಾಗಿದ್ದರು ಎಂಬುದಕ್ಕೆ ಈ ಸಂಗತಿ ಸಾಕ್ಷಿಯಾಗಿದೆ. ಇದರಿಂದ ವಿಚಲಿತರಾಗದೆ ಮ್ಯಾಜಿಸ್ಟ್ರೇಟರು ಹೆಚ್.ಕೆ.ವೀರಣ್ಣಗೌಡರ ಕ್ಷಮೆಯಾಚಿಸಿದರು. ನಂತರ ವಿಚಾರಣೆ ಮುಂದುವರೆಸಿದರು. ಕೆಲವು ತಿಂಗಳು ಕೇಸು ನಡೆದ ಮೇಲೆ ಅದನ್ನು ಸರ್ಕಾರದವರು ಹಿಂತೆಗೆದುಕೊಂಡರು. ಅಷ್ಟರಲ್ಲಿ ನಾಲಾ ಪ್ರದೇಶದ ರೈತರೆಲ್ಲರೂ ಸರ್ಕಾರ ರೈತರ ಬಗ್ಗೆ ವಹಿಸಿದ ಕಾಳಜಿಯಿಂದಾಗಿ ನೀರು ತೆಗೆದುಕೊಳ್ಳುವುದಕ್ಕೆ ಒಪ್ಪಿ ಮುಚ್ಚಳಿಕೆ ಬರೆದುಕೊಟ್ಟಿದ್ದರು. ಈ ಕಾರಣದಿಂದ ಇರ್ವಿನ್ ನಾಲಾ ರೈತರ ಸಂಘದ ಚಟುವಟಿಕೆಗಳು ಕೊನೆಗೊಂಡಂತಾಯಿತು.

ಇರ್ವಿನ್ ನಾಲಾ ಚಳವಳಿ ರೈತರಲ್ಲಿ ನಿರಂಕುಶ ಪ್ರಭುತ್ವದ ವಿರುದ್ಧ ಧ್ವನಿ ಎತ್ತುವ ಶಕ್ತಿ ನೀಡಿತು. ಹಾಗೆಯೇ ಸರ್ಕಾರಕ್ಕೆ ಒಂದು ಪಾಠವಾಗಿ ಪರಿಣಮಿಸಿತು. ಇದರಿಂದ ಸರ್ಕಾರಕ್ಕೆ ತನ್ನ ಯಾವುದೇ ನೀತಿ ಅನುಷ್ಠಾನಗೊಳಿಸಬೇಕೆಂದರೆ ಅದು ಜನಪರವಾಗಿದ್ದು ಜನಮನ್ನಣೆಯನ್ನು ಗಳಿಸಬೇಕೆಂಬುದನ್ನು ಮನದಟ್ಟು ಮಾಡಿಕೊಟ್ಟಿತು. ಇರ್ವಿನ್ ನಾಲಾ ಚಳವಳಿಯ ಮೂಲ ಉದ್ದೇಶ ಬಹಳಷ್ಟು ಮಟ್ಟಿಗೆ ಈಡೇರದೇ ಹೋದರೂ(ಸರ್ಕಾರ ಕಾಂಟ್ರಿಬ್ಯೂಷನ್ ಶುಲ್ಕವನ್ನು ಅದರ ಮೇಲಿನ ಬಡ್ಡಿದರವನ್ನು ಸಂಪೂರ್ಣ ವಜಾ ಮಾಡಲಿಲ್ಲ) ಜನತೆಯಲ್ಲಿ ರಾಜಕೀಯ ಪ್ರಜ್ಞೆಯನ್ನು, ಪ್ರಶ್ನಿಸುವ ಶಕ್ತಿಯನ್ನು ಹುಟ್ಟು ಹಾಕುವುದರಲ್ಲಿ ತನ್ನ ಮಹತ್ತರ ಪಾತ್ರವನ್ನು ವಹಿಸಿತ್ತೆನ್ನಬಹುದು. ಹಾಗೆಯೇ ಹೆಚ್.ಕೆ.ವೀರಣ್ಣಗೌಡರ ಸಂಘಟನಾ ಸಾಮರ್ಥ್ಯವನ್ನು ಮತ್ತು ಅವರಿಗಿದ್ದ ರೈತಪರ ಕಾಳಜಿಯನ್ನು ಅನಾವರಣಗೊಳಿಸಿತು. ಇದರಿಂದ ಹೆಚ್.ಕೆ.ವೀರಣ್ಣಗೌಡರು ಮುಂದೆ ಭವಿಷ್ಯದಲ್ಲಿ ಮುಖಂಡರಾಗಿ, ಜನಪ್ರತಿನಿಧಿಯಾಗಿ ಬೆಳೆಯಲು ವೇದಿಕೆಯಾಯಿತು ಎನ್ನಬಹುದು. ಪ್ರೊ। ಡಿ.ಲಿಂಗಯ್ಯನವರು ಹೇಳುವಂತೆ " ರೈತ ಪರವಾಗಿ ಹೋರಾಡುವ ಜವಾಬ್ದಾರಿ ವೀರಣ್ಣಗೌಡರಿಗೆ ಕೊನೆಯವರೆಗೂ ತಪ್ಪಲಿಲ್ಲ. ರೈತರ ಮಗನಾಗಿ ಹುಟ್ಟಿ, ರೈತರ ನಡುವೆ ಬೆಳೆದು ರೈತರಿಗೆ ಸಂಬಂಧಿಸಿದ ಇಲಾಖೆಯ ಮಂತ್ರಿಯಾಗಿದ್ದ ಅವರಿಗೆ ರೈತ ಸಂಘಟನೆಯ ಮುಂದಾಳತ್ವ ವಹಿಸುವ ಅವಕಾಶಗಳು ಬರುತ್ತಲೇ ಇದ್ದುದರಲ್ಲಿ ಆಶ್ಚರ್ಯವಿಲ್ಲ. ಮೈಸೂರು ಸಂಸ್ಥಾನದಲ್ಲಿ ಭೂಸುಧಾರಣೆ ಮಾಡಬೇಕೆಂದು ಕಾಂಗ್ರೆಸ್ ಪಕ್ಷ ಪ್ರಯತ್ನಿಸಿದಾಗ ರೈತರ ಹಿತರಕ್ಷಿಸುವ ಅನಿವಾರ್ಯ ಪರಿಸ್ಥಿತಿ ಉಂಟಾಯಿತು. ಭೂಮಿತಿ ಕಾಯಿದೆ ಜಾರಿಗೆ ಬರಬೇಕಾದ ಕ್ರಮಗಳ ಬಗೆಗೆ ಜನಜಾಗೃತಿ ಉಂಟುಮಾಡುವುದು ಅಗತ್ಯವಾಯಿತು. ಒಂದು ಸಂಸಾರಕ್ಕೆ ನಲವತ್ತು ಎಕರೆ ನೀರಾವರಿ ಜಮೀನು ಇರಬೇಕೇ ಅಥವಾ ಕೇವಲ ಇಪ್ಪತ್ತೇಳು ಎಕರೆ ಇದ್ದರೆ ಸಾಕೇ ಎಂಬುದು ಚರ್ಚೆಯ ಮುಖ್ಯ ವಿಷಯವಾಯಿತು. ಸರ್ಕಾರ ಒಂದು ಸಂಸಾರಕ್ಕೆ ಹತ್ತು ಹನ್ನೆರಡು ಎಕರೆ ಭೂಮಿಯನ್ನು ನಿಗದಿಮಾಡುವಂತಹ ಪ್ರಕಟಣೆಯನ್ನು ಹೊರಡಿಸಿತು. ಈ ಬಗ್ಗೆ ಪ್ರತಿಭಟಿಸಲು ಶ್ರೀರಾಮರೆಡ್ಡಿ, ಎಚ್.ಎಸ್.ರುದ್ರಪ್ಪ,ಎನ್.ಸಿ.ತಿಮ್ಮಾರೆಡ್ಡಿಯವರು, ಹೆಚ್.ಕೆ.ವೀರಣ್ಣಗೌಡರ

ಸಹಕಾರ ಕೋರಿದರು. ರೈತರ ಹಿತರಕ್ಷಣೆಗಾಗಿಯೇ ಜೀವನವನ್ನು ಮುಡುಪಾಗಿಟ್ಟಿದ್ದ ಹೆಚ್.ಕೆ.ವೀರಣ್ಣಗೌಡರು ದಿನಾಂಕ ೧.೮.೧೯೭೨ ರಂದು ನಡೆದ ರೈತ ಮುಖಂಡರ ಸಭೆಯ ಅಧ್ಯಕ್ಷತೆ ವಹಿಸಿದರು. "ಮೈಸೂರು ಪ್ರದೇಶದ ರೈತ ಮತ್ತು ರೈತ ಕಾರ್ಮಿಕ ಸಂಘ"ದ ಅಧ್ಯಕ್ಷರಾಗಿ ಹೋರಾಟಕ್ಕೆ ಇಳಿದರು. ಬೆಂಗಳೂರಿನಲ್ಲಿ ರೈತರ ಬೃಹತ್ ಸಮ್ಮೇಳನ ನಡೆಸಲು ಕಾರ್ಯೋನ್ಮುಖರಾದರು. ಅದಕ್ಕಾಗಿ ಸ್ನೇಹಿತರೊಡನೆ ರಾಜ್ಯದ ಹಲವು ಭಾಗಗಳಲ್ಲಿ ದೀರ್ಘ ಪ್ರವಾಸ ಮಾಡಿ, ರೈತರಲ್ಲಿ ತಿಳಿವಳಿಕೆ ಮೂಡಿಸಿದರು" . . . ನಂಜನಗೂಡು, ಕೋಲಾರ ಜಿಲ್ಲೆಗಳಲ್ಲಿ ನಡೆದ ರೈತ ಸಭೆಗಳಿಗೆ ಅಧ್ಯಕ್ಷರೂ ಆಗಿದ್ದರು. ಇಳಿವಯಸ್ಸಿನಲ್ಲೂ ರೈತರ ಬಗೆಗಿನ ಕಾಳಜಿ ಇಟ್ಟುಕೊಂಡಿದ್ದ ಗೌಡರು, ರೈತರ ಹಿತರಕ್ಷಣೆಯ ಆಶಾಕಿರಣವಾಗಿದ್ದರು. ಅವರ ನಿರಂತರ ಹೋರಾಟದಿಂದ ರಾಜ್ಯದಲ್ಲಿ ರೈತ ಸಂಘಟನೆಯ ವ್ಯವಸ್ಥಿತವಾದ ಅಸ್ಥಿತ್ವ ರೂಪುಗೊಳ್ಳಲು ಕಾರಣವಾಯಿತು ಎನ್ನಬಹುದು".[೬೦] ಡಿ.ಲಿಂಗಯ್ಯನವರ ಈ ಯಾವ ಮಾತುಗಳಲ್ಲೂ ಉತ್ಪ್ರೇಕ್ಷೆ ಇಲ್ಲ. ಹೆಚ್.ಕೆ.ವೀರಣ್ಣಗೌಡರ ರೈತಪರ ಕಾಳಜಿಯನ್ನು ಗುರುತಿಸಿ ಸಹಜವಾಗಿಯೇ ನುಡಿದ ಮಾತುಗಳಿವು.

ಅಂದು ಮೈಸೂರು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟಿರದೆ ದೇಶೀಯ ಸಂಸ್ಥಾನವಾಗಿತ್ತು. ಅಲ್ಲಿ ದಿವಾನರ ಆಡಳಿತವಿತ್ತು. ರಾಷ್ಟ್ರೀಯತೆಯ ಭಾವದಿಂದ ಹೋರಾಟದ ಮನೋಭಾವ ಮೈಗೂಡಿಸಿಕೊಂಡು ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವತ್ತ ಸಾಗುತ್ತಿದ್ದ ಯುವಕರ ಮೇಲೆ ಅಂದಿನ ಸರ್ಕಾರ ಕಣ್ಗಾವಲಿರಿಸಿ ಅವರು ಸಂಸ್ಥಾನದಲ್ಲಿ ಯಾವುದೇ ರೀತಿಯ ದಂಗೆಗೆ ಕಾರಣವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ದಮನ ನೀತಿ ಅನುಸರಿಸುವ ಮೂಲಕ ಅಂತಹ ಚಟುವಟಿಕೆಗಳ ಮೇಲೆ, ಹೋರಾಟಗಳನ್ನು ಸಂಘಟಿಸುತ್ತಿದ್ದ, ಪಾಲ್ಗೊಳ್ಳುತ್ತಿದ್ದ ವ್ಯಕ್ತಿಗಳ ಮೇಲೆ ನಿಗ ಇಡಲು ಗೂಢಾಚಾರರನ್ನು(ಸಿ.ಐ.ಡಿ) ನೇಮಿಸಿ, ಅವರುಗಳ ಚಲನವಲನಗಳನ್ನು ಗಮನಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಅಂದರೆ ೧೯೨೦-೩೦ ರ ದಶಕಗಳಲ್ಲಿ ಹೆಚ್.ಕೆ.ವೀರಣ್ಣಗೌಡರ ಮೇಲೂ ಸಿ.ಐ.ಡಿ.ಗಳ ಕಣ್ಗಾವಲಿತ್ತು. ಇರ್ವಿನ್ ನಾಲಾ ಚಳವಳಿಯ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಮೇಲೆ ಕಣ್ಗಾವಲನ್ನು ಮತ್ತಷ್ಟು ಬಿಗಿಗೊಳಿಸಲಾಗಿತ್ತು.

ಇರ್ವಿನ್ ನಾಲಾ ಚಳವಳಿಯಿಂದಾಗಿ ರೈತರ ಕಷ್ಟ ನಷ್ಟಗಳಿಗೆ ಸ್ಪಂದಿಸಿದ ಹೆಚ್.ಕೆ.ವೀರಣ್ಣಗೌಡರನ್ನು ಚಳವಳಿ ನಂತರ ಮದ್ದೂರಿನಲ್ಲೇ ಉಳಿಸಿಕೊಳ್ಳಲು ೧೯೩೩ರಲ್ಲಿ ನಡೆಯಲಿದ್ದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸಾರ್ವಜನಿಕ ಚುನಾವಣೆಯಲ್ಲಿ ಮದ್ದೂರು ಕ್ಷೇತ್ರದಿಂದ ಉಮೇದುವಾರನಾಗಿ ನಿಲ್ಲಲು ಒತ್ತಾಯಿಸಿದರು. ಹೆಚ್.ಕೆ.ವೀರಣ್ಣಗೌಡರು ಸ್ಪರ್ಧಿಸಿ ಸೋತರು. ರೈತರ ಪರವಾಗಿ ಹೋರಾಡಿದ್ದರೂ ಸ್ಥಳೀಯರಲ್ಲ ಎಂಬ ಕಾರಣದಿಂದ ಜನರು ಮಾಡಿದ ಈ ಕ್ಷುಲ್ಲಕ ರಾಜಕೀಯದಿಂದ ಸೋಲನ್ನು ಅನುಭವಿಸಬೇಕಾಯಿತು. ಮದ್ದೂರನ್ನು ಬಿಟ್ಟು ಬೆಂಗಳೂರಿನಲ್ಲಿ ನೆಲೆಸಲು ತೀರ್ಮಾನಿಸಿ ಹೆಂಡತಿಯೊಡನೆ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು. ಬೆಂಗಳೂರಿನಲ್ಲಿ ಸುಮಾರು

---

[೬೦] ಪ್ರೊ। ಡಿ.ಲಿಂಗಯ್ಯ, ಹೆಚ್.ಕೆ.ವೀರಣ್ಣಗೌಡ ಸಂಕ್ಷಿಪ್ತಜೀವನ ಚರಿತ್ರೆ,೧೯೯೯, ಪುಟ-೪೫,೪೬

ಒಂದೂವರೆ ಎರಡು ವರ್ಷಗಳ ಕಾಲ ಒಕ್ಕಲಿಗರ ಪತ್ರಿಕೆ ಸೇರಿದಂತೆ ಇತರ ಪತ್ರಿಕೆಗಳಿಗೆ ಲೇಖನ ಬರೆದುಕೊಡುತ್ತಾ ದಿನ ದೂಡುತ್ತಿದ್ದರು. ಆದರೆ ಸಾರ್ವಜನಿಕ ಸೇವೆಗಾಗಿ ಯಾವಾಗಲೂ ತುಡಿಯುತ್ತಿದ್ದ ಹೆಚ್.ಕೆ.ವೀರಣ್ಣಗೌಡರು ಇದರಿಂದ ಯಾವುದೇ ಸಾಧನೆ ಮಾಡಿದಂತೆ ಆಗುವುದಿಲ್ಲವೆಂದು ಮನಗಂಡು ಮತ್ತೆ ಮದ್ದೂರಿಗೆ ಮರಳಿ ವ್ಯವಸಾಯದಲ್ಲಿ ನಿರತರಾದರು. ಹಾಗೆಯೇ ಸ್ಥಳೀಯ ಚುನಾವಣೆಗಳಲ್ಲಿ ಸ್ಪರ್ಧಿಸಿ ಜಯಗಳಿಸಿದರು. ಹೀಗೆ ಮೈಸೂರು ಜಿಲ್ಲಾ ಬೋರ್ಡಿನ ಸದಸ್ಯರಾಗಿ, ಮೈಸೂರು ಜಿಲ್ಲಾ ಎಜುಕೇಷನ್ ಬೋರ್ಡಿನ ಸದಸ್ಯರಾಗಿ, ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ, ಮದ್ದೂರು ಪುರಸಭೆಗೆ ಉಪಾಧ್ಯಕ್ಷರಾಗಿ ಕಾರ್ಯನಿರತರಾದರು.

### ೪.೩ ಶಿವಪುರ ಧ್ವಜ ಸತ್ಯಾಗ್ರಹ :

ಮದ್ದೂರು ಪುರಸಭೆಯ ಉಪಾಧ್ಯಕ್ಷರಾಗಿ ಕಾಂಗ್ರೆಸ್ ಕಾರ್ಯದಲ್ಲಿ ನಿರತರಾಗಿದ್ದ ಹೆಚ್.ಕೆ.ವೀರಣ್ಣಗೌಡರು ತದನಂತರದಲ್ಲಿ ಮೈಸೂರು ಕಾಂಗ್ರೆಸನ್ನು ಭದ್ರಗೊಳಿಸುವ ನಿಟ್ಟಿನಲ್ಲಿ ಶಿವಪುರ ಧ್ವಜ ಸತ್ಯಾಗ್ರಹವನ್ನು ನಡೆಸುವ ಹೊಣೆಯನ್ನು ಹೊರಬೇಕಾದ ಸಂದರ್ಭ ಒದಗಿಬಂತು.

ರಾಷ್ಟ್ರೀಯ ಯುವ ಕಾಂಗ್ರೆಸ್ ಮೊದಲಿನಿಂದಲೂ ದೇಶೀಯ ಸಂಸ್ಥಾನಗಳ ವ್ಯವಹಾರದಲ್ಲಿ ಕೈಹಾಕಲು ಇಚ್ಛಿಸದೆ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ದೇಶೀಯ ಸಂಸ್ಥಾನಗಳ ಜನತಾ ಸಮ್ಮೇಳನಗಳ ಮೂಲಕ ಪ್ರಜೆಗಳ ನ್ಯಾಯ ಬದ್ದ ರಾಜಕೀಯ ಆಶೋತ್ತರಗಳಿಗೆ ನೈತಿಕ ಬೆಂಬಲ ನೀಡುತ್ತಿತ್ತು. ಇದರಿಂದಾಗಿ ಸಂಸ್ಥಾನಗಳ ಪ್ರಜೆಗಳು ತಮ್ಮ ಕಾಲಿನ ಮೇಲೆ ನಿಂತು ಸಂಘಟಿತರಾಗಿ, ಬ್ರಿಟೀಷ್ ಪ್ರಾಂತಗಳಲ್ಲಿ ನಡೆಯುತ್ತಿದ್ದ ರಾಜಕೀಯ ಆಂದೋಲನದ ಮಾರ್ಗದಲ್ಲಿಯೇ ನಡೆದು ಹಲವಾರು ಚಳವಳಿಗಳನ್ನು ನಡೆಸಿ ಹಲವಾರು ಸಂಕಷ್ಟಗಳಿಗೆ ಈಡಾಗಿದ್ದರು. ಇದಲ್ಲದೆ ಅವರು ಗಾಂಧೀಜಿಯವರು ಪ್ರಾರಂಭಿಸಿದ್ದ ಖಾದಿ ಪ್ರಚಾರ, ಹರಿಜನರ ಉದ್ಧಾರ, ನಯೀ ತಾಲಿಂ ಶಿಕ್ಷಣ, ಪಾನ ನಿರೋಧ ಇನ್ನು ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಂಡು ತಮ್ಮ ಸಂಸ್ಥಾನಗಳಲ್ಲಿ ಸಕ್ರಿಯ ಚಳವಳಿಗಳನ್ನು ಮುಂದುವರೆಸಿದ್ದರು. ಈ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರಗಳನ್ನು ಜಾರಿಗೆ ತರುವಂತೆ ಮಾಡುವುದು ಅವರ ಕಾರ್ಯಕ್ರಮಗಳಲ್ಲಿ ಒಂದಾಗಿದ್ದಿತು. ಕಾಂಗ್ರೆಸ್ ಕಾರ್ಯಕರ್ತರ ನಿರಂತರ ಚಳವಳಿಯಿಂದಾಗಿ ದೇಶೀಯ ಸಂಸ್ಥಾನಗಳ ರಾಜರು ಪ್ರಜೆಗಳಿಗೆ ಹಲವಾರು ರಾಜಕೀಯ ರಿಯಾಯಿತಿಗಳನ್ನು ನೀಡಿ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಜಾರಿಗೆ ತರುವುದು ಅನಿವಾರ್ಯವಾಗಿದ್ದಿತು. ಈ ದೆಸೆಯಲ್ಲಿ ಮೈಸೂರು ರಾಜ್ಯ ಇತರ ರಾಜ್ಯಗಳಿಗೆ ಮಾರ್ಗದರ್ಶಿಯಾಗಿದ್ದಿತು.[೪೧] ೧೯೨೦ ರ ಡಿಸೆಂಬರ್‌ನಲ್ಲಿ ನಡೆದ ನಾಗಪುರ ಅಧಿವೇಶನದಲ್ಲಿ ಭಾಷಾವಾರು ಪ್ರಾಂತದ ತತ್ವಕ್ಕೆ ಅನುಮೋದನೆ ದೊರೆತು, ಕನ್ನಡಿಗ ಪ್ರತಿನಿಧಿಗಳ ಅಭಿಲಾಷೆಯಂತೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ

---

[೪೧] ಪ್ರೊ. ಹೆಚ್.ರಾಮಲಿಂಗಪ್ಪ, ಕರ್ನಾಟಕದ ಇತಿಹಾಸ. ೧೯೯೯. ಕಲಾ ಪ್ರಕಾಶನ, ಬೆಂಗಳೂರು-೦೩. ಪುಟ-೩೪೩.

ಬಂದಿತು. ೧೯೨೪ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಮೈಸೂರು ಜನತೆಯನ್ನು ಕಾಂಗ್ರೆಸ್ಸಿಗೆ ಹತ್ತಿರವಾಗುವಂತೆ ಮಾಡಿತು. ೧೯೨೭ ರಲ್ಲಿ ಗಾಂಧೀಜಿ ಉತ್ತರ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡು ಅನಾರೋಗ್ಯಪೀಡಿತರಾದಾಗ ದಿವಾನ್ ಮಿರ್ಜಾ ಇಸ್ಮಾಯಿಲ್ ಅವರು ಗಾಂಧೀಜಿಯವರನ್ನು ನಂದಿಬೆಟ್ಟದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಅಹ್ವಾನಿಸಿದರು. ಇದರಂತೆ ಗಾಂಧೀಜಿ ನಾಲ್ಕು ತಿಂಗಳ ಕಾಲ ಇಲ್ಲಿ ತಂಗಿದ್ದರು. ಈ ಕಾಲದಲ್ಲಿ ಕಾಂಗ್ರೆಸ್ಸಿನ ಹಲವಾರು ಗಣ್ಯ ನಾಯಕರು ಮೈಸೂರು ರಾಜ್ಯಕ್ಕೆ ಭೇಟಿಯಿತ್ತರು. ಗಾಂಧೀಜಿ ತಮ್ಮ ಆರೋಗ್ಯ ಸುಧಾರಿಸಿದ ಮೇಲೆ ಮೈಸೂರು ರಾಜ್ಯದಲ್ಲಿ ಪ್ರವಾಸ ಕೈಗೊಂಡರು. ಆಗ ಅನೇಕ ನಾಗರೀಕರು ಅವರನ್ನು ನೋಡುವ ಮತ್ತು ಅವರಿಂದ ಸಂದೇಶ ಪಡೆಯುವ ಸದಾವಕಾಶ ಒದಗಿತು. ಜನತೆಯಲ್ಲಿ ಗಾಂಧೀಜಿಯವರ ಪ್ರಭಾವದಿಂದ ಸ್ವಾತಂತ್ರ್ಯ ಹೋರಾಟದ ತೀವ್ರತೆಯು ಪ್ರವೈಹಿಸಿತು. ೧೯೨೯ರ ಲಾಹೋರ್ ಅಧಿವೇಶನದಲ್ಲಿ ಅಂಗೀಕೃತವಾದ ಸಂಪೂರ್ಣ ಸ್ವಾತಂತ್ರ್ಯದ ನಿರ್ಣಯ ಮತ್ತು ೧೯೩೦ ರ ಜನವರಿ ೨೬ ರಂದು ರಾಷ್ಟ್ರಾದ್ಯಂತ ನಡೆದ ಧ್ವಜವಂದನೆಯ ಕಾರ್ಯಕ್ರಮಗಳು ಮೈಸೂರು ರಾಜ್ಯದಲ್ಲಿ ವಿಶೇಷ ಪ್ರತಿಕ್ರಿಯೆ ಉಂಟು ಮಾಡಿದವು. ಮೊಟ್ಟಮೊದಲ ಬಾರಿಗೆ ಕಾಂಗ್ರೆಸ್ಸಿಗೂ ಮತ್ತು ಮೈಸೂರು ಸರ್ಕಾರಕ್ಕೂ ಘರ್ಷಣೆ ಸಂಭವಿಸಿತು. ಅದೇ ವರ್ಷ ಗಾಂಧೀಜಿಯವರಿಂದ ಪ್ರಾರಂಭಿಸಲ್ಪಟ್ಟ ಉಪ್ಪಿನ ಸತ್ಯಾಗ್ರಹ ಮೈಸೂರಿನ ಜನತೆಯಲ್ಲಿ ಉತ್ಸಾಹದ ಮಹಾಪೂರವನ್ನೇ ಹರಿಸಿತು. ಗಾಂಧೀಜಿಯವರಿಂದ ಸ್ಫೂರ್ತಿ ಪಡೆದ ಮೈಸೂರಿನ ನೂರಾರು ಜನರು ಕಾರವಾರ, ಅಂಕೋಲ, ಸಿರ್ಸಿ, ಸಿದ್ದಪುರ ಮುಂತಾದ ಕಡೆಗಳಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು.

ಮಹಾತ್ಮಗಾಂಧೀಜಿಯವರ ನೇತೃತ್ವದಲ್ಲಿ ದೇಶದಲ್ಲೆಲ್ಲಾ ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಂತೆ, ಮೈಸೂರು ಸಂಸ್ಥಾನದಲ್ಲೂ ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಪಡೆಯಲು ಕಾಂಗ್ರೆಸ್ ನಿರ್ಧರಿಸಿತು. ದಿವಾನರು ಜವಾಬ್ದಾರಿ ಸರಕಾರದ ಬಗ್ಗೆ ಕಾಂಗ್ರೆಸ್ ಬೇಡಿಕೆಯನ್ನು ಒಪ್ಪದಿದ್ದರಿಂದ ಮತ್ತು ಸಂವಿಧಾನ ಸುಧಾರಣ ಸಮಿತಿಯ ಕಾರ್ಯವೈಖರಿ ಬಗ್ಗೆ ಅಸಮಾಧಾನವನ್ನು ಮೈಸೂರು ರಾಜ್ಯದ ಜನತೆ ವ್ಯಕ್ತಪಡಿಸಿದ್ದರಿಂದ ಮೈಸೂರು ಕಾಂಗ್ರೆಸ್, ಜನತೆಯ ಬೇಡಿಕೆ ಏನು? ಜನತೆಗಾಗಿ ಸರಕಾರ ಏನು ಮಾಡಿದೆ? ಏನು ಮಾಡುತ್ತಿದೆ? ಎಂಬುದನ್ನು ತಿಳಿಯಪಡಿಸಲು, ಜನಸಾಮಾನ್ಯರಲ್ಲಿ ಸ್ವಾತಂತ್ರ್ಯದ ಅಗತ್ಯವನ್ನು ಮನಗಾಣಿಸಲು, ಸತ್ಯಾಗ್ರಹಿಗಳ ಪಡೆಯನ್ನು ಸಂಘಟಿಸಲು ಬೃಹತ್ ಸಮ್ಮೇಳನವೊಂದನ್ನು ನಡೆಸಲು ಮೈಸೂರು ಕಾಂಗ್ರೆಸ್ ತೀರ್ಮಾನಿಸಿತು. ಅದರ ಫಲವಾಗಿ ಚರಿತ್ರಾರ್ಹವಾದ ಮೈಸೂರು ಕಾಂಗ್ರೆಸ್ಸಿನ ಸಮ್ಮೇಳನ ಶಿವಪುರದಲ್ಲಿ ಸಮಾವೇಶ ಗೊಂಡಿತು. ಇದನ್ನು ಶಿವಪುರ ರಾಷ್ಟ್ರಕೂಟ ಎಚಿದೂ ಸಹ ಕರೆಯಲಾಗುತ್ತದೆ.

೧೯೩೮ನೇ ಏಪ್ರಿಲ್ ೧೧, ೧೨, ೧೩ ರಂದು ಮದ್ದೂರಿನ ಶಿವಪುರದಲ್ಲಿ ಬೃಹತ್ ಪ್ರಮಾಣದ ಸಮಾವೇಶ ಜರುಗಿತು. ಸುಮಾರು ಐವತ್ತು ಸಾವಿರ ಜನರು ಸೇರಿ ನಡೆಸಿದ ಶಾಂತಿಯುತ ಸಮ್ಮೇಳನ ಅದು. ಯಾವುದೇ ಅಹಿತಕರ ಘಟನೆ ನಡೆಯದೆ, ನರಹತ್ಯೆಯಾಗದೆ ಶಿಸ್ತಿನಿಂದ ನಡೆದ ಅಪರೂಪದ ಸಮ್ಮೇಳನವದು. ಮೈಸೂರು ಸಂಸ್ಥಾನದಲ್ಲಿ ಅಷ್ಟು ದೊಡ್ಡ ಸಮ್ಮೇಳನ ಆ ಹಿಂದೆ ಎಂದೂ

ನಡೆದಿರಲಿಲ್ಲ. ಕನ್ನಡಿಗರಲ್ಲಿ ಹುದುಗಿದ್ದ ಸ್ವಾತಂತ್ರ್ಯದ ಕಾಳಜಿಯನ್ನು ವ್ಯಾಪಕವಾಗಿ ಅನಾವರಣಗೊಳಿಸಿದ ವಿಶಿಷ್ಟ ಸಮ್ಮೇಳನ ಅದೆಂದು ಹೇಳಬಹುದು. ಹೆಚ್.ಕೆ.ವೀರಣ್ಣಗೌಡರು ಶಿವಪುರ ರಾಷ್ಟ್ರಕೂಟದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಆ ಸಮ್ಮೇಳನದ ಸಂದರ್ಭದಲ್ಲಿ ಅವರು ತೋರಿದ ಕಾರ್ಯತತ್ಪರತೆ, ಸಂಘಟನಾ ಕೌಶಲ್ಯ, ವ್ಯವಹಾರ ಜಾಣ್ಮೆ ಅಚ್ಚುಕಟ್ಟುತನ ಬೆರಗುಗೊಳಿಸುವಂಥದ್ದು. 'ವೀರಣ್ಣಗೌಡ ಎಂದರೆ ಶಿವಪುರ ರಾಷ್ಟ್ರಕೂಟ, ಶಿವಪುರ ರಾಷ್ಟ್ರಕೂಟವೆಂದರೆ ವೀರಣ್ಣಗೌಡ ಎಂಬ ಹೇಳಿಕೆ ಚಾಲ್ತಿಗೆ ಬಂದುದೂ ಉಂಟು' ಎಂದು ಶಿವಪುರ ಧ್ವಜ ಸತ್ಯಾಗ್ರಹದ ಬಗ್ಗೆ ಕೃತಿ ರಚಿಸಿರುವ ವಿ.ವಿ.ಪುರಂ ಕಾಲೇಜಿನ ನಿವೃತ್ತ ಪ್ರಾಂಶುಪಾಲರು, ಲೇಖಕರೂ ಆದ ಡಾ.ಡಿ.ಲಿಂಗಯ್ಯನವರು ಶಿವಪುರ ರಾಷ್ಟ್ರಕೂಟದ ಯಶಸ್ಸಿಗೆ ಕಾರಣಕರ್ತರೊಬ್ಬರಾದ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ವ್ಯಕ್ತಪಡಿಸಿರುವ ಈ ಅಭಿಪ್ರಾಯ ಹೆಚ್.ಕೆ.ವೀರಣ್ಣಗೌಡರ ಕಾರ್ಯ ವೈಖರಿಯನ್ನು ಮನದಟ್ಟು ಮಾಡಿಕೊಡುತ್ತದೆ.

ಮೊದಲು ಕಾಂಗ್ರೆಸ್ ಮುಖಂಡರು ಶಿವಪುರ ರಾಷ್ಟ್ರಕೂಟವನ್ನು(ಸಮ್ಮೇಳನ) ಎಲ್ಲಿ ನಡೆಸಬೇಕೆಂಬ ಬಗ್ಗೆ ಚರ್ಚೆಯಾಯಿತು. ಪಶ್ಚಿಮವಾಹಿನಿ, ಶ್ರೀರಂಗಪಟ್ಟಣ ಅಥವಾ ನಂಜನಗೂಡಿನಲ್ಲಿ ಸಭೆ ಸೇರಿಸಬೇಕೆಂದು ತೀರ್ಮಾನಿಸಲಾಯಿತಾದರೂ ಆ ಸ್ಥಳಗಳಲ್ಲಿ ಸಮ್ಮೇಳನದ ಕಾರ್ಯಗಳ ಮುಂದಾಳತ್ವ ವಹಿಸಲು ಯಾರೂ ಮುಂದೆ ಬರಲಿಲ್ಲ. ಆ ಸ್ಥಳಗಳಲ್ಲಿ ನಡೆಸಬೇಕೆಂಬುದಕ್ಕೆ ಕಾರಣ ಅಲ್ಲಿ ನೀರು ಮತ್ತು ಛತ್ರಗಳ ಸೌಕರ್ಯವಿದ್ದುದು. ಮುಂದಾಳತ್ವದ ಅಭಾವದಿಂದ ಆ ಸ್ಥಳಗಳಲ್ಲಿ ಸಮ್ಮೇಳನವನ್ನು ನಡೆಸಲಾಗಲಿಲ್ಲ. ಮದ್ದೂರಿನಲ್ಲಿ ನಡೆಸಲು ಅವಕಾಶ ಕೊಟ್ಟರೆ ತಾನೇ ಆ ಕಾರ್ಯವನ್ನು ಕೈಗೊಳ್ಳುವುದಾಗಿ ಹೆಚ್.ಕೆ.ವೀರಣ್ಣಗೌಡರು ಹೇಳಿದರು. ಮದ್ದೂರು, ಬೆಂಗಳೂರು-ಮೈಸೂರು ಪಟ್ಟಣಗಳಿಗೆ ಸ್ವಲ್ಪ ಹೆಚ್ಚು ಕಡಿಮೆ ಮಾರ್ಗ ಮಧ್ಯದಲ್ಲಿರುವುದರಿಂದ, ಪಕ್ಕದಲ್ಲೇ ಶಿಂಷಾ ನದಿ ಹರಿಯುತ್ತಿರುವುದರಿಂದ ಮದ್ದೂರಲ್ಲೇ ರಾಷ್ಟ್ರಕೂಟ(ಸಮ್ಮೇಳನ) ಸೇರಿಸುವುದು ಸರಿಯೆಂದು ತೀರ್ಮಾನವಾಯಿತು. ಅಲ್ಲದೆ ಖಾಸಗಿ ಜಮೀನಿನಲ್ಲಿ ಸಮ್ಮೇಳನ ನಡೆಸುವುದಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಅಭ್ಯಂತರಗಳಿರಲಿಲ್ಲ. ಹೀಗಾಗಿ ಶ್ರೀ ತಿರುಮಲೇಗೌಡರು ರಾಷ್ಟ್ರಕೂಟಕ್ಕೆ ತಮ್ಮ ಜಮೀನನ್ನು ಬಿಟ್ಟುಕೊಟ್ಟರು.

ಯಾವುದೇ ಒಂದು ಸಭೆ ಯಶಸ್ವಿಯಾಗಬೇಕೆಂದರೆ ಅದರ ಹಿಂದೆ ಸಾಕಷ್ಟು ತಯಾರಿ ಇರಬೇಕಾಗುತ್ತದೆ ಅನೇಕ ಮಂದಿ ಇಲ್ಲಿ ಈ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಾಗುತ್ತದೆ. ಆದರೆ ಈ ಅನೇಕ ಮಂದಿಯನ್ನು ಕಾರ್ಯತತ್ಪರರಾಗಿಸಲು ಒಬ್ಬ ಸಮರ್ಥ ಮಾರ್ಗದರ್ಶಕನ ಅವಶ್ಯಕತೆ ಇರುತ್ತದೆ. ಇಲ್ಲಿ ಆ ಮಾರ್ಗದರ್ಶಕನಾಗಿ ತಮ್ಮನ್ನು ನಿಯೋಜಿಸಿಕೊಂಡವರು ಹೆಚ್.ಕೆ.ವೀರಣ್ಣಗೌಡರು. ಮುಂದಿನ ಸಿದ್ದತೆಗೆ ಅಂದಿನ ರಾಜಕೀಯ ಮುಖಂಡರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಹೆಗಲು ಕೊಟ್ಟರು. ಅವರು ಪ್ರಾರಂಭದಲ್ಲಿ ಕಾಂಗ್ರೆಸ್ ಸಂಸ್ಥೆ ಕಟ್ಟಲು, ಪ್ರಚಾರ ಮಾಡಲು ಸಾಕಷ್ಟು ದುಡಿದರು. ಆದ್ದರಿಂದ ೧೯೩೮ನೇ ಮಾರ್ಚಿ ೧೧ನೇ ತಾರೀಖಿನಂದು ಮೈಸೂರು ಶ್ರೀಗೋಪಾಲ ಶೆಟ್ಟರ

ಮಹಡಿಯಲ್ಲಿ ಸೇರಿದ್ದ ಜಿಲ್ಲಾ ಪ್ರತಿನಿಧಿಗಳ ಸಭೆ ಶಿವಪುರ ರಾಷ್ಟ್ರಕೂಟದ ಸಿದ್ಧತೆಯ ಸಂಪೂರ್ಣ ಜವಾಬ್ದಾರಿಯನ್ನು ಶ್ರೀ ಹೆಚ್.ಕೆ.ವೀರಣ್ಣಗೌಡರಿಗೆ ವಹಿಸಿತು.[೪೨]

ಮೈಸೂರಿನ ಸಂಸ್ಥಾನದಲ್ಲೇ ಇಂಥ ದೊಡ್ಡ ಸಭೆ ಮೊದಲನೆಯದಾದುದರಿಂದ, ಯಾವ ತೊಂದರೆಯೂ ಇಲ್ಲದಂತೆ ಸಮ್ಮೇಳನ ನಡೆಯಬೇಕೆಂಬ ಉದ್ದೇಶದಿಂದ ಶ್ರೀ ಹೆಚ್.ಕೆ.ವೀರಣ್ಣಗೌಡರು ಮತ್ತು ಇತರ ಹಿರಿಯ ಕಾರ್ಯಕರ್ತರು ಕಾರ್ಯ ತತ್ಪರರಾಗಿ ಕೆಲಸವನ್ನು ಚೆನ್ನಾಗಿ ನಿರ್ವಹಿಸುವ ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನು ನೀಡುವ ವ್ಯಕ್ತಿಗಳನ್ನು ಹುಡುಕಿ ಸ್ವಾಗತ ಸಮಿತಿಯನ್ನು ರಚಿಸಿದರು. ಆ ಸಮಯದಲ್ಲೇ ವ್ಯಾಪಾರಗಾರರಾಗಿದ್ದ ಸಾಹುಕಾರ್ ಚನ್ನಯ್ಯನವರು ಸಕ್ರಿಯವಾಗಿ ರಾಜಕೀಯದ ಮುಂಚೂಣಿಗೆ ಇಳಿದರು. ಆವರೆಗೆ ಅವರು ಹಿಂಚೂಣಿಯಲ್ಲಿದ್ದುಕ್ಕೊಂಡು ರಾಜಕೀಯ ಮುಖಂಡರಿಗೆ ಕುಮ್ಮಕ್ಕು ಕೊಡುತ್ತಿದ್ದರು. ಆ ನಂತರ ಎಸ್.ಚನ್ನಯ್ಯನವರು ಮೈಸೂರು ರಾಜಕೀಯದಲ್ಲಿ ಬಹಳ ಕಾಲದವರೆಗೆ ಪ್ರಭಾವಿ ಮುಖಂಡರಾಗಿ ಮೆರೆದರು. ಹೆಚ್.ಕೆ.ವೀರಣ್ಣಗೌಡರು ಮೈಸೂರಿನಲ್ಲಿ ಎರಡು ಮೂರು ದಿನ ಇದ್ದು ಶ್ರೀ ಹೆಚ್.ಸಿ.ದಾಸಪ್ಪ ಮೊದಲಾದ ಕಾಂಗ್ರೆಸ್ ಮುಖಂಡರನ್ನು ಭೇಟಿಯಾಗಿ ಸಾಹುಕಾರ ಚನ್ನಯ್ಯನವರನ್ನು ಒಪ್ಪಿಸಿ ಸ್ವಾಗತ ಸಮಿತಿಯನ್ನು ಸಿದ್ಧಪಡಿಸಿದರು.[೪೩]

ಈ ಸಂದರ್ಭದಲ್ಲಿ ಸರ್ಕಾರವೇನೂ ಸುಮ್ಮನೆ ಕೈಕಟ್ಟಿ ಕುಳಿತಿರಲಿಲ್ಲ. ಶಿವಪುರ ರಾಷ್ಟ್ರಕೂಟ ನಡೆಯದಂತೆ ತಡೆಯಲು ಸರ್ಕಾರ ನಾನಾ ರೀತಿಯ ಕುತಂತ್ರಗಳನ್ನು ಬಳಸಿತು. ಅದಕ್ಕಾಗಿ ಕಾಂಗ್ರೆಸ್ ವಿರೋಧಿಗಳನ್ನು ವಿಶೇಷವಾಗಿ ಬಳಸಿಕೊಂಡಿತು. ಅದರಲ್ಲೂ ಅಧಿವೇಶನದ ಪೂರ್ಣ ಸಂಘಟನೆಯ ಜವಾಬ್ದಾರಿಯನ್ನು ಹೊತ್ತಿದ್ದ ಹೆಚ್.ಕೆ.ವೀರಣ್ಣಗೌಡರೊಂದಿಗೆ ಲೇವಾದೇವಿ ಮಾಡುತ್ತಿದ್ದವರನ್ನು ಎತ್ತಿಕಟ್ಟಿ ಗೌಡರಿಗೆ ಸಿವಿಲ್ ವಾರೆಂಟ್ ಕೊಡಿಸಲು ಪ್ರಯತ್ನಗಳು ನಡೆದವು. ದಕ್ಷರೆಂದು ಪ್ರಸಿದ್ಧರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಚಾಣಾಕ್ಷರಾಗಿದ್ದುದರಿಂದ, ಹಳ್ಳಿಯ ರೈತರನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದುದರಿಂದ ಅವರನ್ನು ಕಾರ್ಯ ವಿಮುಖರನ್ನಾಗಿ ಮಾಡಲು ಆಗಲಿಲ್ಲ. ಮದ್ದೂರು ತಾಲ್ಲೂಕಿನ ಅಮಲ್ದಾರರು ಈಗಿನ ಸ್ಥಳಬಿಟ್ಟು ನಂಜನಗೂಡಿನಲ್ಲಿ ರಾಷ್ಟ್ರಕೂಟ ನಡೆಸಿದರೆ ತಾವು ಸಹಾಯ ಮಾಡುವುದಾಗಿ ಹೆಚ್.ಕೆ.ವೀರಣ್ಣಗೌಡರನ್ನು ಪುಸಲಾಯಿಸಿದರು.[೪೪] ಆದರೆ ಹೆಚ್.ಕೆ.ವೀರಣ್ಣಗೌಡ ನಿಷ್ಠೆ, ದೃಢತೆಗೆ ಅಮಲ್ದಾರರ ಪ್ರಯತ್ನ ಸಫಲವಾಗಲಿಲ್ಲ.

ಅಧಿವೇಶನಕ್ಕೆ ಸ್ಥಳ ನೀಡಿದ ಶ್ರೀ ತಿರುಮಲೇಗೌಡರ ಮನೆಯಲ್ಲಿ ೧೪ನೇ ಮಾರ್ಚ್ ೧೯೩೮ರಂದು ಸ್ವಾಗತ ಸಮಿತಿಯವರು ಸಭೆ ಸೇರಿ ಕಾರ್ಯಕಾರಿ ಸಮಿತಿ, ವಿಷಯ ನಿಯಾಮಕ ಸಮಿತಿ ಹಾಗೂ ಅನೇಕ ಉಪ-ಸಮಿತಿಗಳನ್ನು ರಚಿಸಿದರು. ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ವಸತಿ ವ್ಯವಸ್ಥೆ ಮತ್ತು ನೈರ್ಮಲ್ಯ ಸಮಿತಿಗೆ ಶ್ರೀ ಹೆಚ್.ಸಿ.ದಾಸಪ್ಪನವರನ್ನು, ಸ್ವಯಂಸೇವಕರ ವ್ಯವಸ್ಥೆ ಶ್ರೀ ಎಂ.ಎನ್.ಜೋಯಿಸರನ್ನು, ಊಟದ ವ್ಯವಸ್ಥೆಗೆ ತಿರುಮಲೇಗೌಡರನ್ನು ಪ್ರಕಟಣಾ ಶಾಖೆಯ ಉಪಸಮಿತಿಗೆ

---

[೪೨] ಶಿವಪುರ ಧ್ವಜ ಸತ್ಯಾಗ್ರಹ, ಡಿ. ಲಿಂಗಯ್ಯ, ಪುಟ-೭೨

[೪೩] ಅದೇ ಪುಟ-೭೨,೭೩

[೪೪] ಶಿವಪುರ ಧ್ವಜ ಸತ್ಯಾಗ್ರಹ, ಪುಟ-೭೬ ೭೭

ಶ್ರೀ ಎಂ.ಎನ್.ಸೂರ್ಯನಾರಾಯಣ ರಾವ್‌ರವರನ್ನು, ಮೈಸೂರು ಕಾಂಗ್ರೆಸ್ಸಿನ ಅಂಗರಚನೆಯ ಉಪಸಮಿತಿಗೆ ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್ ಅವರನ್ನು ಅಧ್ಯಕ್ಷರು, ಮುಖ್ಯಸ್ಥರುಗಳನ್ನಾಗಿ ನೇಮಿಸಿದ ಈ ಉಪಸಮಿತಿಗಳು ಅಸ್ತಿತ್ವಕ್ಕೆ ಬಂದವು.

ಸಭೆ ನಡೆಸಲು ಬೇಕಾದ ಅಗತ್ಯಗಳಲ್ಲಿ ಹಣದ ವ್ಯವಸ್ಥೆಯೂ ಒಂದಾಗಿತ್ತು. ಸುಮಾರು ೧೦ ಸಾವಿರ ರೂಪಾಯಿಗಳವರೆಗೂ ಖರ್ಚಾಗುವ ರಾಷ್ಟ್ರಕೂಟಕ್ಕೆ ಹಣ ಕೂಡಿಸುವ ಜವಬ್ದಾರಿಯನ್ನು ಸಾಹುಕಾರ್ ಚನ್ನಯ್ಯ ಹೆಚ್.ಕೆ.ವೀರಣ್ಣಗೌಡರು ವಹಿಸಿಕೊಂಡರು. ಇವರು ಮತ್ತು ಇವರ ಸ್ನೇಹಿತರು ಹಳ್ಳಿಗಳಿಗೆ ಹೋಗಿ ರಾಷ್ಟ್ರಕೂಟದ ಉದ್ದೇಶವನ್ನು ವಿವರಿಸಿ, ಸ್ವಯಂಸೇವಕರನ್ನು ಆಹ್ವಾನಿಸಿ ಚಂದಾ ವಸೂಲಿ ಮಾಡಿದರು. ಅಂತೆಯೇ ಹೆಚ್.ಕೆ.ವೀರಣ್ಣಗೌಡರ ನೇತೃತ್ವದಲ್ಲಿ ಮೈಸೂರು ಕಾಂಗ್ರೆಸ್ ವರ್ಕಿಂಗ್ ಕಮಿಟಿ, ಸ್ವಾಗತ ಸಮಿತಿಯ ಸದಸ್ಯರು, ಶ್ರೀಮತಿ ಬಳ್ಳಾರಿ ಸಿದ್ದಮ್ಮ, ಶ್ರೀ ಎಂ.ಎನ್.ಜೋಯಿಸ್, ಶ್ರೀಮತಿಯರಾದ ಸುಬ್ಬಮ್ಮ ಜೋಯಿಸ್,ಟಿ. ಸುನಂದಮ್ಮ ಮೊದಲಾದ ಸ್ತ್ರೀಯರು, ವೀರಕೇಸರಿ ಸೀತಾರಾಮಶಾಸ್ತ್ರಿ, ಕೆ.ಟಿ.ಭಾಷ್ಯಂ ಅಯ್ಯಂಗಾರ್, ಟಿ.ಸಿದ್ದಲಿಂಗಯ್ಯ ಮೊದಲಾದ ಮುಖಂಡರು ಪ್ರಚಾರ ಕಾರ್ಯದಲ್ಲಿ ಪಾಲ್ಗೊಂಡರು. [*]ವೈಯಕ್ತಿಕವಾಗಿಯೂ ಸ್ವಾಗತ ಸಮಿತಿಯ ಅಧ್ಯಕ್ಷರಾದ ಎಸ್.ಚನ್ನಯ್ಯನವರು, ಕಾರ್ಯದರ್ಶಿಗಳಾದ ಹೆಚ್.ಕೆ.ವೀರಣ್ಣಗೌಡರು ಇತರ ಕೆಲಸಗಳನ್ನು ಜವಾಬ್ದಾರಿಯಿಂದ, ಮುತುವರ್ಜಿಯಿಂದ ನೋಡಿ ಕೊಂಡುದಲ್ಲದೆ ಪ್ರತ್ಯೇಕವಾಗಿ ಗಣನೀಯ ಮೊತ್ತದ ಹಣ ಸಂಗ್ರಹಿಸಿದರು.

ಯಾರು ಯಾರು ನೂರು ರೂಪಾಯಿಗೆ ಕಡಿಮೆ ಇಲ್ಲದೆ ಚಂದ ಕೊಡುತ್ತಾರೋ ಅಂತಹವರು ಸ್ವಾಗತ ಸಮಿತಿ ಸದಸ್ಯರಾಗುವರೆಂದೂ ಐದು ರೂಪಾಯಿ ಕೊಡುವವರು ಪ್ರತಿನಿಧಿಗಳಾಗುವರೆಂದೂ ಗೊತ್ತು ಮಾಡಿದರು. ರಾಷ್ಟ್ರಕೂಟ ಅಧ್ಯಕ್ಷರ ಚುನಾವಣೆ ಜಿಲ್ಲಾ ಕಾಂಗ್ರೆಸ್ ಸಮಿತಿಗಳಿಂದ ನಡೆಯಿತು. ಕೆ.ಟಿ.ಭಾಷ್ಯಂ ಅಯ್ಯಂಗಾರ್ಯರೂ, ಟಿ.ಸಿದ್ದಲಿಂಗಯ್ಯನವರೂ ಉಮೇದುವಾರರಾಗಿದ್ದರು. ಆಗಿನ ಮೈಸೂರು ಸಂಸ್ಥಾನದಲ್ಲಿ ಒಂಬತ್ತು ಜಿಲ್ಲೆಗಳು ಮಾತ್ರ ಇದ್ದುವು. ಐದು ಜಿಲ್ಲಾ ಸಮಿತಿಗಳು ಟಿ.ಸಿದ್ದಲಿಂಗಯ್ಯನವರ ಹೆಸರನ್ನು ನಾಲ್ಕು ಜಿಲ್ಲಾ ಸಮಿತಿಗಳು ಕೆ.ಟಿ.ಭಾಷ್ಯಂ ಅವರ ಹೆಸರನ್ನೂ ಸೂಚಿಸಿದ್ದವು. ಆದುದರಿಂದ ಟಿ.ಸಿದ್ದಲಿಂಗಯ್ಯನವರು ಮೈಸೂರು ಸಂಸ್ಥಾನದ ಮೊದಲನೆ ರಾಷ್ಟ್ರಕೂಟದ ಅಧ್ಯಕ್ಷರಾಗಿ ಚುನಾಯಿತರಾದರು.

ಶಿವಪುರದಲ್ಲಿ ಸ್ವಾಗತ ಸಿದ್ದತೆಗಳು ಭರದಿಂದ ಸಾಗಿದವು. ಪಾಕಶಾಲೆ, ಭೋಜನ ಶಾಲೆಗಳಿಗೆ ದೊಡ್ಡ ದೊಡ್ಡ ಚಪ್ಪರಗಳನ್ನೂ ಪ್ರತಿನಿಧಿಗಳು ಮತ್ತು ಮುಖಂಡರಿಗಾಗಿ ಕುಟೀರಗಳನ್ನು ನಿರ್ಮಿಸುವುದಕ್ಕಾಗಿ ಮೈಸೂರಿನಿಂದ ಬೇಕಾದ ಸಾಮಾನುಗಳು ರೈಲ್ವೆ ವ್ಯಾಗಿನ್‌ಗಳಲ್ಲಿ ಬರುವಂತೆ ಎಸ್.ಚನ್ನಯ್ಯನವರು ಏರ್ಪಡಿಸಿದ್ದರು. ಚಪ್ಪರಕ್ಕೆ ಬಿದಿರು ತಟ್ಟಿಗಳನ್ನು ಕೊಳ್ಳುವ ಅವಶ್ಯವಿಲ್ಲವೆಂದು, ಮದ್ದೂರು ಮತ್ತು ಹತ್ತಿರದಲ್ಲೇ ಇರುವ ಚನ್ನಪಟ್ಟಣ ತಾಲ್ಲೂಕು ಎರಡರಲ್ಲೂ ತೆಂಗಿನ ಮರಗಳು

[*] ಡಿ.ಲಿಂಗಯ್ಯ. ಶಿವಪುರ ಧ್ವಜ ಸತ್ಯಾಗ್ರಹ. ಪುಟ-೨೯

ಹೆಚ್ಚಾಗಿರುವುದರಿಂದ ಹೆಣೆದ ತೆಂಗಿನ ಗರಿಗಳನ್ನು ತರಿಸಿಕೊಡುವುದಾಗಿ ಹೆಚ್.ಕೆ.ವೀರಣ್ಣಗೌಡರು ಹೇಳಿದರು. ಚನ್ನಪಟ್ಟಣದ ಜಮೀನ್ದಾರರೊಬ್ಬರಿಗೆ ತೆಂಗಿನ ಗರಿಗಳನ್ನು ಹೆಣೆಸಿ ಕೊಡಬೇಕೆಂದು ಹೆಚ್.ಕೆ.ವೀರಣ್ಣಗೌಡರು ಕೇಳಿದರು. ಇದಕ್ಕೊಪ್ಪಿದ ಜಮೀನ್ದಾರರು ಮೂವತ್ತು ನಲವತ್ತು ಗಾಡಿಗಳು ಭರ್ತಿಯಾಗುವಷ್ಟು ತೆಂಗಿನ ಹೆಣೆದ ಗರಿಗಳನ್ನು ಉಚಿತವಾಗಿ ಕಳುಹಿಸಿಕೊಡುವುದಾಗಿ, ಅದಕ್ಕೆ ಗಾಡಿ ಬಾಡಿಗೆ ಸಹ ಕೊಡಬೇಕಾಗಿಲ್ಲವೆಂದು ಹೇಳಿದರು. ಸಿದ್ದತೆಯ ಕಾರ್ಯ ಭರದಿಂದ ಸಾಗಿತಾದರೂ ರಾಷ್ಟ್ರಕೂಟಕ್ಕೆ ನಾಲ್ಕು ದಿನಗಳಿದ್ದಾಗಲೂ ಹೆಣೆದ ಗರಿಗಳು ಬರಲೇ ಇಲ್ಲ. ಗರಿಗಳಿಲ್ಲದೆ ತಮ್ಮ ಕೆಲಸಕ್ಕೆ ತೊಂದರೆಯಾಗುತ್ತಿರುವುದೆಂದು, ರಾಷ್ಟ್ರಕೂಟದ ಸಿದ್ದತೆಗೆ ಹತ್ತು, ಹನ್ನೆರಡು ದಿನಗಳ ಮುಂಚೆಯೇ ಬಂದು ಕಾರ್ಯ ನಿರತರಾಗಿದ್ದ ಎಚ್.ಸಿ.ದಾಸಪ್ಪನವರು ಗೊಣಗಾಡಿದಾಗ, ಹೆಚ್.ಕೆ.ವೀರಣ್ಣಗೌಡರು ಗರಿಗಳನ್ನು ಕಳುಹಿಸಿಕೊಡುವುದಾಗಿ ಒಪ್ಪಿದ್ದ ಜಮೀನ್ದಾರನನ್ನು ಕಂಡಾಗ ಆ ಕೆಲಸ ಮರತೇ ಹೋಗಿತ್ತೆಂದು ತಿಳಿಸಿ, ನಾಳೆ ನಾಡಿದ್ದು ಒಂದೆರಡು ಗಾಡಿಗಳಲ್ಲಾದರೂ ಮಟ್ಟೆಗರಿ (ಹೆಣೆಯದೆ ಇರುವ ಗರಿಗಳು) ಗಳನ್ನು ಕಳುಹಿಸುವುದಾಗಿ ತಿಳಿಸಿದರು. ಗಾಬರಿಗೊಂಡ ಹೆಚ್.ಕೆ.ವೀರಣ್ಣಗೌಡರು ಸಮಯ ಸ್ಫೂರ್ತಿಯಿಂದ ಕೆಲಸ ನಿರ್ವಹಿಸಿ, ಎ.ಜಿ.ಬಂದೀಗೌಡರನ್ನು ಮತ್ತು ಎಂ.ಎನ್.ಜೋಯಿಸರನ್ನು ಬೆಂಗಳೂರಿಗೆ ಕಳುಹಿಸಿ ಒಂದು ಸ್ಪೆಷಲ್ ರೈಲ್ವೆ ವ್ಯಾಗಿನ್‌ನಲ್ಲಿ ಬೇಕಾಗುವಷ್ಟು ಬಿದಿರಿನ ತಟ್ಟೆಗಳನ್ನು ತರಿಸಿ ಸಕಾಲದಲ್ಲಿ ಚಪ್ಪರ ಮತ್ತು ಕುಟೀರಗಳ ಕಾರ್ಯ ಮುಗಿಯುವಂತೆ ನೋಡಿಕೊಂಡರು.

ಸಮಿತಿಯ ಅಧ್ಯಕ್ಷರಾದ ಟಿ.ಸಿದ್ದಲಿಂಗಯ್ಯನವರ ಮೆರವಣಿಗೆ ೧೯೩೮ನೇ ಇಸವಿ ಏಪ್ರಿಲ್ ೧೦ನೇ ತಾರೀಖು ಅತಿ ವಿಜೃಂಭಣೆಯಿಂದ ನಡೆಯಿತು. ಮೆರವಣಿಗೆಯಲ್ಲಿ ಹತ್ತು ಸಾವಿರಕ್ಕೂ ಮೀರಿದ ಜನ ಸೇರಿದ್ದರೆಂದು ಅಂದಾಜಿಸಲಾಗಿತ್ತು. ಮೆರವಣಿಗೆ ಯಾವ ಅಡೆತಡೆಗಳಿಲ್ಲದೆ ಸೊಗಸಾಗಿ ಮುಗಿಯಿತು. ಅಷ್ಟರಲ್ಲಾಗಲೇ ಜಿಲ್ಲಾ ಮ್ಯಾಜಿಸ್ಟ್ರೇಟರಾಗಿದ್ದ ಜಿ.ಎಂ.ಮೇಕ್ರಿಯವರು ಮದ್ದೂರು ಸುತ್ತಳತೆ ಮೂರು ಮೈಲಿಗಳೊಳಗೆ ಒಂದು ತಿಂಗಳ ಕಾಲ ಮೆರವಣಿಗೆ ಸಭೆ ಮುಂತಾದುವು ಸೇರಕೂಡದೆಂದು ಅಲ್ಲದೆ ಧ್ವಜಾರೋಹಣ ಮಾಡಕೂಡದೆಂದು ನಿಷೇದಾಜ್ಞೆ ಹೊರಡಿಸಿದ್ದರು. ಸರ್ಕಾರದ ಆಜ್ಞೆಯನ್ನು ಶಾಂತಿಯುತ ರೀತಿಯಲ್ಲಿ ಉಲ್ಲಂಘನೆ ಮಾಡಬೇಕೆಂದು ಅಧ್ಯಕ್ಷರು ಜನರಿಗೆ ಹೇಳಿದರು. ಅದರಂತೆ ಜಿಲ್ಲಾ ಮ್ಯಾಜಿಸ್ಟ್ರೇಟರ ನಿಷೇದಾಜ್ಞೆಯನ್ನು ಉಲ್ಲಂಘಿಸಬೇಕೆಂದು ಹಿಂದಿನ ರಾತ್ರಿ ಮುಖಂಡರುಗಳು (ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ) ಮಾಡಿದ್ದ ತೀರ್ಮಾನಕ್ಕನುಸಾರವಾಗಿ ೧೯೩೮ನೇ ಏಪ್ರಿಲ್ ೧೧ನೇ ತಾರೀಖು ಬೆಳಿಗ್ಗೆ ೮.೧೫ಕ್ಕೆ ಸರಿಯಾಗಿ "ಧ್ವಜಾರೋಹಣಕ್ಕಾಗಿ ಅಧ್ಯಕ್ಷರಾದ ಶ್ರೀ ಟಿ.ಸಿದ್ದಲಿಂಗಯ್ಯನವರನ್ನು ಸ್ವಯಂ ಸೇವಕರು ಮುಖಂಡರ ಜೊತೆಯಲ್ಲಿ ಧ್ವಜ ವೇದಿಕೆಯ ಹತ್ತಿರಕ್ಕೆ ಕರೆತಂದರು. ವೇದಿಕೆಯ ಹತ್ತಿರ ಶ್ರೀಯುತರಾದ ಎಸ್.ಚನ್ನಯ್ಯ, ಕೆ.ಸಿ.ರೆಡ್ಡಿ, ಹೆಚ್.ಕೆ.ವೀರಣ್ಣಗೌಡ, ಕೆ.ಹನುಮಂತಯ್ಯ, ಮಳವಳ್ಳಿ ವೀರಪ್ಪ, ಹೆಚ್.ಸಿದ್ದಯ್ಯ ಮೊದಲಾದ ಮುಖಂಡರು ಶ್ರೀಮತಿಯರಾದ ಯಶೋಧರಮ್ಮ ದಾಸಪ್ಪ, ಪಾರ್ವತಮ್ಮ ಸಿದ್ದಲಿಂಗಯ್ಯ, ವೆಂಕಮ್ಮ ಸೀತಾರಾಮಯ್ಯ, ಸುಬ್ಬಮ್ಮ ಜೋಯಿಸ, ಇಂದಿರಾ ಕೃಷ್ಣಮೂರ್ತಿ, ಟಿ.ಸುನಂದಮ್ಮ ಮೊದಲಾದ ಮಹಿಳಾ ಮುಖಂಡರು ನೂರಾರು ಸತ್ಯಾಗ್ರಹಿಗಳು ಸ್ವಯಂ ಸೇವಕರು, ಸ್ವಯಂ ಸೇವಕಿಯರು ಶಿಸ್ತಿನಿಂದ ನಿಂತಿದ್ದರು. ಶ್ರೀ ತಿರುಮಲೇ

ಗೌಡರ ಆರೇಳು ಎಕರೆ ಗದ್ದೆ ಬಯಲಿನ ತುಂಬಾ ಶಿಂಷಾನದಿಯ ದಂಡೆಯವರೆಗೆ ಸುಮಾರು ೪೦,೦೦೦ ಜನ ಪ್ರೇಕ್ಷಕರು ಕಿಕ್ಕಿರಿದು ನಿಂತಿದ್ದರು. ಮೈಸೂರು ಬೆಂಗಳೂರು ರಸ್ತೆಯ ಪಕ್ಕದಲ್ಲಿ ಪೊಲೀಸ್ ಅಧಿಕಾರಿಗಳು ಇದ್ದರು. ಅಲ್ಲಿಯೇ ಶಸ್ತ್ರಸಜ್ಜಿತ ಪಡೆಗಳು, ಪೊಲೀಸರ ಬಿಡಾರಗಳು ಇದ್ದುವು. ಇವರಿಗೆಲ್ಲಾ ಮುಖ್ಯರಾಗಿ ಜಿಲ್ಲಾಧಿಕಾರಿ ಡಿ.ಎಸ್.ಪಿ. ಶ್ರೀ ಬೀರಪ್ಪನವರು ಜಿಲ್ಲಾ ಮ್ಯಾಜಿಸ್ಟ್ರೇಟರಾದ ಮೇಕ್ರಿಯವರ ಆದೇಶವನ್ನು ಕಾರ್ಯಗತಗೊಳಿಸಲು ಎಲ್ಲರೂ ಸಿದ್ಧರಾಗಿದ್ದರು. ಈ ವೇಳೆಗಾಗಲೇ ಉಗ್ರ ಚಳುವಳಿಯನ್ನು ಬಂಧೂಕಗಳಿಂದ ನಾಶ ಮಾಡಬಹುದೆಂದು ತಪ್ಪು ಕಲ್ಪನೆಯನ್ನು ತಲೆಯಲ್ಲಿ ತುಂಬಿಕೊಂಡಿದ್ದ ಮೈಸೂರಿನ ಮಹಾರಾಜರು ಮತ್ತು ದಿವಾನರು ಶಿವಪುರ ಹತ್ತಿ ಉರಿಯುತ್ತಿದ್ದರೆ ತಾವು ಊಟಿಯ ತಂಪು ಹವೆಯ ಉದಕಮಂಡಲದಲ್ಲಿ ತಣ್ಣಗೆ ತಂಗಿದ್ದರು. ಶಿವಪುರದಂಥ ದೊಡ್ಡ ಅಧಿವೇಶನವನ್ನೂ ಗಮನಿಸಿದಷ್ಟು ಬೇಜವಾಬ್ದಾರಿ ಅವರದು.[೪೬]

ಅಧ್ಯಕ್ಷರು ಧ್ವಜಾರೋಹಣ ಮಾಡಲು ಮುಂದುವರಿದಂತೆ ಪೊಲೀಸರು ಅವರನ್ನು ದಸ್ತಗಿರಿ ಮಾಡಿದರು. ಅಷ್ಟರಲ್ಲಿ ಜಿ.ಓ.ಸಿ. ಮುಖ್ಯಸ್ಥರಾಗಿದ್ದ ಎಂ.ಎನ್.ಜೋಯಿಸರು ಧ್ವಜಾರೋಹಣ ಮಾಡಿ ದಸ್ತಗಿರಿಗೆ ಒಳಗಾದರು. ಈ ಮಧ್ಯೆ ಜನರು ಜಯಕಾರ ಮತ್ತು ಕರತಾಡನಗಳಿಂದ ಶಿಸ್ತಿನಿಂದ ನಡೆದುಕೊಂಡರು. ಸಿದ್ದಲಿಂಗಯ್ಯನವರು ಪೊಲೀಸ್ ಬಂಧನಕ್ಕೊಳಗಾಗುವಾಗ ಎಚ್.ಸಿ.ದಾಸಪ್ಪನವರನ್ನು ತಮ್ಮ ಸ್ಥಾನಕ್ಕೆ ನೇಮಿಸಿದರು. ೨ನೇಯ ದಿನ ದಿನಾಂಕ ೧೨ ರಂದು ಧ್ವಜಾರೋಹಣ ಮಾಡಿದ ಕೆ.ಸಿ.ರೆಡ್ಡಿ, ಎಚ್.ಸಿ.ದಾಸಪ್ಪ ಹಾಗೂ ವಿ.ವೆಂಕಟಪ್ಪರವರನ್ನು ಬಂಧಿಸಲಾಯಿತು. ಬಂಧನಕ್ಕೆ ಒಳಗಾಗುವ ಮುಂಚೆ ಎಚ್.ಸಿ.ದಾಸಪ್ಪನವರು ಶಾಂತಿಯಿಂದ ವರ್ತಿಸುವಂತೆ ಕಾರ್ಯಕರ್ತರಿಗೆ ಕೈ ಮುಗಿದು ಪ್ರಾರ್ಥಿಸಿ ಪೊಲೀಸ್ ವಾಹನವನ್ನು ಹತ್ತಿದರು.

ಕೆ.ಸಿ.ರೆಡ್ಡಿಯವರು ಬಹಳ ತಾಳ್ಮೆಯಿಂದ ವರ್ತಿಸುತ್ತಾ ಗಂಭೀರ ಮುಖ ಮುದ್ರೆಯಿಂದೊಡಗೂಡಿ ಶಾಂತ ಚಿತ್ತರಾಗಿದ್ದರು. ಹಾಗೆಯೆ ಕಾರ್ಯಕರ್ತರು ಸಹಾ ಶಾಂತಿಯಿಂದ ವರ್ತಿಸುವಂತೆ ಕರೆ ನೀಡಿ ಪೊಲೀಸ್ ವಾಹನ ಹತ್ತಿದರು. ೩ನೇ ದಿನ ದಿನಾಂಕ ೧೩ರಂದು ಕೆ.ಟಿ.ಭಾಷ್ಯಂ ಎಚ್.ಸಿದ್ದಯ್ಯ ಮತ್ತು ಬಳ್ಳಾರಿ ಸಿದ್ದಮ್ಮನವರನ್ನು ಧ್ವಜಾರೋಹಣದ ನಂತರ ಬಂಧಿಸಲಾಯಿತು. ಆ ದಿನದ ಬಹಿರಂಗ ಅಧಿವೇಶನವು ಎಚ್.ಬಿ.ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು. ಹೀಗೆ ಮೂರು ದಿನವೂ ಧ್ವಜಾರೋಹಣ ಮಾಡಿದ ಮುಖಂಡರು ದಸ್ತಗಿರಿಗೊಳಗಾದರು. ಧ್ವಜಸ್ತಂಭವನ್ನು ಉರುಳಿಸಿ ರಾಷ್ಟ್ರಧ್ವಜಕ್ಕೆ ಅಪಮಾನವಾಗಬಹುದೆಂಬ ಶಂಕೆಯಿಂದ ಅನೇಕ ಸ್ತ್ರೀ ಸತ್ಯಾಗ್ರಹಿಗಳು ವೇದಿಕೆಯ ಮೇಲೆ ಏಪ್ರಿಲ್ ತಿಂಗಳ ಸುಡುವ ಬಿಸಿಲಿನಲ್ಲಿ ಧ್ವಜ ರಕ್ಷಣೆಗಾಗಿ ಕುಳಿತಿದ್ದರು.

ದಸ್ತಗಿರಿ ಕಾರ್ಯ ನಿಂತ ಮೇಲೆ, ಪ್ರತಿದಿನವು ಅಲ್ಲಿ ಸಹಸ್ರ ಸಂಖ್ಯೆಯಲ್ಲಿ ಸೇರಿದ್ದ ಜನಸ್ತೋಮವನ್ನು ಕುರಿತು ಮುಖಂಡರು ಭಾಷಣ ಮಾಡುತ್ತಿದ್ದರು. ಅದಕ್ಕಾಗಿಯೇ ರಚಿತವಾಗಿದ್ದ ವಿಶಾಲವಾದ ಬೇರೆ ಮಂಟಪದಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಸಭೆ ನಡೆಯುತ್ತಿತ್ತು. ಅಲ್ಲಿ

---

[೪೬] ಡಿ.ಲಿಂಗಯ್ಯ: ಶಿವಪುರ ಧ್ವಜ ಸತ್ಯಾಗ್ರಹ. ೧೯೭೯. ಪುಟ.೧೧೩

ಈ ಸಂಸ್ಥೆಯ ಹೆಸರು ಮೈಸೂರ್ ಕಾಂಗ್ರೆಸ್ ಎಂದಿರಬೇಕೆಂದು, ಶ್ರೀಮನ್ ಮಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಹೋರಾಟ ನಡೆಸಬೇಕೆಂದೂ, ಕಾಂಗ್ರೆಸ್ ಸಂಘಟನೆಯ ಒಂದೊಂದು ನಿಯಮವನ್ನು ದೀರ್ಘವಾಗಿ ಚರ್ಚಿಸಿ ಅಂಗೀಕರಿಸಿ, ಆ ಸಭೆಯಲ್ಲಾದ ತೀರ್ಮಾನಗಳನ್ನು ಬಹಿರಂಗ ಸಭೆಯಲ್ಲಿ ವಿವರಿಸಿ ಜನತೆಯ ಒಪ್ಪಿಗೆ ಪಡೆಯಲಾಗುತ್ತಿತ್ತು.

ಮಧ್ಯಾಹ್ನ ಊಟವಾದ ಮೇಲೆ ಪುನ: ಸಾಯಂಕಾಲ ನಾಲ್ಕು ಗಂಟೆಗೆ ಬಹಿರಂಗ ಅಧಿವೇಶನ ಸೇರಿ ಭಾಷಣಗಳು ಕಾಂಗ್ರೆಸ್ ಅಂಗರಚನೆಯ ನಿಯಮಗಳಿಗೆ ಒಂದೊಂದಾಗಿ ಬಹಿರಂಗ ಅಧಿವೇಶನದಲ್ಲಿ ಒಪ್ಪಿಗೆ ಪಡೆಯುವ ಕಾರ್ಯ ನಡೆಯುತ್ತಿತ್ತು. ಸಾಯಂಕಾಲ ಸೂರ್ಯಾಸ್ತಕ್ಕೆ ಮೊದಲು ಧ್ವಜಾವರೋಹಣ ಕಾರ್ಯ ನೆರವೇರುತ್ತಿತ್ತು. ಈ ಅಧಿವೇಶನದಲ್ಲಿ ಭಾಗವಹಿಸಿದ್ದ ಕಾರ್ಯಕರ್ತರೆಲ್ಲರಿಗೂ ತಮ್ಮ ಊರುಗಳಲ್ಲಿಯೇ ರಾಷ್ಟ್ರಧ್ವಜಾರೋಹಣ ಮಾಡಬೇಕೆಂಬ ಸೂಚನೆ ನೀಡಲಾಯಿತು. ಈ ಸೂಚನೆಯಂತೆ ಸಂಸ್ಥಾನದಾದ್ಯಂತ ಹರಡಿದ ಈ ಚಳವಳಿಯನ್ನು ಶಿವಪುರ ಧ್ವಜ ಸತ್ಯಾಗ್ರಹ ಎಂದೇ ಕರೆಯಲಾರಂಭಿಸಿದರು.

ಈ ರೀತಿ ಮದ್ದೂರು ಶಿವಪುರದಲ್ಲಿ ಸೇರಿದ್ದ ರಾಷ್ಟ್ರಕೂಟವು ಮೂರು ದಿನಗಳ ಕಾರ್ಯ ಕಲಾಪಗಳನ್ನು ನಡೆಸಿ ಮೈಸೂರು ಸಂಸ್ಥಾನದಲ್ಲಿ ಶ್ರೀಮನ್ಮಾಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯನ್ನು ಕೈಗೂಡಿಸುವುದಾಗಿ ಮೈಸೂರು ಕಾಂಗ್ರೆಸ್ ರಾಜಕೀಯ ಸಂಸ್ಥೆ ಸ್ಥಾಪಿತವಾಯಿತು. ಪ್ರತಿದಿನವೂ ಬೆಳಗ್ಗೆ ಧ್ವಜಾರೋಹಣ ಕಾಲದಲ್ಲಿ ಮೂರು ಮಂದಿಯಂತೆ ಮುಖಂಡರು ದಸ್ತಗಿರಿಯಾಗಿ ಜೈಲಿಗೆ ಹೋಗುತ್ತಿದ್ದರು. ಏಪ್ರಿಲ್ ೧೩ನೇ ತಾರೀಕು ಸಾಯಂಕಾಲ ಸಭೆ ಸೇರಿದ ಸ್ವಾಗತ ಸಮಿತಿಯವರು ರಾಷ್ಟ್ರಕೂಟದ ಜನರಲ್ ಸೆಕ್ರೆಟರಿಯಾಗಿರುವ ಹೆಚ್.ಕೆ.ವೀರಣ್ಣಗೌಡರು ಸಾವಿರಾರು ರೂಪಾಯಿಗಳ ಜಮಾ ಖರ್ಚಿನ ಜವಾಬ್ದಾರಿ ಹೊತ್ತು ಸಮಿತಿಗೆ ಲೆಕ್ಕ ಒಪ್ಪಿಸಬೇಕಾಗಿರುವುದರಿಂದ ಸತ್ಯಾಗ್ರಹ ಮಾಡಬಾರದೆಂದು ತೀರ್ಮಾನಿಸಿದ್ದರು. ಆ ಪ್ರಕಾರ ರಾಷ್ಟ್ರಕೂಟ ನಡೆದ ದಿನಗಳಲ್ಲಾಗಲೀ ಆ ಮೇಲೆ ಒಂದು ತಿಂಗಳು ನಡೆದ ಧ್ವಜ ಸತ್ಯಾಗ್ರಹದಲ್ಲಾಗಲೀ ಹೆಚ್.ಕೆ.ವೀರಣ್ಣಗೌಡರು ಪಾಲುಗೊಳ್ಳಲು ಅವಕಾಶವಾಗಲಿಲ್ಲ. ಆದರೆ ಸತ್ಯಾಗ್ರಹ ರೂಪಿಸಿದ ಶಕ್ತಿಗಳಲ್ಲಿ ಅವರೂ ಒಬ್ಬರಾಗಿ ನೇಪಥ್ಯದಲ್ಲಿಯೇ ಕಾರ್ಯನಿರ್ವಹಿಸುತ್ತಿದ್ದರು.

ಸಂಘಟಕರ ಮುಂದಾಲೋಚನೆಯ ಸಮರ್ಥ ಕಾರ್ಯನಿರ್ವಹಣೆಯಿಂದ ಶಿವಪುರ ರಾಷ್ಟ್ರಕೂಟ ಅಹಿಂಸಾತ್ಮಕವಾಗಿ ಯಶಸ್ವಿಯಾಗಿ ನಡೆದುದು ಗಮನಾರ್ಹವಾದ ಅಂಶ. ರಾಷ್ಟ್ರಕೂಟದ ಶಿಸ್ತಿಗೆ ನಿಬ್ಬೆರಗಾಗಿ ವೀಕ್ಷಿಸಿದವರಲ್ಲಿ ಶ್ರೀಮಾನ್ ಯುವರಾಜರು ಒಬ್ಬರು. ರಾಷ್ಟ್ರಕೂಟದ ೨ನೇ ದಿನ ಮಧ್ಯಾಹ್ನ ಶ್ರೀಮಾನ್ ಯುವರಾಜರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರು ಮೈಸೂರಿಂದ ಬೆಂಗಳೂರಿಗೆ ಹೋಗುತ್ತ ಶಿವಪುರದ ರಾಷ್ಟ್ರಕೂಟ ನಡೆಯುತ್ತಿದ್ದುದನ್ನು ರಸ್ತೆಯಲ್ಲಿ ಕಾರಿನಲ್ಲೇ ಕುಳಿತು ಹತ್ತು ಹದಿನೈದು ನಿಮಿಷ ನೋಡಿಕೊಂಡು ಹೋದರಂತೆ.

"ರಾಷ್ಟ್ರಕೂಟದಲ್ಲಿ ಬಂಧಿತರಾದವರ ವಿಚಾರಣೆಯನ್ನು ಮಂಡ್ಯ ನ್ಯಾಯಾಲಯದಲ್ಲಿ ನಡೆಸಿ ಟಿ.ಸಿದ್ದಲಿಂಗಯ್ಯನವರಿಗೆ ಎರಡೂವರೆ ತಿಂಗಳು, ಎಂ.ಎನ್.ಜೋಯಿಸರಿಗೆ ಮೂರೂವರೆ ತಿಂಗಳೂ, ಎಚ್.ಸಿ.ದಾಸಪ್ಪನವರಿಗೆ ನಾಲ್ಕು ತಿಂಗಳು ೨೦ ದಿವಸ, ವಿ.ವೆಂಕಟಪ್ಪ ಮತ್ತು ಕೆ.ಸಿ.ರೆಡ್ಡಿಯವರಿಗೆ ಮೂರು ತಿಂಗಳು ೨೦ ದಿವಸ, ಕೆ.ಟಿ.ಭಾಷ್ಯಂ ಮತ್ತು ಎಚ್.ಸಿದ್ದಯ್ಯನವರಿಗೆ ನಾಲ್ಕು ತಿಂಗಳು ೨೦ ದಿವಸ, ಬಳ್ಳಾರಿ ಸಿದ್ದಮ್ಮನವರಿಗೆ ೨೫ ದಿನಗಳ ಸಾದಾ ಶಿಕ್ಷೆಯನ್ನು ವಿಧಿಸಲಾಯಿತು"[೪೭] "ಶಿವಪುರ ಧ್ವಜಸತ್ಯಾಗ್ರಹದ ಸ್ಥಾನ ಮೈಸೂರು ರಾಜ್ಯದ ಇತಿಹಾಸದಲ್ಲಿ ಮಹತ್ವ ಪೂರ್ಣವಾದುದು; ಮೈಸೂರು ಕಾಂಗ್ರೆಸ್ಸಿನ ಚರಿತ್ರೆಯಲ್ಲಿ ಚಿರಸ್ಮರಣೀಯವಾದುದು' ಮೈಸೂರು ಸತ್ಯಾಗ್ರಹಿಗಳ ಬದುಕಿನಲ್ಲಿ ಚಿರನೂತನವಾದುದು"[೪೮]

ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹದ ಯಶಸ್ಸಿನಿಂದ ಸ್ಫೂರ್ತಿಯನ್ನು ಪಡೆದ ಕಾಂಗ್ರೆಸ್ ಧುರೀಣರು ಮೈಸೂರು ಸಂಸ್ಥಾನದ ಬೇರೆ ಬೇರೆ ಸ್ಥಳಗಳಲ್ಲಿಯೂ ಇದೇ ರೀತಿ ಧ್ವಜ ಸತ್ಯಾಗ್ರಹವನ್ನು ನಡೆಸಲು ನಿರ್ಧರಿಸಿದರು. ಹೀಗೆ ಇತರಡೆಗಳಲ್ಲಿ ನಡೆದ ಚಳುವಳಿಯಲ್ಲಿ ವಿದುರಾಶ್ವತ್ಥದಲ್ಲಿ ದೊಡ್ಡ ದುರಂತವೊಂದು ನಡೆಯಿತು. "ಕಾಂಗ್ರೆಸ್‌ನ ಈ ಚಟುವಟಿಕೆಗಳನ್ನು ತಪ್ಪಿಸಲು ಕೋಲಾರ ಜಿಲ್ಲಾ ಮ್ಯಾಜಿಸ್ಟ್ರೇಟರು ನಿಷೇದಾಜ್ಞೆ ಹೊರಡಿಸಿದರು. "೧೯೩೮ರ ಏಪ್ರಿಲ್ ತಿಂಗಳ ಅಂತ್ಯದಲ್ಲಿ ವಿದುರಾಶ್ವತ್ಥದಲ್ಲಿ ಧ್ವಜಾರೋಹಣ ಹಾಗೂ ಬಹಿರಂಗ ಸಭೆ ನಡೆಸಲು ನಿರ್ಧರಿಸಿದ್ದ ಕಾಂಗ್ರೆಸ್ ಧುರೀಣರು ಏಪ್ರಿಲ್ ೨೩ ರಂದು ಕಾಂಗ್ರೆಸ್ ಕಾರ್ಯಕರ್ತರ ಮೂಲಕ ಸರ್ಕಾರದ ವಿರುದ್ಧ ಕರಪತ್ರಗಳನ್ನು ಹಂಚಿದರು. ವಾಕ್ ಸ್ವಾತಂತ್ರ್ಯದ ಹಕ್ಕನ್ನು ಸ್ಥಾಪಿಸಿ ರಾಷ್ಟ್ರಧ್ವಜದ ಗೌರವವನ್ನು ಕಾಪಾಡಲು ಜನರೆಲ್ಲರೂ ಸತ್ಯಾಗ್ರಹ ಚಳುವಳಿಯನ್ನು ನಡೆಸಬೇಕೆಂದು, ಸರ್ಕಾರವು ನಿಷೇದಾಜ್ಞೆಯನ್ನು ಹಿಂದಕ್ಕೆ ಪಡೆಯುವವರೆಗೂ ಚಳುವಳಿಯನ್ನು ಮುಂದುವರೆಸಬೇಕೆಂದು ಕಾಂಗ್ರೆಸ್ ಕರೆ ನೀಡಿತು. ಏಪ್ರಿಲ್ ೨೫ ರಂದು ನಡೆದ ಬಹಿರಂಗ ಸಭೆಯಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನರು ಸೇರಿದ್ದರು. ಮ್ಯಾಜಿಸ್ಟ್ರೇಟರ ಆಜ್ಞೆಯಂತೆ ಪೊಲೀಸರು ಜನತೆಯ ಮೇಲೆ ಗುಂಡಿನ ಸುರಿಮಳೆ ಕರೆದರು. "ಗೋಲಿಬಾರ್‌ನಲ್ಲಿ ನೂರಾರು ಜನರು ಗಾಯಗೊಂಡರು. ಮುವತ್ತೈದು ಮಂದಿ (ಸರ್ಕಾರದ ಹೇಳಿಕೆಯಂತೆ ೧೦ ಮಂದಿ) ಮಡಿದರು. ವಿದುರಾಶ್ವತ್ಥದ ಈ ಹತ್ಯಾಕಾಂಡ ಜಲಿಯನ್ ವಾಲಾಬಾಗ್ ದುರಂತದಂತೆ ಕರಾಳ ಇತಿಹಾಸವನ್ನು ಸೃಷ್ಟಿಸಿತು. ಈ ಘಟನೆಯನ್ನು ಗಾಂಧೀಜಿಯವರು ಸೇರಿದಂತೆ ಹಲವು ಮಂದಿ ಹಿರಿಯರು ಖಂಡಿಸಿದರು"[೪೯] ವಿದುರಾಶ್ವತ್ಥದಲ್ಲಿ ನಡೆದ ದುರಂತವು ಸ್ವಾತಂತ್ರ್ಯ ಸಾಧನೆಯ ಹೋರಾಟದಲ್ಲಿ ಸಂಸ್ಥಾನದ ಪ್ರಜೆಗಳಿಗೆ ಶೌರ್ಯ ಮತ್ತು ಧೃಡ ಸಂಕಲ್ಪ ಶಕ್ತಿಯನ್ನು ಗಳಿಸಿಕೊಟ್ಟಿತು. ಈ ದುರಂತದಿಂದ ಮೈಸೂರು ಸಂಸ್ಥಾನದ ರಾಜಕೀಯ ಆಂದೋಲನ ಬಲಗೊಂಡಿತು"

---

[೪೭] ಆರ್.ವಿ.ರವೀಂದ್ರನಾಥ: ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ೨೦೦೨. ಪುಟ.೪೮

[೪೮] ಡಿ.ಲಿಂಗಯ್ಯ: ಶಿವಪುರ ಧ್ವಜ ಸತ್ಯಾಗ್ರಹ. ಪುಟ.೧೯೭

[೪೯] ಆರ್.ವಿ.ರವೀಂದ್ರನಾಥ: ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ೨೦೦೨. ಪುಟ.೪೯

ಎಂಬುದಾಗಿ ವಿದ್ವಾಂಸರು ಗುರುತಿಸಿದ್ದಾರೆ".[೫೦] "ಈ ದುರಂತದ ನಿಜಾಂಶವನ್ನರಿಯಲು ಮಹಾತ್ಮ ಗಾಂಧೀಜಿಯವರು ಸರ್ದಾರ್ ವಲ್ಲಭಾಯಿ ಪಟೇಲರು ಮತ್ತು ಆಚಾರ್ಯ ಕೃಪಲಾನಿಯವರನ್ನು ಬೆಂಗಳೂರಿಗೆ ಕಳುಹಿಸಿದರು. ಅಷ್ಟರಲ್ಲಾಗಲೇ ಮೈಸೂರು ಕಾಂಗ್ರೆಸ್‌ನವರು ಒಂದು ವಿಚಾರಣ ಸಮಿತಿ ಏರ್ಪಡಿಸಿ ಆ ಸಮಿತಿಗೆ ಹೆಚ್.ಕೆ.ವೀರಣ್ಣಗೌಡರನ್ನು ಕಾರ್ಯದರ್ಶಿಯನ್ನಾಗಿ ನೀಮಿಸಿದ್ದರು. ವಿಚಾರಣ ಸಮಿತಿ ಗೌರಿಬಿದನೂರಿನ ಸುತ್ತಮುತ್ತ ಸಂಚರಿಸಿ ವಿಚಾರಣೆ ನಡೆಸಿತು. ಈ ಸಂದರ್ಭದಲ್ಲೇ ಸರ್ದಾರ್ ವಲ್ಲಭಾಯಿ ಪಟೇಲರು, ಆಚಾರ್ಯ ಕೃಪಲಾನಿಯವರು ಬೆಂಗಳೂರಿಗೆ ಬಂದು ದಿವಾನ್ ಮಿರ್ಜಾ ಸಾಹೇಬರನ್ನು ಕಂಡು ಅವರ ಒಪ್ಪಿಗೆಯಂತೆ ಕೆಲವು ಅಧಿಕಾರಿಗಳ ಜತೆಗೂ ಮಾತಾಡಿ ವಿದುರಾಶ್ವತ್ಥಕ್ಕೂ ಭೇಟಿ ಕೊಟ್ಟರು. ವಿಚಾರಣಾ ಸಮಿತಿಯವರಿಂದ ವಿಷಯಗಳನ್ನು ಸಂಗ್ರಹಿಸಿದರು. ಆ ಇಬ್ಬರು ಮುಖಂಡರ ಪ್ರಯತ್ನದಿಂದ ಶಿವಪುರ ಧ್ವಜ ಸತ್ಯಾಗ್ರಹಕ್ಕಾಗಿ ಶಿಕ್ಷೆ ಅನುಭವಿಸುತ್ತಾ ಜೈಲಿನಲ್ಲಿದ್ದ ಕಾಂಗ್ರೆಸ್ ಮುಖಂಡರ ಬಿಡುಗಡೆಯಾಯಿತು. ವಿದುರಾಶ್ವತ್ಥ ದುರಂತದ ಬಗೆಗೆ ಕೂಲಂಕಷ ವಿಚಾರಣೆ ನಡೆಸಲು ಜಸ್ಟೀಸ್ ರಮೇಶಂ ಎಂಬುವರನ್ನು ಸರ್ಕಾರದವರು ನೇಮಕ ಮಾಡಿದರು. ರಮೇಶಂ ರವರು ನಡೆಸಿದ ವಿಚಾರಣೆಯಲ್ಲಿ ಕಾಂಗ್ರೆಸ್ ವಿಚಾರಣ ಸಮಿತಿಯವರು ಸಂಗ್ರಹಿಸಿದ್ದುದಕ್ಕಿಂತಲೂ ಹೆಚ್ಚಿನ ಅಂಶಗಳೇನು ಹೊರಬೀಳಲಿಲ್ಲ.

## ೪.೪ ಸ್ವಾತಂತ್ರ್ಯ ಹೋರಾಟದಲ್ಲಿ:

ವಾಸ್ತವದಲ್ಲಿ ೧೯೨೦ರವರೆಗೂ ಕಾಂಗ್ರೆಸ್ ಪಕ್ಷದ ಚಟುವಟಿಕೆಗಳು ಕೇವಲ ಬ್ರಿಟಿಷ್ ಪ್ರಾಂತ್ಯಗಳಿಗೆ ಮಾತ್ರ ಸೀಮಿತವಾಗಿದ್ದ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ನ ಧ್ಯೇಯಗಳ ಬಗ್ಗೆ ಚರ್ಚೆಗಳನ್ನು ಮಾಡುವುದರ ಮೂಲಕ ಕೆಲವು ವೃತ್ತ ಪತ್ರಿಕೆಗಳು ಜನತೆಯ ಗಮನವನ್ನು ಕಾಂಗ್ರೆಸ್ಸಿನೆಡೆಗೆ ಸೆಳೆಯುತ್ತಿದ್ದವು. ಸಂಸ್ಥಾನಗಳಿಂದ ಪ್ರತಿನಿಧಿಗಳು ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸುತ್ತಿದ್ದರೂ, ಈ ವೇಳೆಗೆ ಸ್ಥಾನಿಕ ದೊರೆಗಳ ವಿರುದ್ಧ ಯಾವುದೇ ಚಳುವಳಿಗಳನ್ನು ನಡೆಸಿದ್ದು ನಮಗೆ ಕಾಣಸಿಗುವುದಿಲ್ಲ. ೧೯೦೫ವರೆಗೆ ಕಾಂಗ್ರೆಸ್ ಮತ್ತು ಮಹಾರಾಜರ ನಡುವಿನ ಸಂಬಂಧ ಅನ್ಯೋನ್ಯವಾಗೇ ಇದ್ದುದನ್ನು ಕಾಣಬಹುದು. ೧೯೦೩ರಲ್ಲಿ ಮದ್ರಾಸ್‌ನಲ್ಲಿ ನಡೆದ ಕಾಂಗ್ರೆಸ್ ವಸ್ತು ಪ್ರದರ್ಶನ ಉದ್ಘಾಟನೆಯನ್ನು ಬ್ರಿಟಿಷ್ ರೆಸಿಡೆಂಟ್ ಮತ್ತು ವೈಸರಾಯ್‌ರವರ ಸಮ್ಮತಿ ಇಲ್ಲದಿದ್ದರೂ ಮಹಾರಾಜರು ಮಾಡಿದ್ದು, ನಂತರದಲ್ಲಿ ಬ್ರಿಟಿಷ್ ಇಂಡಿಯಾ ಸರಕಾರದ ಅಸಮಾಧಾನಕ್ಕೆ ಗುರಿಯಾಗಬೇಕಾಯಿತು. ಸಂಸ್ಥಾನದಲ್ಲಿ ೧೯೨೦ರವರೆಗೂ ಕಾಂಗ್ರೆಸ್ ರಚನೆಗೊಂಡಿಲ್ಲದಿದ್ದರೂ ಪತ್ರಿಕೆಗಳಲ್ಲಿ ಕಾಂಗ್ರೆಸ್ ಧ್ಯೇಯಗಳ ಬಗ್ಗೆ ಚರ್ಚೆಗಳು ಕಂಡು ಬರುತ್ತಿದ್ದವು. ೧೯೨೦ರ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ೨೧ ಕಾಂಗ್ರೆಸ್ ಪ್ರಾಂತೀಯ ಸಮಿತಿಗಳನ್ನು ಬ್ರಿಟಿಷ್ ಪ್ರಾಂತ್ಯಗಳಿಗೆ ಸೀಮಿತವಾದ ಹಾಗೆ ಸ್ಥಾಪಿಸಲು ಅನುಮತಿ

---

[೫೦] ಕೆ.ವೀರತಪ್ಪ: ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ.೫೭

ನೀಡಲಾಯಿತು. ಇದೇ ಸಂದರ್ಭದಲ್ಲಿ ಈ ಸಮಿತಿಗಳು ಯಾವುದೇ ಕಾರಣದಿಂದಲೂ ಸಂಸ್ಥಾನಗಳ ಆಂತರಿಕ ವ್ಯವಹಾರದಲ್ಲಿ ಮಧ್ಯೆ ಪ್ರವೇಶಸದೆ ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಕ್ರಮಗಳನ್ನು ಅಂದರೆ ರಾಷ್ಟ್ರೀಯತೆ ಮೂಡಿಸುವುದು, ಸ್ವದೇಶಿ ಚಳುವಳಿಗೆ ಪ್ರೋತ್ಸಾಹ, ಅಸ್ಪೃಶ್ಯತೆ ನಿವಾರಣೆ, ಪಾನನಿರೋಧ, ರಾಷ್ಟ್ರೀಯ ಐಕ್ಯತೆ ಮೊದಲಾದವುಗಳಿಗೆ ಬೆಂಬಲಿಸುತ್ತಾ ಜವಾಬ್ದಾರಿ ಸರಕಾರದ ಬಗ್ಗೆ ಹಕ್ಕುಗಳ ರಕ್ಷಣೆಯ ಬಗ್ಗೆ ತಿಳುವಳಿಕೆ ಮೂಡಿಸುವುದು ಮಾತ್ರ ಅನುಷ್ಠಾನಕ್ಕೆ ತರುವುದಕ್ಕೆ ಪ್ರಯತ್ನಿಸಬೇಕು ಎಂಬ ನಿರ್ಬಂಧ ವಿಧಿಸಲಾಗಿತ್ತು.

೧೯೨೦ ರ ನಾಗಪುರ ಅಧಿವೇಶನದ ನಂತರ ಡಿ.ವಿ.ಗುಂಡಪ್ಪ ಭೀಮರಾವ್ ಕೆ.ಶಾಮಣ್ಣ, ಎಚ್.ವಿ.ಸುಬ್ರಮಣ್ಯ, ಆರ್.ತಿವಾರಿ, ಟಿ.ಟಿ.ಶರ್ಮಾ, ವಿ.ಎಸ್.ಸಂಜೀವರಾವ್ ಹಾಗೂ ಇನ್ನಿತರರು ತಮಗೆ ತಾವೇ ರಾಷ್ಟ್ರೀಯ ಕಾಂಗ್ರೆಸ್ಸಿಗರೆಂದು ಕರೆದುಕೊಂಡು ಸದಸ್ಯರ ನೊಂದಣಿಯನ್ನು ಪ್ರಾರಂಭಿಸಿದರು ಮತ್ತು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಪ್ರಾರಂಭದೊಂದಿಗೆ ಸಂಸ್ಥಾನದಲ್ಲಿ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಿತು. ಇದೇ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ ನಾಲ್ಕಾಣೆ ಸದಸ್ಯರಾಗಿದ್ದಿರಬಹುದು (ಸಾಮಾನ್ಯ ಸದಸ್ಯತ್ವಕ್ಕೆ ಶುಲ್ಕ ತೆರಬೇಕಿತ್ತು ಎಂಬುದು ತಿಳಿದು ಬರುತ್ತದೆ). ಈ ಸಮಿತಿಯ ಪ್ರಥಮ ಅಧ್ಯಕ್ಷರಾಗಿ ಎಸ್.ಎಸ್.ಸೆಟ್ಲೂರ್ ಆಯ್ಕೆಯಾದರು. ಆರ್.ಎ.ಶರ್ಮಾ ಕಾರ್ಯದರ್ಶಿಯಾದರು.

ಮೈಸೂರು ಕಾಂಗ್ರೆಸ್ಸಿಗರ ಪ್ರಥಮ ಅಧಿವೇಶನ ೧೯೨೭ರಲ್ಲಿ ಮಾಣಿಕ್ಯವೇಲು ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ಮೈಸೂರು ನಗರದಲ್ಲೇ ಸಮಾವೇಶಗೊಂಡಿತು. ಸಂಸ್ಥಾನದ ಎಲ್ಲಾ ಭಾಗಗಳಿಂದಲೂ ಪ್ರತಿನಿಧಿಗಳು ಭಾಗವಹಿಸಿದ್ದ ಈ ಅಧಿವೇಶನ ಮೈಸೂರು ರಾಜಕೀಯದಲ್ಲೆ ಒಂದು ಮಹತ್ವದ ತಿರುವಾಗಿತ್ತು. ಈ ಅಧಿವೇಶನದಲ್ಲಿ ಪ್ರಥಮ ಬಾರಿಗೆ ಸರ್ವಾನುಮತದಿಂದ 'ತಕ್ಷಣದಲ್ಲಿ ಮಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರ್ಕಾರವನ್ನು ರಚಿಸಬೇಕು' ಎಂಬ ನಿರ್ಣಯವನ್ನು ಅಂಗೀಕರಿಸಲಾಯಿತು. ಈ ನಿರ್ಣಯವನ್ನು ಕೈಗೊಂಡ ಕಾಂಗ್ರೆಸ್ ನಂತರ ಈ ಬೇಡಿಕೆಗೆ ಬದ್ಧವಾಗಿದ್ದು, ಎಲ್ಲಾ ಚಟುವಟಿಕೆಗಳಿಗೆ ಇದು ಮೂಲ ಮಂತ್ರವಾಯಿತು. ನಂತರದ ೧೯೨೯ರ ಮತ್ತು ೧೯೩೩ರ ಅಧಿವೇಶನಗಳಲ್ಲೂ ಜವಾಬ್ದಾರಿ ಸರ್ಕಾರದ ಬೇಡಿಕೆಯೂ ಅತ್ಯಂತ ಪ್ರಮುಖವಾದ ಬೇಡಿಕೆಯಾಗಿದ್ದಿತು.

೧೯೨೭ ರಲ್ಲಿ ಮಹಾತ್ಮಾ ಗಾಂಧೀಜಿಯವರು ಮುಂಬಯಿ ಕರ್ನಾಟಕದ ಪ್ರವಾಸ ಕೈಗೊಂಡಿದ್ದ ಸಂದರ್ಭದಲ್ಲಿ ಅನಾರೋಗ್ಯಪೀಡಿತರಾದರು. ಆಗ ಗಾಂಧೀಜಿಯವರು ಮೈಸೂರು ಸರ್ಕಾರದ ಆಹ್ವಾನದ ಮೇರೆಗೆ ೧೯೨೭ರ ಏಪ್ರಿಲ್‌ನಲ್ಲಿ ಬೆಂಗಳೂರಿನ ನಂದಿಬೆಟ್ಟದ ಅತಿಥಿಗೃಹದಲ್ಲಿ ನಾಲ್ಕು ತಿಂಗಳ ಕಾಲ ವಿಶ್ರಾಂತಿ ಪಡೆದರು. ಅದೇ ವರ್ಷ ಜುಲೈ ೩ರಂದು ಬೆಂಗಳೂರಿನಲ್ಲಿ ದಕ್ಷಿಣ ಭಾರತದ ಖಾದಿ ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ಭಾಷಣ ಮಾಡುತ್ತಾ ಗಾಂಧೀಜಿಯವರು ಖಾದಿ ಉತ್ಪಾದನೆಗೆ ಒತ್ತು ನೀಡಿದರು. ಈ ಭಾಷಣದಿಂದ ಪ್ರಭಾವಿತಗೊಂಡ ದಿವಾನ್ ಮಿರ್ಜಾರವರು ಸಂಸ್ಥಾನದಲ್ಲಿ ಬದನವಾಳು ಎಂಬಲ್ಲಿ ಖಾದಿ ಉತ್ಪಾದನಾ ಕೇಂದ್ರವನ್ನು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಗಾಂಧೀಜಿಯವರ ಪ್ರಭಾವದಿಂದ ಖಾದಿಗೆ ಮನಸೋತು ಚರಕದಿಂದ ನೂಲುವ

ಕಾರ್ಯವನ್ನು ತಮ್ಮ ಜೀವನದಲ್ಲಿ ರೂಢಿಸಿಕೊಂಡರು. ಈ ಸಂಬಂಧವಾಗಿ ತಮ್ಮ ಜೀವಿತದಲ್ಲಿ ಸ್ವಸ್ಥಳಗಳಿಗೆ ತೆರಳಿದಾಗ ಬಿಡುವಿನ ಸಮಯದಲ್ಲಿ ನೂಲುವ ಕಾರ್ಯ ಮಾಡುತ್ತಿದ್ದುದ್ದನ್ನು ಹೆಚ್.ಕೆ.ವೀರಣ್ಣಗೌಡರ ಕಿರಿಯ ಸಹೋದರ ಡಾ.ಮರಿಯಪ್ಪನವರು ಸ್ಮರಿಸುತ್ತಾರೆ. ಅಲ್ಲದೆ ೧೯೨೪ರ ಬೆಳಗಾಂ ಅಧಿವೇಶನಕ್ಕೆ ಸ್ವಯಂ ಪ್ರೇರಿತರಾಗಿ ವಿ.ವೆಂಕಟಪ್ಪನವರೊಡನೆ ತೆರಳುವ ಮುನ್ನ ಗೌಡರು ತಮ್ಮ ನವ ವಿನ್ಯಾಸದ ಉಡುಪುಗಳನ್ನು ಒಕ್ಕಲಿಗರ ವಿದ್ಯಾರ್ಥಿನಿಲಯದಲ್ಲಿನ ಇತರ ಬಡವಿದ್ಯಾರ್ಥಿಗಳಿಗೆ ದಾನ ಮಾಡಿ ತಾವು ಸಂಪೂರ್ಣ ಖಾದಿಮಯವಾಗಿ ಹೋಗಿದ್ದರೆಂಬುದು ಅವರ ಆತ್ಮಕಥೆಯಿಂದ ತಿಳಿದುಬರುತ್ತದೆ. ಹೀಗೆ ಪ್ರಥಮಬಾರಿಗೆ ಖಾದಿಧಾರಿಗಳಾದ ಹೆಚ್.ಕೆ.ವೀರಣ್ಣಗೌಡರು ತಮ್ಮ ಅಂತ್ಯಕಾಲದವರೆಗೂ ಖಾದಿಧಾರಿಗಳಾಗಿಯೇ ಜೀವಿಸಿದರು.

ಹೀಗೆ ಗಾಂಧೀಜಿಯವರು ಸಂಸ್ಥಾನದಲ್ಲಿ ಕೈಗೊಂಡ ಪ್ರವಾಸದಿಂದ ಜನತೆ ಖಾದಿ ಉದ್ಯೋಗದತ್ತ ಆಕರ್ಷಿತರಾದರೆ ಮತ್ತೊಂದೆಡೆ ಮಹಾರಾಜರು ಮತ್ತು ದಿವಾನರಿಗೆ ಗಾಂಧೀಜಿಯವರು ಸಂಸ್ಥಾನದ ಬಗೆಗಿನ ಮೆಚ್ಚುಗೆಯ ಮಾತುಗಳಿಂದ ತಮ್ಮ ಹೆಗ್ಗಳಿಕೆಯನ್ನು ಪ್ರದರ್ಶಿಸಲು ಅವಕಾಶವಾಯಿತು. ಮೈಸೂರು ಸಂಸ್ಥಾನದ ಬೆಂಗಳೂರು ದಂಡು ಪ್ರದೇಶದಲ್ಲಿ ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿ ರಾಷ್ಟ್ರೀಯ ಕಾಂಗ್ರೆಸ್ಸಿನ ಭಾಗವಾಗಿ ಕಾರ್ಯನಿರ್ವಹಿಸಿದರೆ, ೧೯೨೮ರಲ್ಲಿ ಹುಟ್ಟಿದ ಮೈಸೂರು ಸ್ಟೇಟ್ ಕಾಂಗ್ರೆಸ್ ಸಂಸ್ಥಾನಿಕ ರಾಜಕೀಯ ಪಕ್ಷವಾಗಿ ಪ್ರಾಬಲ್ಯಕ್ಕೆ ಬಂದಿತು.

ಜವಾಬ್ದಾರಿ ಸರ್ಕಾರ ಸ್ಥಾಪನೆಯ ಗುರಿಯನ್ನಿಟ್ಟುಕೊಂಡು. ಮೈಸೂರು ಸ್ಟೇಟ್ ಕಾಂಗ್ರೆಸ್ ೧೯೨೮ರಲ್ಲಿ ಸ್ಥಾಪನೆಯಾಯಿತು. ಆ ದಿಟ್ಟ ಹೆಜ್ಜೆ ಇಡಲು ಸ್ಫೂರ್ತಿ ಕೊಟ್ಟವರು ವೃದ್ಧಪಿತಾಮಹರೆನ್ನಿಸಿದ್ದ ಎಂ.ವೆಂಕಟಕೃಷ್ಣಯ್ಯನವರು. ಈ ಅಧಿವೇಶನವನ್ನು ಮದ್ರಾಸಿನ ಕಾಂಗ್ರೆಸ್ ಮುಖಂಡರಾದ ಎಸ್.ಸತ್ಯಮೂರ್ತಿ ಉದ್ಘಾಟಿಸಿದರು. ಆ ಸಂದರ್ಭದಲ್ಲಿ ಕಾಂಗ್ರೆಸ್ಸಿನ ಸ್ಥಾಪನೆಯ ಗುರಿಯನ್ನು ವೆಂಕಟಕೃಷ್ಣಯ್ಯನವರು ತಮ್ಮ ಭಾಷಣದಲ್ಲಿ 'ಕಾಂಗ್ರೆಸ್ಸು ವಿಧ್ವಂಸಕ ಕೃತ್ಯ ಮಾಡಲು ಹುಟ್ಟಿ ಕೊಂಡಿದ್ದಲ್ಲ. ನಿರಂಕುಶಾಧಿಕಾರಿಗಳ ಅತಿರೇಕಗಳನ್ನು ಸರಿಪಡಿಸಿ, ಪ್ರಜೆಗಳಿಗೆ ಸರ್ಕಾರದ ವಿಚಾರದಲ್ಲಿ ಗೌರವಾದರಗಳನ್ನು ಉಂಟು ಮಾಡುವುದೇ ಆಗಿದೆ. ಬ್ರಿಟಿಷ್ ಇಂಡಿಯಾದಲ್ಲಿ ನ್ಯಾಷನಲ್ ಕಾಂಗ್ರೆಸ್ ಹೇಗೋ ಹಾಗೆ ಸಂಸ್ಥಾನದಲ್ಲಿ ಸ್ಟೇಟ್ ಕಾಂಗ್ರೆಸ್ ಕಾರ್ಯಪ್ರವೃತ್ತ ಆಗುತ್ತದೆ. ಸರ್ಕಾರಕ್ಕೆ ಕಾಂಗ್ರೆಸ್ ಪ್ರತಿಪಕ್ಷವಲ್ಲ. ಸರ್ಕಾರದವರು, ಪ್ರಜೆಗಳು, ಈ ಸಂಸ್ಥೆ ಬೆಳೆಯಲು ಅವಕಾಶ ನೀಡಿ, ಈ ರಾಜ್ಯವು ಧರ್ಮರಾಜ್ಯ, ರಾಮರಾಜ್ಯ ಆಗಲು ನೆರವಾಗಬೇಕೆಂದು ಅವರು ಮನವಿ ಮಾಡಿಕೊಂಡರು."[೫೧] ಬ್ರಿಟಿಷ್ ಪ್ರಾಂತ್ಯಗಳಲ್ಲಿ ನಡೆಯುತ್ತಿದ್ದ ಚಳುವಳಿಗೆ ಮೈಸೂರು ಸಂಸ್ಥಾನದ ಜನರ ಸಹಕಾರ ನೀಡುತ್ತಿದ್ದುದ್ದು ಬೊಂಬಾಯಿ ಸರ್ಕಾರಕ್ಕೆ ಅಸಮಾಧಾನವನ್ನುಂಟುಮಾಡಿತು. ಒಟ್ಟಿನಲ್ಲಿ ರಾಷ್ಟ್ರನಾಯಕರ ಮೇಲಿನ ಪ್ರತಿಬಂಧಕಾಜ್ಞೆಗಳು ಗಣಪತಿ ಗಲಾಟೆ ದೇಶೀಯ ಸಂಸ್ಥಾನಗಳ ಪ್ರಜೆಗಳ ಒಕ್ಕೂಟ ಸ್ಥಾಪನೆ, ತಗಡೂರರ

---

[೫೧] ಸ್ವತಂತ್ರ್ಯ ಸೇನಾನಿ ಎಂ.ಎನ್.ಜೋಯಿಸ್. ಪು-೮೭

ನಾನಾ ವಿಧದ ಚಳುವಳಿ ಮೈಸೂರಿನಾದ್ಯಂತ ಜನಜಾಗೃತಿ ಉಂಟಾಗುವಂತೆ ಮಾಡಿದುವು. ಶಿಕಾರಿಪುರ ತಾಲ್ಲೂಕಿನಲ್ಲಿ ಮರಿಸ್ವಾಮಿ ಹೀರೇಮಠರ ನೇತೃತ್ವದಲ್ಲಿ ಕಂದಾಯ ನಿರಾಕರಣೆ ಚಳುವಳಿಯೂ ನಡೆಯಿತು. ಇರ್ವಿನ್ ನಾಲಾ ರೈತರ ಮೇಲೆ ಹೇರಲಾದ ಅನ್ಯಾಯವೂ, ಆಗಾಧವೂ ಆದ ಕಂದಾಯದ ಪುನರ್ ವಿಮರ್ಶೆ ಮಾಡಬೇಕೆಂದು ಸರ್ಕಾರವನ್ನು ಒತ್ತಾಯಿಸಲು ಹೆಚ್.ಕೆ.ವೀರಣ್ಣಗೌಡರು ನಡೆಸಿದ ರೈತರ ಜಾಥಾ ಮೈಸೂರಿನ ರಾಜಕೀಯ ಇತಿಹಾಸದಲ್ಲಿ ಚಿರಸ್ಮರಣೀಯ ಆಯಿತು. ಹೇಗೆ ಜನರಲ್ಲಿ ರಾಜಕೀಯ ಪ್ರಜ್ಞೆ ಬೆಳೆದು ಬಂದು ಎಚ್ಚೆತ್ತ ಜನ ಮಹಾರಾಜರ ನೇತೃತ್ವದ ಜವಾಬ್ದಾರಿ ಸರ್ಕಾರವನ್ನು ಅಪೇಕ್ಷಿಸಿದರು.

ವಾಸ್ತವದಲ್ಲಿ ಮೈಸೂರು ಸ್ಟೇಟ್ ಕಾಂಗ್ರೆಸ್ ರಾಷ್ಟ್ರೀಯ ಕಾಂಗ್ರೆಸ್‌ನ ಭಾಗವಾಗಿದ್ದರೂ ಅದರ ಕಾಯಕ್ರಮ ಮತ್ತು ರಾಜಕೀಯ ನಿಲುವುಗಳಿಂದಾಗಿ ಸಂಸ್ಥಾನದ ಸರ್ಕಾರ ಕಾಂಗ್ರೆಸ್ ಪಕ್ಷಕ್ಕೆ ಸಂಬಂಧಿಸಿದ ಹಾಗೆ ದ್ವಿಮುಖ ನೀತಿಯನ್ನು ಅನುಸರಿಸಿತು. ಈ ನೀತಿಗೆ ಪೂರಕವಾಗಿ ಸಂಸ್ಥಾನದ ವಿರುದ್ಧ ಬರೆಯುತ್ತಿದ್ದ ಹೊರಗಿನ ಪತ್ರಿಕೆಗಳನ್ನು ನಿಷೇಧಿಸುವುದರ ಜೊತೆಗೆ 'ಸಂಪದಾಭ್ಯುದಯ' ಹಾಗೂ 'ಸಾಧ್ವಿ'ಗಳು ಸೇರಿದಂತೆ ಸಂಸ್ಥಾನಾ ಪಾತ್ರಿಕೆಗಳ ಮೇಲೆ ಗದಾ ಪ್ರಹಾರ ಮಾಡಲಾಯಿತು.

ರಾಷ್ಟ್ರೀಯ ಕಾಂಗ್ರೆಸ್‌ನ ಪೂರ್ಣ ಸ್ವರಾಜ್ಯ ನೀತಿಯ ಅನುಮೋದನೆಯ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದಾದ್ಯಂತ ಕಾಂಗ್ರೆಸ್ಸಿಗರು ಜನವರಿ ೨೬ ರಂದು ಸ್ವಾತಂತ್ರ ದಿನಾಚರಣೆಯನ್ನು ಆಚರಿಸಿದರು. ೧೯೨೯ರಲ್ಲಿ ಮೈಸೂರು ಕಾಂಗ್ರೆಸ್ ಸಮಿತಿ ವೆಂಕಟಕೃಷ್ಣಯ್ಯನವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಂಡು ಒಂದು ನಿರ್ಣಯವನ್ನು ಅಂಗೀಕರಿಸಿತು. ಇದರ ಪ್ರಕಾರ ರಾಷ್ಟ್ರೀಯ ಕಾಂಗ್ರೆಸ್‌ನ ಸ್ವರಾಜ್ ಧ್ವಜವೇ ಮೈಸೂರು ಕಾಂಗ್ರೆಸ್ ಸಮಿತಿಯ ಧ್ವಜ ಎಂಬುದಾಗಿ ಘೋಷಿಸಲಾಯಿತು. ಇದರ ಪ್ರಯುಕ್ತ ಮೈಸೂರಿನ ಸಂಸ್ಥಾನದಲ್ಲಿ ಅನೇಕ ಕಡೆಗಳಲ್ಲಿ ಸ್ವಾತಂತ್ರ್ಯ ದಿನವನ್ನು ಧ್ವಜಾರೋಹಣದ ಮೂಲಕ ಆಚರಿಸಲಾಯಿತು.[೫೨] ಇದನ್ನು ಹತ್ತಿಕ್ಕಲು ಮೈಸೂರು ಸರ್ಕಾರ ಅನೇಕ ಕಡೆ ಪ್ರತಿಬಂಧಕಾಜ್ಞೆಯನ್ನು ಜಾರಿಗೆ ತಂದಿತ್ತಾದರೂ ಇದನ್ನು ಕಾರ್ಯಕರ್ತರು ಉಲ್ಲಂಘಿಸಿದಾಗ ಅವರ ಮೇಲೆ ಲಾಠಿ ಪ್ರಹಾರ ಮಾಡಿ ಅನೇಕರನ್ನು ಬಂಧಿಸಿತು.

೧೯೩೦ರ ಜನವರಿ ೯ರಂದು ಮಹಾತ್ಮಾಗಾಂಧೀಜಿಯವರು ಅಸಹಕಾರ ಚಳುವಳಿ ಮತ್ತು ಕರನಿರಾಕರಣಾ ಚಳುವಳಿಗೆ ಕರೆ ನೀಡಿದರು. ಅದರ ಪ್ರಯುಕ್ತ ೧೯೩೦ ಮಾರ್ಚ್ ೪ ರಂದು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಹೊಸಕೊಪ್ಪ ಶ್ರೀನಿವಾಸರಾವ್ 'ಭಾರತ ಸ್ವಾತಂತ್ರ್ಯ ಎಂಬುದು ರಾಜರಾಳ್ವಿಕೆಯ ಸಂಸ್ಥಾನ ಮತ್ತು ಬ್ರಿಟಿಷ್ ಇಂಡಿಯಾದ ರಾಜ್ಯಗಳೆಲ್ಲಕ್ಕೂ ಪ್ರಮುಖವಾದದ್ದು ಮತ್ತು ಎಲ್ಲರ ಗುರಿಯು ಒಂದೇ ಆಗಿದ್ದು, ಅದು ಭಾರತ ಸ್ವಾತಂತ್ರ್ಯವೇ ಆಗಿದೆ' ಎಂದು ಪ್ರತಿಪಾದಿಸಿದರು. ಆದ್ದರಿಂದ ಎಲ್ಲರೂ ಒಟ್ಟುಗೂಡಿ ಈ ಚಳುವಳಿಯನ್ನು ಮಾಡುವುದೇ ಉಚಿತವೆಂದು ಮೈಸೂರು ಕಾಂಗ್ರೆಸ್ ಸಮಿತಿ ನಿರ್ಧರಿಸಿತು. ಅಷ್ಟರಲ್ಲಿ ಮೈಸೂರು ಸರ್ಕಾರ

---

[೫೨] ಟಿ.ಡಿ.ದೇವೇಗೌಡ. ಪು.೧೬೭

ಮೆರವಣಿಗೆಯಲ್ಲಿ ರಾಷ್ಟ್ರೀಯ ಧ್ವಜವನ್ನು ಕೊಂಡೊಯ್ಯುವುದನ್ನು ನಿಷೇಧಿಸಿತು. ಒಟ್ಟಾರೆ ಈ ಅಸಹಕಾರ ಚಳವಳಿಯು ಮೈಸೂರಿನ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಪ್ರಾರಂಭಿಸಿತು ಎನ್ನಬಹುದು. ಇದು ಸಂಸ್ಥಾನದ ಸ್ವಾತಂತ್ರ್ಯ ಚಳವಳಿಗೆ ಹೊಸ ಹುರುಪನ್ನು ನೀಡಿ ಕಾಂಗ್ರೆಸ್ಸಿನ ಒಗ್ಗೂಡುವಿಕೆಗೆ ಕಾರಣವಾಯಿತು.[೫೩]

೧೯೩೭ರಲ್ಲಿ ಮೈಸೂರು ಕಾಂಗ್ರೆಸ್ ಮತ್ತು ರಾಷ್ಟ್ರೀಯ ಕಾಂಗ್ರೆಸ್ ಎರಡೂ ಒಂದುಗೂಡಿದವು. ಮೈಸೂರು ಕಾಂಗ್ರೆಸ್ ಸಂಸ್ಥೆಯು ಅಖಿಲ ಭಾರತ ಕಾಂಗ್ರೆಸ್ಸಿನ ತ್ರಿವರ್ಣ ಧ್ವಜವನ್ನೇ ತನ್ನ ಧ್ವಜವೆಂದು ಅಂಕೀಕರಿಸಿತು. ಆದರೆ ೧೯೩೭ರ ದಸರ ಅಧಿವೇಶನದಲ್ಲಿ ದಿವಾನರು 'ಸಾರ್ವಜನಿಕವಾಗಿ ರಾಷ್ಟ್ರೀಯ ಕಾಂಗ್ರೆಸ್ ಧ್ವಜವನ್ನು ಹಾರಿಸಬಾರದು ಮತ್ತು ಅದನ್ನು ರಾಷ್ಟ್ರ ಧ್ವಜವೆಂದು ತಾವು ಪರಿಗಣಿಸಲು ಸಾಧ್ಯವಿಲ್ಲವೆಂದು, ಆದರೆ ಕಾಂಗ್ರೆಸ್ಸಿಗರು ಪಕ್ಷದ ಕಾರ್ಯ ಚಟುವಟಿಕೆಯಲ್ಲಿ ಮಾತ್ರ ಧ್ವಜ ಬಳಕೆಯನ್ನು ಮಾಡಿಕೊಳ್ಳಬಹುದು ಅದು ಖಾಸಗಿಯಾಗುತ್ತದೆ' ಎಂದು ಸ್ಪಷ್ಟಪಡಿಸಿದರು. ಆದರೆ ಕಾಂಗ್ರೆಸ್ ನಾಯಕರು ಇದನ್ನು ಮಾನ್ಯಮಾಡಲಿಲ್ಲ. ಅದೇ ಅಧಿವೇಶನದಲ್ಲಿ ಅಕ್ಟೋಬರ್ ೧೬ ರಂದು ಕಾಂಗ್ರೆಸ್ ಸದಸ್ಯರು ದಿವಾನರ ಈ ನೀತಿಯನ್ನು ಖಂಡಿಸಿದರು. ಹೆಚ್.ಕೆ.ವೀರಣ್ಣಗೌಡರು ಸದನದಲ್ಲಿ "ರಾಜ್ಯಾದ್ಯಂತ ಎಲ್ಲರೂ ಮೈಸೂರು ಧ್ವಜಕ್ಕೆ ಗೌರವವನ್ನು ನೀಡುತ್ತಾರೆ. ಅಲ್ಲದೆ ಯಾರೂ ಕೂಡ ಅಗೌರವ ಸೂಚಿಸುವುದಿಲ್ಲ. ಅದರ ಬಗ್ಗೆ ಅನುಮಾನ ವ್ಯಕ್ತಪಡಿಸುವ ಅವಶ್ಯಕತೆಯೂ ಇಲ್ಲ. ಆದರೆ ಕಾಂಗ್ರೆಸ್ ಧ್ವಜವನ್ನು ಕಾಂಗ್ರೆಸ್ ಕಾರ್ಯಕ್ರಮಗಳಲ್ಲಿ ಹಾರಿಸುವುದರಿಂದ ಯಾರಿಗೂ ಯಾವುದೇ ತೊಂದರೆಯಾಗುವುದಿಲ್ಲ ಮತ್ತು ಯಾವಾಗಲೂ ಅದನ್ನು ನಾವು ಬಳಸುವುದಿಲ್ಲವಾದ್ದರಿಂದ ಸರಕಾರ ಮತ್ತು ನಮ್ಮಗಳ ನಡುವೆ ಮುಂದೆ ಯಾವುದೇ ಸಮಸ್ಯೆ ಉದ್ಭವವಾಗುವುದಿಲ್ಲ. ಆದ್ದರಿಂದ ದಿವಾನರು ಬೆಂಗಳೂರು, ಶಿವಮೊಗ್ಗ, ಮಂಡ್ಯ, ಮೈಸೂರು ಮೊದಲಾದ ಕಡೆಗಳಲ್ಲಿ ವಿಧಿಸಿರುವ ಪ್ರತಿಬಂಧಕಾಜ್ಞೆಯನ್ನು ಹಿಂತೆಗೆದುಕೊಳ್ಳಬೇಕೆಂದು" ಕೇಳಿಕೊಂಡರು. ಇದೇ ರೀತಿ ಎಸ್.ರಂಗಸ್ವಾಮಯ್ಯ ಮತ್ತು ಟಿ.ಮರಿಯಪ್ಪನವರು ಕೂಡ ದಿವಾನರ ಧೋರಣೆಯನ್ನು ಟೀಕಿಸಿ ಕಾಂಗ್ರೆಸ್ ಮತ್ತು ಮೈಸೂರು ಧ್ವಜಗಳೆರಡನ್ನು ಹಾರಿಸುವಂತೆ ತಿಳಿಸಿದರು.[೫೪]

ಆದರೆ ಈ ಧ್ವಜಾರೋಹಣಕ್ಕೆ ಸರ್ಕಾರ ತಡೆ ಹಾಕಿದಾಗ ಸಂಸ್ಥಾನದಲ್ಲಿ ಧ್ವಜಸತ್ಯಾಗ್ರಹ ನಡೆಯಿತು. ಕಾಂಗ್ರೆಸ್ ನಾಯಕರು ಸಾರ್ವಜನಿಕ ಸಭೆಗಳನ್ನು ಉದ್ದೇಶಿಸಿ ಭಾಷಣ ಮಾಡಿ ಸರ್ಕಾರದ ದಮನಕಾರಿ ನೀತಿಯನ್ನು ಉಗ್ರವಾಗಿ ಟೀಕಿಸಿ ಜನತೆಯನ್ನು ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವಂತೆ ಕೋರಿದರು. ಇದರಿಂದಾಗಿ ಸರ್ಕಾರ ಸಾರ್ವಜನಿಕ ಸಭೆಗಳಿಗೆ ನಿಷೇಧವನ್ನು ಏರುವುದರ ಮೂಲಕ ಅನೇಕ ಕಾಂಗ್ರೆಸ್ ನಾಯಕರ ಮೇಲೆ ಭಾಷಣ ಮಾಡದಂತೆ ನಿಷೇದಾಜ್ಞೆಯನ್ನು ಜಾರಿಗೊಳಿಸಿತು.

---

[೫೩] ಡಾ.ಟಿ.ಡಿ.ದೇವೇಗೌಡ. ಪು.೧೬೮,೧೬೯

[೫೪] ಡಾ. ಟಿಡಿ.ದೇವೇಗೌಡ. ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ. ಪು.೧೭೩

ಕೆ.ಚಂಗಲರಾಯರೆಡ್ಡಿಯವರು ಅಖಿಲ ಭಾರತ ಕಾಂಗ್ರೆಸ್ ನಾಯಕರಲ್ಲಿ ಮೈಸೂರು ಸರಕಾರದ ದಮನಕಾರಿ ನೀತಿಯನ್ನು ವಿವರಿಸಿ ಅವರ ಬೆಂಬಲವನ್ನು ಪಡೆಯಲು ಬ್ರಿಟಿಷ್ ಇಂಡಿಯಾಕ್ಕೆ ಪ್ರವಾಸ ಕೈಗೊಂಡು ಜವಹರಲಾಲ್ ನೆಹರುರವರನ್ನು ಭೇಟಿಯಾದರು ಮತ್ತು ೧೯೩೭ರ ಅಕ್ಟೋಬರ್ ೨೯ ರಂದು ಕಲ್ಕತ್ತದಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಪ್ರಾರಂಭಗೊಂಡಿತು. ಇದರ ಪ್ರತಿನಿಧಿಯಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯರವರು ಒಂದು ನಿರ್ಣಯವನ್ನು ಮಂಡಿಸಿ ಮೈಸೂರು ಸರಕಾರ ಕಾಂಗ್ರೆಸ್‌ನ ದಿನನಿತ್ಯದ ರಾಜಕೀಯ ಚಟುವಟಿಕೆಗೆ ಅಡ್ಡಿಮಾಡುತ್ತಿದ್ದು ಅನೇಕ ಕಾಂಗ್ರೆಸ್ ನಾಯಕರನ್ನು ಬಂಧಿಸಿದೆ, ಭಾಷಣ ಮಾಡದಂತೆ ನಿಷೇಧಿಸಿದೆ, ಸಭೆ ಸಮಾರಂಭಗಳನ್ನು ಮಾಡದಂತಾಗಿದೆ. ಇದಕ್ಕೆಲ್ಲ ದಿವಾನರ ದಮನಕಾರಿ ಪ್ರವೃತ್ತಿಯೇ ಕಾರಣ. ಇದನ್ನು ವಿರೋಧಿಸಿ ಸಂಸ್ಥಾನದ ಜನತೆ ನಡೆಸುತ್ತಿರುವ ಹೋರಾಟಕ್ಕೆ ಮೆಚ್ಚಿಗೆ ವ್ಯಕ್ತಪಡಿಸಿ ಸರಕಾರದ ನೀತಿಯನ್ನು ಖಂಡಿಸಿ ನಿರ್ಣಯವನ್ನು ಮಂಡಿಸಿದರು. ಬಾಂಬೆ ಪ್ರಾಂತ್ಯದ ಕಾಂಗ್ರೆಸ್ ನಾಯಕರಾದ ಕೆ.ಎಫ್. ನಾರಿಮನ್‌ರವರು ೧೯೩೭ ಅಕ್ಟೋಬರ್‌ನಲ್ಲಿ ಮೈಸೂರು ಪ್ರವಾಸ ಕೈಗೊಂಡಿದ್ದಾಗ ಸರಕಾರ ಇವರ ಮೇಲೆ ನಿರ್ಬಂಧವನ್ನು ಹೇರಿ ಬಂಧಿಸಿದರು. ಈ ಹಿನ್ನೆಲೆಯಲ್ಲಿ ನಾರಿಮನ್‌ರವರು ಕಮಲಾದೇವಿ ಚಟ್ಟೋಪಾಧ್ಯಾಯರ ನಿರ್ಣಯವನ್ನು ಬೆಂಬಲಿಸುತ್ತಾ 'ಮೈಸೂರಿನಲ್ಲಿ ನಾಗರೀಕ ಸರಕಾರವೇ ಇಲ್ಲ, ಸರಕಾರ ಅಚ್ಚಾದ ನಿಷೇಧಿತ ಆಜ್ಞೆಯನ್ನು ತಯಾರು ಮಾಡಿಕೊಂಡೇ ಇರುತ್ತದೆ. ಯಾರಾದರೂ ನಾಯಕರು ಆ ರಾಜ್ಯದ ಕಡೆ ಹೊರಟರೆ ಸಾಕು ಜಾರಿಗೊಳಿಸುವರು ಇದಕ್ಕೆ ಅಲ್ಲಿಯ ಅತೀ ಬುದ್ಧಿವಂತ ರಾಯಭಾರಿಯಂತಿರುವ ದಿವಾನರೇ ಕಾರಣ ಎಂದು' ತಿಳಿಸಿದರು. ಅಂತಿಮವಾಗಿ ನಿರ್ಣಯವನ್ನು ಅಂಗೀಕರಿಸಿ ಮೈಸೂರು ಜನತೆಯ ಅಹಿಂಸಾತ್ಮಕ ಶಾಂತಿಯುತ ಹೋರಾಟಕ್ಕೆ ಸಂಬಂಧಿಸಿದಂತೆ ಸಂಪೂರ್ಣ ಬೆಂಬಲ ಮತ್ತು ಪ್ರೋತ್ಸಾಹವಿದೆ ಎಂಬುದನ್ನು ತಿಳಿಸಲಾಯಿತು.[೫೫]

ಮೈಸೂರು ಕಾಂಗ್ರೆಸ್, ರಾಷ್ಟ್ರೀಯ ಕಾಂಗ್ರೆಸ್ ಕೈಗೊಂಡ ನಿರ್ಣಯದಿಂದ ತನ್ನ ನೈತಿಕ ಬಲವನ್ನು ಹೆಚ್ಚಿಸಿಕೊಂಡಿತು ಮತ್ತು ತನ್ನ ಹೋರಾಟವನ್ನು ಮುಂದುವರಿಸುತ್ತ ಸಂಸ್ಥಾನದ ಅನೇಕ ಕಡೆಗಳಲ್ಲಿ ಸಭೆ ಸಮಾರಂಭಗಳನ್ನು ಯೋಜಿಸಿತು. ಸರಕಾರದ ದಮನಕಾರಿ ನೀತಿಯಿಂದ ಅನೇಕ ಜನರನ್ನು ಬಂಧಿಸಿ ಜೈಲಿಗೆ ಕಳುಹಿಸಿದ್ದರ ವಿರುದ್ಧ ೧೯೩೭ರ ಸೆಪ್ಟೆಂಬರ್ ೭ನೇ ತಾರೀಖನ್ನು 'ದಮನಕಾರಿ ದಿನ' ವೆಂತಲೂ, ದಿವಾನರ ಗಮನ ಸೆಳೆಯುವ ದೃಷ್ಟಿಯಿಂದ ನವೆಂಬರ್ ೧೪ನೇ ತಾರೀಖನ್ನು 'ದೇಶಭಕ್ತರ ದಿನ' ಎಂದೂ ಆಚರಿಸಲಾಯಿತು. ಈ ಎರಡು ಆಚರಣೆಗಳು ಸಂಸ್ಥಾನದಲ್ಲಿ ಕಾಂಗ್ರೆಸ್‌ಗಿರುವ ಅಪಾರ ಬೆಂಬಲವನ್ನು ಸೂಚಿಸಿದುದಲ್ಲದೇ ದಿವಾನರ ವಿಫಲತೆಯನ್ನು ತೋರಿಸಿತು. ನಂತರ ಜವಹರ್‌ಲಾಲ್ ನೆಹರುರವರು ದಿವಾನರಿಗೆ ಒಂದು ಪತ್ರ ಬರೆದು 'ಕಾಂಗ್ರೆಸ್ ಕಾರ್ಯಕ್ರಮಗಳ ಬಗ್ಗೆ ಮೈಸೂರು ಸರಕಾರ ಅನುಸರಿಸುತ್ತಿರುವ ದಮನಕಾರಿ ನೀತಿ ಸರಿಯಲ್ಲ' ಎಂದು ಎಚ್ಚರಿಸಿದರು.[೫೬]

---

[೫೫] ಪೂರ್ವೋಕ್ತಿ. ಪು.೧೭೫

[೫೬] ಪೂರ್ವೋಕ್ತಿ. ಪು.೧೭೬

ಈ ಎಲ್ಲಾ ತದ್ವಿರುದ್ಧ ನೀತಿಗಳಿಂದಾಗಿ ಮೈಸೂರು ರಾಜಕೀಯ ತೀವ್ರವಾಗತೊಡಗಿ ಹೆಚ್.ಸಿ.ದಾಸಪ್ಪ, ಹೆಚ್.ಕೆ.ವೀರಣ್ಣಗೌಡ ಮತ್ತಿತರರು ಜನತೆಯನ್ನು ಸರ್ಕಾರದ ವಿರುದ್ಧ ಪ್ರಚೋದಿಸುತ್ತಿದ್ದಾರೆಂದು ಆಪಾದನೆಯ ಮೇಲೆ ಬಂಧಿಸಿ ಜೈಲಿಗೆ ಕಳುಹಿಸಲಾಯಿತು. ಇವರನ್ನು ಅನುಸರಿಸಿ ಇನ್ನೂ ಹೆಚ್ಚಿನ ಕಾಂಗ್ರೆಸ್ ನಾಯಕರು ಬಂಧಿತರಾದರು.[೯೭] ಇದನ್ನು ರಾಷ್ಟ್ರೀಯ ಕಾಂಗ್ರೆಸ್ ವಿರೋಧಿಸಿದರೂ ದಿವಾನರ ದಮನಕಾರಿ ನೀತಿ ಮುಂದುವರಿಯಿತು. ೧೯೩೮ರ ಜನವರಿ ೨೬ರಂದು ಮೈಸೂರು ಸಂಸ್ಥಾನದಾದ್ಯಂತ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲು ನಿರ್ಧರಿಸಲಾಯಿತು. ಈ ಕಾರ್ಯಕ್ರಮದ ಅಂಗವಾಗಿ ಸಂಸ್ಥಾನದಾದ್ಯಂತ ರಾಷ್ಟ್ರೀಯ ಧ್ವಜವನ್ನು ಹಾರಿಸಲು ಯೋಜಿಸಲಾಯಿತು. ಸ್ವಾಭಾವಿಕವಾಗಿಯೇ, ಈ ಕಾಂಗ್ರೆಸ್ ಕಾರ್ಯಕ್ರಮವನ್ನು ದಿವಾನರು ಮಟ್ಟಹಾಕಲು ಪ್ರಯತ್ನಿಸಿದರು. ಈ ನೀತಿಗೆ ಪೂರಕವಾಗಿ ಟಿ.ಸಿದ್ದಲಿಂಗಯ್ಯ, ಎನ್.ಎಸ್.ಹರ್ಡೇಕರ್, ಹೆಚ್.ಕೆ.ವೀರಣ್ಣಗೌಡ, ಹೆಚ್.ಸಿ.ದಾಸಪ್ಪ ಮೊದಲಾದ ನಾಯಕರುಗಳಿಗೆ ನೋಟೀಸ್ ಜಾರಿ ಮಾಡಿ ಸಾರ್ವಜನಿಕ ಸ್ಥಳಗಳಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಬಾರದು, ಸಭೆ ಸೇರಬಾರದು, ಭಾಷಣ ಮಾಡಬಾರದು ಎಂದು ನಿರ್ಬಂಧಿಸಿ ಅನೇಕ ಪ್ರದೇಶಗಳಲ್ಲಿ ಪೊಲೀಸ್ ಕಾಯಿದೆಯ ೧೪೪ ವಿಧಿಯನ್ನು ಜಾರಿಗೊಳಿಸಲಾಯಿತು. ಕಾಂಗ್ರೆಸ್ ನಾಯಕರು ಈ ದಮನಕಾರಿ ಸರ್ಕಾರದ ನೀತಿಯನ್ನು ಉಲ್ಲಂಘಿಸುವುದರ ಮೂಲಕ ಪ್ರತಿಭಟಿಸಿದರು.

ಮೈಸೂರು ಕಾಂಗ್ರೆಸ್ ಜವಾಬ್ದಾರಿ ಸರ್ಕಾರದ ಅಂದರೆ ಜನತಾ ಪ್ರತಿನಿಧಿಗಳನ್ನೊಳಗೊಂಡ ಜನತೆಗೆ ಜವಾಬ್ದಾರವಾಗಿರುವ ಸರ್ಕಾರದ ಅವಶ್ಯಕತೆಯನ್ನು ಮನಗೊಂಡು ಜವಾಬ್ದಾರಿ ಸರ್ಕಾರಕ್ಕಾಗಿ ಒತ್ತಾಯಿಸಿ ಸಂಸ್ಥಾನದಾದ್ಯಂತ ರಾಜಕೀಯ ಚಳವಳಿಯನ್ನು ಪ್ರಾರಂಭಿಸಿತು. ಈ ಚಳವಳಿಯನ್ನು ಹತ್ತಿಕ್ಕಲು ಸ್ವಾಭಾವಿಕವಾಗಿ ಸರ್ಕಾರ ಪ್ರಯತ್ನಿಸಿತು. ಈ ಪ್ರಯತ್ನವನ್ನು ದಮನಕಾರಿ ನೀತಿಯೆಂದು ಘೋಷಿಸಿದ ಮೈಸೂರು ಕಾಂಗ್ರೆಸ್ ಸದಸ್ಯರು ೧೯೩೭ರ ಅಕ್ಟೋಬರ್‌ನಲ್ಲಿ ಪ್ರಜಾಪ್ರತಿನಿಧಿ ಸಭೆಯಿಂದ ಹೊರ ನಡೆದು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಹೊಸದಾಗಿ ರಚಿತಗೊಂಡಿದ್ದ ಪ್ರಜಾಪಕ್ಷದ ಅಧ್ಯಕ್ಷರಾದ ಡಿ.ಎಸ್.ಮಲ್ಲಪ್ಪ ೧೯೩೮ರಲ್ಲಿ ವಿಧಾಯಕ ಸಭೆಗೆ ನಿರ್ಣಯವನ್ನು ತಂದು ಸಂವಿಧಾನಾತ್ಮಕ ಸುಧಾರಣೆಗೆ ಒತ್ತಾಯಿಸಿದರು. ನಂತರ ೧೯೩೮ರಲ್ಲಿ ಮೂರು ನಿರ್ಣಯಗಳನ್ನು ವಿಧಾಯಕ ಸಭೆಯಲ್ಲಿ ತರಲಾಯಿತು. ಸದಸ್ಯರಾದ ಪಿ.ಸುಬ್ಬಯ್ಯ ಶೆಟ್ಟಿಯವರು ನಿರ್ಣಯವನ್ನು ತಂದು ಸಂಸ್ಥಾನದಲ್ಲಿ ಮಹಾರಾಜರು, ಅಧಿಕಾರಿಗಳು ಮತ್ತು ಅಧಿಕಾರೇತರರನ್ನು ಒಳಗೊಂಡ ಸಮಿತಿಯನ್ನು ರಚಿಸಿ ಇನ್ನು ಹೆಚ್ಚಿನ ರಾಜಕೀಯ ಸುಧಾರಣೆಯನ್ನು ಆದಷ್ಟು ಬೇಗ ತರಬೇಕೆಂದು ಒತ್ತಾಯಿಸಿದರು. ಹೀಗೆ ಎರಡು ಸದನಗಳಲ್ಲೂ ಕೂಡ ಸುಧಾರಣೆಯನ್ನು ಬಯಸಿ ಒತ್ತಡ ಹೇರಿದ್ದರಿಂದ ಸರಕಾರ ಸಂವಿಧಾನ ಸುಧಾರಣೆಯನ್ನು ತರಲು ಬದ್ಧ ಎಂಬುದಾಗಿ ಘೋಷಿಸಿತು. ಇದರ ಪ್ರಯುಕ್ತವಾಗಿ ಆಜ್ಞೆಯನ್ನು ಹೊರಡಿಸಿ ಕೆ.ಆರ್.ಶ್ರೀನಿವಾಸ ಅಯ್ಯಂಗಾರ್‌ರವರ ಅಧ್ಯಕ್ಷತೆಯಲ್ಲಿ ಇಬ್ಬರು ಅಧಿಕಾರಿಗಳು ಮತ್ತು ೧೭ ಅಧಿಕಾರೇತರ ಸದಸ್ಯರ ವಿಶೇಷ ಸಮಿತಿಯನ್ನು

[೯೭] ಪೂರ್ವೋಕ್ತಿ. ಪು.೧೭೭

ರಚಿಸಲಾಯಿತು. ಈ ಸಮಿತಿಯಲ್ಲಿ ಕೆಳಕಂಡವರು ಅದರ ಪದಾಧಿಕಾರಿಗಳಾಗಿದ್ದರು. ಅಧ್ಯಕ್ಷರು ಕೆ.ಆರ್.ಶ್ರೀನಿವಾಸ ಅಯ್ಯಂಗಾರ್, ಸರಕಾರಿ ಸಭಾಸದರು ಎನ್.ಎಸ್.ಸುಬ್ಬರಾವ್, ಕೆ.ವಿ.ಅನಂತರಾಮನ್ (ರೆವಿನ್ಯೂ ಕಮಿಷನರ್) ಸರಕಾರೇತರ ಸದಸ್ಯರು, ಕಾಂಗ್ರೆಸ್‌ನಿಂದ ಕೆ.ಚಂಗಲರಾಯರೆಡ್ಡಿ, ಬಿ.ಚಂದ್ರಶೇಖರಶೆಟ್ಟಿ ಮತ್ತು ಡಿ.ಎಚ್.ಚಂದ್ರಶೇಖರಯ್ಯ ರವರು ಡಾ.ಎಫ್.ಎಕ್ಸ್.ಡಿಸೌಜ, ಡಿ.ವಿ.ಗುಂಡಪ್ಪ, ರಾವ್ ಸಾಹೇಬ್ ಹಯವದನರಾವ್, ಹಿರಿಯಣ್ಣಯ್ಯ, ಜೆ.ಮಹಮದ್ ಇಮಾಂ, ಅಬ್ಬಾಸ್‌ಖಾನ್, ಸಿ.ನರಸಿಂಹಯ್ಯ, ಬಿ.ಎಸ್.ಪುಟ್ಟಸ್ವಾಮಿ, ಟಿ.ರಾಮಚಂದ್ರ, ಎಮ್.ಸಿ.ರಂಗೈಯ್ಯಂಗಾರ್, ಕೆ.ಡಿ.ರುಕ್ಮಿಣಿಯಮ್ಮ, ಪಿ.ಸುಬ್ರಾಮ ಚಟ್ಟಿ, ರೆ.ಟಾಮ್ಲಿನ್‌ಸನ್, ವಿ.ವೆಂಕಟಪ್ಪ(ಕಾಂ), ಕೆ.ಗುರುದತ್ತ(ಸೆಕ್ರೆಟರಿ), ಎಂ.ಕೆ.ವರದರಾಜನ್(ಅಸಿಸ್ಟೆಂಟ್ ಸೆಕ್ರೆಟರಿ)

ಈ ಸಮಿತಿಗೆ ಎರಡೂ ಸದನಗಳ ಅಧಿಕಾರ, ಕಾರ್ಯವ್ಯಾಪ್ತಿ, ಮತದಾನ, ಮತದಾರರು ಎರಡು ಸದನಗಳ ಸಂಬಂಧ, ಸದಸ್ಯರ ಸೌಲಭ್ಯಗಳು, ಅಲ್ಪಸಂಖ್ಯಾತರ ಹಿತಾಸಕ್ತಿ ರಕ್ಷಣೆ, ಇವೇ ಮೊದಲಾದ ಅಂಶಗಳ ಮೇಲೆ ಸುಧಾರಣೆಗಳನ್ನು ತರಲು ವರದಿ ಸಲ್ಲಿಸುವಂತೆ ಸರ್ಕಾರ ಕೇಳಿತು. ಆದರೆ ಕಾಂಗ್ರೆಸ್ ಪಕ್ಷ ಈ ಸಮಿತಿಯಲ್ಲಿ ಅಧಿಕಾರೇತರ ೧೭ ಸದಸ್ಯರಲ್ಲಿ ಕೇವಲ ೪ ಜನ ಕಾಂಗ್ರೆಸ್ಸಿಗರಿಗೆ ಮಾತ್ರ ಸದಸ್ಯರನ್ನಾಗಿ ನೇಮಿಸಿದ್ದು ಉಳಿದವರು ಸರಕಾರದ ಪರವಾದವರೇ ಆಗಿದ್ದರು. ಆದ್ದರಿಂದ ಈ ಸಮಿತಿಯಿಂದ ನ್ಯಾಯ ದೊರಕುವುದಿಲ್ಲವೆಂದು ತನ್ನ ವಿರೋಧವನ್ನು ವ್ಯಕ್ತಪಡಿಸಿತು.

ಸುಧಾರಣ ಸಮಿತಿಯ ಅಧ್ಯಕ್ಷರು ಅಸೋಸಿಯೇಟೆಡ್ ಪ್ರೆಸ್ ಪ್ರತಿನಿಧಿಯ ಮೂಲಕ(೨೧.೭.೧೯೩೮) "ಸಂಸ್ಥಾನದ ಪರಿಸ್ಥಿತಿಗೆ ತಕ್ಕಂತಹ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕೆಂದು ರಾಜ್ಯಘಟನಾ ಸಮಿತಿಯು ಸೂಚಿಸಲು ಯಾವ ಅಡ್ಡಿಯೂ ಇಲ್ಲ"ವೆಂದು ಹೇಳಿದರು. ಇದೆಲ್ಲ ಬೂಟಾಟಿಕೆಯೆಂದು ಕಾಂಗ್ರೆಸ್ಸಿಗೆ ತಿಳಿಯುವುದು ಕಷ್ಟವಾಗಲಿಲ್ಲ. ಪತ್ರಿಕೆಗಳೂ ಕೂಡ ಸರಕಾರದ ಧೋರಣೆಯನ್ನು ಖಂಡಿಸಿ, ಕಾಂಗ್ರೆಸ್ಸಿನ ಬೇಡಿಕೆಯನ್ನು ನ್ಯಾಯವಾದುದೆಂದು ಸಾರಿದುವು. ಆಗ' ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಪಾದಕರು ಹೀಗೆ ಬರೆದರು, "ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ರಾಜ್ಯ ಪದ್ಧತಿಯನ್ನು ನೆಲೆಗೊಳಿಸಬೇಕೆಂದು ಅಲ್ಲಿಯ ಪ್ರಜೆಗಳು ಅನೇಕ ವರ್ಷಗಳಿಂದ ಅಲ್ಲಿಯ ಸರಕಾರಕ್ಕೆ ಕೇಳಹತ್ತಿರುವರು ಮತ್ತು ಇತ್ತೀಚೆಗೆ ಪ್ರಜೆಗಳು ಪ್ರಚಂಡ ಚಳುವಳಿಯನ್ನು ಹೂಡಿರುವುದರಿಂದ ದಿವಾನ ಸಾಹೇಬರು ಮೊನ್ನೆ ಮೊನ್ನೆ ರಾಜಕೀಯ ಸುಧಾರಣೆಗಳ ವಿಚಾರ ವಿಷಯದಲ್ಲಿ ಒಂದು ಕಮಿಟಿಯನ್ನು ನೇಮಿಸಿದ್ದಾರೆ. ಈ ಕಮಿಟಿಯ ಕಾರ್ಯಕ್ಷೇತ್ರವನ್ನು ನೋಡಿದರೆ ಮೈಸೂರು ಸಂಸ್ಥಾನದ ಪ್ರಜೆಗಳಿಗೆ ಸಂಪೂರ್ಣ ನಿರಾಶೆಯಾಗುವಂತಿದೆ. ಜವಾಬ್ದಾರಿ ರಾಜ್ಯ ಪದ್ಧತಿಯನ್ನು ಸ್ಥಾಪಿಸುವುದು ಸರಕಾರದ ಉದ್ದೇಶವಿರುತ್ತದೆಂಬುದನ್ನು ಆ ಪ್ರಕಟಣೆಯಲ್ಲಿ ಸ್ಪಷ್ಟ ಪಡಿಸಲಿಲ್ಲ. ಆದರೆ ಆ ವಿಷಯವು ಕಮಿಟಿಯ ಕಾರ್ಯಕ್ಷೇತ್ರಕ್ಕೊಳಪಡಬಹುದೆಂದು ಊಹಿಸಲು ಅವಕಾಶವುಂಟೆಂದು ಕೆಲವರು ಹೇಳುವರು. ಮೈಸೂರು ಸರಕಾರದವರು ಮಾಡಬೇಕಾಗಿರುವ ಸುಧಾರಣೆಗಳ ರೂಪರೇಷೆಯನ್ನು ಆ ಪ್ರಕಟಣೆಯ ಮೇಲಿಂದ ನಿರ್ಧರಿಸಲು ಶಕ್ಯವಿಲ್ಲ. . . "

ಸುಧಾರಣೆ ಸಮಿತಿ ಸೂಚಿಸಿದ ಸುಧಾರಣೆಗಳು ಕಾಂಗ್ರೆಸ್ಸಿಗೆ ಒಪ್ಪಿಗೆ ಆಗಲಿಲ್ಲ. ಇದರ ವಿರುದ್ಧ ಸಾರ್ವಜನಿಕ ಭಾಷಣಗಳನ್ನು ಮಾಡಕೂಡದೆಂದು ಕಾಂಗ್ರೆಸ್ ನಾಯಕರ ಮೇಲೆ ಪ್ರತಿಬಂಧಕಾಜ್ಞೆಯನ್ನು ಜಾರಿ ಮಾಡಲಾಯಿತು.

ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಕಾಂಗ್ರೆಸ್ ಪಕ್ಷ ಟಿ.ಸಿದ್ದಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ೧೯೩೮ರ ಏಪ್ರಿಲ್ ೭ ರಂದು ಸಭೆ ಸೇರಿ ಸರ್ಕಾರ ರಚಿಸಿರುವ ಸಮಿತಿಯ ಬಗ್ಗೆ ಚರ್ಚಿಸಿ ಕೆಳಕಂಡ ತೀರ್ಮಾನಗಳನ್ನು ಕೈಗೊಂಡು ಅದನ್ನು ಬೇಡಿಕೆ ರೂಪದಲ್ಲಿ ದಿವಾನರಿಗೆ ತಿಳಿಸಲಾಯಿತು.

೧. ಮೈಸೂರು ಕಾಂಗ್ರೆಸ್ಸನ್ನು ರಾಜಕೀಯ ಪಕ್ಷವೆಂದು ಪರಿಗಣಿಸಬೇಕು

೨. ಜವಾಬ್ದಾರಿ ಸರಕಾರದ ಸ್ಥಾಪನೆಯ ಬಗ್ಗೆ ಲಿಖಿತ ಆಶ್ವಾಸನೆ ನೀಡಬೇಕು

೩. ಸಂವಿಧಾನ ಸುಧಾರಣಾ ಸಮಿತಿಯಲ್ಲಿ ಕಾಂಗ್ರೆಸ್ ಸದಸ್ಯತ್ವವನ್ನು ಕಾಂಗ್ರೆಸ್ ಪಕ್ಷ ಆಯ್ಕೆ ಮಾಡಿದವರಿಗೆ ನೀಡಬೇಕು.

೪. ಸರಕಾರದ ನೀತಿ ಜವಾಬ್ದಾರಿ ಸರಕಾರದ ರಚನೆಯಾಗಿರಬೇಕು

ಈ ಬೇಡಿಕೆಗಳನ್ನು ದಿವಾನರು ಒಪ್ಪದಿದ್ದರಿಂದ ಕಾಂಗ್ರೆಸ್ ಸಂವಿಧಾನ ಸಮಿತಿಯಲ್ಲಿ ತನ್ನ ಪಕ್ಷದ ಸದಸ್ಯರು ಭಾಗವಹಿಸಬಾರದು ಎಂದು ತೀರ್ಮಾನಿಸಿತು.

ದಿವಾನರು ಜವಾಬ್ದಾರಿ ಸರಕಾರದ ಬಗ್ಗೆ ಕಾಂಗ್ರೆಸ್ ಬೇಡಿಕೆಯನ್ನು ಒಪ್ಪದಿದ್ದರಿಂದ ಮತ್ತು ಸಂವಿಧಾನ ಸುಧಾರಣಾ ಸಮಿತಿಯ ಕಾರ್ಯವೈಖರಿ ಬಗ್ಗೆ ಅಸಮಾಧಾನವನ್ನು ಮೈಸೂರು ರಾಜ್ಯದ ಜನತೆ ವ್ಯಕ್ತಪಡಿಸಿದ್ದರಿಂದ ಮೈಸೂರು ಕಾಂಗ್ರೆಸ್, ಜನತೆಯ ಬೇಡಿಕೆ ಏನು? ಜನತೆಗಾಗಿ ಸರಕಾರ ಏನು ಮಾಡಿದೆ?

ಏನು ಮಾಡುತ್ತಿದೆ? ಎಂಬುದನ್ನು ತಿಳಿಯಪಡಿಸಲು ಕಾಂಗ್ರೆಸ್ ಅಧಿವೇಶನವನ್ನು ಸಮಾವೇಶಗೊಳಿಸಲು ತೀರ್ಮಾನಿಸಿತು. ಪಕ್ಷದ ತೀರ್ಮಾನದಂತೆ ಮೈಸೂರು ಕಾಂಗ್ರೆಸ್ ಪಕ್ಷದ ಪ್ರಥಮ ಅಧಿವೇಶನ ಮಂಡ್ಯ ಜಿಲ್ಲೆಯ ಮದ್ದೂರಿನ ಸಮೀಪವಿರುವ ಶಿವಪುರದಲ್ಲಿ ೧೯೩೮ರ ಏಪ್ರಿಲ್ ೧೧ ರಿಂದ ೧೩ರವರೆಗೆ ನಡೆಸಲು ಯೋಜಿಸಲಾಯಿತು. ಈ ಅಧಿವೇಶನ ಆಧುನಿಕ ಮೈಸೂರಿನ ರಾಜಕೀಯ ಬೆಳವಣಿಗೆಯಲ್ಲಿ ಅತ್ಯಂತ ಪ್ರಮುಖ ಘಟ್ಟವಾಯಿತು. ಬೆಳೆಯುತ್ತಿದ್ದ ಕಾಂಗ್ರೆಸ್ಸಿನ ಪ್ರಭಾವವನ್ನು ಹತ್ತಿಕ್ಕಲು ಹಾಗೂ ಅಧಿವೇಶನವನ್ನು ನಿರ್ಬಂಧಿಸಲು ದಿವಾನರು ಎಲ್ಲಾ ಪ್ರಯತ್ನಗಳನ್ನು ಮಾಡಿದರು. ಅಧಿವೇಶನದ ಅಧ್ಯಕ್ಷರನ್ನು ದಸ್ತಗಿರಿ ಮಾಡಿದರು. ಎರಡನೇ ದಿನ ಹೆಚ್.ಸಿ.ದಾಸಪ್ಪ, ವಿ.ವೆಂಕಟಪ್ಪ, ಕೆ.ಸಿ.ರೆಡ್ಡಿ ಹಾಗೂ ಇನ್ನಿತರರು ಬಂದಿತರಾದರು. ಮೂರನೇ ದಿನ ಕೆ.ಟಿ.ಭಾಷ್ಯಂ, ಹೆಚ್.ಸಿದ್ದಯ್ಯ, ಬಳ್ಳಾರಿ ಸಿದ್ದಮ್ಮ ಮೊದಲಾದವರನ್ನು ಬಂಧಿಸಲಾಯಿತು. ನಂತರ ಸರ್ಕಾರದ ಈ ಕ್ರಮವನ್ನು ವಿರೋಧಿಸಿ ಸತ್ಯಾಗ್ರಹ ಮತ್ತು ಧ್ವಜಾರೋಹಣ ಕಾರ್ಯಕ್ರಮವನ್ನು ಒಂದು ತಿಂಗಳ ಕಾಲ ಆಚರಿಸಲು ಕಾಂಗ್ರೆಸ್ ಕರೆ ನೀಡಿತು.

ಈ ಚಳವಳಿಯನ್ನು ತಡೆಗಟ್ಟಲು ಪೋಲೀಸರು ಕಾಂಗ್ರೆಸ್ ಕಾರ್ಯಕರ್ತರನ್ನು ಬಂಧಿಸಲು ಪ್ರಾರಂಭಿಸಿದರು. ಇದರಿಂದ ರಾಜ್ಯದ ಜೈಲುಗಳೆಲ್ಲಾ ತುಂಬಿಕೊಂಡವು.

ಶಿವಪುರ ಧ್ವಜ ಸತ್ಯಾಗ್ರಹದ ಯಶಸ್ಸಿನಿಂದ ಸ್ಫೂರ್ತಿಯನ್ನು ಪಡೆದ ಕಾಂಗ್ರೆಸ್ ಧುರೀಣರು ಮೈಸೂರು ಸಂಸ್ಥಾನದ ಬೇರೆ ಬೇರೆ ಸ್ಥಳಗಳಲ್ಲಿಯೂ ಇದೇ ರೀತಿ ಧ್ವಜ ಸತ್ಯಾಗ್ರಹವನ್ನು ನಡೆಸಲು ನಿರ್ಧರಿಸಿದರು. ಈ ಹಿನ್ನೆಲೆಯಲ್ಲಿ ವಿದುರಾಶ್ವತ್ಥದಲ್ಲಿ ನಡೆದ ಧ್ವಜ ಸತ್ಯಾಗ್ರಹವು ಒಂದು ದುರಂತಕ್ಕೆ ಕಾರಣವಾಯಿತು. ೧೯೩೮ ರ ಏಪ್ರಿಲ್ ತಿಂಗಳ ಅಂತ್ಯದಲ್ಲಿ ವಿದುರಾಶ್ವತ್ಥದಲ್ಲಿ ಧ್ವಜಾರೋಹಣ ಹಾಗೂ ಬಹಿರಂಗ ಸಭೆಗೆ ದಿನಾಂಕ ಗೊತ್ತು ಪಡಿಸಲಾಯಿತು. ಆದರೆ ಸರ್ಕಾರ ಕಾಂಗ್ರೆಸ್‌ನ ಈ ಚಟುವಟಿಕೆಗಳನ್ನು ತಪ್ಪಿಸಲು ವಿದುರಾಶ್ವತ್ಥದ ಎರಡು ಮೈಲಿ ಸುತ್ತಳತೆಯಲ್ಲಿ ಮೆರವಣಿಗೆ, ಧ್ವಜಾರೋಹಣ ಮತ್ತು ಭಾಷಣಗಳನ್ನು ನಿಷೇಧಿಸಿತು. ಆದರೆ ಸರ್ಕಾರದ ನಿಷೇದಾಜ್ಞೆಯನ್ನು ಉಲ್ಲಂಘಿಸಿ ಅನೇಕ ಕಾಂಗ್ರೆಸ್ ಕಾರ್ಯಕರ್ತರು ಬಂಧನಕ್ಕೊಳಗಾದರು. ಏಪ್ರಿಲ್ ೨೫ ರಂದು ನಡೆದ ಬಹಿರಂಗ ಸಭೆಯಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನರು ಸೇರಿದ್ದರು. ಆ ಸಂದರ್ಭದಲ್ಲಿ ಅಲ್ಲಿಂದ ಜನರು ಚೆದರುವಂತೆ ಪೋಲೀಸರು ಸೂಚಿಸಿದರೂ ಯಾರೂ ಅಲ್ಲಿಂದ ಕದಲಲಿಲ್ಲ. ಧ್ವಜಾರೋಹಣಕ್ಕೆ ಪ್ರಯತ್ನಿಸಿದ ನಾಲ್ಕು ಮಂದಿಯನ್ನು ಪೊಲೀಸರು ಬಂದಿಸಲು ಪ್ರಯತ್ನಿಸಿದಾಗ ಜನರಿಗೂ ಪೊಲೀಸರಿಗೂ ವಾಗ್ಯುದ್ದ ನಡೆಯಿತು. ತದನಂತರ ಪೊಲೀಸರು ಲಾಠಿಪ್ರಹಾರ ಮತ್ತು ಗೋಲಿಬಾರ್ ಮಾಡಿದರು. ಗೋಲಿಬಾರ್‌ನಲ್ಲಿ ನೂರಾರು ಜನರು ಗಾಯಗೊಂಡರು. ಮುವತ್ತೈದು ಮಂದಿ(ಸರ್ಕಾರದ ಹೇಳಿಕೆಯಂತೆ ೧೦ ಮಂದಿ) ಮಡಿದರು. ವಿದುರಾಶ್ವತ್ಥದ ಈ ಹತ್ಯಾಕಾಂಡ ಜಲಿಯನ್ ವಾಲಾಬಾಗ್ ದುರಂತದಂತೆ ಕರಾಳ ಇತಿಹಾಸವನ್ನು ಸೃಷ್ಟಿಸಿತು. ಈ ಘಟನೆಯನ್ನು ಗಾಂಧೀಜಿಯವರು ಸೇರಿದಂತೆ ಹಲವು ಮಂದಿ ಹಿರಿಯರು ಖಂಡಿಸಿದರು.[೫೮] ೧೯೩೯ನೇ ಏಪ್ರಿಲ್ ೧೫ ರಂದು ವಿದುರಾಶ್ವತ್ಥದಲ್ಲಿ ಕಾಂಗ್ರೆಸ್ಸಿನ ಎರಡನೇ ಅಧಿವೇಶನ ನಡೆಯಿತು. ಹೆಚ್.ಸಿ.ದಾಸಪ್ಪ ಅಧ್ಯಕ್ಷರು. ಈ ಸಭೆ ದಿವಾನರ ಕಾರ್ಯವೈಖರಿಯನ್ನು ವಿರೋಧಿಸಿ ನಿರ್ಣಯ ಕೈಗೊಂಡು ಕಾಂಗ್ರೆಸ್ಸಿಗರು ಜವಾಬ್ದಾರಿ ಸರಕಾರಕ್ಕಾಗಿ ನಡೆಸುವ ಸತ್ಯ ಮತ್ತು ಅಹಿಂಸಾತ್ಮಕ ಹೋರಾಟವನ್ನು ಹತ್ತಿಕ್ಕಲು ಮೈಸೂರು ಸರಕಾರ ಕೈಗೊಂಡ ದಮನಕಾರಿ ನೀತಿಯನ್ನು ಖಂಡಿಸಿತು. ಈ ಕಾಲಕ್ಕೆ ಮೈಸೂರು ಸರಕಾರ ಶಾಂತಿಯುತ ಚಳವಳಿಗಳನ್ನು ಕೂಡ ನಿರ್ಬಂಧಿಸಿ ಚಳವಳಿಗಾರರನ್ನು ಬಂಧಿಸಲಾರಂಭಿಸಿತು.

ವಿದುರಾಶ್ವತ್ಥದ ಅಧಿವೇಶನದಲ್ಲಿ ಸುರಿಯುತ್ತಿರುವ ಮಳೆಯನ್ನು ಲೆಕ್ಕಿಸದೆ ಜನರು ಬಂದು ಸೇರಿದ್ದರು ಎಂಬುದನ್ನು ಎಂ.ಎನ್.ಜೋಯಿಸರು ತಮ್ಮ ಆತ್ಮಕಥನದಲ್ಲಿ ಸ್ಮರಿಸಿದ್ದಾರೆ. ಸಂಸ್ಥಾನದಲ್ಲೆಲ್ಲಾ ಸಂಚರಿಸಿ, ಜನತೆಯ ಪೂರ್ಣ ಬೆಂಬಲವನ್ನು ಪಡೆಯಬೇಕು, ಕಾಂಗ್ರೆಸ್ ಸಂದೇಶ ಸಾರಬೇಕು, ಎಂಬ ಉದ್ದೇಶದಿಂದ ೧೯೩೯ರ ಮೇ ೧೭ ರಿಂದ ೨೩ರವರೆಗೆ ಕಾಂಗ್ರೆಸ್ ಸಪ್ತಾಹವನ್ನು ಆಚರಿಸಿ, ಮೆರವಣಿಗೆ ಮತ್ತು ಸಾರ್ವಜನಿಕ ಸಭೆಗಳನ್ನು ಒಂದು ವಾರ ಕಾಲ ನಡೆಸಿತು. ಇದರ ಪ್ರಕಾರ

---

[೫೮] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪು-೪೯,೫೦

ಕಾಂಗ್ರೆಸ್ಸಿನ ಒಂದು ವಾರದ ಪ್ರತಿಭಟನೆ ರಾಜ್ಯದಾದ್ಯಂತ ನಡೆದು ಜವಾಬ್ದಾರಿ ಸರಕಾರಕ್ಕಾಗಿ ನಿರ್ಣಯಗಳನ್ನು ಕೈಗೊಂಡಿತು. ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಜೂನ್ ೪ ರಂದು ಸಭೆ ಸೇರಿ ಈ ಎಲ್ಲಾ ಚಟುವಟಿಕೆಗಳ ಬಗ್ಗೆ ರಾಷ್ಟ್ರೀಯ ಕಾಂಗ್ರೆಸ್ ನಾಯಕರನ್ನು ಭೇಟಿ ಮಾಡಿ ವಿವರಿಸಲು ತೀರ್ಮಾನಿಸಿತು. ಇದರ ಅಂಗವಾಗಿ ಹೆಚ್.ಸಿ.ದಾಸಪ್ಪ, ಟಿ.ಸಿದ್ದಲಿಂಗಯ್ಯ ಮತ್ತು ಡಿ.ಎಸ್.ಮಲ್ಲಪ್ಪರವರು ಜೂನ್ ೧೩ ರಂದು ಗಾಂಧೀಜಿಯವರನ್ನು ಭೇಟಿ ಮಾಡಿ ದಿವಾನರ ಕಾಂಗ್ರೆಸ್ ವಿರೋಧಿ ವರ್ತನೆಯನ್ನು ವಿವರಿಸಿದರು. ಇದಕ್ಕೆ ಗಾಂಧೀಜಿಯವರು ಜವಾಬ್ದಾರಿ ಸರ್ಕಾರಕ್ಕೆ ಸಂವಿಧಾನ ಸುಧಾರಣಾ ಸಮಿತಿಯಲ್ಲಿ ಸಮ್ಮತಿ ಇಲ್ಲದಿದ್ದರೆ ಹೋರಾಟವನ್ನು ಮುಂದುವರಿಸುವುದು ನ್ಯಾಯಯುತವಾದುದು, ಇದಕ್ಕೆ ಮೊದಲು ದಿವಾನರನ್ನು ಭೇಟಿ ಮಾಡಿ ಶಾಂತಿಯುತವಾಗಿ ಸಮಸ್ಯೆ ಬಗೆಹರಿಸುವಂತೆ ಸಲಹೆ ಮಾಡಿದರು. ಅಲ್ಲದೆ ಸರದಾರ್ ವಲ್ಲಭಾಯ್ ಪಟೇಲರು ಸಹ 'ತ್ಯಾಗ ಮತ್ತು ಹೋರಾಟವಿಲ್ಲದೆ ಸಂಸ್ಥಾನದ ಜನತೆಗೆ ಜವಾಬ್ದಾರಿ ಸರ್ಕಾರ ಲಭಿಸುವುದಿಲ್ಲವೆಂದು ತಿಳಿಸಿ ಚಳುವಳಿ ಆರಂಭಿಸುವ ಮೊದಲು ಸರ್ಕಾರದ ಮುಂದೆ ತಮ್ಮ ಬೇಡಿಕೆಗಳನ್ನಿಟ್ಟು ಮತ್ತೊಂದು ಭಾರಿ ಸಂಧಾನಕ್ಕೆ ಪ್ರಯತ್ನಿಸುವಂತೆ' ಸಲಹೆ ಮಾಡಿದರು.

ಸರ್ದಾರ್ ಪಟೇಲರ ಸಲಹೆಯಂತೆ ಕಾಂಗ್ರೆಸ್ ಸಮಿತಿಯವರು ಶ್ರೀಮನ್ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿ ಸರ್ಕಾರವು ಕೂಡಲೇ ಸ್ಥಾಪಿಸಲ್ಪಡಬೇಕು ಎಂಬ ಬೇಡಿಕೆಯನ್ನು ಮಂಡಿಸಿ ಅದನ್ನು ಶಾಂತಿಯುತ ಮಾರ್ಗದಿಂದ ಪಡೆಯುವ ನಿಶ್ಚಯವನ್ನು ಖಚಿತ ಪಡಿಸಿತು. ಈ ಬೇಡಿಕೆಗೆ ಮಾನ್ಯತೆ ಸಿಗದಿದ್ದರೆ ಸೆಪ್ಟೆಂಬರ್ ೧ ರಿಂದ ಸತ್ಯಾಗ್ರಹ ಚಳುವಳಿಯನ್ನು ಆರಂಭಿಸಲು ತೀರ್ಮಾನಿಸಿದರು. ಇದಕ್ಕೆ ಸಂಬಂಧಪಟ್ಟ ಕಾರ್ಯಕ್ರಮ ರೂಪಿಸಲು ತೀರ್ಮಾನಿಸಲಾಯಿತು. ಅಲ್ಲದೆ ಅಧ್ಯಕ್ಷರನ್ನು ಬಂಧಿಸಿದರೆ ಹಂಗಾಮಿ ಅಧ್ಯಕ್ಷರನ್ನು ಸಹಾ ನೇಮಿಸಲು ತೀರ್ಮಾನಿಸಲಾಯಿತು. ಈ ಹಿನ್ನೆಲೆಯಲ್ಲಿ ಹೆಚ್.ಸಿ.ದಾಸಪ್ಪನವರು ನಡೆಸಿದ ದಿವಾನರೊಂದಿಗಿನ ಭೇಟಿಯ ಪ್ರಯತ್ನಕ್ಕೆ ಸಕಾರಾತ್ಮಕ ಪ್ರತಿಕ್ರಿಯೆ ದೊರೆಯಲಿಲ್ಲ.

ಅರಸೀಕೆರೆಯಲ್ಲಿ ಸೇರಿದ್ದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿ, ಸರ್ಕಾರ ತನ್ನ ಕಾಠಿಣ್ಯ ಮನೋಭಾವವನ್ನು ತ್ಯಜಿಸಬೇಕು ಎಂಬ ನಿರ್ಣಯವನ್ನು ಮಾಡಿತು. ೧೯೩೯ ಜುಲೈ ೩೦ನೇ ತಾರೀಖನ್ನು ಜವಾಬ್ದಾರಿ ಸರ್ಕಾರದ ದಿನವನ್ನಾಗಿ ದೇಶದಾದ್ಯಂತ ಆಚರಿಸತಕ್ಕದ್ದೆಂದು ನಿರ್ಣಯಿಸಲಾಯಿತು. ಎಲ್ಲೆಡೆಯೂ ದಿನಾಚರಣೆ ನಡೆಯಿತು. ಸಹಸ್ರಾರು ಮಂದಿ ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ದುಡಿಯುವ ಪ್ರತಿಜ್ಞೆ ಕೈಗೊಂಡರು. ಈ ದಿನಾಚರಣೆಯ ಸಂಬಂಧವಾಗಿ ಸರಕಾರ ೧೯೩೯ರ ಏಪ್ರಿಲ್ ೬ ರಂದು ಕೋಲಾರ ಜಿಲ್ಲೆಯಲ್ಲಿ ಪ್ರತಿಬಂಧಕಾಜ್ಞೆಯನ್ನು ತಂದಿತು. ಇದನ್ನು ಉಲ್ಲಂಘಿಸಿದ ಟಿ.ಸಿದ್ದಲಿಂಗಯ್ಯ, ಸೇರಿದಂತೆ ೩೦೦ಕ್ಕೂ ಹೆಚ್ಚು ಸತ್ಯಾಗ್ರಹಿಗಳನ್ನು ಬಂಧಿಸಿತು.[೫೯] "ಜವಾಬ್ದಾರಿ ಸರ್ಕಾರ ಸ್ಥಾಪನೆಯ ಬಗ್ಗೆ ಜನಾಭಿಪ್ರಾಯ ರೂಪಿಸುವ ಉದ್ದೇಶದಿಂದ ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರೂ ೧೯೩೯ ರ ಆಗಸ್ಟ್ ೧ ರಿಂದ ಸಂಸ್ಥಾನದಲ್ಲೆಲ್ಲಾ ಪ್ರವಾಸ ಮಾಡಲು ತೀರ್ಮಾನಿಸಿದರು. ಮೂರು ಗುಂಪುಗಳಾಗಿ ಚಿತ್ರದುರ್ಗ,

---

[೫೯] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪು-೧೮೪,೧೮೫

ತುಮಕೂರು, ಕೋಲಾರ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಅನೇಕ ಸಭೆಗಳನ್ನು ನಡೆಸಿದರು. ಅವರಲ್ಲಿ ಕೆಲವರು ಕೆ.ಜಿ.ಎಫ್. ತಲುಪಿದಾಗ ಅವರು ಭಾಷಣ ಮಾಡದಂತೆ ನಿರ್ಬಂಧಕಾಜ್ಞೆಗಳನ್ನು ಜಾರಿ ಮಾಡಿದರು. ಕೋಲಾರ ಜಿಲ್ಲಾ ಮ್ಯಾಜಿಸ್ಟ್ರೇಟರು ಮೈಸೂರು ಪೊಲೀಸ್ ರೆಗ್ಯುಲೇಷನ್ ೩೯ನೇ ಸೆಕ್ಷನ್ ಪ್ರಕಾರ ಮುಖಂಡರ ಮೇಲೆ ಪ್ರತಿಬಂಧಕಾಜ್ಞೆಗಳನ್ನು ಹೊರಡಿಸಿ ರಾಬರ್ಟ್‌ಸನ್ ಪೇಟೆ ಮತ್ತು ಐದು ಮೈಲಿ ಸುತ್ತಳತೆಯಲ್ಲಿ ಭಾಷಣ ಮಾಡುವುದನ್ನು ನಿರ್ಬಂಧಿಸಿದರು.

ಈ ಸ್ಥಳದಲ್ಲಿಯೇ ಇದ್ದು ಕೊಂಡು ಆಜ್ಞೆಯು ಉಲ್ಲಂಘನೆಯಾಗಿದೆಯೇ ಎಂಬುದನ್ನು ನೋಡಿಕೊಳ್ಳುವ ಬದಲು ಚಿನ್ನದ ಗಣಿ ಪೊಲೀಸರು ತಮ್ಮ ಕಾರ್ಯಾತುರದಲ್ಲಿ ಕ್ಯಾಸಂಬಳ್ಳಿಗೂ ರಾಬರ್ಟ್‌ಸನ್ ಪೇಟೆಗೂ ಮಧ್ಯ ಕಾಂಗ್ರೆಸ್ ನಾಯಕರು ಹೋಗುತ್ತಿದ್ದ ಕಾರುಗಳನ್ನು ತಡೆಗಟ್ಟಿ ಅವರನ್ನು ದಸ್ತಗಿರಿ ಮಾಡಿದರು. ಹೀಗೆ ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಕಾಂಗ್ರೆಸ್ ಧ್ಯೇಯಗಳ ಪ್ರಚಾರಕ್ಕೆ ಯತ್ನಿಸಿದಾಗ ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರನ್ನು ಆಗಸ್ಟ್ ತಿಂಗಳಲ್ಲಿಯೇ ದಸ್ತಗಿರಿ ಮಾಡಿದರು. ಕೋಲಾರ ಜಿಲ್ಲಾ ನ್ಯಾಯಾಧೀಶರ ಆಜ್ಞೆಯನ್ನು ಉಲ್ಲಂಘಿಸಿದರೆಂಬ ಆಪಾದನೆ ಮೇಲೆ ಅಧ್ಯಕ್ಷ ಎಚ್.ಸಿ.ದಾಸಪ್ಪ, ಎನ್.ಸಿ.ತಿಮ್ಮಾರೆಡ್ಡಿ, ಕೆ.ಟಿ.ಭಾಷ್ಯಂ ಮುಂತಾದ ೧೩ ಜನ ನಾಯಕರನ್ನು ಬಂಧಿಸಿ ಕಠಿಣ ಶಿಕ್ಷೆ ವಿಧಿಸಿದರು. ಅವರಲ್ಲಿ ಹೆಚ್ಚು ಜನರಿಗೆ ಮೂರು ತಿಂಗಳ ಕಠಿಣ ಶಿಕ್ಷೆಯೂ, ಇಬ್ಬರಿಗೆ ೨ ತಿಂಗಳ ಕಠಿಣ ಶಿಕ್ಷೆಯೂ ವಿಧಿಸಲ್ಪಟ್ಟಿತು. ಒಂದು ವೇಳೆ ತಾವು ತಪ್ಪಿತಸ್ಥರಲ್ಲವೆಂಬ ಅಪರಾಧಿಗಳ ವಾದವನ್ನು ಮ್ಯಾಜಿಸ್ಟ್ರೇಟರು ತಳ್ಳಿ ಹಾಕಿದರೂ ಸಹಾ ಅಪರಾಧವು ಕೇವಲ ಕಾನೂನಿನ ತಪ್ಪಿತವಲ್ಲದೆ ವಾಸ್ತವವಾದ ಅಪರಾಧವಲ್ಲವೆಂದು, ತೋರುವುದರಿಂದ ಶಿಕ್ಷೆಯು ಬಹಳ ಉಗ್ರವೂ, ಅಸಮಂಜಸವೂ, ಆದುದೆಂದು ದಿನಾಂಕ ೧೪.೮.೧೯೩೯ ರ ಹಿಂದೂ ಪತ್ರಿಕೆ ಟೀಕಿಸಿತು. ಅಧಿಕಾರಿಗಳು ದಬ್ಬಾಳಿಕೆಯ ಶಸ್ತ್ರವನ್ನು ಎತ್ತಿದ್ದು 'ಅತ್ಯಂತ ಅಸಮರ್ಥನೀಯವೂ, ಅನ್ಯಾಯದ್ದೂ' ಆದುದೆಂದು ಸಂಯುಕ್ತ ಕರ್ನಾಟಕ ಪತ್ರಿಕೆ ತಿಳಿಸಿತು".[೬೦]

ಆ ಸಂದರ್ಭದಲ್ಲಿ ಬಂಧಿತರಾದ ೧೩ ಮಂದಿಯಲ್ಲಿ ಕೆ.ಚೆಂಗಲರಾಯ ರೆಡ್ಡಿ, ವಿ.ವೆಂಕಟಪ್ಪ ಹೆಚ್.ಕೆ.ವೀರಣ್ಣಗೌಡ ಈ ಮೂವರೂ ಸೇರಿದ್ದರು. ಹೀಗಾಗಿ ಇವರೂ ಸಹ ಮೂರು ತಿಂಗಳು ಕಠಿಣ ಸಜೆ ಅನುಭವಿಸಬೇಕಾಯಿತು.

ಜೈಲಿನಲ್ಲಿ ಕಠಿಣ ಶಿಕ್ಷೆಗೆ ಒಳಗಾದ ಹೆಚ್.ಕೆ.ವೀರಣ್ಣಗೌಡು ಜೈಲಿನಲ್ಲಿ ಅನುಭವಿಸಿದ ಕಷ್ಟವನ್ನು ತಮ್ಮ ಆತ್ಮಕಥೆಯಲ್ಲಿ ನಮೂದಿಸುವ ಮೂಲಕ ಅಂದಿನ ದಮನಕಾರಿ ಸರ್ಕಾರದ ನೀತಿಯ ಬಗ್ಗೆ ಮತ್ತು ಸ್ವಾತಂತ್ರ್ಯ ಹೋರಾಟಗಾರರು ಎದುರಿಸಬೇಕಾಗಿದ್ದ ದುಃಸ್ಥಿತಿಯನ್ನು ಅನಾವರಣಗೊಳಿಸಿದ್ದಾರೆ. ಜೈಲಿನ ಕಟ್ಟಡದಲ್ಲಿ ಮೂರೋ ನಾಲ್ಕೋ ಕೊಠಡಿಗಳು ಇದ್ದು ಒಂದು ಕೈಸಾಲೆ ಇತ್ತು. ಕೊಠಡಿಗಳಲ್ಲಿ ಮಂಚಗಳನ್ನು ಹಾಕಿ ಅದರ ಮೇಲೆ ಹಾಕಿದ್ದ ಗೋಣೀ ತಾಟುಗಳೇ ಹಾಸಿಗೆ ಮತ್ತು ಕರಿಕಂಬಳಿಗಳೇ ಹೊದಿಕೆಗಳಾಗಿದ್ದವು. ಒರಟಾದ ಬಿಳಿ ಬಟ್ಟೆಯಲ್ಲಿ ಹೊಲಿದಿದ್ದ ಎರಡೆರಡು ಚಡ್ಡಿ ಮತ್ತು ಬನಿಯನ್‌ಗಳು,

[೬೦] ಕೆ.ವೀರತಪ್ಪ. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ವಿಜಯ ರವಿ ಪ್ರಕಾಶನ. ಬೆಂಗಳೂರು.೧೯೭೭. ಪು-೭೧

ಒಂದು ಟೋಪಿ ಖೈದಿಗಳ ಉಡುಪಾಗಿತ್ತು. ಎರಡು ಮಣ್ಣಿನ ಬೋಗುಣಿಗಳು ಮತ್ತು ಒಂದು ಗಡಿಗೆ ಊಟಕ್ಕೆ ಬಳಸುವ ಸಾಮಾಗ್ರಿಗಳಾಗಿದ್ದವು. ಕೊಠಡಿಯ ವಾತಾವರಣ ಶುಚಿಯಾಗಿಲ್ಲದೆ ಸೊಳ್ಳೆ ಮತ್ತು ತಿಗಣೆಯ ಕಾಟವನ್ನು ಖೈದಿಗಳು ಸಹಿಸಬೇಕಾಗಿತ್ತು. ಅಲ್ಲದೆ ಶೌಚಾಲಯದ ವ್ಯವಸ್ಥೆಯಿಲ್ಲದೆ ಮಲವಿಸರ್ಜನೆಗೆ ಒಂದೇ ಕೊಠಡಿಯಲ್ಲಿ ಮೂರು ನಾಲ್ಕು ಜನ ಹೋಗಬೇಕಾದ ದುರ್ವ್ಯವಸ್ಥೆಯನ್ನು ಸಹಿಸಬೇಕಾಗಿತ್ತು. ರಾಜಕೀಯ ಖೈದಿಗಳಾಗಿದ್ದರೂ ಕಠಿಣ ಸಜೆಗೆ ಒಳಗಾಗಿದ್ದರಿಂದ ದಿನಕ್ಕೆ ಎರಡುಹೊತ್ತು ಮಾತ್ರ ಊಟ. ಬೆಳಗ್ಗೆ ಹತ್ತು ಗಂಟೆಗೆ, ಸಾಯಂಕಾಲ ಐದು ಗಂಟೆಗೆ ರಾಗಿ ಮುದ್ದೆ ಬೇಡವಾದಲ್ಲಿ ಅನ್ನ ಬೇಕೆಂದು ಇಷ್ಟವಿದ್ದವರು ಅರ್ಜಿ ಕೊಡಬೇಕು. ಅಂಗಳದಲ್ಲಿ ನೆಟ್ಟಿದ್ದ ಕಲ್ಲುಗಳ ಮೇಲೆ ಬೋಗುಣಿಗಳನ್ನಿಟ್ಟು ಊಟ ಮಾಡಬೇಕೆಂದು ಸೂಪರಿನ್‌ಟೆಂಡೆಂಟರ ಆಜ್ಞೆ. ತಾವು ರಾಜಕೀಯ ಖೈದಿಗಳಾಗಿದ್ದರೂ ಈ ರೀತಿ ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದುದ್ದಕ್ಕೆ ಕೆ.ಟಿ,ಭಾಷ್ಯಂ ಅವರು ಅಸಮಾಧಾನಗೊಂಡರು. ಊಟ ಮಾಡುವ ಸ್ಥಳದಲ್ಲಿ ಧೂಳು ಬರದಂತೆ ವರಾಂಡಕ್ಕೆ ಕಟ್ಟೆಗಳನ್ನು ಕಟ್ಟಿ ಮರೆಮಾಡುವಂತೆ ಇಲ್ಲವಾದರೆ ತಾವು ಊಟ ಮಾಡುವುದಿಲ್ಲವೆಂದು ಗದರಿಸಿದರು. ತಕ್ಷಣವೇ ಸೂಪರಿನ್‌ಟೆಂಡೆಂಟರು ಆ ವ್ಯವಸ್ಥೆಯನ್ನು ಮಾಡಿಕೊಟ್ಟರು. ಇದರಿಂದ ಒಬ್ಬ ಪ್ರಭಾವಿ ರಾಜಕೀಯ ಧುರೀಣರ ಮನವಿಗೆ ಜೈಲಿನ ಅಧಿಕಾರಿಗಳು ಮನ್ನಣೆ ನೀಡುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಬಂಧಿಸಿದ ಎಲ್ಲ ರಾಜಕೀಯ ಖೈದಿಗಳನ್ನು ಒಂದೇ ಜೈಲಿನಲ್ಲಿರಿಸದೆ ಇತರ ಜೈಲುಗಳಿಗೆ ಕರೆದೊಯ್ಯುತ್ತಿದ್ದರು. ಕಾರಣ ಜೈಲಿನ ಎಲ್ಲಾ ಖೈದಿಗಳು ಇವರ ಪ್ರಭಾವಕ್ಕೆ ಒಳಗಾಗಿ ಜೈಲಿನಲ್ಲಿ ದಂಗೆ ಏಳಬಹುದೆಂಬ ಭಯ ಮತ್ತು ಅನುಮಾನಗಳು ಅಂದಿನ ಸರ್ಕಾರಕ್ಕಿದ್ದಿರಬಹುದು. ಆದಕಾರಣ ಬಂಧಿಸಿದವರಲ್ಲಿ ಹೆಚ್.ಕೆ.ವೀರಣ್ಣಗೌಡರನ್ನು ಬಿಟ್ಟು ರಾತ್ರೋರಾತ್ರಿ ಇತರ ರಾಜಕೀಯ ಖೈದಿಗಳನ್ನು ಹಾಸನ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಸಬ್ ಜೈಲುಗಳಿಗೆ ವರ್ಗಾಯಿಸಿದ್ದರು. ಬೆಂಗಳೂರಿನ ಜೈಲಿನಲ್ಲಿ ಹೆಚ್.ಕೆ.ವೀರಣ್ಣಗೌಡರೊಂದಿಗೆ ಟಿ.ಸುಬ್ರಹ್ಮಣ್ಯ, ಎಚ್.ಸಿದ್ದಯ್ಯ ಇದ್ದರು. ಜೈಲಿನ ಆಹಾರ, ಅನ್ನ ಹಿಟ್ಟು ಸಾರು ಎಲ್ಲವನ್ನೂ ಕಬ್ಬಿಣದ ಹಂಡೆಗಳಲ್ಲಿ ಮಾಡುತ್ತಿದ್ದುದರಿಂದ ಟಿ.ಸುಬ್ರಹ್ಮಣ್ಯರಿಗೆ ಆಮಶಂಕೆ ಪ್ರಾರಂಭವಾಗಿ ರಕ್ತಭೇದಿಗೆ ತಿರುಗಿತ್ತು. ಅವರಿಗೆ ದಿನವೂ ಮಜ್ಜಿಗೆ ಕೊಡಬೇಕೆಂದು ಕೇಳಿಕೊಳ್ಳಲಾಗಿತ್ತು. ಆದರೆ ದಿವಾನರು ಎಲ್ಲರಿಗೂ ಕೊಡುವಂತೆ ಅವರಿಗೂ ವಾರಕ್ಕೊಮ್ಮೆ ಮಾತ್ರ ಮಜ್ಜಿಗೆ ಕೊಡಬೇಕೇ ಹೊರತು ಅವರಿಗೊಬ್ಬರಿಗೋಸ್ಕರ ಯಾವ ರಿಯಾಯಿತಿಯನ್ನೂ ತೋರಿಸಬಾರದೆಂದು ಕಟ್ಟಾಜ್ಞೆ ಮಾಡಿದ್ದರಂತೆ ನಂತರ ಅವರ ಸ್ಥಿತಿ ಹದಗೆಟ್ಟು ಕೊನೆಗೆ ಅವರ ಮನವಿಯನ್ನು ಮನ್ನಿಸಿ ಅವರಿಗೆ ದಿನವೂ ಮಜ್ಜಿಗೆಯನ್ನು ನೀಡುವ ವ್ಯವಸ್ಥೆ ಮಾಡಿದರು.

ಒಬೊಬ್ಬ ಖೈದಿ ನೇಮಿಸಿದ ಕೆಲಸವನ್ನು ಮಾಡಲೇ ಬೇಕಿತ್ತು. ಹೀಗಾಗಿ ಕಠಿಣ ಸಜೆ ಅನುಭವಿಸುತ್ತಿದ್ದ ಎಚ್.ಸಿದ್ದಯ್ಯ ಮತ್ತು ಹೆಚ್.ಕೆ.ವೀರಣ್ಣಗೌಡರು ಹದಿನೈದು ದಿನಗಳು ರಾಗಿ ಬೀಸುವ ಕೆಲಸವನ್ನು ಮಾಡಬೇಕಿತ್ತು. ಕೈಯಲ್ಲಿ ಬೊಬ್ಬೆ ಬಂದರೂ ರಿಯಾಯಿತಿ ಇರಲಿಲ್ಲ. ವೀರಣ್ಣಗೌಡರಿಗೆ ರಾಗಿ ಬೀಸಿ ಜ್ವರ ಬಂದು ಆಸ್ಪತ್ರೆ ಸೇರಿದರು. ಗುಣಮುಖರಾದ ಮೇಲೆ ಹೊಲಿಗೆಯ ಕೆಲಸವನ್ನು ಮಾಡಬೇಕಾಯಿತು. ಜೈಲಿನಲ್ಲಿ ಬಿಸಿನೀರಿನ ಸ್ನಾನಕ್ಕೆ ಅವಕಾಶವಿರಲಿಲ್ಲ. ಅಂದು ಸಾದಾ ಶಿಕ್ಷೆಗೆ

ಗುರಿಯಾದ ರಾಜಕೀಯ ಖೈದಿಗಳಿಗೆ ಮೂಲಭೂತವಾದ ಸೌಕರ್ಯಗಳನ್ನು ನೀಡುತ್ತಿದ್ದರು ಎಂಬುದರ ಹಿನ್ನೆಲೆಯಲ್ಲಿ ಸರ್ಕಾರ ಹೆಚ್.ಕೆ.ವೀರಣ್ಣಗೌಡಂತಹ ರಾಜಕೀಯ ಖೈದಿಗಳಿಗೆ ಕಠಿಣ ಶಿಕ್ಷೆ ವಿಧಿಸಿದ್ದು ಅವರ ಹೋರಾಟದ ಮನೋಭಾವವನ್ನು ಕಿತ್ತೊಗೆಯಬೇಕೆಂಬ ಕುತಂತ್ರದಿಂದ ಎನ್ನಬಹುದು.

ಜೈಲಿನಲ್ಲಿ ಹಣ  ಇಸ್ಪೀಟು ಆಟ ಮುಂತಾದ ಜೂಜಾಡುವುದು, ಭಂಗಿ ಸೇದುವುದು ಧಾರಾಳವಾಗಿ ನಡೆಯುತ್ತಿತ್ತು. ಜೈಲು ವಾರ್ಡರುಗಳಿಗೆ ಒಂದು ರೂಪಾಯಿ ಕೊಟ್ಟರೆ ಅವರು ಹತ್ತಾಣೆ ಸಾಮಾನು ತಂದುಕೊಡುತ್ತಿದ್ದರು. ಆರಾಣೆ ಅವರಿಗೆ ಸೇರುತ್ತಿತ್ತು.  ಇಂತಹ ಎಲ್ಲ ವಿಚಾರಗಳನ್ನು ವೀರಣ್ಣಗೌಡರು ಜೈಲಿನಲ್ಲಿ ಕಂಡರು.

**ಕಾನೂನು ಭಂಗ ಚಳುವಳಿ**

೧೯೩೯ ರ ಸೆಪ್ಟೆಂಬರ್ ೧ ರಂದು ಬೆಂಗಳೂರಿನ ಬನ್ನಪ್ಪ ಪಾರ್ಕಿನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಟಿ.ಸಿದ್ದಲಿಂಗಯ್ಯನವರು ಮೈಸೂರು ಕಾಂಗ್ರೆಸ್‌ನ ರಚನಾ ಕ್ರಮವನ್ನು ರದ್ದುಗೊಳಿಸಿ ಪ್ರಪ್ರಥಮ ಸರ್ವಾಧಿಕಾರಿಯಾದರು. ಆ ಸಂದರ್ಭದಲ್ಲಿ ಅವರು ಶ್ರೀಮನ್ಮಹಾರಾಜರ ಕೃಪಾಶ್ರಯದಲ್ಲಿ ಸಂಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪನೆಯೇ ಕಾಂಗ್ರೆಸ್‌ನ ಧ್ಯೇಯವೆಂದು ಅದಕ್ಕೆ ಹೊರತಾದ ಯಾವ ಸುಧಾರಣೆಯಿಂದಲೇ ಆಗಲಿ ಕಾಂಗ್ರೆಸ್ ತೃಪ್ತಿ ಹೊಂದುವುದಿಲ್ಲವೆಂದು ತಿಳಿಸಿದರು. ತಮ್ಮ ಪಕ್ಷವು ಸರ್ಕಾರ ಹಾಕಿರುವ ಎಲ್ಲಾ ಪ್ರತಿಬಂಧಕಾಜ್ಞೆಗಳನ್ನು ಮುರಿದು ಶಾಂತಿಯುತ ಹೋರಾಟ ನಡೆಸುವುದಾಗಿ ಘೋಷಿಸಿದರು. ಅಂದಿನಿಂದ ಅಂದರೆ ೧.೯.೧೯೩೯ ರಿಂದ ಸತ್ಯಾಗ್ರಹವು ಆರಂಭವಾಗಿ ಕಾನೂನುಭಂಗ ಚಳುವಳಿಯು ಸಂಸ್ಥಾನದಲ್ಲೆಲ್ಲಾ ಹರಡಿತು.

ಒಬ್ಬ ಸರ್ವಾಧಿಕಾರಿಯ ಬಂಧನದ ತರುವಾಯ ಮತ್ತೊಬ್ಬ ಸರ್ವಾಧಿಕಾರಿಯ ನೇಮಕವಾಗುವುದು, ಹೀಗೆಯೇ ಒಟ್ಟು ೨೪ ಮಂದಿ ಸರ್ವಾಧಿಕಾರಿಗಳಾಗಿ ಕಾನೂನು ಭಂಗ ಚಳುವಳಿಯನ್ನು ನಡೆಸಿಕೊಂಡು ಬಂದರು. ಮೈಸೂರು ಸಂಸ್ಥಾನದ ಎಲ್ಲಾ ವೃತ್ತಪತ್ರಿಕೆಗಳೂ ಕಾಂಗ್ರೆಸ್‌ನ ಈ ಚಳುವಳಿಗೆ ಬೆಂಬಲ ನೀಡಿದವು.

“೧೯೩೮-೩೯ ರ ಚಳುವಳಿಯಲ್ಲಿ ಅರಣ್ಯ ಸತ್ಯಾಗ್ರಹ ಮಾಡಿದ ೧೨೩೮ ಮಂದಿ ಗಣಿಗಳ ಶಾಸನದನ್ವಯ ೩೧ ಮಂದಿ, ೧೪೪ನೇ ಸೆಕ್ಷನ್ ಮುರಿದ ೭೦೦ ಮಂದಿ ಸಾರ್ವಜನಿಕ ರಕ್ಷಣಾ ಕಾನೂನಿನ ಅನ್ವಯ ೧೨೧ ಮಂದಿ, ಪಿಕೆಟಿಂಗ್ ಮಾಡಿದ್ದಕ್ಕಾಗಿ ೪೮ ಮಂದಿ, ಪೊಲೀಸ್ ಆಕ್ಟ್ ಮೇರೆಗೆ ೨೪ ಮಂದಿ, ರಾಜದ್ರೋಹ ಭಾಷಣ ಮಾಡಿದ್ದಕ್ಕಾಗಿ ೧೩ ಮಂದಿ, ಭಾರತ ರಕ್ಷಣಾ ಶಾಸನ ರೀತ್ಯಾ ೪ ಮಂದಿ, ಪತ್ರಿಕಾ ಶಾಸನ ರೀತ್ಯಾ ಇಬ್ಬರು, ಗಡಿಪಾರು ಆಜ್ಞೆ ಹೊರಿಸಲಾದ ಒಬ್ಬರು, ಪೊಲೀಸ್ ಆಕ್ಟ್ ೪೫ನೇ ಸೆಕ್ಷನ್ ರೀತ್ಯಾ ೪೫ ಮಂದಿ, ಇತರ ಕಾರಣಗಳಿಗಾಗಿ ೨೩ ಮಂದಿ ಸತ್ಯಾಗ್ರಹಿಗಲನ್ನು ಬಂಧಿಸಲಾಗಿತ್ತು. ಹೀಗೆ ಮೈಸೂರು ಸಂಸ್ಥಾನದಲ್ಲಿ ಹೋರಾಟ ಬೃಹತ್ ರೂಪ ತಾಳಿತು. ಸತ್ಯಾಗ್ರಹಿಗಳನ್ನು ಇಡಲು ಜೈಲುಗಳಲ್ಲಿ ಸ್ಥಳವಿಲ್ಲದೆ ಹೋಗಿ ಹೊಸದಾಗಿ ತಾತ್ಕಾಲಿಕ ಸೆರೆಮನೆಗಳನ್ನು ಹಲವೆಡೆ ಸ್ಥಾಪಿಸ ಬೇಕಾಯಿತು”.

೧೯೪೦ ರಲ್ಲಿ ಕಾಂಗ್ರೆಸ್ ಗಾಂಧೀಜಿಯವರ ಸಲಹೆ ಸೂಚನೆಯಂತೆ ನಡೆಯಬೇಕಾಗಿದ್ದ ಸ್ಥಳೀಯ ಸಂಸ್ಥೆಗಳ ಚುನಾವಣೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ನಿರ್ಧರಿಸಿತು. ಅದರಂತೆ ೧೯೪೦ರ ಜಿಲ್ಲಾ ಬೋರ್ಡ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ೧೩೩ ಮಂದಿ ಉಮೇದುವಾರರು ಚುನಾವಣೆಯಲ್ಲಿ ಸ್ಪರ್ಧಿಸಿ ೧೧೯ ಮಂದಿ ಜಯಿಸಿದರು. ಐದು ಜಿಲ್ಲೆಗಳಲ್ಲಿ ನಿಚ್ಚಳ ಬಹುಮತವೂ, ಮೂರು ಜಿಲ್ಲೆಗಳಲ್ಲಿ ಏಕ ಪಕ್ಷ ಬಹುಮತವೂ ಕಾಂಗ್ರೆಸ್ ಪಕ್ಷಕ್ಕೆ ಲಭಿಸಿತು. ನಂತರ ಹೊಸ ರಾಜ್ಯಾಂಗ ಸುಧಾರಣೆಗಳ ಪ್ರಕಾರ ಪ್ರಜಾಪ್ರತಿನಿಧಿ ಸಭೆ ಹಾಗೂ ನ್ಯಾಯವಿಧಾಯಕ ಸಭೆಗೆ ೧೯೪೧ ರ ಫೆಬ್ರವರಿ ತಿಂಗಳಿನಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಪ್ರಜಾಪ್ರತಿನಿಧಿ ಸಭೆಯ ೧೬೦ ಸ್ಥಾನಗಳಲ್ಲಿ ೧೧೧ ಕಾಂಗ್ರೆಸ್ ಅಭ್ಯರ್ಥಿಗಳು ಜಯಗಳಿಸಿದರು. ನ್ಯಾಯ ವಿಧಾಯಕ ಸಭೆಯ ೨೦ ಸ್ಥಾನಗಳಲ್ಲಿ ೧೬ ಮಂದಿ ಕಾಂಗ್ರೆಸ್ ಅಭ್ಯರ್ಥಿಗಳು ಚುನಾಯಿತರಾದರು.

ನಂತರದ ಬೆಳವಣಿಗೆಯಲ್ಲಿ ಮೈಸೂರು ಸಂಸ್ಥಾನದ ಬ್ರಾಹ್ಮಣೇತರ ಪಕ್ಷಗಳು ಕಾಂಗ್ರೆಸ್ ಪಕ್ಷದಲ್ಲಿ ವಿಲೀನವಾಗುವಂತೆ ಹೆಚ್.ಕೆ.ವೀರಣ್ಣಗೌಡು ಸೇರಿದಂತೆ ಅನೇಕ ಮುಖಂಡರು ಶ್ರಮಿಸಿದರು. ಸಂಸ್ಥಾನದಲ್ಲಿ ಕಾಂಗ್ರೆಸ್ ಪ್ರಧಾನ ಪಕ್ಷವಾಗಿ ರೂಪುಗೊಂಡ ಮೇಲೆ ಅದರ ಭರಾಟೆ ಹೆಚ್ಚಾಯಿತು. ಹೆಚ್.ಕೆ.ವೀರಣ್ಣಗೌಡ ಮೊದಲಾದ ಹಿರಿಯ ಮುಖಂಡರು ಸಂಸ್ಥಾನದಲ್ಲೆಲ್ಲಾ ಬಿರುಸಿನಿಂದ ಪ್ರವಾಸ ಕೈಗೊಂಡು, ಪ್ರಚಾರ ಮಾಡಿ ಕಾಂಗ್ರೆಸ್ ಸಂಸ್ಥೆ ಹೆಮ್ಮರವಾಗಿ ಬೆಳೆಯಲು ಶ್ರಮಿಸಿದರು.

ಪ್ರಜಾ ಪ್ರತಿನಿಧಿ ಸಭೆಯಲ್ಲಿ ಮತ್ತು ನ್ಯಾಯವಿಧಾಯಕ ಸಭೆಯಲ್ಲಿ ಆಯ್ಕೆಯಾದ ಕಾಂಗ್ರೆಸ್ ಶಾಸಕರ ಸಮ್ಮೇಳನವು ೧೯೪೧ ರ ಮೇ ೪ ಮತ್ತು ೫ ರಂದು ಬೆಂಗಳೂರಿನಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಾಗಿ ಕೆ.ಸಿ.ರೆಡ್ಡಿಯವರು, ನ್ಯಾಯವಿಧಾಯಕ ಸಭೆಯ ನಾಯಕರಾಗಿ ಟಿ.ಮರಿಯಪ್ಪನವರು ಆಯ್ಕೆಯಾದರು.

**ಕ್ವಿಟ್ ಇಂಡಿಯಾ ಚಳುವಳಿ**

ಕ್ರಿಪ್ಸ್ ಸಂದಾನ ಮುರಿದು ಬಿದ್ದ ಹಿನ್ನೆಲೆಯಲ್ಲಿ ೧೯೪೨ರ ಆಗಸ್ಟ್ ತಿಂಗಳ ಮೊದಲನೆಯ ವಾರದಲ್ಲಿ ಮುಂಬಯಿ ನಗರದಲ್ಲಿ ಸಮಾವೇಶಗೊಂಡ ಅಖಿಲ ಭಾರತೀಯ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯ ಮಾರ್ಗದರ್ಶನದಂತೆ 'ಭಾರತ ಬಿಟ್ಟು ತೊಲಗಿ' ನಿರ್ಣಯ ಅಂಗೀಕೃತವಾಗುತ್ತದೆ.[೬೧] ಕಾಂಗ್ರೆಸ್‌ನ ಈ ಕ್ವಿಟ್ ಇಂದಿಯಾ ನಿರ್ಣಯದೊಂದಿಗೆ 'ಮಾಡು ಇಲ್ಲವೆ ಮಡಿ' ಎಂಬ ಘೋಷಣೆ ದೇಶಾದ್ಯಂತ ಮೊಳಗಿತು. ಕಾಂಗ್ರೆಸ್‌ನ ಈ ಘೋಷಣೆಯ ಮಾರನೆಯ ದಿನವೇ ಸರ್ಕಾರವು ದೇಶಾದ್ಯಂತ ಪ್ರಮುಖ ನಾಯಕರನ್ನೆಲ್ಲಾ ಬಂಧಿಸಿ ವಿಚಾರಣೆಯಿಲ್ಲದೆ ಜೈಲಿಗೆ ಕಳುಹಿಸಿತು. ಇದರಿಂದ ಭಾರತದಾದ್ಯಂತ ಜನರೆಲ್ಲಾ ರೋಷದಿಂದ ಪ್ರತಿಭಟಿಸಿದರು. ಈ ಚಳುವಳಿಯ ಪ್ರಭಾವ ಮೈಸೂರು ಸಂಸ್ಥಾನಕ್ಕೂ ತಟ್ಟಿತು.

---

[೬೧] ದೇಜಗೌ. ಕರ್ನಾಟಕದ ರೂವಾರಿ. ಪು-೮೪

ಗಾಂಧೀಜಿ ಮತ್ತಿತರ ನಾಯಕರುಗಳ ಬಂಧನದ ಸುದ್ದಿ ದೇಶಾದ್ಯಂತ ಹಬ್ಬಿ ಚಳುವಳಿ ತೀವ್ರಗೊಂಡಿತು. ಮೈಸೂರಿನಲ್ಲಿ ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳು ಆಗಸ್ಟ್ ೯ ರಂದು ಮೆರವಣಿಗೆ ಮಾಡಿ ೧೦ ರಿಂದ ಚಳುವಳಿಯನ್ನು ಪ್ರಾರಂಭಿಸಲು ತೀರ್ಮಾನಿಸಿದರು. ಆದರೆ ದಿವಾನರು ಇದನ್ನು ತಡೆಯಲು ನಿರ್ಧರಿಸಿ ಮೈಸೂರು ಕಾಂಗ್ರೆಸ್ಸನ್ನು ಕಾನೂನು ಬಾಹಿರ ಸಂಸ್ಥೆ ಎಂದು ಘೋಷಿಸಿ ಸಾರ್ವಜನಿಕ ಸಭೆಗಳನ್ನು ನಿಷೇಧಿಸಿ ಕೆಲವರನ್ನು ಬೆಂಗಳೂರಿನಲ್ಲಿ ಬಂಧಿಸಿದರು. ಇದನ್ನು ಪ್ರತಿಭಟಿಸಿ ಕೆಂಗಲ್ ಹನುಮಂತಯ್ಯನವರ ನೇತೃತ್ವದಲ್ಲಿ ಬೆಂಗಳೂರಿನ ಚಿಕ್ಕಲಾಲ್ ಬಾಗಿನಲ್ಲಿ ಸುಮಾರು ೫ ಸಾವಿರ ಜನರು ಸಭೆ ಸೇರಿ ಸರಕಾರದ ಕ್ರಮವನ್ನು ಖಂಡಿಸಿದರು.[೬೨]

ಅನೇಕ ನಾಯಕರು ಭೂಗತರಾಗಿ ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗಿದರು. ಉಳಿದ ಕಾಂಗ್ರೆಸ್ ಕಾರ್ಯಕರ್ತರು ನಿಷೇದಾಜ್ಞೆಯನ್ನು ಉಲ್ಲಂಘಿಸುವುದು, ರಾಷ್ಟ್ರದ ತ್ರಿವರ್ಣ ಧ್ವಜ ಹಾರಿಸುವುದು, ಈಚಲು ಮರ ಕಡಿಯುವುದು, ಹೆಂಡದಂಗಡಿ ಮತ್ತು ವಿದೇಶಿ ಬಟ್ಟೆಯಂಗಡಿ ಮುಂದೆ ಪಿಕೆಟಿಂಗ್ ಮಾಡುವುದು ಮುಂತಾದ ಚಟುವಟಿಕೆಗಳಲ್ಲಿ ತೊಡಗಿದ್ದರು. ಶಾಲಾ ಕಾಲೇಜುಗಳಿಂದ ವಿದ್ಯಾರ್ಥಿಗಳು ಹೊರಬಂದರು. ವಿದ್ಯಾರ್ಥಿಗಳು ತಂತಿ ಕತ್ತರಿಸುವುದು. ರೈಲು ಗಾಡಿಗಳನ್ನು ನಿಲ್ಲಿಸುವುದು, ಅಂಚೆ ಸಾಗಾಣಿಕೆಯಲ್ಲಿ ತೊಂದರೆಯನ್ನುಂಟು ಮಾಡುವುದು ಮುಂತಾದ ಕೆಲಸಗಳಲ್ಲಿ ತೊಡಗಿದರು.

ಸಾವಿರಾರು ಜನರನ್ನು ಸರ್ಕಾರವು ಬಂಧಿಸಿ ಜೈಲುಗಳಲ್ಲಿ ಇಡಲು ಸ್ಥಳವಿಲ್ಲದೆ ಹೋಗಲು ಬಂಧಿಸಿದ ಕಾಂಗ್ರೆಸ್ ಸದಸ್ಯರು ಹಾಗೂ ವಿದ್ಯಾರ್ಥಿಗಳನ್ನು ೨೦, ೩೦ ಮೈಲಿ ದೂರದ ಪ್ರದೇಶಗಳಿಗೆ ಕರೆದುಕೊಂಡು ಹೋಗಿ ನಿರ್ಜನ ಪ್ರದೇಶಗಳಲ್ಲಿಯು, ಕಾಡುಗಳಲ್ಲಿಯು ಬಿಟ್ಟು ಬರುತ್ತಿದ್ದರು. ಸರ್ಕಾರವು ದಿಗ್ಭ್ರಮೆಗೊಂಡು ನಿಸ್ತೇಜಕವಾಯಿತು. ಈ ಚಳುವಳಿಯಲ್ಲಿ ಸುಮಾರು ೨೫ ಸಾವಿರ ಜನರನ್ನು ಬಂಧಿಸಿದರು. ಸರ್ಕಾರವು ವಿವಿಧ ಭಾಗಗಳಲ್ಲಿ ಕೈಗೊಂಡ ಗೋಲಿಬಾರ್‌ನಲ್ಲಿ ೧೫೬ ಜನ ಮಡಿದರು. ೮೦೦ ಜನ ಗಾಯಗೊಂಡರು. ಬೆಂಗಳೂರು ನಗರದಲ್ಲಿ ಗಲಾಟೆ ಬಹಳ ಗಂಭೀರವಾಗಿತ್ತು. ಗುಂಪುಗಳನ್ನು ಚದುರಿಸಲು ಕಾಲ್ದಳ ಮತ್ತು ಅಶ್ವದಳಗಳನ್ನು ಉಪಯೋಗಿಸಿದರು.'[೬೩] ಆಗಸ್ಟ್ ೧೧ ರಂದು ಮೈಸೂರಿನ ಮಹಾರಾಜ ಕಾಲೇಜಿನ ಮುಂದೆ ಸುಮಾರು ೫ ಸಾವಿರ ಮಂದಿ ವಿದ್ಯಾರ್ಥಿಗಳು ಸೇರಿ ಮೆರವಣಿಗೆಯನ್ನು ನಡೆಸಿದರು. ಇದರಿಂದ ಬೆದರಿದ ಮೈಸೂರು ಸರ್ಕಾರ ಆಗಸ್ಟ್ ೧೬ ರವರೆಗೆ ಶಾಲಾ ಕಾಲೇಜುಗಳನ್ನು ಮುಚ್ಚಲು ಆಜ್ಞೆ ಹೊರಡಿಸಿತು.

ಬೆಂಗಳೂರಿನಲ್ಲಿ ನ್ಯಾಷನಲ್ ಹೈಸ್ಕೂಲ್ ವಿದ್ಯಾರ್ಥಿಗಳು ಆಗಸ್ಟ್ ೧೦ ರಂದು ಮೆರವಣಿಗೆಯನ್ನು ಮಾಡಿ ಎಲ್ಲಾ ವರ್ಗಗಳಿಗೂ ಚಳವಳಿಯಲ್ಲಿ ಭಾಗವಹಿಸಲು ಕರೆ ನೀಡಿದರು. ಇದರಿಂದಾಗಿ ವರ್ತಕರು ತಮ್ಮ ಅಂಗಡಿಗಳನ್ನು ಮುಚ್ಚಿದರು. ಮೆಡಿಕಲ್ ಕಾಲೇಜು, ಸೆಂಟ್ರಲ್ ಕಾಲೇಜು, ಸೇಂಟ್ ಜೋಸೆಫ್

---

[೬೨] ಸೂರ್ಯನಾಥ ಕಾಮತ್. ಸ್ವಾತಂತ್ರ್ಯದ ಸಂಗ್ರಾಮದ ಸ್ಮೃತಿಗಳು. ಪು-೧೧೪

[೬೩] ಕೆ.ವೀರತಪ್ಪ. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ . ಪು.೧೦೪

ಕಾಲೇಜು, ಪೋರ್ಟ್ ಹೈಸ್ಕೂಲ್ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು. ಇದಲ್ಲದೆ ಮಿನರ್ವ ಮಿಲ್‌ನ ಕಾರ್ಮಿಕರು ತಮ್ಮ ಕಾರ್ಯವನ್ನು ಸ್ಥಗಿತಗೊಳಿಸಿದರು. ಹೀಗೆ ಬೆಂಗಳೂರಿನಲ್ಲಿ ಚಳವಳಿಯು ತೀವ್ರಗೊಳ್ಳಲಾರಂಭಿಸಿದಂತೆ ಸರಕಾರ ಇದನ್ನು ತಡೆಯಲು ಅಂದೇ ೨೮ ಜನರನ್ನು ಬಂಧಿಸಿತು.[೬೮]

೧೯೪೨ರ ಆಗಸ್ಟ್ ೧೨ರಂದು ಮೈಸೂರಿನ ಸುಬ್ಬರಾಯನಕೆರೆ ಅಂಗಳದಲ್ಲಿ ಏರ್ಪಡಿಸಿದ್ದ ಸಭೆಯನ್ನು ಉದ್ದೇಶಿಸಿ ಮಾತನಾಡಲು ವೀರಣ್ಣಗೌಡರನ್ನು ಆಹ್ವಾನಿಸಿದರು. ಅದರಂತೆ ಸುಮಾರು ಹತ್ತು ಸಾವಿರ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣಮಾಡಿದ ಹೆಚ್.ಕೆ.ವೀರಣ್ಣಗೌಡರನ್ನು ಮಾರನೆಯ ದಿನ ಪೊಲೀಸರು ಕಾಂಗ್ರೆಸ್ ಕಚೇರಿಯಲ್ಲಿ ಬಂಧಿಸಿದರು.

ಈ ಎಲ್ಲಾ ಚಟುವಟಿಕೆಗಳಲ್ಲಿಯೂ ಸರ್ಕಾರ ಕಾಂಗ್ರೆಸಿಗರ ಮೇಲೆ ಮಾತ್ರ ನಿರ್ಬಂಧ ಮತ್ತು ಬಂಧನಗಳನ್ನು ಮಾಡುತ್ತಿದ್ದರೇ ವಿನಃ ಪ್ರಾರಂಭದಲ್ಲಿ ವಿದ್ಯಾರ್ಥಿಗಳು ಮತ್ತು ಕಾರ್ಮಿಕರ ವಿರುದ್ಧ ವಿಶೇಷ ಕ್ರಮಕೈಗೊಳ್ಳಲಾರಂಭಿಸಿದರು. ಇದರ ಪ್ರಯುಕ್ತ ೧೯೪೨ರ ಆಗಸ್ಟ್ ೧೬ ರಂದು ಪೊಲೀಸರು ಸತ್ಯಾಗ್ರಹ ತಡೆಗಟ್ಟಲು ಅಶ್ವದಳವನ್ನು ಉಪಯೋಗಿಸಿ ಲಾಠಿ ಪ್ರಹಾರ ಮಾಡಿದರು. ಇದರಿಂದ ವಿದ್ಯಾರ್ಥಿಗಳು ಮತ್ತು ಕಾರ್ಮಿಕರು ಪೊಲೀಸರ ಮೇಲೆ ಕಲ್ಲು ತೂರಾಟ ಮಾಡಲಾರಂಭಿಸಿದರು. ಈ ಘರ್ಷಣೆಯಲ್ಲಿ ಅನೇಕರು ಪ್ರಜ್ಞೆ ತಪ್ಪಿದರೆ ನೂರಾರು ಜನರು ಗಾಯಗಬಂಡು ಒಬ್ಬನು ಸಾವನ್ನಪ್ಪಿದನು. ಆದರೂ ಗಲಭೆ ನಿಲ್ಲದ್ದರಿಂದ ಪೊಲೀಸರು ಎರಡು ಭಾರಿ ಗೋಲಿಬಾರ್ ಮಾಡಿದರು. ಇದರಿಂದ ರೊಚ್ಚಿಗೆದ್ದ ವಿದ್ಯಾರ್ಥಿಗಳು ಅಂಚೆಕಚೇರಿ, ಸರಾಯಿ ಅಂಗಡಿ ಹಾಗೂ ಸರ್ಕಾರಿ ಕಛೇರಿಗಳನ್ನು ಲೂಟಿ ಮಾಡಿ ಪೊಲೀಸ್ ವ್ಯಾನ್‌ಗಳ ಮೇಲೆ ಕಲ್ಲು ತೂರಾಟ ಮಾಡಿದ್ದಲ್ಲದೆ ಅನೇಕ ಕಡೆಗಳಲ್ಲಿ ಬೆಂಕಿ ಹಚ್ಚಲಾಯಿತು. ಇದಲ್ಲದೆ ಒಂದು ಪೊಲೀಸ್ ಠಾಣೆಗೆ ಮುತ್ತಿಗೆ ಹಾಕಲಾಯಿತು. ಇವುಗಳನ್ನು ತಡೆಗಟ್ಟಲು ಐದು ಕಡೆಗಳಲ್ಲಿ ಗೋಲಿಬಾರ್ ಮಾಡಲಾಗಿ ಅನೇಕ ಸಾವುನೋವಿಗೆ ಕಾರಣವಾಯಿತು.

ಈ ಚಳವಳಿಯು ರಾಜ್ಯದ ಅನೇಕ ಗ್ರಾಮಗಳು ಮತ್ತು ಹಳ್ಳಿಗಳಿಗೂ ವ್ಯಾಪಿಸಿದ್ದರಿಂದ ಇದನ್ನು ತಡೆಗಟ್ಟಲು ಅನೇಕ ಕಡೆಗಳಲ್ಲಿ ಪೊಲೀಸರು ಗೋಲಿಬಾರ್ ಮಾಡಿದ್ದರ ಜೊತೆಗೆ ಆಗಸ್ಟ್ ೧೬ ರಂದು ಪತ್ರಿಕೆಗಳ ಮೇಲೆ ನಿರ್ಬಂಧವನ್ನು ತಂದು ಪತ್ರಕರ್ತರಿಗೆ ಎಚ್ಚರಿಕೆ ನೀಡಲಾಯಿತು. ಇದನ್ನು ಪ್ರತಿಭಟಿಸಿ ಸ್ಥಳೀಯ ಪತ್ರಿಕೆಗಳು ೧೭ ರಂದು ತಮ್ಮ ಪ್ರಕಟಣೆಯನ್ನು ನಿಲ್ಲಿಸಿದವು. ಸರಕಾರ ತನ್ನ ದಮನಕಾರಿ ನೀತಿಯ ಮೂಲಕ ಚಳವಳಿಯನ್ನು ಹತ್ತಿಕ್ಕುವುದರಲ್ಲಿ ಸಂಪೂರ್ಣವಾಗಿ ವಿಫಲವಾಯಿತು. ದಮನಕಾರಿ ನೀತಿಯ ವಿರುದ್ಧವಾಗಿ ಚಳವಳಿಯು ಹಿಂಸಾತ್ಮಕ ಸ್ವರೂಪವನ್ನು ತಳೆಯಲಾರಂಭಿಸಿತು. ಇದನ್ನು ತಡೆಯಲು ಕಂಡಲ್ಲಿ ಗುಂಡು ಆಜ್ಞೆಯನ್ನು ತಂದು ಸೈನ್ಯವನ್ನು ಕರೆಸಿದ್ದಲ್ಲದೆ ಬ್ರಿಟಿಷ್ ಸೈನ್ಯವನ್ನು ಸಹ ಬಳಸಲಾಯಿತು.[೬೯]

---

[೬೮] ಡಾ.ಟಿ.ಡಿ.ದೇವೇಗೌಡ. ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ. ಪು.೧೯೧

[೬೯] ಪೂರ್ವೋಕ್ತಿ.

ಕ್ವಿಟ್ ಇಂಡಿಯಾ ಚಳವಳಿ ಮೈಸೂರು ಸಂಸ್ಥಾನದಲ್ಲಿ ಅದ್ಭುತವಾದ ಪ್ರಭಾವ ಬೀರಿದ ಚಳವಳಿ. ಈ ಚಳುವಳಿಯಿಂದ ಪ್ರೇರಿತರಾದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರಿನಲ್ಲಿ ಗ್ರಾಮಸ್ಥರೆಲ್ಲರೂ 'ಬೇಜವಾಬ್ದಾರಿ ಸರ್ಕಾರದವರು ಯಾರೂ ಬರಕೂಡದು, ಬಂದರೆ . . . . ಎಂದು ಬೋರ್ಡ್ ಬರೆದು ಊರಿನ ಹೊರಭಾಗದಲ್ಲಿ ತೂಗು ಹಾಕಿದ್ದರು. ಊರಿನ ಪಟೇಲ ಮತ್ತು ಶಾನುಭೋಗರ ದಪ್ತರುಗಳನ್ನು ಕಿತ್ತುಕೊಂಡು ಅವರನ್ನು ಒಂಟಿ ಕಾಲಿನಲ್ಲಿ ನಿಂತುಕೊಳ್ಳುವ ಶಿಕ್ಷೆ ವಿಧಿಸಿದರು. ಒಳ್ಳೆಯ ನಡತೆಯಿಂದ ನಡೆದುಕೊಳ್ಳುತ್ತೇವೆಂದು ಬರೆದುಕೊಟ್ಟ ನಂತರ ಅವರನ್ನು ಬಿಡುಗಡೆ ಮಾಡಿದರು. ಸುದ್ದಿ ತಿಳಿದ ತಕ್ಷಣ ಅಲ್ಲಿಗೆ ಧಾವಿಸಿದ ಉನ್ನತ ಪೊಲೀಸ್ ಅಧಿಕಾರಿಗಳು ಬೋರ್ಡ್ ಕಿತ್ತು ಹಾಕಿ ಹಾರಿಸಿದ ತ್ರಿವರ್ಣ ಧ್ವಜವನ್ನು ಕೆಳಕ್ಕಿಳಿಸಿದರು. ವಿರೋಧಿಸಿದ ಸ್ವಯಂ ಸೇವಕರ ಮೇಲೆ ಲಾಠಿ ಪ್ರಹಾರ ಮಾಡಿ ನಂತರ ಗೋಲಿಬಾರ್ ಮಾಡಿದರು. ಇದರಿಂದ ಕೋಪಗೊಂಡ ಜನರು ಪೊಲೀಸ್ ಅಧಿಕಾರಿಗಳ ಮೇಲೆ ದಾಳಿಮಾಡಿದರು. ಈ ಗಲಭೆಯಲ್ಲಿ ತಹಸಿಲ್ದಾರ್ ಮತ್ತು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮಾಡಿದರು. ಅನೇಕರು ಗಾಯಗೊಂಡರು. ಇದರಿಂದ ಕ್ರೋಧಗೊಂಡ ಜಿಲ್ಲಾಧಿಕಾರಿಗಳು ಮಾರನೆಯ ದಿನ ಹೆಚ್ಚಿನ ಪೊಲೀಸ್ ಸಿಬ್ಬಂದಿ ಹಾಗೂ ಸೈನ್ಯದೊಂದಿಗೆ ಈ ಊರಿಗೆ ದಾಳಿ ಮಾಡಿ ೪೧ ಮಂದಿಯನ್ನು ಬಂಧಿಸಿ, ಕೋರ್ಟ್‌ಗೆ ಹಾಜರು ಪಡಿಸಿದರು. ತನಿಖೆ ನಡೆಸಿದ ವಿಶೇಷ ನ್ಯಾಯಾಧೀಶರು ೧೧ ಜನರಿಗೆ ಮರಣದಂಡನೆ, ೧೩ ಜನರಿಗೆ ಜೀವಾವಧಿ ಶಿಕ್ಷೆ ವಿಧಿಸಿದರು. ಹೈಕೋರ್ಟ್‌ಗೆ ಅಪೀಲು ಮಾಡಿದ ನಂತರವೂ ಗುರಪ್ಪ, ಮಲ್ಲಪ್ಪ, ಸೂರ್ಯನಾರಾಯಣಾಚಾರ್, ಹಾಲಪ್ಪ ಮತ್ತು ಶಂಕರಪ್ಪ ಮುಂತಾದವರಿಗೆ ಮರಣದಂಡನೆ ಖಾಯಂ ಆಗಿ ೧೯೪೩ರ ಮಾರ್ಚ್ ೮,೯ ಮತ್ತು ೧೦ ರಂದು ಗಲ್ಲಿಗೇರಿಸಿಲಾಯಿತು.

ಕ್ವಿಟ್ ಇಂಡಿಯಾ ಚಳುವಳಿಯ ನಂತರ ಭಾರತದಾದ್ಯಂತ ಕಾಂಗ್ರೆಸ್ ಚಳವಳಿ ಸ್ಥಗಿತಗೊಂಡಿತು. ಮೈಸೂರು ಸರ್ಕಾರವು ಜೈಲಿನಲ್ಲಿದ್ದ ಕಾಂಗ್ರೆಸ್ ನಾಯಕರನ್ನು ೧೯೪೪ರಲ್ಲಿ ಬಿಡುಗಡೆ ಮಾಡಿತು. ಅದೇ ವರ್ಷ ನಡೆದ ನ್ಯಾಯವಿಧಾಯಕ ಸಭೆ ಮತ್ತು ಪ್ರಜಾಪ್ರತಿನಿಧಿ ಸಭೆ ಚುನಾವಣೆಗಳಲ್ಲಿ ನ್ಯಾಯವಿಧಾಯಕ ಸಭೆಗೆ ೨೦ ಮಂದಿ ಹಾಗೂ ಪ್ರಜಾಪ್ರತಿನಿಧಿ ಸಭೆಗೆ ೧೩೦ ಮಂದಿ ಕಾಂಗ್ರೆಸ್ ಸದಸ್ಯರು ವಿಜೇತರಾದರು. ಮಾರ್ಚ್ ೧೮ ರಂದು ಈ ಎರಡೂ ಸಭೆಗಳ ಸದಸ್ಯರು ಒಟ್ಟಿಗೇ ಸೇರಿ ಪ್ರಜಾಪ್ರತಿನಿಧಿ ಸಭೆಗೆ ನಾಯಕರನ್ನಾಗಿ ಕೆ.ಸಿ.ರೆಡ್ಡಿಯವರನ್ನು ಚುನಾಯಿಸಿದರು.

೧೯೪೬ರ ನವೆಂಬರ್ ೨ ಮತ್ತು ೩ ರಂದು ಚನ್ನಪಟ್ಟಣದಲ್ಲಿ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ಸಿನ ೬ನೇಯ ಮಹಾಧಿವೇಶನದಲ್ಲಿ ಸಾಹುಕಾರ ಚನ್ನಯ್ಯ, ಟಿ.ಸಿದ್ದಲಿಂಗಯ್ಯ, ಕೆ.ಟಿ.ಭಾಷ್ಯಂ, ಹೆಚ್.ಕೆ.ವೀರಣ್ಣಗೌಡ, ಟಿ.ಸುಬ್ರಹ್ಮಣ್ಯಂ, ಕೆ.ಹನುಮಂತಯ್ಯ, ಡಿ.ಎಂ.ಸಿದ್ದಯ್ಯ, ಚೆನ್ನಿಗರಾಮಯ್ಯ, ಟಿ.ಮರಿಯಪ್ಪ, ತಿಮ್ಮರೆಡ್ಡಿ, ವಿ.ವೆಂಕಟಪ್ಪ, ಎಸ್.ಕರಿಯಪ್ಪ ಮುಂತಾದ ಕಾಂಗ್ರೆಸ್ಸಿನ ನಾಯಕರ ಸಮಾವೇಶ. ಅಂದು ಕಾಂಗ್ರೆಸ್ ಪ್ರಜೆಗಳೇ ಸ್ವಾತಂತ್ರ್ಯ ಸಮರಕ್ಕೆ ಸಿದ್ದರಾಗಿ ಎಂಬ ನಿರ್ಣಯ ಕೈಗೊಂಡಿತು. ಅಲ್ಲದೆ ಪ್ರಜಾಪ್ರತಿನಿಧಿ ಸಭೆಯ ನಾಯಕರಾಗಿದ್ದ ಕೆ.ಹನುಮಂತಯ್ಯನವರು 'ಜವಾಬ್ದಾರಿ ಸರಕಾರ ಸ್ಥಾಪಿಸಬೇಕು' ಎಂದು ಮಹಾರಾಜರಲ್ಲಿ ಬೇಡಿಕೆಯನ್ನು ಮುಂದಿಟ್ಟರು.

ಕೊಲ್ಲಾಪುರದಮ್ಮನ ದೇವಸ್ಥಾನದಿಂದ ಕುಡಿನೀರಿನ ಕಟ್ಟೆಯವರೆಗೆ ಅಲಂಕೃತ ೪೦ ಜೊತೆ ಎತ್ತುಗಳೊಂದಿಗೆ ಅಧ್ಯಕ್ಷ ಕೆ.ಸಿ.ರೆಡ್ಡಿಯವರ ಭಾರಿ ಮೆರವಣಿಗೆ. ಮೆರವಣಿಗೆ ವಾಪಾಸಾದಾಗ ಅಧ್ಯಕ್ಷರಿದ್ದ ರಥವು ಮುಸಲ್ಮಾನರ ಬೀದಿಯಲ್ಲಿ ತೆರಳಿತು. ಆ ಸಂದರ್ಭದಲ್ಲಿ ತಿಳಿಗೇಡಿ ಮತಾಂಧ ಮುಸಲ್ಮಾನನೊಬ್ಬ ರಥದ ಎತ್ತಿಗೆ ಚಾಕು ಹಾಕಿದ. ಪರಿಸ್ಥಿತಿ ಅಲ್ಲೋಲ ಕಲ್ಲೋಲ ಪ್ರಕ್ಷುಬ್ಧ, ಹಿಂದೂ ಮುಸಲ್ಮಾನ ಗಲಭೆಯುಂಟಾಗಿ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಹೈಸ್ಕೂಲ್ ಹೆಡ್ ಮಾಸ್ಟರ್ ಎಂ.ಆರ್.ಶ್ರೀನಿವಾಸಾಚಾರ್ ಅವರ ಹತ್ಯೆ ನಡೆಯಿತು. ಅಲ್ಲದೆ ಹನುಮಂತಯ್ಯ ಹಾಗೂ ಹೆಚ್.ಕೆ.ವೀರಣ್ಣಗೌಡು ಮುಸಲ್ಮಾನರ ಹಲ್ಲೆಗೆ ತುತ್ತಾದರು.[೬೬]

ನಂತರ "ಮೈಸೂರು ಕಾಂಗ್ರೆಸ್ಸಿನ ೬ನೇ ಅಧಿವೇಶನವು ಕೆ.ಚೆಂಗಲರಾಯರೆಡ್ಡಿಯವರ ಅಧ್ಯಕ್ಷತೆಯಲ್ಲಿ ೧೯೪೬ರ ನವೆಂಬರ್ ೨ ರಂದು ಬೆಂಗಳೂರು ನಗರದ ಸುಭಾಷ್ ನಗರದಲ್ಲಿನಡೆಯಿತು. ಸಂಸ್ಥಾನದ ಪ್ರಜೆಗಳ ನ್ಯಾಯವಾದ ಬೇಡಿಕೆಗಳ ಬಗ್ಗೆ ಮಹಾರಾಜರು ಮತ್ತು ಅಧಿಕಾರಿಗಳಿಗಿರುವ ಔದಾಸೀನ್ಯವನ್ನು ಕಾಂಗ್ರೆಸ್ ಅಧ್ಯಕ್ಷ ಕೆ.ಸಿ.ರೆಡ್ಡಿಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಖಂಡಿಸಿದರು.

'ನಮ್ಮ ಧ್ಯೇಯ ಫಲಿಸುವವರೆಗೆ ಶಾಸನ ಸಭೆಗಳಲ್ಲಿ ಆಯಕಟ್ಟು ಸ್ಥಾನಗಳನ್ನು ನಾವು ಆಕ್ರಮಿಸಿಕೊಂಡು ಸಭೆಗಳ ಮುಖಾಂತರವಾಗಿಯೂ ನಮ್ಮ ಹೋರಾಟವನ್ನು ಮುಂದುವರೆಸುವುದು ಸೂಕ್ತ ಮಾರ್ಗ ಚಳುವಳಿ ಉಗ್ರವಾಗಬೇಕು. ನಮ್ಮ ಧ್ಯೇಯ ಸಾಧನೆಗಾಗಿ ಅಹಿಂಸೆಯ ಅಡಿಗಲ್ಲಿನ ಮೇಲೆ ಎಲ್ಲಾ ವಿಧವಾದ ತ್ಯಾಗ ಸಂಕಟಗಳಿಗೆ ನಾವು ಸಿದ್ದರಾಗಬೇಕು' ಎಂದು ಕೆ.ಸಿ.ರೆಡ್ಡಿಯವರು ತಿಳಿಸಿದರು. ಮುಂದುವರೆದು 'ಭಾರತದಲ್ಲಿ ಆಗುತ್ತಿರುವ ಕ್ರಾಂತಿಕಾರಕ ಬದಲಾವಣೆಗಳನ್ನು ಮೈಸೂರು ಪ್ರಜೆಗಳು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಸ್ವಾತಂತ್ರ್ಯ ಭಾರತದಲ್ಲಿ ಮೈಸೂರು ಸ್ವಾತಂತ್ರ್ಯವಾಗಲು ಶ್ರಮಿಸಬೇಕು, ಸಾವು ನೋವುಗಳನ್ನು ಸಹಿಸಬೇಕು! ಬಲಿದಾನಕ್ಕೆ ಸಿದ್ದರಾಗಬೇಕು' ಎಂದು ಘೋಷಿಸಿದರು. ಸಂಸ್ಥಾನದ ಮಂತ್ರಿ ಮಂಡಲವು ಬೇಜವಾಬ್ದಾರಿಯಿಂದ ಕೂಡಿದ್ದು ಪ್ರಜೆಗಳಿಗೆ ಅದರಲ್ಲಿ ನಂಬಿಕೆ ಇಲ್ಲವೆಂದು, ಅದನ್ನು ಕೊನೆಗಾಣಿಸಲು ಸತ್ಯಾಗ್ರಹ ಚಳುವಳಿ ಅವಶ್ಯಕವೆಂದು, ಅಧಿವೇಶನವು ಈ ಒಂದು ನಿರ್ಣಯವನ್ನು ಸೂಚಿಸಿತು.

ನವೆಂಬರ್ ೮ ರಂದು ಮೈಸೂರು ಕಾಂಗ್ರೆಸ್ ವರಿಷ್ಠರ ಸಭೆಯೊಂದು ನಡೆದು ಜನತೆಯನ್ನು ಸತ್ಯಾಗ್ರಹಕ್ಕೆ ಸಿದ್ಧಗೊಳಿಸಲು ಸಂಸ್ಥಾನದ ಎಲ್ಲಾ ಭಾಗಗಳಲ್ಲಿಯೂ ಕಾಂಗ್ರೆಸ್ ಅಧ್ಯಕ್ಷರು ಪ್ರವಾಸ ಮಾಡಬೇಕೆಂದು ತೀರ್ಮಾನವಾಯಿತು. ಮುಂದಿನ ಮೂರು ತಿಂಗಳ ಕಾಲ ಕೆ.ಸಿ.ರೆಡ್ಡಿಯವರು ಸಂಸ್ಥಾನದಲ್ಲೆಲ್ಲಾ ಪ್ರವಾಸ ಮಾಡಿ ಸುಮಾರು ೧೩೦ ಗ್ರಾಮಗಳಿಗೆ ಭೇಟಿ ಮಾಡಿದರು. ಹೋದ ಕಡೆಗಳಲ್ಲೆಲ್ಲಾ ಅವರನ್ನು ಜನರು ಸಂಭ್ರಮದಿಂದಲೂ ಉತ್ಸಾಹದಿಂದಲೂ ಸ್ವಾಗತಿಸಿ ಕಾಂಗ್ರೆಸ್ಸಿನ ಬಗ್ಗೆ

---

[೬೬] ಕೋಣಂದೂರು ವೆಂಕಟಪ್ಪಗೌಡ. ನವಮೈಸೂರು ಶಿಲ್ಪಿ ಕೆಂಗಲ್ ಹನುಮಂತಯ್ಯ. ಯಶಸ್ವಿ ಪ್ರಕಾಶನ. ಬೆಂಗಳೂರು. ೧೯೮೫. ಪುಟ-೯೮,

ತಮ್ಮ ಸಹಾನುಭೂತಿ ವ್ಯಕ್ತಪಡಿಸಿದರು. ಕೆಲವು ಕಡೆ ಪುರಸಭೆಗಳು ಮತ್ತೆ ಕೆಲವು ಕಡೆ ಜಿಲ್ಲಾ ಬೋರ್ಡ್‌ಗಳು, ಅಧ್ಯಕ್ಷರಿಗೆ ಮನವಿಗಳನ್ನು ಅರ್ಪಿಸಿ ಕಾಂಗ್ರೆಸ್ ಬಗ್ಗೆ ತಮಗಿರುವ ವಿಶ್ವಾಸವನ್ನು ತೋರಿಸಿದರು. ಅಧ್ಯಕ್ಷರ ಪ್ರವಾಸದ ಪ್ರಯುಕ್ತ ಹೆಚ್ಚು ಹೆಚ್ಚು ಜನರು ಕಾಂಗ್ರೆಸ್ ಸೇರಿದರು. ಜೊತೆಗೆ ಕಾಂಗ್ರೆಸ್ ಚಳುವಳಿಯಲ್ಲಿ ಭಾಗವಹಿಸಲು ಸಿದ್ಧರಾದರು.[೬೬]

ಮೈಸೂರು ಸಂಸ್ಥಾನದಾದ್ಯಂತ ಸಭೆ ಮತ್ತು ಮೆರವಣಿಗೆಗಳ ವಿರುದ್ಧ ನಿಷೇದಾಜ್ಞೆಯನ್ನು ಹೇರಲಾಯಿತು. ಕೆಂಗಲ್ ಹನುಮಂತಯ್ಯನವರನ್ನು ರಾಜದ್ರೋಹದ ಆಪಾದನೆಯ ಮೇಲೆ ಬಂಧಿಸಲಾಯಿತು. ಆಗ ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿಯು ಮಹಾರಾಜರಿಗೆ ರಾಜ್ಯಾಂಗ ಸುಧಾರಣೆಯ ಬಗ್ಗೆ ಒಂದು ಮನವಿ ಪತ್ರ ಸಲ್ಲಿಸಿತು. ೧೯೪೭ರ ಮಾರ್ಚ್ ಕಡೆಯ ವಾರದಂದು ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿಯು ಕೋಲಾರ ಜಿಲ್ಲೆಯ ಬಂಗಾರಪೇಟೆಯಲ್ಲಿ ಸಭೆ ಸೇರಿ ನೂತನ ರಾಜ್ಯಾಂಗ ರಚನೆಯಾಗುವವರೆಗೆ ತಾತ್ಕಾಲಿಕ ಸರ್ಕಾರ ರಚಿಸಬೇಕೆಂದು ಕೋರಿತು. ಈ ಕೋರಿಕೆಗಳನ್ನು ಸರ್ಕಾರ ಒಪ್ಪದಿದ್ದಲ್ಲಿ ಸಂಸ್ಥಾನದಲ್ಲಿ ಸತ್ಯಾಗ್ರಹ ಚಳುವಳಿಯನ್ನು ಮೇ ೧ರಿಂದ ಆರಂಭಿಸಲು ನಿರ್ಣಯ ಕೈಗೊಂಡು ೧೦ ಅಂಶಗಳ ಯೋಜನೆಯುದನ್ನು ತಯಾರಿಸಿತು.

ಕಾಂಗ್ರೆಸ್ ಅಧ್ಯಕ್ಷರಾದ ಕೆ.ಸಿ.ರೆಡ್ಡಿಅಯವರು ದಿವಾನರೊಂದಿಗೆ ಏಪ್ರಿಲ್ ಕಡೆಯ ವಾರದಲ್ಲಿ ಮೈಸೂರಿನ ರಾಜಕೀಯ ಬೆಳವಣಿಗೆಯ ಬಗ್ಗೆ ಮಾತುಕತೆ ನಡೆಸಿದರು. ಈ ಮಾತುಕತೆಯಿಂದಾಗಿ ಮೇ ೧ ರಿಂದ ಆರಂಭಿಸಬೇಕಾಗಿದ್ದ ಚಳುವಳಿಯನ್ನು ಮುಂದೂಡಲಾಯಿತು. ಮೈಸೂರು ಸಂಸ್ಥಾನವು ಭಾರತದ ರಾಜ್ಯಾಂಗ ಸಭೆ ಸೇರುವುದೆಂದು ಜೂನ್ ೧೭ ರಂದು ದಿವಾನರು ಘೋಷಿಸಿದರು. ಭಾರತದ ರಾಜ್ಯಾಂಗ ಸಭೆಗೆ ಮೈಸೂರು ಸಂಸ್ಥಾನದಿಂದ ಕಳುಹಿಸಬೇಕಾಗಿದ್ದ ಸದಸ್ಯರ ಆಯ್ಕೆಗಾಗಿ ಚುನಾವಣೆಗಳು ನಡೆದು ಎಚ್.ಆರ್.ಗುರುವಾರೆಡ್ಡಿ ಮತ್ತು ಕೆ.ಚೆಂಗಲರಾಯ ರೆಡ್ಡಿಯವರು ಪ್ರಜಾಪ್ರತಿನಿಧಿ ಸಭೆಯಿಂದಲೂ ನ್ಯಾಯವಿಧಾಯಕ ಸಭೆಯಿಂದ ಡಿ.ಎಚ್.ಚಂದ್ರಶೇಖರಯ್ಯ ಮತ್ತು ಎಚ್.ವಿ.ಕೃಷ್ಣಮೂರ್ತಿಯವರು ಚುನಾಯಿತರಾದರು.

೧೯೪೭ರ ಆಗಸ್ಟ್ ೯ ರಂದು ಮೈಸೂರು ನಗರದ ಟೌನ್‌ಹಾಲ್‌ನಲ್ಲಿ ಕಾಂಗ್ರೆಸ್ ಅಧ್ಯಕ್ಷ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಸಭೆ ಸೇರಿ ಸತ್ಯಾಗ್ರಹ ಚಳುವಳಿಯನ್ನು ಸೆಪ್ಟೆಂಬರ್ ೧ ರಿಂದ ಆರಂಭಿಸುವ ಮುಖ್ಯ ತೀರ್ಮಾನ ಕೈಗೊಂಡಿತು. ಅಧ್ಯಕ್ಷ ಭಾಷಣ ಮಾಡುತ್ತಾ ಕೆ.ಸಿ.ರೆಡ್ಡಿಯವರು ಕಾದುನೋಡಿದ್ದು ಆಯಿತು, ಇನ್ನು ಉಳಿದಿರುವುದೊಂದೇ ಮಾರ್ಗ, ಅದು ಸತ್ಯಾಗ್ರಹ' ಎಂದು ಘೋಷಿಸಿದರು. ಅಧ್ಯಕ್ಷರ ಈ ಘೋಷಣೆ ಮೈಸೂರು ಕಾಂಗ್ರೆಸ್ ನಡೆಸಿದ 'ಮೈಸೂರು ಚಲೋ' ಕೊನೆಯ ಸತ್ಯಾಗ್ರಹ ಚಳುವಳಿಗೆ ನಾಂದಿಯಾಯಿತು.

---

[೬೬] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪು.೬೧

**೪.೫ ಜವಾಬ್ದಾರಿ ಸರ್ಕಾರ ಸ್ಥಾಪನ ಚಳುವಳಿ/ಮೈಸೂರು ಚಲೋ ಚಳವಳಿ:-**

ವಿಶ್ವದ ದ್ವಿತೀಯ ಮಹಾಯುದ್ಧದ ನಂತರ ಬ್ರಿಟಿಷ್ ಭಾರತದಲ್ಲಿನ ಪ್ರಾಂತ್ಯಗಳಲ್ಲಿ ಅಸಮಾನ್ಯ ರಾಜಕೀಯ ಬೆಳವಣಿಗೆಗಳು ಸಂಭವಿಸಿದವು. ಯುದ್ದಾನಂತರ ಬ್ರಿಟನ್ನಿನಲ್ಲಿ ಅಧಿಕಾರಕ್ಕೆ ಬಂದಿದ್ದ ಲೇಬರ್ ಪಕ್ಷವು ಭಾರತಕ್ಕೆ ಶೀಘ್ರದಲ್ಲಿಸ್ವಾತಂತ್ರ್ಯ ನೀಡುವ ಆಶ್ವಾಸನೆ ನೀಡಿದ್ದರಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಹಲವಾರು ಮುಖಂಡರು ಇದನ್ನು ಸ್ವಾಗತಿಸಿದರು. ೧೯೪೭ರಲ್ಲಿ ಭಾರತ ಸ್ವತಂತ್ರವಾಯಿತು. ಬ್ರಿಟಿಶರು ಕಾಂಗ್ರೆಸ್ಸಿಗೆ ಆಡಳಿತ ಯಂತ್ರ ಒಪ್ಪಿಸಿದಾಗ ದೇಶೀಯ ಮಹಾರಾಜರು ಮತ್ತು ನವಾಬರು ಸ್ವತಂತ್ರರೆಂದು ಘೋಷಿಸಿದರು. ದೇಶೀಯ ಸಂಸ್ಥಾನಗಳು ಭಾರತ ಒಕ್ಕೂಟ ಸೇರಿಕೊಳ್ಳಲು ಒಪ್ಪದೆ ತಾವೇ ಸ್ವತಂತ್ರರಾಗಿರಲು ಪ್ರಯತ್ನಿಸಿದವು. ಆದರೆ ಮೈಸೂರು ಸರ್ಕಾರವು ಸ್ವತಂತ್ರ ಸಂಸ್ಥಾನವಾಗಿರುವ ಇಚ್ಛೆ ಹೊಂದಿದ್ದರೂ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ನಾಯಕರ ಹಾಗೂ ಸ್ಥಳೀಯ ಕಾಂಗ್ರೆಸ್ ನಾಯಕರಾದ ಕೆ.ಸಿ.ರೆಡ್ಡಿ, ಕೆ.ಟಿ.ಭಾಷ್ಯಂ, ಟಿ.ಸಿದ್ದಲಿಂಗಯ್ಯ, ಹೆಚ್.ಕೆ.ವೀರಣ್ಣಗೌಡ, ಕೆ.ಹನುಮಂತಯ್ಯ, ಟಿ.ಮರಿಯಪ್ಪ ಮುಂತಾದವರ ಹಾಗೂ ಸಾರ್ವಜನಿಕರ ಒತ್ತಡದಿಂದ ೧೯೪೭ ಆಗಸ್ಟ್ ೧೦ ರಂದು ಮೈಸೂರು ಸಂಸ್ಥಾನವು ಭಾರತ ಒಕ್ಕೂಟಕ್ಕೆ ಸೇರುವ 'ಇನ್‌ಸ್ಟ್ರುಮೆಂಟ್ ಆಫ್ ಆಕ್ಸೆಷನ್'ಗೆ ಸಹಿ ಹಾಕಿ ಭಾರತ ಒಕ್ಕೂಟವನ್ನು ಸೇರಿಕೊಂಡಿತು.

ಭಾರತವು ಸರ್ವತಂತ್ರ ಸ್ವಾತಂತ್ರ್ಯವಾಯಿತು. ಆಗ ಮೈಸೂರು ಕಾಂಗ್ರೆಸ್ ಸಂಸ್ಥೆಯು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣತ್ಯಾಗ ಮಾಡಿದ ಸ್ವಾತಂತ್ರ್ಯ ಯೋಧರಿಗೆ ಕೃತಜ್ಞತೆ ಅರ್ಪಿಸುವುದಕ್ಕಾಗಿ ಸಾಹುಕಾರ ಚನ್ನಯ್ಯನವರ ಅಧ್ಯಕ್ಷತೆಯಲ್ಲಿ ಸಭೆಯೊದನ್ನು ಕರೆಯಿತು. ಆ ಸಭೆಯಲ್ಲಿ ಟಿ.ಮರಿಯಪ್ಪನವರು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದರೂ ಮೈಸೂರಿಗೆ ಜವಾಬ್ದಾರಿ ಸರ್ಕಾರ ಬಾರದಿರುವುದನ್ನು ಖಂಡಿಸಿ ಮೈಸೂರಿನ ಅರಸರು ಕೂಡಲೇ ಪ್ರಜೆಗಳಿಗೆ ಅಧಿಕಾರವನ್ನು ವರ್ಗಾಯಿಸಬೇಕೆಂದು ಕೋರಿದರು. ಒಟ್ಟಿನಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ಸಂಸ್ಥಾನದ ಜನರಿಗೆ ಅದು ಬರಲಿಲ್ಲ. ಅದಕ್ಕಾಗಿ ಇಲ್ಲಿನ ಕಾಂಗ್ರೆಸ್ ನಾಯಕರು ಮತ್ತೆ ಚಳುವಳಿ ನಡೆಸಬೇಕಾಯಿತು.

ಈ ಚಳುವಳಿಯ ವಿಚಾರ ಮೊದಲು ಮೂಡಿದ್ದು ಕೆಂಗಲ್ ಹನುಮಂತಯ್ಯನವರಲ್ಲಿ. ಅವರು ಚಳುವಳಿಗೆ ಕರೆ ನೀಡಿದಾಗ ಅವರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ ಸರ್ಕಾರ ಅವರನ್ನು ಬಂಧಿಸಿತು. ಆಗ ಜನತೆಯ ಮನೋಭಿಲಾಷೆಗೆ ಸ್ಪಂದಿಸದೇ, ಸಲಹೆಗಾರರ ಮತ್ತು ದಿವಾನರ ಮಾತನ್ನು ಕೇಳಿ ಅರಮನೆಯಲ್ಲಿಯೇ ಕುಳಿತಿರುವ ಮಹಾರಾಜರು ಜನತೆಯ ಹತ್ತಿರ ಬರಲು ಒಲ್ಲದುದರಿಂದ, ಜನತೆಯೇ ಮಹಾರಾಜರಲ್ಲಿಗೆ ಹೋಗುವುದು ಅನಿವಾರ್ಯವಾಗಿದೆ ಎಂದ ಕಾಂಗೆಸ್, ಇದಕ್ಕೆ ಪೂರಕವಾಗಿ ಮೈಸೂರು ಚಲೋ ಹಾಗೂ ಅರಮನೆ ಸತ್ಯಾಗ್ರಹದ ಕಾರ್ಯಕ್ರಮವನ್ನು ರೂಪಿಸಿತು. ಕಾಂಗ್ರೆಸ್ ನಾಯಕರು ತಮ್ಮ ಸತ್ಯಾಗ್ರಹಕ್ಕೆ ಜನತೆಯ ಬೆಂಬಲ ಗಳಿಸಿಕೊಳ್ಳಲು ಆಗಸ್ಟ್ ೨೧ ರಿಂದ ೧೦ ದಿನಗಳ ಕಾಲ ಸಂಸ್ಥಾನದಾದ್ಯಂತ ಪ್ರವಾಸ ಕೈಗೊಂಡು ಜನರು ಕಾಂಗ್ರೆಸ್ಸಿನ ಪರವಾಗಿ ಸೇರುವಂತೆ ಮಾಡಿದರು. ಆಗಸ್ಟ್ ೨೦ ರಂದು ಪ್ರವಾಸ ಹೊರಡುವುದಕ್ಕೆ ಮುನ್ನಾ ದಿನ ಬೆಂಗಳೂರಿನಲ್ಲಿ ಕಾಂಗ್ರೆಸ್

ಕಾರ್ಯನಿರ್ವಾಹಕ ಸಮಿತಿ ಸಭೆ ಸೇರಿ ಸತ್ಯಾಗ್ರಹ ಘೋಷಣೆ ಮಾಡಲು ನಿರ್ಧರಿಸಿತು. ಆಗಸ್ಟ್ ೨೧ ರಂದು ಪ್ರಕಟಣಾ ಕಾರ್ಯದರ್ಶಿ ಹೆಚ್.ಕೆ.ವೀರಣ್ಣಗೌಡು ಒಂದು ಅಧಿಕೃತ ಪ್ರಕಟಣೆ ಹೊರಡಿಸಿ, 'ಕಾಂಗ್ರೆಸ್ ಕಾರ್ಯ ಸಮಿತಿ ತನ್ನ ರಚನಾ ವ್ಯವಸ್ಥೆಯನ್ನು ರದ್ದುಗೊಳಿಸಿದೆ. ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಕೆ.ಚೆಂಗಲರಾಯರೆಡ್ಡಿಯವರನ್ನು ಸೆಪ್ಟೆಂಬರ್ ೧ನೇ ತಾರೀಕಿನಿಂದ ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಿದೆ. ಸಂಸ್ಥಾನದ ಪ್ರಜೆಗಳೆಲ್ಲರೂ ಅಂದು ಹರತಾಳವನ್ನಾಚರಿಸಬೇಕು ಸಂಜೆ ಸಾರ್ವಜನಿಕ ಸಭೆಗಳನ್ನು ನಡೆಸಿ ಜವಾಬ್ದಾರಿ ಸರ್ಕಾರದ ಘೋಷಣೆಯನ್ನು ಮಾಡಬೇಕು. ಸಭೆಗಳಲ್ಲಿ ಸತ್ಯಾಗ್ರಹಿ ಪ್ರಮಾಣವಚನ ಸ್ವೀಕರಿಸಬೇಕೆಂದು ಸತ್ಯಾಗ್ರ್ಹ ನಿಲ್ಲಿಸಲು ಮೊದಲನೆಯ ಸರ್ವಾಧಿಕಾರಿಗಳಲ್ಲದೆ ಬೇರೆಯಾರಿಗೂ ಅಧಿಕಾರವಿಲ್ಲ. ಮೈಸೂರು ಅರಮನೆ ಸತ್ಯಾಗ್ರಹವೂ ಸೇರಿ ಎಲ್ಲ ಬಗೆಯ ಸತ್ಯಾಗ್ರಹವನ್ನು ಅಹಿಂಸಾಯುತವಾಗಿ ನಡೆಸಲು ಮಹಾಜನರನ್ನು ಕೋರಲಾಗಿದೆ' ಎಂದು ಜಾಹೀರು ಮಾಡಿದರು.[೬೮] ಈ ಕಾರ್ಯಕ್ರಮದನ್ವಯ ಸೆಪ್ಟೆಂಬರ್ ೪ ರಂದು ರಾಜ್ಯದ ಎಲ್ಲಾ ಕಡೆಗಳಿಂದಲೂ ಸತ್ಯಾಗ್ರಹಿಗಳು ಹೊರಟು ೧೩ ಮತ್ತು ೧೪ರಂದು ಮೈಸೂರು ನಗರವನ್ನು ಸೇರಲು ತೀರ್ಮಾನಿಸಿತು. ಇದರ ಪ್ರಕಾರ ರಾಜ್ಯದೆಲ್ಲೆಡೆ ಮೈಸೂರು ಚಲೋ ಚಳುವಳಿಗೆ ಸಿದ್ದತೆ ನಡೆಯಲಾರಂಭಿಸಿತು.

ಕಾಂಗ್ರೆಸ್ಸಿನ ಅಭಿಪ್ರಾಯಗಳನ್ನು ಸಿದ್ಧಾಂತಗಳನ್ನು ಜನತೆಗೆ ತಲುಪಿಸುವ ಸಲುವಾಗಿ ಪೌರವಾಣಿ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ತಿ.ತಾ.ಶರ್ಮರು ಮೈಸೂರು ಸಂಸ್ಥಾನದ ನಿಸ್ತೇಜ ಆಡಳಿತ ವೈಖರಿ, ನಿರಂಕುಶ ಪ್ರಭುತ್ವ, ದಮನಕಾರಿ ನೀತಿ ಮುಂತಾದವುಗಳನ್ನು ಜನತೆಗೆ ತಿಳಿಸುವುದರೊಂದಿಗೆ ಜವಾಬ್ದಾರಿ ಸರ್ಕಾರಕ್ಕಾಗಿ ನಡೆಯುತ್ತಿರುವ ಮೈಸೂರು ಚಲೋ ಚಳುವಳಿಯನ್ನು ಹುರಿದುಂಬಿಸುವಂತಹ ಲೇಖನಗಳನ್ನು ಬರೆಯುತ್ತಿದ್ದರು. ಚಳುವಳಿ ತೀವ್ರವಾದಂತೆ ವಾರ ಪತ್ರಿಕೆಯಾಗಿದ್ದ ಪೌರವಾಣಿ ದಿನಪತ್ರಿಕೆಯಾಗಿ ಪರಿವರ್ತನೆಯಾಯಿತು.

ಚಳುವಳಿಯನ್ನು ನಡೆಸುವ ಜವಾಬ್ದಾರಿ ಮೈಸೂರು ಸಂಸ್ಥಾನ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಕೆ.ಸಿ.ರೆಡ್ಡಿಯವರ ಹೆಗಲಿಗೆ ಬಿತ್ತು. ಚಳುವಳಿಗೆ ಬೇಕಾದ ತಯಾರಿಗಳನ್ನು ಮಾಡಿಕೊಳ್ಳಲು ಮೈಸೂರು ಮತ್ತು ಆಂಧ್ರದ ಗಡಿಯಲ್ಲಿದ್ದ ರಾಜಪೇಟೆಯಲ್ಲಿ ಸತ್ಯಾಗ್ರಹಿಗಳ ಶಿಬಿರವನ್ನು ತೆರೆದು ಅದರ ನಾಯಕತ್ವವನ್ನು ಎಂ.ವಿ.ಕೃಷ್ಣಪ್ಪನವರಿಗೆ ವಹಿಸಲಾಯಿತು. ಕೋಲಾರ ಜಿಲ್ಲೆಯ ವಿವಿಧ ಭಾಗಗಳಿಂದ ಶಾಲಾ ಕಾಲೇಜಿನ ವಿದ್ಯಾರ್ಥಿಗಳು ಯುವಕರು, ನೂರಾರು ಸಂಖ್ಯೆಯಲ್ಲಿ ಶಿಬಿರಕ್ಕೆ ನೊಂದಣಿಯಾದರು. ಶಿಬಿರದ ಸದಸ್ಯರ ಸಂಖ್ಯೆ ಹೆಚ್ಚಿದಂತೆ ಶಿಬಿರಾರ್ಥಿಗಳಿಗೆ ಆಹಾರ ಒದಗಿಸುವ ಸಮಸ್ಯೆ ಎದುರಾದಾಗ ೮೦ ಮಂದಿ ಸತ್ಯಾಗ್ರಹಿಗಳು ಕ್ಯಾಸಂಬಳ್ಳಿಯ ಆಹಾರ ಡಿಪೋಗೆ ಮುತ್ತಿಗೆ ಹಾಕಿ ಅಲ್ಲಿದ್ದ ೩೦ ಮೂಟೆ ಅಕ್ಕಿ, ಗೋಧಿ, ಜೋಳವನ್ನು ಶಿಬಿರಕ್ಕೆ ಹೊತ್ತು ತಂದರು. ಇದೇ ಸಂದರ್ಭದಲ್ಲಿ ಪೊಲೀಸ್ ದೌರ್ಜನ್ಯವನ್ನು ಖಂಡಿಸಲು ಮೈಸೂರು ರಾಜ್ಯದ ಗಡಿಯಲ್ಲಿದ್ದ ಎಟಿಪೋತಪಲ್ಲಿ ಪೊಲೀಸ್ ಸ್ಟೇಷನ್ನಿಗೆ ದಾಳಿಮಾಡಿ

---

[೬೮] ಹೆಚ್.ಎಸ್.ದೊರೆಸ್ವಾಮಿ, ಹೋರಾಟದ ದಿಟ್ಟ ಹೆಜ್ಜೆಗಳು. ಸ್ವಾತಂತ್ರ್ಯಯೋಧರ ಮೇಳದ ಸವಿನೆನಪಿನ ಪ್ರಕಟಣೆ. ಬೆಂಗಳೂರು. ಪುಟ-೧೧೩

ಅಲ್ಲಿದ್ದ ಆಹಾರ ಪದಾರ್ಥಗಳನ್ನು, ಶಸ್ತ್ರಾಸ್ತ್ರಗಳನ್ನು ಮತ್ತು ಬಟ್ಟೆಗಳನ್ನು ಲೂಟಿ ಮಾಡಲಾಯಿತು. ಈ ವಿಷಯ ಪ್ರಚಾರ ಪಡೆದಂತೆ ಪೊಲೀಸ್ ವ್ಯವಸ್ಥೆ ಚುರುಕುಗೊಂಡಿತು.

ಪೊಲೀಸರ ಹದ್ದುಗಣ್ಣಿನಿಂದ ತಪ್ಪಿಸಿಕೊಳ್ಳಲು ಎಂ.ವಿ.ವೆಂಕಟಪ್ಪ ಎಂ.ವಿ.ಕೃಷ್ಣಪ್ಪ ಹಾಗೂ ಇತರ ಸತ್ಯಾಗ್ರಹಿಗಳು ಕತ್ತಲಲ್ಲಿ ಕರ್ನಾಟಕದ ಗಡಿದಾಟಿ ತಮಿಳುನಾಡು ಪ್ರವೇಶಿಸಿದರು. ಮದ್ರಾಸ್ ಪ್ರಾಂತ್ಯದಲ್ಲಿ ಪೇರಂಬಟ್, ಗುಡಿಯಾತ್ತಂ, ಅಂಬೂರು, ಚಿತ್ತೂರು, ವೆಲ್ಲೂರು ಹಾಗೂ ರಾಣಿಪೇಟ್ ಪ್ರದೇಶಗಳಿಗೆ ಮೈಸೂರಿನ ಸತ್ಯಾಗ್ರಹಿಗಳು ಹೋಗಿ ಅಲ್ಲಿಯೂ ತಾವು ಹೋದಕಡೆಯೆಲ್ಲಾ ಮೆರವಣಿಗೆಗಳನ್ನು ಮಾಡುತ್ತಿದ್ದರು. ಅಲ್ಲಿ ಸತ್ಯಾಗ್ರಹಿಗಳಿಗೆ ವ್ಯವಸ್ಥೆಗಳನ್ನು ಮಾಡುವ ಬಗ್ಗೆ ಶಿಬಿರದ ನಾಯಕರಾದ ಎಂ.ವಿ.ಕೃಷ್ಣಪ್ಪನವರು ತಮಿಳುನಾಡಿನ ಕಾಮರಾಜ ನಾಡಾರ್ ಅವರನ್ನು ಮುಂಚಿತವಾಗಿಯೇ ಸಂಪರ್ಕಿಸಿ ಸತ್ಯಾಗ್ರಹಿಗಳಿಗೆ ಸೂಕ್ತ ಏರ್ಪಾಡುಗಳನ್ನು ಮಾಡುತ್ತಿದ್ದರು.

ಮೈಸೂರು ರಾಜ್ಯದಲ್ಲಿ ಅರಮನೆ ಸತ್ಯಾಗ್ರಹದ ಚಳುವಳಿ ವ್ಯಾಪಕಗೊಂಡಂತೆ ಸುಮಾರು ೨೦೦೦ ಸತ್ಯಾಗ್ರಹಿಗಳನ್ನು ಸರ್ಕಾರ ಬಂಧಿಸಿತು. ಆದರೆ ದಿನೇ ದಿನೇ ಸತ್ಯಾಗ್ರಹಿಗಳ ಸಂಖ್ಯೆ ವಿಪರೀತವಾಗಿ ಬೆಳೆಯಿತು. ಗುಂಪು ಗುಂಪುಗಳಾಗಿ ಜನ ಸಾಮಾನ್ಯರು ಸತ್ಯಾಗ್ರಹ ಚಳುವಳಿಯಲ್ಲಿ ಧುಮುಕಿದರು. ಇವರಿಗೆ ಅರಮನೆ ಚಳುವಳಿಯಲ್ಲಿ ಪಾಲ್ಗೊಳ್ಳಲು ಅಗತ್ಯವಾದ ತರಭೇತಿಯನ್ನು ಕೆ.ಜಿ.ಎಫ್, ಬಂಗಾರಪೇಟೆ, ಶ್ರೀನಿವಾಸಪುರ, ಮುಳಬಾಗಲು, ಚಿಂತಾಮಣಿ ಇತ್ಯಾದಿ ಸ್ಥಳಗಳಲ್ಲಿ ನೀಡಲಾಯಿತು. ಮುಳಬಾಗಲು ಸತ್ಯಾಗ್ರಹಿಗಳ ತಂಡದ ನಾಯಕತ್ವ ವಹಿಸಿದ್ದ ವಿ.ವೆಂಕಟಪ್ಪ ಸುಮಾರು ೬೦ ಮಂದಿ ಸತ್ಯಾಗ್ರಹಿಗಳ ಒಂದು ತಂಡವನ್ನು ಕಟ್ಟಿ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದು ಹಾಗೂ ಬೆಂಕಿ ಹಚ್ಚುವ ಕಾಯಕ್ರಮ ಹಮ್ಮಿಕೊಂಡರು. ಈ ಕಾರ್ಯಕ್ರಮಗಳಲ್ಲಿ ಸಾರ್ವಜನಿಕರು ಪೂರ್ಣ ಸಹಕಾರ ನೀಡುವುದರ ಜೊತೆಗೆ ಒಕ್ಕೊರಲಿನಿಂದ ಸತ್ಯಾಗ್ರಹಿಗಳನ್ನು ಬೆಂಬಲಿಸಿದರು.

ಸೆಪ್ಟೆಂಬರ್‌ನಲ್ಲಿ ನಡೆಯಬೇಕಾದ ಮೈಸೂರು ಚಲೋ ಚಳುವಳಿಗೆ ತಕ್ಕ ಸಂಘಟನೆಯನ್ನು ಮಾಡಲು ಒಂದು ಸಮಿತಿ ರಚಿಸಲಾಯಿತು. ಆ ಸಮಿತಿಯವರು ಸಂಸ್ಥಾನದಾದ್ಯಂತ ಹೆಚ್.ಕೆ.ವೀರಣ್ಣಗೌಡ ನೇತೃತ್ವದಲ್ಲ ಸಂಚರಿಸಿ, ಮೈಸೂರು ಚಲೋ ಚಳುವಳಿಯ ಬಗ್ಗೆ ಜನರಿಗೆ ಅರಿವು ಮಾಡಿಕೊಟ್ಟರು.[೬]

ಈ ಮಧ್ಯೆ ಚಳವಳಿ ಪ್ರಾರಂಭವಾಗುವ ಹಿಂದಿನ ದಿನ ಆಗಸ್ಟ್ ೩೧ ರಂದು ಸರಕಾರ ಕೆಲವು ಸಂವಿಧಾನಾತ್ಮಕ ಸುಧಾರಣೆಗಳನ್ನು ಅಕ್ಟೋಬರ್‌ನಲ್ಲಿ ಮಾಡುವುದಾಗಿ ಘೋಷಿಸಿತು. ಆದರೆ ಈ ಘೋಷಣೆಯಲ್ಲಿ ಎಲ್ಲಿಯೂ ಜವಾಬ್ದಾರಿ ಸರಕಾರದ ಬಗ್ಗೆ ತಿಳಿಸಲಿಲ್ಲ. ಇದರಿಂದಾಗಿ ಇದನ್ನು ಕಾಂಗ್ರೆಸ್ಸಿಗರು ತಿರಸ್ಕರಿಸಿದರು. ಸೆಪ್ಟೆಂಬರ್ ೧ ರಂದು ಕೆ.ಸಿ.ರೆಡ್ಡಿಯವರು ಒಂದು ಬೃಹತ್ ಜನಸ್ತೋಮವನ್ನು ಉದ್ದೇಶಿಸಿ ಬೆಂಗಳೂರಿನಲ್ಲಿ ಭಾಷಣ ಮಾಡುತ್ತಾ ಅರಮನೆ ಸತ್ಯಾಗ್ರಹವನ್ನು ಉದ್ಘಾಟಿಸಿದರು. ಇದನ್ನು ಅನುಸರಿಸಿ ಸಂಸ್ಥಾನದಾದ್ಯಂತ ಕಾಂಗ್ರೆಸ್ ನಾಯಕರು ಎಲ್ಲೆಡೆ ಭಾಷಣಗಳನ್ನು ಮಾಡಿ ಸತ್ಯಾಗ್ರಹದ ಉದ್ಘಾಟನೆಯನ್ನು ಮಾಡಿದರು. ಸಂಸ್ಥಾನದ ಪ್ರಮುಖ ನಗರ ಹಾಗೂ

---

[೬] ಎಮ್.ಎನ್.ಜೋಯಿಸ್. ಸ್ವಾತಂತ್ರ್ಯ ಸೇನಾನಿ ಎಂ.ಎನ್.ಜೋಯಿಸರ ಆತ್ಮಕಥನ. ಪು.೧೦೪

ಪಟ್ಟಣಗಳಲ್ಲಿನ ಶಾಲಾ ಕಾಲೇಜುಗಳನ್ನು ವಿದ್ಯಾರ್ಥಿಗಳು ಬಹಿಷ್ಕರಿಸಿದರಲ್ಲದೇ, ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ಸಿದ್ಧರಾದರು. ವಿದ್ಯಾರ್ಥಿಗಳಲ್ಲದೆ, ಸುಮಾರು ೨೫ ಸಾವಿರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಮಿಕ ವರ್ಗದವರು ಈ ಸತ್ಯಾಗ್ರಹದಲ್ಲಿ ಪಾಲ್ಗೊಂಡರು.

೧೯೪೭ ಸೆಪ್ಟೆಂಬರ್ ೪ ರ ಬೆಳಗ್ಗೆ ಮೈಸೂರಿಗೆ ಹೊರಡಲು ಕಾಂಗ್ರೆಸ್‌ನ ಪ್ರಪ್ರಥಮ ಸರ್ವಾಧಿಕಾರಿ ಕೆ.ಸಿ.ರೆಡ್ಡಿ ಮತ್ತಿತರ ಕಾಂಗ್ರೆಸ್ ನಾಯಕರು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿರುವಾಗಲೇ ಮೈಸೂರು ಸರ್ಕಾರದ ಅಧಿಕಾರಿಗಳು ಈ ಚಳುವಳಿ;ಯನ್ನು ದಮನಮಾಡುವ ಉದ್ದೇಶದಿಂದ ಸೆಪ್ಟೆಂಬರ್ ೩ ರ ರಾತ್ರಿಯೇ ಕಾಂಗ್ರೆಸ್ ನಾಯಕರನ್ನು ಬಂಧಿಸಿ ಜೈಲಿಗೆ ಕಳುಹಿಸಿದರು ಹಾಗೂ ಸಂಸ್ಥಾನದಾದ್ಯಂತ ಪ್ರಮೂಖ ಕಾರ್ಮಿಕ ನಾಯಕರನ್ನು ಮತ್ತಿತರ ಮುಖಂಡರನ್ನು ಬಂಧಿಸಿದರು. ಮೈಸೂರು ಜಿಲ್ಲಾ ನ್ಯಾಯಾಧೀಶರು ನಿಷೇದಾಜ್ಞೆಗಳನ್ನು ಜಾರಿಗೆ ತಂದರು.

ಈ ಬಂಧನದ ಸುದ್ದಿ ತಿಳಿದ ವಿದ್ಯಾರ್ಥಿಗಳು, ಕಾರ್ಯಕರ್ತರು, ಕಾರ್ಮಿಕರು, ಸಾರ್ವಜನಿಕರು, ವಕೀಲರು, ಜನರೊಡಗೂಡಿ ಸರ್ಕಾರದ ವಿದುದ್ಧ ಘೋಷಣೆಗಳನ್ನು ಕೂಗುತ್ತ ಮೆರವಣಿಗೆಗಳನ್ನು ನಡೆಸಿದರು. ಮೈಸೂರಿನಲ್ಲಿ ಎಚ್.ಸಿ.ದಾಸಪ್ಪ, ಸಾಹುಕಾರ ಚನ್ನಯ್ಯ ಮತ್ತು ಟಿ.ಮರಿಯಪ್ಪನವರನ್ನು ಬಂಧಿಸಲಾಯಿತು. ಚಳುವಳಿಗೆ ಪ್ರೇರಣೆ ನೀಡುತ್ತಿದ್ದ ಪತ್ರಿಕೆಗಳ ಮೇಲೆ ನಿರ್ಬಂಧಗಳನ್ನು ಹೇರಲಾಯಿತು. ಚಳುವಳಿಗಾರರ ಮೇಲೆ ಮೈಸೂರಿನಲ್ಲಿ ಬೆಂಗಳೂರಿನ ಬಸವನಗುಡಿ, ಮಲ್ಲೇಶ್ವರಂ ಮುಂತಾದ ಕಡೆ ಗೋಲಿಬಾರ್ ಮಾಡಲಾಯಿತು.

ಸೆಪ್ಟೆಂಬರ್ ೨೨ ರಂದು ಬಿನ್ನಿ ಮಿಲ್‌ನ ಕಾರ್ಮಿಕರು ಚಳುವಳಿಯಲ್ಲಿ ನಿರತರಾಗಿದ್ದಗ ಅವರ ಮೇಲೂ ಗೋಲಿಬಾರ್ ಮಾಡಲಾಯಿತು. ಹೀಗೆ ಮೈಸೂರು ಚಲೋ ಹಾಗೂ ಅರಮನೆ ಸತ್ಯಾಗ್ರಹದಲ್ಲಿ ಭಾಗವಹಿಸಲು ಸಂಸ್ಥಾನ್ದ ವಿವಿಧ ಭಾಗಗಳಿಂದ ಜನರು ಗುಂಪು ಗುಂಪುಗಳಾಗಿ ರಾಜಧಾನಿ ಮೈಸೂರಿಗೆ ಧಾವಿಸಿದರು. ಗ್ರಾಮಾಂತರ ಪ್ರದೇಶಗಳಲ್ಲಿ ಸತ್ಯಾಗ್ರಹವು ಧ್ವಜ ಸತ್ಯಾಗ್ರಹ ಮೆರವಣಿಗೆಗಳು, ಪಿಕೆಟಿಂಗ್ ಮುಂತಾದ ರೂಪಗಳನ್ನು ಪಡೆಯಿತು. ಈ ಚಳುವಳಿಯಲ್ಲಿ ಮಹಿಳೆಯರು,ವಿದ್ಯಾರ್ಥಿನಿಯರು ಭಾಗವಹಿಸಿದ್ದೂ ಒಂದು ವಿಶೇಷವಾಗಿತ್ತು. ಅಕ್ಕ ಪಕ್ಕದ ಪ್ರಾಂತ್ಯ, ಪ್ರದೇಶಗಳಿಂದಲೂ ಅನೇಕ ಜನ್ರು ಸಂಸ್ಥಾನಕ್ಕೆ ಬಂದು ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಿದರು. ಕೆ.ಜಿ.ಎಫ್.ನಲ್ಲಿಯೂ ಸೇರಿದಂತೆ ಅನೇಕ ಕಡೆಗಳಲ್ಲಿ ಕಾರ್ಮಿಕರು ತಮ್ಮ ಕೆಲಸವನ್ನು ನಿಲ್ಲಿಸಿ ಮುಷ್ಕರ ಹೂಡಿದರು.[೨೦] ಸೆಪ್ಟೆಂಬರ್ ೧೪ ರಂದು ತುಮಕೂರು ಮತ್ತು ಚಿತ್ರದುರ್ಗದಲ್ಲಿ ಚಳುವಳಿ ನಿರತರ ಮೇಲೆ ಗೋಲಿಬಾರ್ ಮಾಡಲಾಯಿತು. ಮೈಸೂರು ಸಂಸ್ಥಾನದ ಎಲ್ಲೆಡೆಗಳಲ್ಲಿಯೂ ಸಾರ್ವಜನಿಕ ಚಳುವಳಿಗಳು ಆರಂಭವಾದವು. ಸಂಸ್ಥಾನದ ರೈಲ್ವೆ ಸಿಬ್ಬಂದಿಯವರು ತಮ್ಮ ಕೆಲಸ ನಿಲ್ಲಿಸಿ ಮುಷ್ಕರ ಆರಂಭಿಸಿದರು. ಸಂಸ್ಥಾನದ ಜನಸಾಮಾನ್ಯರಿಂದ ಹಿಡಿದು ಕಾರ್ಮಿಕರು, ವಿದ್ಯಾರ್ಥಿಗಳು ಕಡೆಗೆ ಪೊಲೀಸರೂ ಸೇರಿದಂತೆ

---

[೨೦] ಕೆ.ವೀರತಪ್ಪ. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪು.೧೨೧

ಸರ್ಕಾರಿ ನೌಕರರು ಸಹಾ ಸರ್ಕಾರದ ವಿರುದ್ಧ ಚಳುವಳಿಗೆ ಇಳಿದದ್ದು ಆಳರಸರನ್ನು ಕಂಗೆಡಿಸಿತು. ಪರಿಣಾಮವಾಗಿ ಸರ್ಕಾರವು ಸಂಧಾನಕ್ಕೆ ಒಪ್ಪಿ ೧೯೪೭ ರ ಅಕ್ಟೋಬರ್ ೭ ರಂದು ಎಲ್ಲಾ ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಿತು.

ತದನಂತರ ಅಕ್ಟೋಬರ್ ೮ ರಂದು ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ಕಾರ್ಯಕಾರಿ ಸಭೆಯಲ್ಲಿ ಕೆ.ಸಿ.ರೆಡ್ಡಿಯವರು ಅಧ್ಯಕ್ಷತೆ ವಹಿಸಿದ್ದರು. ಅಕ್ಟೋಬರ್ ೯ ರಂದು ರೆಡ್ಡಿಯವರು ಅಂದಿನ ದಿವಾನರಾಗಿದ್ದ ರಾಮಸ್ವಾಮಿ ಮೊದಲಿಯಾರ್ ಅವರೊಡನೆ ಮಾತುಕತೆ ನಡೆಸಿದರು. ಆ ಮಾತುಕತೆಯ ಫಲವಾಗಿ ಅಕ್ಟೋಬರ್ ೧೧ ರಂದು ಮೈಸೂರು ಸರ್ಕಾರ ಮತ್ತು ಕಾಂಗ್ರೆಸ್ ಪಕ್ಷದ ಮಧ್ಯೆ ಒಂದು ಒಪ್ಪಂದ ಏರ್ಪಟ್ಟಿತು. ದಿನಾಂಕ ೧೨ ರಂದು ಕಾಂಗ್ರೆಸ್ ಅಧ್ಯಕ್ಷರಾದ ಕೆ.ಸಿ.ರೆಡ್ಡಿಯವರು ಕಾಂಗ್ರೆಸ್‌ನ ಇತರ ೬ ಮಂದ ನಾಯಕರೊಡನೆ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್ ಅವರನ್ನು ಭೇಟಿ ಮಾಡಿದರು. ಮಹಾರಾಜರು ಆ ನಾಯಕರನ್ನು ಸಂಸ್ಥಾನದ ಆಡಳಿತ ವ್ಯವಸ್ಥೆಯಲ್ಲಿ ಹೆಚ್ಚು ಜವಾಬ್ದಾರಿಯನ್ನು ವಹಿಸಿ ಕೊಳ್ಳಬೇಕೆಂದೂ ತಿಳಿಸಿದರು. ಇದರಿಂದಾಗಿ ಕಾಂಗ್ರೆಸ್ ಸತ್ಯಾಗ್ರಹವನ್ನು ನಿಲ್ಲಿಸಿತು. ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿಯು ಒಪ್ಪಂದವನ್ನು ಸ್ವಾಗತಿಸಿ ಮುಂದಿನ ರಚನಾತ್ಮಕ ಕೆಲಸಗಳಿಗೆ ಜನತೆಯ ಸಹಕಾರವನ್ನು ಬಯಸಿತು.

೧೯೪೭ ಅಕ್ಟೋಬರ್ ೧೩ ರಂದು ಮೈಸೂರು ಸರ್ಕಾರವು ರಾಜ್ಯಾಂಗ ಸುಧಾರಣೆಗಳನ್ನು ಘೋಷಿಸಿತು. ಕಾಂಗ್ರೆಸ್‌ನ ಅಧ್ಯಕ್ಷರು ಮೈಸೂರು ಸಂಸ್ಥಾನದ ಮುಖ್ಯಮಂತ್ರಿಯಾಗಿರುವುದಾಗಿಯೂ, ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಸ್ವಲ್ಪ ಕಾಲ ಮುಂದುವರೆಯುವುದಾಗಿಯೂ ತೀರ್ಮಾನಿಸಲಾಯಿತು. ಮಂತ್ರಿಮಂಡಲದಲ್ಲಿ ಕಾಂಗ್ರೆಸ್‌ನ ೬ ಮಂದಿ, ಇತರ ಪಕ್ಷಗಳಿಂದ ೩ ಮಂದಿ ಇರುವುದೆಂದೂ ತೀರ್ಮಾನಿಸಲಾಯಿತು. ಮಂತ್ರಿ ಮಂಡಲವು ರಾಜ್ಯಾಂಗವನ್ನು ೧೯೪೮ ಜುಲೈ ವೇಳೆಗೆ ರಚಿಸಬೇಕೆಂದು ನಿರ್ಧರಿಸಲಾಯಿತು.

ಹೀಗೆ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ೪೨ ದಿನಗಳ ಕಾಲ ಯಶಸ್ವಿಯಾಗಿ ನಡೆದ ಮೈಸೂರು ಚಲೋ ಚಳುವಳಿ ಪರಿಪೂರ್ಣವಾದ ಫಲಿತಾಂಶದೊಡನೆ ಮುಗಿಯಿತು. ತತ್ಪರಿಣಾಮವಾಗಿ ೯ ಮಂದಿ ಮಂತ್ರಿಗಳನ್ನೊಳಗಒಂಡ ಕೆ.ಸಿ.ರೆಡ್ಡಿಯವರ ನೇತೃತ್ವದ ಮಂತ್ರಿಮಂಡಲ ೧೯೪೭ ರ ಅಕ್ಟೋಬರ್ ೨೪ ರ ವಿಜಯದಶಮಿಯಂದು ಅಧಿಕಾರ ವಹಿಸಿಕೊಂಡು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಿತು.

**೪.೬ಕರ್ನಾಟಕ ಏಕೀಕರಣ ಚಳುವಳಿ: –**

**ಪೀಠಿಕೆ:** ಕರ್ನಾಟಕವು ಹಲವಾರು ರಾಜಮನೆತನಗಳಿಂದ ಆಳಲ್ಪಟ್ಟಿದೆ. ಶಾತವಾಹನರಿಂದ ತೊಡಗಿ, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು ಮೊದಲಾದ ಹೆಸರಾಂತ ರಾಜಮನೆತನಗಳನ್ನು ದಾಟಿ 'ಮೈಸೂರಿನ ಅರಸ'ರವರೆಗೆ ಈ ಪರಂಪರೆ ಹರಡಿದೆ. ಈ ರಾಜವಂಶಗಳ ಆಳ್ವಿಕೆಯಲ್ಲಿ ಸಾಮ್ರಾಜ್ಯಶಾಹಿ ನೀತಿಗನುಗುಣವಾಗಿ ಕನ್ನಡನಾಡಿನ ಗಡಿರೇಖೆಗಳು ಬದಲಾಗುತ್ತಾ

ಸಾಗಿದವು. ನಂತರದ ದಿನಗಳಲ್ಲಿ ವ್ಯಾಪಾರಕ್ಕೆಂದು ಭಾರತಕ್ಕೆ ಬಂದ ಬ್ರಿಟಿಷರು ಭಾರತೀಯ ರಾಜರು ಅಧಿಕಾರಕ್ಕಾಗಿ ಕಿತ್ತಾಡುತ್ತಿದ್ದ ಪರಿಸ್ಥಿತಿಯ ಸದುಪಯೋಗ ಪಡೆದು ಆಡಳಿತ ಸೂತ್ರವನ್ನು ಹಿಡಿದರು. ಹೀಗೆ ತಮ್ಮ ವಶಕ್ಕೆ ಬಂದ ಪ್ರದೇಶಗಳನ್ನು ಆಯಾ ಸನ್ನಿವೇಶಕ್ಕೆ ತಕ್ಕಂತೆ ಸಂಘಟಿಸಿ ಆಳಿದರು. ಯಾವುದೇ ತತ್ವವನ್ನು ರಾಜ್ಯಗಳ ಸಂಘಟನೆಗೆ ಬ್ರಿಟಿಷರು ಅನುಸರಿಸಲಿಲ್ಲವಾದ್ದರಿಂದ ಕರ್ನಾಟಕವು ಇನ್ನೂ ಕೆಲವು ರಾಜ್ಯಗಳಂತೆ ಹೋಳು ಹೋಳಾಯಿತು. ಪರಿಣಾಮವಾಗಿ ಚಿಕ್ಕಪುಟ್ಟ ಹಲವು ದೇಶೀಯ ಸಂಸ್ಥಾನಗಳಲ್ಲದೆ ಮುಂಬಯಿ, ಮದರಾಸು, ಹೈದರಾಬಾದು ಪ್ರದೇಶಗಳಲ್ಲಿಯೂ ಕನ್ನಡದ ಭೂಭಾಗ ಸೇರಿಕೊಂಡಿತ್ತು. ಈ ಕಾರಣಗಳಿಂದ ಕರ್ನಾಟಕದ ಪ್ರಗತಿ ಕುಂಠಿತವಾಗಿತ್ತು. ಆದ್ದರಿಂದ ಹಂಚಿಹೋಗಿದ್ದ ಕರ್ನಾಟಕದ ಭಾಗಗಳೆಲ್ಲ ಒಂದೇ ರಾಜಕೀಯ ಆಡಳಿತದಡಿ ಬಂದು ಜನಸಾಮಾನ್ಯರ ಭಾಷೆ, ಜನಸಾಮಾನ್ಯರ ಆಡಳಿತವನ್ನು, ಶಿಕ್ಷಣ-ಸಂಸ್ಕೃತಿಯನ್ನು ರೂಪಿಸಲು ನೆರವಾಗಬೇಕು ಎಂಬ ಆಸೆಯೇ ಕರ್ನಾಟಕ ಏಕೀಕರಣ ಚಳವಳಿಯ ಹುಟ್ಟಿಗೆ ಕಾರಣವಾಯಿತು.

ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಗೆ ಕರ್ನಾಟಕ ಏಕೀಕರಣ ಹೋರಾಟವು ಸಾಗಿಬಂದಿತಾದರೂ ಸ್ವಾತಂತ್ರ್ಯ ನಂತರವೇ ಅದರ ಏಕೀಕರಣದ ಕೂಗು ಮುಗಿಲು ಮುಟ್ಟಿತು. ಈ ಹಿನ್ನೆಲೆಯಲ್ಲಿ ದೇಶಾದ್ಯಂತ ನಡೆಯುತ್ತಿದ್ದ "ಭಾಷಾವಾರು ಪ್ರಾಂತ್ಯ ರಚನೆಗೆ ಸಂಬಂಧಿಸಿದಂತೆ ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ಒತ್ತಾಯ ಹೆಚ್ಚುತ್ತಿದ್ದ ಸಂದರ್ಭದಲ್ಲಿ ಕರ್ನಾಟಕದ ಏಕೀಕರಣವನ್ನು ಬೆಂಬಲಿಸಿ ಒಂದು ಗೊತ್ತುವಳಿಯನ್ನು ಸರ್ವಾನುಮತದಿಂದ ಅಂಗೀಕರಿಸಿಲಾಯಿತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನಿಂದ ಸ್ವೀಕೃತವಾದ ಭಾಷಾವಾರು ಪ್ರಾಂತ್ಯ ರಚನೆಯ ತತ್ವವನ್ನು ಮೈಸೂರು ರಾಜ್ಯ ಕಾಂಗ್ರೆಸ್ ಯಾವಾಗಲೋ ಒಪ್ಪಿಕೊಂಡಿದೆ. ಹರಿದು ಹಂಚಿ ಹೋಗಿರುವ ಹಾಗೂ ಅನೇಕ ಆಡಳಿತ ವ್ಯವಸ್ಥೆಗಳಿಗೆ ಒಳಗಾಗಿರುವ ಕರ್ನಾಟಕ ಪ್ರದೇಶವು ಸರ್ವತೋಮುಖ ಪ್ರಗತಿಯನ್ನು ಹೊಂದಲಾರದು. ಸಮಾನ ಸಂಸ್ಕೃತಿ ಮತ್ತು ಇತಿಹಾಸ ಪರಂಪರೆ ಮೊದಲಾದವುಗಳ ಆಧಾರದ ಮೇಲೆ ಸಕಲ ಕನ್ನಡ ಜನಾಂಗವು ಒಂದಾಗಿದೆ; ಅದರ ಆರ್ಥಿಕ ಸಂಬಂಧಗಳು ಒಂದೇ ಆಗಿವೆ. ಆದುದರಿಂದ ಶ್ರೀಮನ್ಮಹಾರಾಜರ ನೇತೃತ್ವದಲ್ಲಿ ಸಂವಿಧಾನಾತ್ಮಕ ಆಳ್ವಿಕೆಯಲ್ಲಿ ಸಂಯುಕ್ತ ಕರ್ನಾಟಕದ ರಚನೆಯಾಗುವುದು ಅವಶ್ಯಕವಾದುದು ಮತ್ತು ಅನಿವಾರ್ಯವಾದುದು ಎಂಬುದನ್ನು ತನ್ನ ಹಿಂದಿನ ಘೋಷಣೆಗೆ, ನಿಲುವಿಗೆ ಇಂದು ಸಹಾ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿ ಅಂಟಿಕೊಂಡಿದೆ ಎಂದು ಸ್ಪಷ್ಟಪಡಿಸಿದರು"[೬೧]

ಈ ಹಿನ್ನೆಲೆಯಲ್ಲಿ ೧೯೫೬ನೇ ಇಸವಿಯಲ್ಲಿ ಕರ್ನಾಟಕ ಏಕೀಕರಣ ನಡೆಯಿತು. ಈ ಏಕೀಕರಣಕ್ಕೆ ಪೂರ್ವಭಾವಿಯಾಗಿ ಅನೇಕ ಸಭೆ, ಚರ್ಚೆಗಳು ನಡೆದು ಆಯೋಗಗಳನ್ನು ರಚಿಸಿ ವರದಿಯನ್ನು ಪಡೆಯಲಾಗಿತ್ತು. ಕರ್ನಾಟಕ ಏಕೀಕರಣಕ್ಕೆ ಪರ-ವಿರೋಧ ವಾದಗಳು ಕಂಡು ಬಂದವು. ವಿರೋಧಿ ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಇದ್ದರು. ಇವರು ಮೂಲತಃ ಕರ್ನಾಟಕ

---

[೬೧] (ಹಿಂದು : ೮.೧೧.೧೯೪೪)ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ.೨೦೦೨

ಏಕೀಕರಣವಾಗಬೇಕೆಂಬ ಕೂಗು ಹುಟ್ಟಿದಾಗಿನಿಂದ ಆ ನೀತಿಗೆ ಮನಸ್ಸಿನಲ್ಲೇ ಬೆಂಬಲ ಕೊಟ್ಟಿದ್ದರು. ಆದರೆ ಎಸ್.ಚನ್ನಯ್ಯನವರು ಸೇರಿದಂತೆ ಮತ್ತಿತರ ಕೆಲವು ಸ್ನೇಹಿತರು ಹೆಚ್.ಕೆ.ವೀರಣ್ಣಗೌಡರನ್ನು ಭೇಟಿ ಮಾಡಿ ಮೈಸೂರು ಕರ್ನಾಟಕ ಪ್ರದೇಶದಲ್ಲಿ ಸೇರುವುದರಿಂದ ಉದ್ಭವಿಸಬಹುದಾದ ಸಮಸ್ಯೆಗಳ ಬಗ್ಗೆ ಪ್ರಸ್ತಾಪಿಸಿ ಏಕೀಕರಣವನ್ನು ವಿರೋಧಿಸಬೇಕೆಂದು ಚರ್ಚಿಸಿದರು. ಅವರ ವಿಚಾರಗಳು ವೀರಣ್ಣಗೌಡರ ಅನುಭವದಲ್ಲೂ ಸರಿ ಎಂದು ಕಂಡು ಬಂದವು. ಈ ಹಿನ್ನೆಲೆಯಲ್ಲಿ ವೀರಣ್ಣಗೌಡರು ಏಕೀಕರಣ ವಿರೋಧಿ ನೆಲೆಯಲ್ಲಿ ತೊಡಗಿದರು.

ಹೆಚ್.ಕೆ.ವೀರಣ್ಣಗೌಡರು ಏಕೀಕರಣವನ್ನು ವಿರೋಧಿಸುವುದಕ್ಕೆ ಅವರು ಹೊಂದಿದ್ದ ಮನೋಭಾವ ಮತ್ತು ನೈಜ ಸ್ಥಿತಿಯ ಅರಿವು ಯಾವ ರೀತಿಯಲ್ಲಿತ್ತು ಎಂಬುದನ್ನು ಇಲ್ಲಿ ಅವಲೋಕಿಸಲಾಗಿದೆ. "ಮೈಸೂರು ಪ್ರಗತಿಶೀಲ ಹಾದಿಯಲ್ಲಿ ನಡೆಯುತ್ತಿತ್ತು. ಉತ್ತರ ಕರ್ನಾಟಕದ ಭಾಗವೆನಿಸಿದ್ದ ಬೊಂಬಾಯಿ, ಮದರಾಸು, ಹೈದರಾಬಾದ್ ಮುಂತಾದ ಪ್ರಾಂತಗಳಲ್ಲಿ ಕನ್ನಡಿಗರ ಸ್ಥಾನಮಾನಗಳು ನಿಕೃಷ್ಟ ಸ್ಥಿತಿಯಲ್ಲಿದ್ದುದು ಮಾತ್ರವಲ್ಲದೆ, ಆ ಭಾಗದ ಪ್ರಾಂತಗಳಲ್ಲಿ ಹೆಚ್ಚಿನ ಅಭಿವೃದ್ಧಿಯಾಗಿರಲಿಲ್ಲ. ಕರ್ನಾಟಕದ ಏಕೀಕರಣವಾದರೆ ಮೈಸೂರು ಪ್ರದೇಶದಲ್ಲಿ ಅಗಾಧ ಪ್ರಮಾಣದ ಅಭಿವೃದ್ಧಿ ಕಾರ್ಯ ಕುಂಠಿತವಾಗಿ ಹೊಸದಾಗಿ ಸೇರಿದ ಕರ್ನಾಟಕದ ಭಾಗಗಳಲ್ಲಿ ವಿದ್ಯಾಭ್ಯಾಸ, ರಸ್ತೆ ನಿರ್ಮಾಣ ಮುಂತಾದ ಅನೇಕ ಅಭಿವೃದ್ಧಿ ಕಾರ್ಯಗಳು ನಡೆದು, ಅವು ಮೈಸೂರಿನ ಸಮಕ್ಕೆ ಬರಬೇಕಾದರೆ, ಮೈಸೂರಿನ ಅಭಿವೃದ್ಧಿ ಕಾರ್ಯಗಳು ಹತ್ತಾರು ವರ್ಷಗಳಾದರೂ ನಿಂತು ಹೋಗುವುದು. ಅಲ್ಲದೆ ಹೊಸ ಪ್ರಾಂತ್ಯಗಳಿಗೆ ಹೆಚ್ಚು ಗಮನ ಹರಿಸಬೇಕಾಗಿ ಬಂದು ಹೆಚ್ಚು ಹಣವೂ, ದಕ್ಷ ಅಧಿಕಾರಿಗಳು ಮೈಸೂರಿಗೆ ಸಿಗದೆ ಹೋಗಬಹುದು. ಏಕೀಕರಣದಿಂದ ಹಳೆಯ ಮೈಸೂರಿಗೆ ತೊಡಕಾಗುವುದೆಂದು ಯೋಚಿಸಿ, ಎರಡು ಭಾಗಗಳ ಸ್ಥಿತಿಗತಿಗಳನ್ನು ಮನವರಿಕೆ ಮಾಡಿಕೊಂಡಿದ್ದ ಗೌಡರು, ಕರ್ನಾಟಕ ಏಕೀಕರಣದಿಂದ ಹಳೆಯ ಮೈಸೂರಿಗೆ ತೊಂದರೆಯಾಗುವುದೆಂದು ಭಾವಿಸಿದ್ದರು. ಈ ಕಾರಣದಿಂದ ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ ಕೆಲವು ಗೆಳೆಯರು ಆಲೋಚಿಸಿ ಏಕೀಕರಣವನ್ನು ತೀವ್ರವಾಗಿ ವಿರೋಧಿಸುವ ಮನೋಭವನೆಯಿಂದ ಮುಂದುವರಿದರು.[೭೨] ಕೆ.ಹನುಮಂತಯ್ಯನವರು ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಚನ್ನಯನವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಆರಂಭದಲ್ಲಿ ಏಕೀಕರಣವನ್ನು ವಿರೋಧಿಸಲು ಸಕಾರಣಗಳನ್ನು ನೀಡಿದ್ದ ಚನ್ನಯ್ಯನವರು ತದನಂತರ ಏಕೀಕರಣಕ್ಕೆ ಕೇಂದ್ರ ನಾಯಕರ ಬೆಂಬಲ ದೊರೆತಿದ್ದನ್ನು ಕಂಡು,ತಾನು ವಿರೋಧವನ್ನು ವ್ಯಕ್ತಪಡಿಸುವುದರಿಂದ ಮುಂದೆ ರಾಜ್ಯ ಮತ್ತು ಕೇಂದ್ರ ನಾಯಕರ ದೃಷ್ಟಿಯಲ್ಲಿ ತನ್ನ ಸ್ಥಾನಮಾನಗಳು ಕುಗ್ಗಬಹುದು ಎಂದು ಆತಂಕಗೊಂಡು ತನ್ನ ನಿಲುವು ಬದಲಾಯಿಸುವ ಮೂಲಕ ಏಕೀಕರಣ ಚಳವಳಿಯ ಪರವಾಗಿ ನಿಂತರೆನ್ನಬಹುದು. ಆದರೆ ಹೆಚ್.ಕೆ.ವೀರಣ್ಣಗೌಡರು ತಮಗೆ ಸರಿ ಕಂಡ ವಿಷಯದಲ್ಲಿ ನಿಷ್ಠೂರವಾದರೂ ಅದಕ್ಕೆ ಬದ್ಧರಾಗಿ ನಿಲ್ಲುತ್ತಿದ್ದ ತಮ್ಮ ಸ್ವಭಾವದಿಂದ ಏಕೀಕರಣ ವಿರೋಧಿ ಚಳುವಳಿಯಲ್ಲೇ ಮುಂದುವರೆದರು.

---

[೭೨] ಹೆಚ್.ಕೆ.ವೀರಣ್ಣಗೌಡ. ಬದುಕು–ಮೆಲುಕು.೧೯೭೪. ಪು.೨೧೯

ಆಪ್ತ ಸ್ನೇಹಿತರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಮತ್ತು ಎಸ್.ನಿಜಲಿಂಗಪ್ಪನವರು ತಾವು ನಂಬಿದ್ದ ಸಿದ್ಧಾಂತ ತತ್ವಗಳಿಗೆ ಬದ್ಧರಾಗಿ ಏಕೀಕರಣಕ್ಕೆ ಸಂಬಂಧಿಸಿದಂತೆ ತಮ್ಮ ತಮ್ಮ ಮನೋಧರ್ಮದಂತೆ ನಡೆದುಕೊಂಡರು. ಇದರಿಂದ ಅವರ ಸ್ನೇಹಕ್ಕೆ ಯಾವುದೇ ಚ್ಯುತಿ ಬರದಂತೆ ಎಚ್ಚರಿಕೆ ವಹಿಸಿದ್ದರು. ಈ ಹಿನ್ನೆಲೆಯಿಂದ ಒಮ್ಮೆ ಹೆಚ್.ಕೆ.ವೀರಣ್ಣಗೌಡರು ಎಸ್.ನಿಜಲಿಂಗಪ್ಪನವರನ್ನು ಅವರ ಶ್ರೀರಾಂಪುರದ ಮನೆಯಲ್ಲಿ ಭೇಟಿಮಾಡಿ 'ತಾನು ಏಕೀಕರಣ ವಿರೋಧಿಸುವುದಾಗಿಯೂ ಅದನ್ನು ನಿಜಲಿಂಗಪ್ಪನವರು ತಪ್ಪಾಗಿ ಭಾವಿಸಬಾರದೆಂದೂ ಈ ವಿಚಾರದಲ್ಲಿ ಅವರವರ ಅಭಿಪ್ರಾಯದಂತೆ ನಡೆಯಲು ಯಾರದೂ ಅಡ್ಡಿ ಆತಂಕ ಇರಬಾರದೆಂದು ಹೇಳಿದರು.[೭೩] ಹಾಗಾಗಿ ತದನಂತರದಲ್ಲಿ ಏಕೀಕರಣಗೊಂಡ ಕರ್ನಾಟಕದ ಮೊದಲ ಮುಖ್ಯಮಂತ್ರಿಯಾದ ಎಸ್.ನಿಜಲಿಂಗಪ್ಪನವರು ಹೆಚ್.ಕೆ.ವೀರಣ್ಣಗೌಡರ ಜನಸೇವೆಯನ್ನು ಪರಿಗಣಿಸಿ ತಮ್ಮ ಮಂತ್ರಿಮಂಡಲದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು. ನಂತರದ ಬೆಳವಣಿಗೆಯಲ್ಲಿ ಜಾತಿ ರಾಜಕಾರಣ ಹೆಚ್ಚಾದಂತೆ ಈ ಇಬ್ಬರು ಆಪ್ತ ಸ್ನೇಹಿತರ ಮಧ್ಯೆ ಸಮಯಸಾಧಕರು ವಿಷಬೀಜ ಬಿತ್ತಿದ್ದು ವಿಪರ್ಯಾಸವೇ ಸರಿ.

೧೯೫೬ನೇ ಇಸವಿಯಲ್ಲಿ ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಅಧಿವೇಶನ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ಕಾಂಗ್ರೆಸ್ಸಿಗರಾಗಿದ್ದ, ಎ.ವಿ.ನರಸಿಂಹರೆಡ್ಡಿಯವರು ಕೆ.ಪುಟ್ಟಸ್ವಾಮಿಯವರು ಹಲವು ಹೋರಾಟಗಳ ಜವಾಬ್ದಾರಿ ಹೊತ್ತು ಯಶಸ್ವಿಯಾಗಿದ್ದ ವೀರಣ್ಣಗೌಡರನ್ನು ಕಂಡು 'ಏನ್ ಸಾರ್, ಕರ್ನಾಟಕ ಏಕೀಕರಣ ವಿಚಾರದಲ್ಲಿ ತಾವು ತೆಪ್ಪಗೆ ಕುಳಿತು ಬಿಟ್ಟಿದ್ದೀರಿ! ನೀವು ಮುಂದೆ ನಿಂತು ಇದನ್ನು ವಿರೋಧಿಸದಿದ್ದರೆ ನಾವು ಮೈಸೂರು ದೇಶವನ್ನೇ ಮಾರಿಕೊಂಡಂತಾಗುತ್ತದೆ. ತಾವು ಬಹಿರಂಗವಾಗಿ ಹೊರಬಂದು ಇದನ್ನು ವಿರೋಧಿಸುವ ಜವಾಬ್ದಾರಿ ಹೊತ್ತುಕೊಳ್ಳಬೇಕೆಂದು' ಒತ್ತಾಯಿಸಿದರು. ಪ್ರಜಾ ಪ್ರತಿನಿಧಿ ಸಭೆ ಅಧಿವೇಶನದ ಸಂದರ್ಭದಲ್ಲಿಯೇ ಕರ್ನಾಟಕ ಏಕೀಕರಣ ವಿಚಾರವಾಗಿ ಕೆಲವರು ಬಹಿರಂಗ ಪ್ರತಿಭಟನೆ ಸೂಚಿಸಿದರು. ಅಲ್ಲದೆ ೧೯೫೬ ಜನವರಿ ೧ ರಂದು ಏಕೀಕರಣ ವಿಚಾರವಾಗಿ ಚರ್ಚೆ ನಡೆಯುವ ಸೂಚನೆಯನ್ನು ಪಡೆದ ಹೆಚ್.ಕೆ.ವೀರಣ್ಣಗೌಡರು ಅಂದೇ ಕರ್ನಾಟಕ ಏಕೀಕರಣವನ್ನು ವಿರೋಧಿಸುವ ಬೃಹತ್ ಸಭೆಯೊಂದನ್ನು ಮಂಡ್ಯದಲ್ಲಿ ಸೇರಿಸಲು ವ್ಯವಸ್ಥೆ ಮಾಡಿದರು. ಕೆ.ವಿ.ಶಂಕರಗೌಡರು ಅದರ ಮುಂಖಡರಾಗಿದ್ದರು. ಹಾಸನದ ಕೆ.ಲಕ್ಕಪ್ಪಗೌಡರು ಅಧ್ಯಕ್ಷರಾಗಲು ಒಪ್ಪಿದರು.

ಆ ಮಹಾಸಭೆಯಲ್ಲಿ ಹದಿನೈದು ಸಾವಿರ ಪ್ರತಿನಿಧಿಗಳು ಭಾಗವಹಿಸಿದ್ದು ಅನೇಕರು ಏಕೀಕರಣ ವಿರೋಧಿ ಚಳುವಳಿಗೆ ತಮ್ಮ ನಿಲುವಿಗನುಗುಣವಾಗಿ ಭಾಷಣವನ್ನು ಮಾಡಿದರು. ಹೆಚ್.ಕೆ.ವೀರಣ್ಣಗೌಡರು ತಮ್ಮ ಭಾಷಣದಲ್ಲಿ ಏಕೀಕರಣ ವಿರೋಧಕ್ಕೆ ಇರುವ ಸಕಾರಣಗಳನ್ನು ನೀಡಿ ತಮ್ಮ ನಿಲುವಿಗೆ ಸಭೆಯ ಬೆಂಬಲ ಕೋರಿದರು. 'ಸಭೆಯಲ್ಲಿ ಕೆಲವು ನಿರ್ಣಯಗಳಾದವು. ಹಳೆಯ ಮೈಸೂರಿಗೆ ಮಂಗಳೂರು ಮತ್ತು ಕೊಡಗು ಪ್ರಾಂತ್ಯಗಳನ್ನು ಮಾತ್ರ ಸೇರಿಸಿಕೊಂಡು ಮೈಸೂರು

---

[೭೩] ಬದುಕು ಮೆಲುಕು. ಪುಟ–೨೨೦

ರಾಜ್ಯವಾಗಬೇಕೆಂದೂ ಉಳಿದ ಪ್ರಾಂತ್ಯಗಳು ಕರ್ನಾಟಕ ಎಂಬ ಹೆಸರಿನಿಂದ ಒಟ್ಟಾಗಿ ಬೇರೆ ಸರ್ಕಾರವನ್ನು ಸ್ಥಾಪಿಸಿಕೊಳ್ಳಬೇಕೆಂದು ನಿರ್ಣಯ ಮಾಡಲಾಯಿತು. ಬಳ್ಳಾರಿ ಜಿಲ್ಲೆಯು ಅಷ್ಟರೊಳಗಾಗಿ ಮೈಸೂರಿನ ಸಂಸ್ಥಾನದ ಒಂದು ಭಾಗವಾಗಿ ಇದ್ದಿತು. ಮಂಡ್ಯ ಸಭೆಯಲ್ಲಾದ ವಿವರಗಳನ್ನಾಗಲಿ, ನಿರ್ಣಯಗಳನ್ನಾಗಲಿ, ಅಲ್ಲಿ ತೆಗೆದಿದ್ದ ಫೋಟೋಗಳನ್ನಾಗಲಿ ಹೆಚ್ಚು ಪ್ರಚಾರವಾಗದಂತೆ ಎಸ್.ಚೆನ್ನಯ್ಯನವರು ಪ್ರಯತ್ನಿಸಿದ್ದರು. ಎಸ್.ಚನ್ನಯ್ಯನವರು ಕೇಂದ್ರ ನಾಯಕರಲ್ಲಿ ಏಕೀಕರಣಕ್ಕೆ ಸಮಬಂಧಿಸಿದಂತೆ ನಡೆದ ಸಭೆ ಚಿಕ್ಕದೆಂದು, ಮತ್ತು ಯಾವುದೇ ರೀತಿಯ ವಿರೋಧವಿಲ್ಲವೆಂದು ನಂಬಿಸಿದ್ದರು. ಈ ವಿಚಾರವಾಗಿ ಹೆಚ್.ಕೆ.ವೀರಣ್ಣಗೌಡರು ದೆಹಲಿಗೆ ಹೋದಾಗ ಕಾಂಗ್ರೆಸ್ಸಿನ ಜನರಲ್ ಸೆಕ್ರೆಟರಿಯವರಾಗಿದ್ದ ಶ್ರೀಮನ್ನಾರಾಯಣ ಅವರೊಂದಿಗೆ ಮಾತನಾಡುವಾಗ ಏಕೀಕರಣ ವಿರೋಧಿ ಚಳುವಳಿಯ ಬಗ್ಗೆ ತಪ್ಪು ಮಾಹಿತಿಗಳು ಪ್ರಚಾರವಾಗುತ್ತಿರುವ ಬಗ್ಗೆ ತಿಳಿಯಿತು. ಅಲ್ಲದೆ ಮಂಡ್ಯದಲ್ಲಿ ನಡೆದ ಏಕೀಕರಣ ವಿರೋಧಿ ಮಹಾಸಭೆಯ ಅಧ್ಯಕ್ಷತೆ ವಹಿಸಿದ್ದ ಲಕ್ಕಪ್ಪನವರು ತದನಂತರದಲ್ಲಿ ತಮ್ಮ ನಿಲುವನ್ನು ಬದಲಾಯಿಸಿ 'ದೇಶದ ಹಿತದೃಷ್ಟಿಯಿಂದ ಕರ್ನಾಟಕ ಏಕೀಕರಣ ಆಗಲೇಬೇಕೆಂದು, ಅದನ್ನು ತಪ್ಪಿಸಲು ಮಾಡುವ ಪ್ರಯತ್ನ ಒಳ್ಳೆಯದಲ್ಲವೆಂಬ ಅರ್ಥದ ಒಂದು ಹೇಳಿಕೆಯನ್ನು ಪತ್ರಿಕೆಯಲ್ಲಿ ಕೊಟ್ಟಿದ್ದರು. ಇದೇ ರೀತಿ ಮೊದಲಿಗೆ ಏಕೀಕರಣ ವಿರೋಧಕ್ಕೆ ಬೆಂಬಲ ನೀಡಿದ್ದ ಸಾಹಿತಿಗಳಾದ 'ಬಿ.ಎಂ.ಶ್ರೀ., ಡಿ.ವಿ.ಜಿ., ಮಾಸ್ತಿಯವರು, ಅ.ನ.ಕೃ., ಬಿ.ಶಿವಮೂರ್ತಿ ಶಾಸ್ತ್ರಿ, ದೇವುಡು ಮುಂತಾದವರು ಕೆಲವು ಭಿನ್ನಾಭಿಪ್ರಾಯಗಳು ಇದ್ದರೂ ತದನಂತರದಲ್ಲಿ ಕರ್ನಾಟಕ ಏಕೀಕರಣ ಆಗಬೇಕೆಂದು ಬಯಸಿ ಆ ಸಂಬಂಧ ತಾವೂ ಕಾರ್ಯನಿರತರಾದರು'.[೭೪] ಹೀಗೆ ಪ್ರಾರಂಭದಲ್ಲಿ ಕರ್ನಾಟಕದ ಏಕೀಕರಣಕ್ಕೆ ವಿರೋಧ ವ್ಯಕ್ತಪಡಿಸಿದ್ದ ಅನೇಕ ಮಿತ್ರರು ತಮ್ಮ ನಿಲುವನ್ನು ಬದಲಾಯಿಸಿದ್ದರ ಪರಿಣಾಮ ಏಕೀಕರಣ ವಿರೋಧಿ ಧ್ವನಿ ಮೈಸೂರು ಸಂಸ್ಥಾನದಲ್ಲಿ ಅರಣ್ಯರೋಧನವಾಗಿ ಪರಿಣಮಿಸಿತು. ಇದು ಹೆಚ್.ಕೆ.ವೀರಣ್ಣಗೌಡರಿಗೆ ಬಹಳ ಬೇಸರವನ್ನುಂಟು ಮಾಡಿತು.

'೫೬೦ಕ್ಕೂ ಮಿಗಿಲಾಗಿದ್ದ ಸಂಸ್ಥಾನಗಳೆಲ್ಲವೂ ಭಾರತ ಒಕ್ಕೂಟದಿಂದ ಬೇರೆಯಾಗಿ ನಿಲ್ಲತಕ್ಕದ್ದಲ್ಲ. ಹೈದರಾಬಾದು, ಮೈಸೂರು, ಬರೋಡಾ, ಕಾಶ್ಮೀರ, ತಿರುವಾಂಕೂರು ಮುಂತಾದ ಸ್ವಸಾಮರ್ಥ್ಯವುಳ್ಳ ದೊಡ್ಡ ಸಂಸ್ಥಾನಗಳನ್ನು ಹಾಗೆಯೆ ಉಳಿಸಿಕೊಳ್ಳಬೇಕು. ಉಳಿದವನ್ನು ಭಾರತ ಒಕ್ಕೂಟದಲ್ಲಿ ಸೇರಿಸಬೇಕು. ಹೀಗೆ ಮಾಡುವಾಗ ಅಲ್ಲಲ್ಲಿನ ಜನತೆಯ ಭಾವನೆಗಳಿಗೆ ಮುಳಿವು ಆಗದಂತೆ ಮನವೊಲಿಸಿ ನಡೆಸಬೇಕು, ಹಾಗೆಯೆ ಉಳಿಯುವ ಸಂಸ್ಥಾನಗಳಲ್ಲಿ ನಿರಂಕುಶ ಆಡಳಿತ ಹೋಗಿ, ಪ್ರಜಾಹಿತ ಪರವಾದ ಪ್ರಾತಿನಿಧಿಕ ಸ್ವರೂಪದ ಆಡಳಿತ ಬರಬೇಕು ಎನ್ನುವುದು ಡಿವಿಜಿ ಅವರ ವಾದ. ಇದು ಮೈಸೂರಿನಲ್ಲಿ ಪ್ರಜಾಪ್ರತಿನಿಧಿ ಸಭೆಗೆ ದೊರೆತ ಅವಕಾಶದಿಂದ ದೊರೆಯ ಅಧೀನದಲ್ಲೂ ಪ್ರಜಾಪ್ರಭುತ್ವ ವ್ಯವಸ್ಥೆ ಎಷ್ಟೋ ಮಟ್ಟಿಗೆ ಸಾಧ್ಯ ಎನ್ನುವುದನ್ನು ಸ್ಪಷ್ಟಪಡಿಸಿತ್ತು. ಬ್ರಿಟನ್ನಿನಲ್ಲಿ ಇಂದಿಗೂ

---

[೭೪] ಡಾ|| ಎಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ. ಪು-೧೩೧

ಹಾಗೆಯೇ ತಾನೇ ಇರುವುದು. ಸಾಂಕುಶ ರಾಜಪ್ರಭುತ್ವ. ಈ ನಿಲುವಿಗೆ ಡಿವಿಜಿ ಒಲಿದಿದ್ದರು.'[೭೫] ತಮ್ಮ ಸಮಕಾಲೀನರಾದ ಡಿ.ವಿ.ಜಿಯವರ ಈ ಮೇಲಿನ ಅಭಿಪ್ರಾಯದಂತೆ ಸಾಂಕುಶಪ್ರಭುತ್ವ ವ್ಯವಸ್ಥೆಯ ಬಗ್ಗೆ ವೀರಣ್ಣಗೌಡರಿಗೂ ಇದೇ ರೀತಿಯ ಮನಸ್ಥಿತಿ ಇದ್ದಿದ್ದುದನ್ನು ಕಾಣಬಹುದು. ಈ ಹಿನ್ನೆಲೆಯಿಂದಲೂ ವೀರಣ್ಣಗೌಡರು ಮೈಸೂರು ಸಂಸ್ಥಾನದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವುದರ ಪರವಾಗಿ ಮತ್ತು ಏಕೀಕರಣ ಕರ್ನಾಟಕಕ್ಕೆ ವಿರೋಧವಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾ ಬಂದರು.

"ಎಚ್.ಎಸ್.ದೊರೆಸ್ವಾಮಿ ಅವರು ತಿಳಿಸಿದಂತೆ ಕನ್ನಡ ಸಾಹಿತಿಗಳು ಬಯಸಿದ್ದು ಕರ್ನಾಟಕದ ಸಾಂಸ್ಕೃತಿಕ ಏಕೀಕರಣ ಮತ್ತು ರಾಜಕಾರಣಿಗಳು ಬಯಸಿದ್ದು ರಾಜಕೀಯ ಏಕೀಕರಣ. ಸಂಸ್ಥಾನಿ ಕರ್ನಾಟಕ ವಿಶೇಷವಾಗಿ ಮೈಸೂರು ಸಂಸ್ಥಾನ ಮತ್ತು ಬ್ರಿಟಿಷ್ ಆಳ್ವಿಕೆಗೆ ಸೇರಿದ್ದ ಕರ್ನಾಟಕ ಪ್ರದೇಶಗಳ ರಾಜಕೀಯ ವಲಯದಲ್ಲಿ ಏಕೀಕರಣದ ಸಲುವಾಗಿ ಭಿನ್ನಮತವಿತ್ತು. ರಾಜಕೀಯವಾಗಿ ಬಲಪಡೆಯಲು ಉತ್ತರ ಕರ್ನಾಟಕದಲ್ಲಿ ಬ್ರಾಹ್ಮಣೇತರ ಪರಿಷತ್ತು ಆರಂಭವಾದ ಸಂದರ್ಭದಲ್ಲೇ ದಕ್ಷಿಣದಲ್ಲಿ ಒಕ್ಕಲಿಗರ ಪ್ರಾಬಲ್ಯ ಹೆಚ್ಚಿತ್ತು . ಹೆಚ್ಚು ಅಧಿಕಾರಗಳನ್ನು ಒಕ್ಕಲಿಗರು ಪಡೆದ ಸಂದರ್ಭದಲ್ಲಿ ರಾಜಕೀಯವಾಗಿ ಕರ್ನಾಟಕ ಏಕೀಕರಣ ಪ್ರಸ್ತಾಪ ಆಯಿತು. ಅಧಿಕಾರ ಕೈ ತಪ್ಪಿ ಹೋಗುವ ಭಯದಿಂದ ಮೈಸೂರು ಸಂಸ್ಥಾನದ ಕೆಲವು ಮುಖಂಡರು ಏಕೀಕರಣದ ಬಗೆಗೆ ವಿರೋಧ ವ್ಯಕ್ತಪಡಿಸಿದರು."[೭೬] ೧೯೫೫ ಜೂನ್ ೧೦, ೧೧,೧೨ ರಂದು ಮೈಸೂರಿನಲ್ಲಿ ೩೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾತನಾಡಿದ ಕೆ.ಶಿವರಾಮ ಕಾರಂತರು "ಈ ಕನ್ನಡ ಸಾಹಿತ್ಯ ಪರಿಷತ್ತಿನಂತಹ ಒಂದು ಸಂಸ್ಥೆ ರಾಜಕೀಯ ಅಡಚಣೆ ಮತ್ತು ಮೇರೆಗಳನ್ನು ಮುರಿದು ಹರಿದು ಹಂಚಿಹೋದ ಕರ್ನಾಟಕವನ್ನು ಒಂದುಗೂಡಿಸಿ ನಾಡಿನ ಮಕ್ಕಳ ದನಿಗಳಲ್ಲಿ ಒಂದೇ ಶ್ರುತಿ ಹುಟ್ಟಿ ಬರುವಂತೆ ಶ್ರಮಿಸುತ್ತಿರುವ ಸಂಸ್ಥೆಯಾಗಿದೆ . . . ನನ್ನ ಸಂಚಾರಗಳಾಗಲಿ, ನನ್ನ ವಿವಿಧಾನುಭವಗಳಾಗಲಿ, ಕರ್ನಾಟಕ ಏಕೀಕರಣ ವಿಚಾರದಲ್ಲಿ ಎಂದೂ ನನ್ನನ್ನು ತಪ್ಪು ದಾರಿಗೆ ಒಯ್ದಿರಲಿಲ್ಲ: ಒಯ್ಯಲಾರವು . . . ನಮ್ಮ ರಾಜಕಾರಣಿಗಳು ಗಳಿಗೆಗೊಂದು ತೆರನಾಗಿ ಮಾತನಾಡುತ್ತಿದ್ದಾರೆ. . . . .ಕನ್ನಡ ಏಕೀಕರಣದ ವಿಚಾರ ಬಂದಾಗಲೆಲ್ಲ ಆಡಳಿತದಲ್ಲಿನ ಸೌಕರ್ಯದ ಮಾತು ಹೇಳುತ್ತಾರೆ: 'ಹಣಕಾಸಿನ ಭಯ' ತೋರಿಸುತ್ತಾರೆ: ಜಾತಿ ಕೋಮುಗಳ ಭೂತ ದೆವ್ವಗಳನ್ನು ಎತ್ತಿ ಹಿಡಿಯುತ್ತಾರೆ. . . . 'ಎರಡು ಕನ್ನಡ ನಾಡಾಗಲಿ' ಎನ್ನುವ ಪ್ರಭೃತಿಗಳುಂಟು ಈ ದೇಶದಲ್ಲಿ. 'ಮಂತ್ರಿ'ಗಳಾಗುವ ಹೆಬ್ಬಯಕೆಯೊಂದೇ ರಾಜಕೀಯದಲ್ಲಿ ತಾಂಡವವಾಡುವಂತಿದ್ದರೆ ಎರಡಲ್ಲ, ಮಂತ್ರಿ ಪದಾಕಾಂಕ್ಷಿಗಳಿಗೆ ಸಮನಾದ ಸಂಖ್ಯೆಯಲ್ಲಿ, ಬಹು ಖಂಡ ಕರ್ನಾಟಕವಾಗಬೇಕಾದೀತು. . . . ."[೭೭] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

---

[೭೫] ನೀಲತ್ತಹಳ್ಳಿ ಕಸ್ತೂರಿ. ಡಾ.ಡಿ.ವಿ.ಗುಂಡಪ್ಪ. ಪು-೯೩,೯೪

[೭೬] ಡಾ|| ಎಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ. ಪು.೩೭೫. ನವಕರ್ನಾಟಕ ಪ್ರಕಾಶನ.ಬೆಂಗಳೂರು. ೧೯೯೬.

[೭೭] ಪೂರ್ವೋಕ್ತಿ. ಪು.೧೨೫

"ಬಾಪೂ ಸುಬ್ಬರಾಯರು, ಆಲೂರು ವೆಂಕಟರಾಯರಿಗೆ ತಿಳಿಸಿದಂತೆ ಮೈಸೂರು ಸಂಸ್ಥಾನದ ಅನೇಕರಿಗೆ 'ತಾಯಿಯ ತೊಡೆಯ ಮೇಲೆ ಮಲಗಿ ಗುಟುಕ ಹಾಕಿಸಿಕೊಂಡೇ' ಗೊತ್ತಿತ್ತು; ತಾವು ಮಿಕ್ಕ ಭಾಗದವರಿಗಿಂತ ಶ್ರೇಷ್ಠರೆಂಬ ಭಾವನೆ ಹಳೆಯ ಮೈಸೂರಿನವರಿಗಿತ್ತು. ಅದೇ ಹೊತ್ತಿನಲ್ಲಿ ಮೈಸೂರು ಸಂಸ್ಥಾನೇತರ ಕನ್ನಡಿಗರಿಗೆ ತಾವು ಮೈಸೂರು ಸಂಸ್ಥಾನದವರನ್ನು ಬಿಡುವುದು ಸಾಧ್ಯವಿಲ್ಲ ಎಂದೂ ತಿಳಿದಿತ್ತು. ಇದನ್ನು ಮೈಸೂರು ಸಂಸ್ಥಾನದ ಕನ್ನಡಿಗರೂ ತಿಳಿದಿದ್ದರು."[೭೮] ಹೀಗೆ ಸಾಹಿತಿಗಳ ಏಕೀಕರಣ ಪರ ವಾದಗಳು ಅಲ್ಲಲ್ಲಿ ಕೇಳಿಬರುತ್ತಿದ್ದವು ಮತ್ತು ಕರ್ನಾಟಕ ಏಕೀಕರಣ ಪರವಾಗಿ ಹಲವಾರು ನಿರ್ಣಯಗಳು, ಸಭೆ, ಸಮ್ಮೇಳನಗಳಲ್ಲಿ ಮಂಡಿತವಾದವು. ವಿರೋಧವಿದ್ದುದು ಕೆಲವರಿಂದ ಮಾತ್ರ, ಅದೂ ಸಹ ೧೯೪೬ರ ವೇಳೆಗೆ ಪ್ರಬಲವಾದ ವಿರೋಧವಾಗಿರಲಿಲ್ಲ. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರದ ರಚನೆಯೇ ಆಗಿಲ್ಲದಿದ್ದಾಗ ಮತ್ತು ಭಾರತಕ್ಕೆ ಸ್ವಾತಂತ್ರ್ಯವೇ ಇನ್ನೂ ಬಾರದಿದ್ದಾಗ ಭಾಷಾವಾರು ಪ್ರಾಂತ ರಚನೆ ಮತ್ತು ಆ ಮೂಲಕ ಕರ್ನಾಟಕ ಏಕೀಕರಣ ಬಹುದೂರದ ಮಾತೆಂಬ ಅಭಿಪ್ರಾಯ ಇನ್ನೂ ಕೆಲವು ಧುರೀಣರಲ್ಲಿದ್ದಂತೆ ತೋರುತ್ತದೆ. ಆದರೆ ಮೈಸೂರು ಕಾಂಗ್ರೆಸ್ ೧೯೪೬ರ ನವೆಂಬರ್‌ನಲ್ಲೇ ಬೆಂಗಳೂರಿನ ಸುಭಾಷ್ ನಗರದಲ್ಲಿ ವಾರ್ಷಿಕ ಸಭೆ ಸೇರಿದ್ದಾಗ, ಕೆ.ಸಿ.ರೆಡ್ಡಿ ಅವರು ಅಧ್ಯಕ್ಷರಾಗಿದ್ದರು. ಆ ವಾರ್ಷಿಕ ಸಭೆಯು ಬೇರೆ ಬೇರೆ ಆಡಳಿತಗಳಲ್ಲಿ ಹರಿದು ಹಂಚಿಹೋಗಿರುವ ಭಾಗಗಳನ್ನೆಲ್ಲಾ ಒಗ್ಗೂಡಿಸಿ ಶೀಘ್ರವೇ ಕರ್ನಾಟಕದ ರಚನೆಯು ಆಗಬೇಕೆಂದು ಒತ್ತಾಯಿಸುವ ಗೊತ್ತುವಳಿ ಸ್ವೀಕರಿಸಿತು.[೭೯]

ಈ ನಿಟ್ಟಿನಲ್ಲಿ ಮುಂದುವರೆದಾಗ ಮೈಸೂರು ಸಂಸ್ಥಾನದ ವಿಷಯದಲ್ಲಿ ಬಹುರೀತಿಯ ಅಭಿಪ್ರಾಯ ಭೇದ ತಲೆಯೆತ್ತಿದ್ದವು. "ಮೈಸೂರು ಭಾರತಕ್ಕೆ ಸೇರಿರುವ ಸಂಸ್ಥಾನದ ಒಂದು ಭಾಗವಾದ ಕರ್ನಾಟಕ ಪ್ರಾಂತಕ್ಕಿಂತ ಕೆಲವು ಹೆಚ್ಚಿನ ಅಧಿಕಾರಗಳನ್ನು ಪಡೆದಿದೆ. ಉಳಿದ ಕರ್ನಾಟಕಕ್ಕೆ ಈ ಹೆಚ್ಚಿನ ಅಧಿಕಾರವನ್ನು ಕೊಟ್ಟು ಅದನ್ನು ಸಂಸ್ಥಾನದ ಮಟ್ಟಕ್ಕೇರಿಸಲು ಕೇಂದ್ರ ಸರ್ಕಾರ ಒಪ್ಪಲಾರದು, ಮೈಸೂರು ತಾನಾಗಿ ಈ ಹೆಚ್ಚಿನ ಅಧಿಕಾರಗಳನ್ನು ಬಿಟ್ಟುಕೊಡುವ ಯಾವುದೇ ಕಾರಣ ಇಲ್ಲ. ಆದ್ದರಿಂದ ಇವೆರಡೂ ಸೇರುವುದು ಸಾಧ್ಯವಿಲ್ಲ"[೮೦]ಎಂಬುದು ರಾಜನೀತಿಜ್ಞರ ಅಭಿಪ್ರಾಯವಾಗಿತ್ತೆಂದು 'ಜೀವನ' ಪತ್ರಿಕೆಯ ಸಂಪಾದಕರಾಗಿದ್ದ ಮಾಸ್ತಿವೆಂಕಟೇಶ್ ಅಯ್ಯಂಗಾರ್ ತಮ್ಮ ಸಂಪಾದಕೀಯದಲ್ಲಿ ಅಂದಿನ ವಿದ್ಯಮಾನಗಳನ್ನು ಗಮನದಲ್ಲಿಟ್ಟುಕೊಂಡು ಅಭಿಪ್ರಾಯ ಪಟ್ಟಿದ್ದರು. ಇದೇ ರೀತಿ ಒಬ್ಬ ರಾಜಕೀಯ ಧುರೀಣರಾಗಿದ್ದ ವೀರಣ್ಣಗೌಡರು ಸಹ ಮಾಸ್ತಿಯವರ ಅಭಿಪ್ರಾಯಕ್ಕೆ ಪೂರಕವಾದ ಮನೋಸ್ಥಿತಿಯನ್ನು ಹೊಂದಿದ್ದರು.

---

[೭೮] ಡಾ। ಎಚ್.ಎಸ್.ಗೋಪಾಲರಾವ್. ಪೂರ್ವೋಕ್ತಿ. ಪು.೧೩೧

[೭೯] ಎಚ್.ಎಸ್.ಗೋಪಾಲರಾವ್. ಪುರ್ವೋಕ್ತಿ. ಪು.೧೪೩ ಅ

[೮೦] ಮಾಸ್ತಿ ವೆಂಕಟೇಶ ಅಯ್ಯಂಗಾರ್. ಪ್ರಸಂಗ. ಜೀವನ ಕಾರ್ಯಾಲಯ. ಬೆಂಗಳೂರು.೧೯೬೩.ಪು.೧೪೭

ಅಂದಿನ ಪರಿಸ್ಥಿತಿಯಲ್ಲಿ ಏಕೀಕರಣದ ಅವಶ್ಯಕತೆಯ ಬಗ್ಗೆ ಗಟ್ಟಿಯಾದ ವಾದವಿದ್ದದ್ದು, 'ಮೈಸೂರು ಸಂಸ್ಥಾನ ಆಂಗ್ಲರನ್ನು ಎದುರಿಸಿ ತನ್ನ ಸ್ವಾತಂತ್ರ್ಯವನ್ನು ತಾನು ಗಳಿಸಲಿಲ್ಲ. ಈ ಕಾರ್ಯದಲ್ಲಿ ಉಳಿದ ಕರ್ನಾಟಕ ಮೈಸೂರನ್ನು ಆಂಗ್ಲರ ಅಧೀನದಿಂದ ಬಿಡಿಸುವುದರಲ್ಲಿ ನೆರವಾಯಿತು. ಹೀಗೆ ಬಂದ ಒಂದು ಹೆಚ್ಚಿನ ಸೌಕರ್ಯವನ್ನು ದೊಡ್ಡದೆಂದು ಎಣಿಸಿ ಉಳಿದ ಕರ್ನಾಟಕ ಮೈಸೂರಿಗಿಂತ ಕೀಳು ಎನ್ನುವುದು ಉಚಿತವಲ್ಲ'[೮೧] ಎಂಬುದು ರಾಜನೀತಿಜ್ಞರ ವಾದಕ್ಕೆ ಪ್ರತಿವಾದವಾಗಿತ್ತು.

'ಜಾತಿ, ಕೋಮು ಎನ್ನುವುದು ಇರುವಷ್ಟು ದಿವಸವೂ ಯಾವಭಾಗವನ್ನು ತೆಗೆದುಕೊಂಡರೂ ಯಾವುದೋ ಒಂದು ಜಾತಿ ಹೆಚ್ಚು ಸಂಖ್ಯೆಯದಾದರೆ ಅದು ಉಳಿದ ಜಾತಿಗಳ ಮೇಲೆ ಪ್ರಾಬಲ್ಯ ಸಾಧಿಸುತ್ತದೆ ಎನ್ನುವುದು ಸಾರ್ವಕಾಲಿಕ ಸತ್ಯವಲ್ಲ. ಒಂದು ಗುಂಪು ಹೆಚ್ಚಿನ ಸಂಖ್ಯೆಯದಾಗಿ ಉಳಿದ ಗುಂಪನ್ನು ಹಿಂಸೆ ಪಡಿಸುವ ಮಾತು ಈಗಂತೂ ಸಾಧ್ಯವಿಲ್ಲ. ಅಲ್ಲದೆ ಇಂಥ ಮಾತಿನಲ್ಲಿ ಮೈಸೂರಿನ ಸ್ವಾರ್ಥ ಅಥವಾ ಒಂದು ಗುಂಪಿನ ಸ್ವಾರ್ಥ ಮುಂದಾಗುತ್ತದೆ. ನಾಡು ಒಂದಾಗಿ ಬಾಳಬೇಕೆಂದಾಗ ಮೈಸೂರು ಸಂಸ್ಥಾನದಲ್ಲಿನ, ಹೆಚ್ಚಿನ ಜನಸಂಖ್ಯೆಯನ್ನೊಳಗೊಂಡ ಜಾತಿ, ಎಲ್ಲರ ಕ್ಷೇಮಕ್ಕಾಗಿ ತನ್ನ ಪ್ರತಿಷ್ಠೆ, ತನ್ನ ಪ್ರಯೋಜನವನ್ನು, ಸ್ವಲ್ಪ ಬಿಟ್ಟುಕೊಡಬೇಕು. ಉಳಿದ ಪ್ರದೇಶದ ಜನರು ಈ ಬಗ್ಗೆ ಕೃತಜ್ಞವಾಗಿದ್ದೀತು. ಇದರಿಂದ ಮುಂದೆ ಪ್ರಯೋಜನವೇ ಆದೀತು. ಉಳಿದ ಕರ್ನಾಟಕದ ಪರವಾಗಿ ಮಾತನಾಡುವ 'ಕಮ್ಯೂನಿಸ್ಟ' ಪರವಾದ ಜನರಿಗೆ ನಾವು ಹೇಳಬಹುದಾದುದ್ದು ಒಂದೇ ಸಮಾಧಾನ. ರಾಜರು ಬೇಡ ಎಂಬ ಮಾತು ಈಗ ಕೆಲವರ ಮಾತಾಗಿದೆ. ಇದನ್ನು ಮುಂದುಮಾಡಿಕೊಂಡು ಈ ಜನ ಏಕೀಕರಣಕ್ಕೆ ಅಡ್ಡಿಯಾಗಿ ನಿಲ್ಲಬಾರದು. ನಾಡು ಒಂದಾಗಲಿ, ಜನ ಒಂದುಗೂಡಿ ಬೆಳೆಯಲಿ. ರಾಜರು ಬೇಡ ಗವರ್ನರು ಬೇಡ ಎನ್ನುವ ಈ ಪಕ್ಷ ಉಳಿದ ಪಕ್ಷದಂತೆ ತನ್ನ ಭಾವವನ್ನು ಹರಡಲು ನ್ಯಾಯಬದ್ಧವಾಗಿ ಯತ್ನ ಮಾಡಲಿ.[೮೨] ಎಂಬ ಮಾಸ್ತಿಯವರ ಅಭಿಪ್ರಾಯವು ಒಟ್ಟಾರೆ ಜನತೆಯ ದೃಷ್ಟಿಯಿಂದ ಅಂದಿನ ಸಂದರ್ಭಕ್ಕೆ ಸೂಕ್ತವಾದುದಾಗಿತ್ತು.

ಈ ಹಿನ್ನೆಲೆಯಲ್ಲಿ ಡಿಸೆಂಬರ್ ೧೯೫೫ ರಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಂಗಾರ್‌ರವರು ತಮ್ಮ 'ಜೀವನ' ಪತ್ರಿಕೆಯಲ್ಲಿ ಸಂಪಾದಕೀಯ ಲೇಖನವನ್ನು ಪ್ರಕಟಿಸಿದರು. ಅದರಲ್ಲಿ ಮೈಸೂರಿನ ಕೆಲ ನಾಯಕರು ಏಕೀಕರಣಕ್ಕೆ ವಿರೋಧಿಗಳಾಗಿರುವುದು ಸಮಂಜಸವಾದುದಲ್ಲವೆಂದು ತಮ್ಮ ಅಭಿಪ್ರಾಯ ಈ ಕೆಳಗಿನಂತೆ ವ್ಯಕ್ತಪಡಿಸಿದ್ದರು.

" ಪುನರ್ರಚನಾ ಸಮಿತಿಯ ಅಭಿಪ್ರಾಯದಂತೆ ಮೈಸೂರು ಕರ್ನಾಟಕದೊಂದಿಗೆ ಬೆರೆಯಬೇಕು, ಕರ್ನಾಟಕ ಒಂದು ಪ್ರಾಂತ ಆಗಬೇಕು. ಈ ವಿಷಯದಲ್ಲಿ ಮೈಸೂರಿನ ಕೆಲವು ನಾಯಕರು ಅಸಮ್ಮತಿ ಸೂಚಿಸಿದ್ದರಿಂದ ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಎಲ್ಲ ಪಕ್ಷಗಳ ಸೂಚನೆಗಳನ್ನು ಕೇಳಿ ಒಂದು ನಿರ್ಧಾರಕ್ಕೆ ಬರುವ ಹೊರೆಯನ್ನು ಕಾಂಗ್ರೆಸ್ ಅಧ್ಯಕ್ಷ ಧೇಬರ್, ನೆಹರೂ, ಅಜಾದ್ ,ಪಂತ್ ಈ ಮಹನೀಯರ ಒಂದು ಉಪ ಸಮಿತಿಯ ಕೈಗೆ ಕೊಟ್ಟಿತು. ಈ ಉಪಸಮಿತಿ ನಮ್ಮ ನಾಯಕರಾದ ಶ್ರೀ

---

[೮೧] ಪ್ರಸಂಗ.ಪು.೧೪೮

[೮೨] ಪ್ರಸಂಗ. ಪು.೧೪೮.೧೪೯

ಹೆಚ್.ಕೆ.ವೀರಣ್ಣಗೌಡರು, ಶ್ರೀರಾಮಚಂದ್ರರಾಯರು ಮುಂತಾದ ನಮ್ಮ ಮೈಸೂರು ಸೋದರರು ಹಲವರ ನಿವೇದನವನ್ನು ಕೇಳಿ ಎಲ್ಲ ದೃಷ್ಟಿಯಿಂದಲೂ ವಿಷಯವನ್ನು, ಪರಿಶೀಲಿಸಿ ಒಟ್ಟಿನಲ್ಲಿ ಕರ್ನಾಟಕ ಒಂದೇ ಪ್ರಾಂತ ಆಗಿರತಕ್ಕದ್ದು ಎಲ್ಲರಿಗೂ ಹಿತಕರ ಎಂಬ ನಿರ್ಧಾರವನ್ನು ಹೇಳಿದೆ.

ಈ ಮಾತನ್ನು ಬರೆಯುತ್ತಿರುವ ನಾವು ಮೈಸೂರಿನ ಮಕ್ಕಳು, ಮೈಸೂರಿಗೆ ಹೊರಗಿನಿಂದ ಬಂದವರಲ್ಲ. ಮೈಸೂರಿನ ಕ್ಷೇಮಕ್ಕೆ ಕುಂದು ತರುವ ಒಂದು ಲವಲೇಶದ ಸೂಚನೆಗೆ ನಮ್ಮ ಮನಸ್ಸು ಒಪ್ಪುವುದಿಲ್ಲ. ನಮ್ಮಂತೆ ಮೈಸೂರಿನ ಮಕ್ಕಳಾಗಿ ಅದರ ಅಹಿತಕ್ಕೆ ಸಮ್ಮತಿಸದ ಲಕ್ಷಾಂತರ ಜನ, ಮೈಸೂರು ಕರ್ನಾಟಕ ಒಂದುಗೂಡಬೇಕು ಎಂದು ಹೇಳುತ್ತಿದ್ದಾರೆ. ಏಕೀಕರಣಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಇಷ್ಟೇ ಜನರು ಪರವಾಗಿ, ವಿರೋಧವಾಗಿ ಇದ್ದಾರೆಂದು ಹೇಳುವುದಕ್ಕೆ ಯಾರಿಗೂ ಆಧಾರವಿಲ್ಲ. ಆದರೆ ಒಟ್ಟು ಜನವನ್ನು ತೆಗೆದುಕೊಂಡರೆ ಮೈಸೂರು ಒಳಗೊಂಡ ಕರ್ನಾಟಕವನ್ನು ಬಯಸುವವರ ಸಂಖ್ಯೆ ಹೆಚ್ಚಾಗಿದೆ ಎಂದು ನಮ್ಮ ನಂಬಿಕೆ. ಮೈಸೂರಿನ ಶಾಸನಸಭೆಯಲ್ಲಿ ಚರ್ಚೆ ನಡೆದಿರುವುದರಲ್ಲಿ ಈ ಕಲ್ಪನೆಗೆ ಆಧಾರ ದೊರೆಯುತ್ತದೆ. ವರ್ಷದ ಹಿಂದೆ ಮೈಸೂರು ಬೇರೆಯಾಗಿರಬೇಕೆಂದು ಸೂಚಿಸಿದ ಸದಸ್ಯರು ಈಗ ಅದು ಕರ್ನಾಟಕದಲ್ಲಿ ಬೆರೆಯುವುದು ಸರಿ ಎಂದು ಹೇಳಿದ್ದಾರೆ.

ಮೈಸೂರು ಬೇರೆಯಾಗಿರಬೇಕು ಎನ್ನುವ ನಮ್ಮ ಸೋದರರಲ್ಲಿ ನಾವು, ಅವರು ಇನ್ನು ಈ ಮಾತನ್ನು ಎತ್ತಬಾರದು, ಎಂದು ನಮ್ರವಾಗಿ ವಿಜ್ಞಾಪನೆ ಮಾಡುತ್ತೇವೆ. ಕರ್ನಾಟಕ ಬೇರೆಯಾದರೆ ಆಡಳಿತದಲ್ಲಿ ಗವರ್ನರ್ ಸ್ಥಾನ ಎರಡು, ಶಾಸನ ಸಭೆ ಎರಡು, ಮಂತ್ರಿಮಂಡಲ ಎರಡು, ಹೈಕೋರ್ಟ್ ಎರಡು, ವಿದ್ಯಾ ಇಲಾಖೆ, ಪೊಲೀಸ್ ಇಲಾಖೆ, ರೆವಿನ್ಯೂ ಇಲಾಖೆ ಹೀಗೆ ಇಲಾಖೆ ಇಲಾಖೆಯೂ ಎರಡೆರಡಾಗಿ, ತಲೆಯ ವೆಚ್ಚ ಹೀಗೆ ಎರಡಾದರೂ ಆಗಲಿ ಎಂದು ಅದನ್ನು ಸಹಿಸಿಕೊಂಡು ಮೈಸೂರನ್ನು ಬೇರೆಯಾಗಿಟ್ಟು ನಾವು ಸಾಧಿಸುವುದಾದರೂ ಏನು? ಎಲ್ಲ ಜನ ಒಂದಲ್ಲವೆ? ಇಂಥ ವೆಚ್ಚವನ್ನು ಕಡಿಮೆ ಮಾಡುವುದು ನಮ್ಮ ನಾಯಕರ ಕರ್ತವ್ಯವಲ್ಲವೆ? ಶ್ರೀ ವೀರಣ್ಣಗೌಡರಿಗೆ, ಶ್ರೀ ರಾಮಚಂದ್ರರಾಯರಿಗೆ ಇಂಥ ಮಾತನ್ನು ಯಾರಾದರೂ ಹೇಳಿಕೊಡಬೇಕೇ? ಜನತೆಗಾಗಿ ದುಡಿದಿರುವ, ಜನತೆಗಾಗಿ ಕಷ್ಟ ಸಹಿಸಿರುವ, ಈ ಮಹನೀಯರು ಇತರರಿಗೆ ಇದನ್ನು ಕಲಿಸಬೇಕಾದ ಅಧಿಕಾರಿಗಳು. ಕರ್ನಾಟಕ ಒಂದಾದರೆ ಏನೋ ಆಗಿಬಿಡುತ್ತದೆ ಎಂಬ ಅಸ್ಪಷ್ಟ ಭೀತಿಯಿಂದ, ಕರ್ಣಾಟಕ ಒಂದಾದರೆ ದೊರೆಯುವ ಸ್ಪಷ್ಟವಾದ ಒಳಿತನ್ನು ನಾವು ನಿರಾಕರಿಸಬಹುದೆ? ಒಂದಾದ ಕರ್ಣಾಟಕ ಕೇಂದ್ರದಲ್ಲಿ ಉಳಿದ ಪ್ರಾಂತಗಳಿಗೆ ಸಮಸಮನಾಗಿ ನಿಂತು ಮಾತನಾಡಬಹುದು. ತುಂಡಾದ ಕರ್ಣಾಟಕ ಇದನ್ನು ಮಾಡುವುದು ಸಾಧ್ಯವೇ? ಯಾವ ತುಂಡು ಯಾವ ಹೊತ್ತಿನಲ್ಲಿ ಎತ್ತ ತಿರುಗೀತೋ? ಇದು ಕನ್ನಡಿಗರಿಗೆ ಮಂಗಳವಲ್ಲ; ಮೈಸೂರಿಗೆ ಮಂಗಳವಲ್ಲ. ಭರತ ವರ್ಷಕ್ಕೂ ಮಂಗಳವಲ್ಲ' ಎಂಬುದು ಮಾಸ್ತಿ ವೆಂಕಟೇಶ್ ಅಯ್ಯಂಗಾರರ ಅಭಿಪ್ರಾಯವಾಗಿತ್ತು.

ಈ ಸಂಪಾದಕೀಯದಲ್ಲಿ ತಮ್ಮನ್ನೇ ನಿರ್ದಿಷ್ಟವಾಗಿ ಉಲ್ಲೇಖಿಸಿದ್ದ ಮಾಸ್ತಿ ವೆಂಕಟೇಶ್ ಅಯ್ಯಂಗಾರ್‌ರವರಿಗೆ ವೀರಣ್ಣಗೌಡರು ತಮ್ಮ ಪ್ರತಿಕ್ರಿಯೆಯಾಗಿ ಒಂದು ಪತ್ರ ಬರೆದರು. ಆ ಪತ್ರದಲ್ಲಿನ ಪೂರ್ಣ ಸಾರಾಂಶವನ್ನು ಇಲ್ಲಿ ನೀಡಲಾಗಿ

"ಹಿರಿಯರಾದ ಶ್ರೀ ಮಾಸ್ತಿಯವರ ಸ॥ಕ್ಕೆ॥ ಸೇವಕ ವೀರಣ್ಣನ ನಮಸ್ಕಾರಗಳು,

ಡಿಸೆಂಬರ್ ತಿಂಗಳಿನ 'ಜೀವನ'ಮಾಸ ಪತ್ರಿಕೆಯ ಸಂಪಾದಕೀಯವನ್ನು ಓದಿ ನನಗೆ ವಿಸ್ಮಯಾನಂದಗಳೆರಡೂ ಉಂಟಾದವು. ತಮ್ಮಂತಹ ಹಿರಿಯರ ಲೇಖನಿಯ ಟೀಕೆಗೆ ಕಾರಣನಾಗುವಷ್ಟು ತೂಕಕ್ಕೆ ಈ ಅಲ್ಪನ ಹೆಸರು ಏರಿದುದು ನನಗೆ ಹೆಮ್ಮೆ, ಆನಂದ; ಆ ಲೇಖನಿಯಲ್ಲಡಗಿರುವ ಅಸಮಂಜಸವಾದಗಳಿಂದಾಗಿ ವಿಸ್ಮಯ. ತಮ್ಮಲ್ಲಿ ನನಗಿರುವ ಗೌರವದಿಂದಾಗಿ, ತಮ್ಮ ಸಂಪಾದಕೀಯವನ್ನು ಓದಿದ ಮೇಲೆ ನನ್ನ ಮನಸ್ಸಿನ ಮೇಲಾದ ಪರಿಣಾಮವನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವುದು ನನ್ನ ಕರ್ತವ್ಯವೆನಿಸಿತು. ಅದಕ್ಕಾಗಿ ಈ ಕಾಗದ ಬರೆದಿದ್ದೇನೆ. 'ಜೀವನ'ದ ಸಂಪಾದಕೀಯವನ್ನು ಲಕ್ಷಗಟ್ಟಲೆ ಕನ್ನಡಿಗರು ಓದಿರುತ್ತಾರೆ. ಅದರಲ್ಲಿ ನನಗೆ ತೋರಿದ ಅಸಮಂಜಸತೆಯನ್ನು ಜನತೆಯ ಮುಂದಿಡದಿದ್ದರೆ, ತಮ್ಮ ಸಂಪಾದಕೀಯದಲ್ಲಿರುವ ವಾದವೆ ಸರಿಯೆಂಬ ಭ್ರಾಂತಿ ಕೆಲವರಿಗಾದರೂ ಉಂಟಾದೀತೆಂಬ ಕಾರಣದಿಂದ ಈ ಕಾಗದವನ್ನು ಪತ್ರಿಕೆಗಳಿಗೆ ಕಳುಹಿಸಬಾರದೇಕೆಂದುಕೊಂಡೆ. ಆದರೆ, ಯಾವ ಪತ್ರಿಕೆಯಲ್ಲಿ ಒಂದು ಟೀಕೆ ಪ್ರಕಟವಾಯಿತೋ ಅಂತಹ ಟೀಕೆಗೆ ಉತ್ತರ ಅದೇ ಪತ್ರಿಕೆಯಲ್ಲಿ ಪ್ರಕಟವಾಗುವುದು ಸತ್ಸಂಪ್ರದಾಯವೆಂದು ತಮ್ಮಂತಹ ಹಿರಿಯರಿಂದ ತಿಳಿದಿರುವೆನಾದುದರಿಂದ ಬೇರೆ ಪತ್ರಿಕೆಗಳಿಗೆ ಈ ಕಾಗದ ಕಳುಹಿಸುವ ಸಾಹಸಕ್ಕೆ ಹೋಗಲಿಲ್ಲ.

ತಮ್ಮಲ್ಲಿ ನನಗಿರುವ ಸಲುಗೆಯಿಂದ ಇನ್ನೂ ಒಂದು ವಿಷಯವನ್ನು ತಮ್ಮಲ್ಲಿ ಹೇಳಬೇಕೆನಿಸುತ್ತದೆ. ಈ ಕಾಗದವನ್ನು ತಮಗೇಕೆ ಬರೆಯುತ್ತೇನೆಂಬುದು. ಈ ಕಾಗದದಿಂದ ತಮ್ಮ ಅಭಿಪ್ರಾಯ ಬದಲಾವಣೆಯಾಗುವುದೆಂಬ ಭ್ರಾಂತಿ ನನಗಿಲ್ಲ. ತಮ್ಮ ಸಂಪಾದಕೀಯದ ವಾದ ಸರಣಿಯಿಂದ ಒಂದಂಶ ಸ್ಪಷ್ಟವಾಗಿದೆ. ಅದು ಪೂರ್ವಭಾವಿಯಾಗಿಯೇ ತೀರ್ಮಾನಕ್ಕೆ ಬಂದಿರುವ ವಿಷಯದ ಸಮರ್ಥನೆಗಾಗಿ ಕಾರಣಗಳನ್ನೂ ವಾದಗಳನ್ನು ಹುಡುಕುವುದು. ತಮ್ಮ ಸಂಪಾದಕೀಯದಲ್ಲಿ ವ್ಯಕ್ತವಾಗಿರುವ ಅಂಶಗಳೇ ಸರಿಯೆಂಬ ಭ್ರಾಂತಿಪಡುವ ಜನರಿಗೆ, ಅದು ಹಾಗಲ್ಲ; ಅದಕ್ಕೆ ಬೇರೆ ಮುಖವೊಂದಿದೆಯೆಂದು ತೋರಿಸುವುದಕ್ಕೆ. ಹಾಗಾಗಿ ಈ ಕಾಗದ ಬರೆಯುತ್ತಿದ್ದೇನೆ.

"ಪೀಠಿಕೆ ದೊಡ್ಡದಾಯಿತೆಂದು ಕಾಣುತ್ತೆ, ಕ್ಷಮಿಸಿ.

"ತಮ್ಮ ಸಂಪಾದಕೀಯದ 'ಕೇಂದ್ರದ ದೃಷ್ಟಿ' ಎಂಬ ಭಾಗದಲ್ಲಿ ಅಡಕವಾಗಿರುವ ತತ್ವ ಯಾರಾದರೂ ಒಪ್ಪತಕ್ಕದ್ದು. ಆ ತತ್ವವನ್ನು ಬಳ್ಳಾರಿಯ ಕನ್ನಡಿಗರಿಗಷ್ಟೇ ಅನ್ವಯಿಸಿ ಎಂದು ಹೇಳುವ ಪ್ರಯತ್ನ ಮಾಡಿದ್ದೀರಿ. ಅದನ್ನು ಮೈಸೂರು ಜನರಿಗೂ ಅನ್ವಯಿಸಿ ಎಂದು ಹೇಳುತ್ತೇನೆ, ನಾನು. 'ಜನರ ಅಪೇಕ್ಷೆಗೆ ವಿರೋಧವಾಗಿ ಅವರಿರುವ ಪ್ರದೇಶವನ್ನು ಅವರು ಒಲ್ಲದ ಪ್ರಾಂತದಲ್ಲಿ ಸೇರಿಸುವುದು ಜನಕ್ಕೂ ಒಳ್ಳೆಯದಲ್ಲ, ಅವರನ್ನು ಒಳಗೊಳ್ಳುವ ಸೋದರ ಪ್ರಾಂತಕ್ಕೂ ಒಳ್ಳೆಯದಲ್ಲ, ಇದಕ್ಕೆ ಒಪ್ಪುವ ಕೇಂದ್ರ ಸರ್ಕಾರಕ್ಕೂ ಒಳ್ಳೆಯದಲ್ಲ' ಎಂತಹ ಸತ್ಯ ನುಡಿಗಳವು! ಈ ಮಾತನ್ನು ಮೈಸೂರಿಗೂ ಅನ್ವಯಿಸಿ ಎಂದು ಮಾತ್ರ ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ. 'ಆಡಳಿತದ ಸೌಕರ್ಯ, ಆರ್ಥಿಕ ಸೌಕರ್ಯ, ಸಂಸ್ಕೃತಿ ಸಂಪರ್ಕ ಇವೆಲ್ಲ ಜನರ ಇಷ್ಟ ಎಂಬಲ್ಲೆ ಅಡಗಿವೆಯಷ್ಟೇ? ಮೈಸೂರಿನ ಜನ ಆಡಳಿತ ಸೌಕರ್ಯಕ್ಕಾಗಿ ಮುಂದಾದರೂ ಹುಬ್ಬಳ್ಳಿ, ಧಾರವಾಡ ಬೇಡ, ಎಂದೆಂದಿಗೂ ಬೆಂಗಳೂರೇ ಇರಲಿ

ಎನ್ನುತ್ತಾರೆ. . . . ಮಾನ್ಯರೇ, ತಾವು ಹೇಳಿರುವಂತೆ, 'ಪ್ರಜಾಪ್ರಭುತ್ವದ ಎಲ್ಲ ನಿರ್ಣಯಕ್ಕೂ ಶಕ್ತಿ ಬರುವುದು, ಜನತೆಯ ಸಮ್ಮತಿಯಿಂದ' ಮೈಸೂರು ಯಾವ ಆಡಳಿತದಲ್ಲಿರಬೇಕೆಂದು ಹೇಳುವ ಅಧಿಕಾರ ಮೈಸೂರು ಜನಕ್ಕಿರಬೇಕೆ ಹೊರತು' ಅವರ ಸಮ್ಮತಿಯಿಲ್ಲದೆ ಬೇರೆ ಯಾರಲ್ಲಿಯೂ ಈ ಅಧಿಕಾರ ಮೂಡುವುದು ಸಾಧ್ಯವಿಲ್ಲ' ಇಷ್ಟೇ ಜನ ಈ ಪಕ್ಷ, ಇಷ್ಟೇ ಜನ ಆ ಪಕ್ಷ ಎಂದು ಹೇಳುವುದಕ್ಕೆ ಯಾರಿಗೂ ಆಧಾರವಿಲ್ಲ' ಎಂದು ತಾವೇ ಹೇಳಿದ್ದೀರಿ, 'ಆದರೆ ಒಟ್ಟು ಜನರನ್ನು ತೆಗೆದುಕೊಂಡರೆ ಮೈಸೂರು ಸೇರಿದ ಕರ್ಣಾಟಕವನ್ನು ಬಯಸುವವರ ಸಂಖ್ಯೆ ಹೆಚ್ಚಾಗಿದೆ' ಎಂದು ಅಭಿಪ್ರಾಯ ಪಡುತ್ತೀರಿ. 'ಒಟ್ಟುಜನ' ಎನ್ನುವಾಗ ತಾವು ಮೈಸೂರಿನವರಲ್ಲದ ಕನ್ನಡಿಗರನ್ನೂ ಸೇರಿಸಿಕೊಂಡು ಮಾತನಾಡುವಂತೆ ಕಾಣುತ್ತೆ. ಯಾವ ಜನ ಎಲ್ಲಿರಬೇಕೆಂಬುದನ್ನು ಆ ಜನವೇ ನಿರ್ಧರಿಸಬೇಕೆಂಬ ನಿಮ್ಮ ತತ್ವದ ಪ್ರಕಾರ ಮೈಸೂರು ಎಲ್ಲಿರಬೇಕೆಂಬುದನ್ನು ಮೈಸೂರು ಜನ ನಿರ್ಧರಿಸಬೇಕೆ ಹೊರತು, ಮೈಸೂರನ್ನು ಕಬಳಿಸಲು ಹವಣಿಸುತ್ತಿರುವ ಹೊರಗಿನ ಕನ್ನಡಿಗರಲ್ಲ. ಹಿರಿಯರೆ, ತಾವೇ ಹೇಳುವಂತೆ 'ಪ್ರಾಂತಗಳ ಪುನರ್ಘಟನೆಯ ಈ ವ್ಯಾಪಾರದಲ್ಲಿ ನಿರ್ವಿವಾದವಾದ ಸೂತ್ರ ಒಂದೇ, ಇನ್ನೊಂದಿಲ್ಲ. ಆಯಾ ಪ್ರದೇಶದ ಜನರ ಇಚ್ಛೆಯನ್ನು ತಿಳಿದು ಅದರಂತೆ ನಡೆಸುವುದು. ಅದನ್ನು ಬಿಟ್ಟು ಬೇರೆ ಇನ್ನೇನೆ ಮಾಡಿದರೂ ಕಷ್ಟ ತಪ್ಪಿದ್ದಲ್ಲ. 'ಮೈಸೂರು ಕರ್ಣಾಟಕದಲ್ಲಿ ಸೇರಿಹೋಗಬೇಕೆನ್ನುವ ಮಾತಿಗೆ ಹೆಚ್ಚು ಮಂದಿ ಇದ್ದಾರೆ ಎನ್ನುವುದಕ್ಕೆ ಮೈಸೂರಿನ ಶಾಸನ ಸಭೆಯಲ್ಲಿ ಚರ್ಚೆ ನಡೆದಿರುವುದರಲ್ಲಿ ಈ ಕಲ್ಪನೆಗೆ ಆಧಾರ ದೊರೆಯುತ್ತದೆ ಎಂದು ವಾದಿಸುತ್ತೀರಿ. ನಿಮ್ಮ ವಾದ ನೀವೆ ಹೇಳುವಂತೆ ಕೇವಲ 'ಕಲ್ಪನೆ'ಯೇ ಹೊರತು ಸತ್ಯಾಂಶವಲ್ಲ;ಇದನ್ನು ನೀವು ಬಲ್ಲಿರೆಂದೇ ನನ್ನ ಭಾವನೆ. ವಾದಕ್ಕಾಗಿ ಅದನ್ನು ಉಪಯೋಗಿಸಿ ಕೊಂಡಿದ್ದೀರೆಂದು ನೆನೆಸುತ್ತೇನೆ. ಏಕೆಂದರೆ, ಮೈಸೂರು ಶಾಸನಸಭೆಯಲ್ಲೇ ಆಗಲಿ, ಇನ್ನೆಲ್ಲಿಯೇ ಆಗಲಿ ಈ ವಿಚಾರದಲ್ಲಿ ಅಭಿಪ್ರಾಯ ವ್ಯಕ್ತಪಡಿಸಿರುವವರಲ್ಲಿ ಎಷ್ಟೆಷ್ಟು ಮಂದಿ ಎಂತೆಂತಹ ಇಕ್ಕಟ್ಟಿಗೆ ಸಿಕ್ಕಿ ಬಿದ್ದಿದ್ದರೆಂಬುದು ಈಗ ಸರ್ವವಿದಿತವಾಗಿದೆ. ಶಿಸ್ತಿನ ಸಿಪಾಯಿತನ, ಶಿಸ್ತು ಭಂಗಕ್ಕಾಗಿ ಕಾರ್ಯಕ್ರಮ, ಹಿರಿಯರ ಆಣತಿಗೆ ತಲೆಬಾಗುವುದು, ಇತ್ಯಾದಿ ನಾನಾ ಕಾರಣಗಳಿಂದ ಅನೇಕ ವ್ಯಕ್ತಿಗಳು ಅವರವರ ಮನೋದಾರ್ಢ್ಯಕ್ಕನುಗುಣವಾಗಿ ನಡೆದುಕೊಂಡಿದ್ದಾರೆ. (ಕಾಂಗ್ರೆಸ್ ವರಿಷ್ಠ ಮಂಡಳಿಯು ಹಾಕಿದ್ದ ಶರತ್ತು) ಅಂತಹವರಲ್ಲಿ ಮೌನತಾಳಿದ್ದವರು ಎಷ್ಟೋ ಮಂದಿ! ಇದೆಲ್ಲ ಎಲ್ಲರಿಗೂ ತಿಳಿದಿರುವ ವಿಷಯ ಆದುದರಿಂದ, ನಿಜವಲ್ಲದ ಈ 'ಬಹುಮತಾಭಿಪ್ರಾಯಕ್ಕೆ' ನೀವೂ ಬೆಲೆ ಕೊಟ್ಟಿರುವುದು ವಾದವೇ ಹೊರತು ಮತ್ತೇನು?

ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಶ್ರೀ ಎ.ಜಿ.ರಾಮಚಂದ್ರರಾಯರು ಮತ್ತು ನನ್ನನ್ನು ಒಳಗೊಂಡಂತೆ ನಮ್ಮ ಮೈಸೂರು ಸೋದರರು ಹಲವರ ನಿವೇದನೆಯನ್ನು ಕೇಳಿ, ಎಲ್ಲ ದೃಷ್ಟಿಯಿಂದಲೂ ವಿಷಯವನ್ನು ಪರಿಶೀಲಿಸಿ, ಒಟ್ಟಿನಲ್ಲಿ ಕರ್ನಾಟಕ ಒಂದೇ ಪ್ರಾಂತ ಆಗಿರತಕ್ಕದ್ದು ಎಲ್ಲರಿಗೂ ಹಿತಕರ ಎಂಬ ನಿರ್ಧಾರವನ್ನು ಧೇಬರ್ ಸಮಿತಿ ಹೇಳಿದೆ' ಎಂದು ತಾವು ಸಾರಿದ್ದೀರಿ. ಫಜಲಾಲಿ ಸಮಿತಿಯ ವರದಿಯಲ್ಲಡಕವಾಗಿರುವ ಸಲಹೆಯನು, ನಾವು ಒಪ್ಪಬೇಕೆಂದು ಕಾಂಗ್ರೆಸ್ ನಾಯಕರು ತಮ್ಮಷ್ಟಕ್ಕೆ ತಾವೇ

ನಿರ್ಧರಿಸಿಕೊಂಡಿದುದ್ದಕ್ಕೆ ಅನೇಕ ನಿದರ್ಶನಗಳಿವೆ. ಕಾಂಗ್ರೆಸ್ ಅಧ್ಯಕ್ಷ ಶ್ರೀ ಧೇಬರ್‌ರವರು ಇಲ್ಲಿಗೆ ಬಂದಿದ್ದಾಗ, ವರದಿಯನ್ನು ಅಂಗೀಕರಿಸಬೇಕೆಂದು ನಮ್ಮೊಡನೆ ವಾದಿಸಿದರು. ಬಹಿರಂಗ ಸಭೆಗಳಲ್ಲಿ ತಮ್ಮ ವಾದಸರಣಿಗೆ ಅನುಕೂಲವಾಗುವ ಅನೇಕ ಉಪಮಾನ ಉಪಮೇಯಗಳನ್ನು ಉದಹರಿಸಿದ್ದಾರೆ. ಇವೆಲ್ಲ ಪತ್ರಿಕೆಗಳಲ್ಲಿ ವರದಿಯಾಗಿವೆ. ಅವರು ಮೈಸೂರು ಬಿಟ್ಟು ಹೊರಡುವ ಮುನ್ನ ನಡೆಸಿದ ಮುಖಂಡರ ಸಭೆಯಲ್ಲಿ ಮೈಸೂರು ಕರ್ನಾಟಕದಲ್ಲಿ ಬೆರೆತು ಹೋಗುವುದಕ್ಕೆ ಪ್ರಬಲವಾದ ವಿರೋಧವಿದೆಯೆಂದು ಅವರು ಮನಗಂಡ ಮೇಲೆ, ಮೈಸೂರು ಶಾಸನ ಸಭೆಯ, ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ತೀರ್ಮಾನಗಳನ್ನು ಕಾದುನೋಡುವುದಾಗಿಯೂ, ಆ ಸಭೆಗಳಲ್ಲಿ ಅಭಿಪ್ರಾಯ ಸುಲಲಿತವಾಗಿ ಮೂಡಲು ಅವಕಾಶ ಕಲ್ಪಿಸುವ ಉದ್ದೇಶದಿಂದ ಕೆಲವು ಸಲಹೆ ನೀಡುವುದಾಗಿ ಹೇಳಿದರು. ಈ ವಿಷಯವೂ ಶ್ರೀ ಧೇಬರ್‌ರವರೇ ಹೊರಡಿಸಿರುವ ಹೇಳಿಕೆಯಲ್ಲಿ ನಮೂದಾಗಿದೆ. ಇದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ನಾವು ಕೆಲವರು ದೆಹಲಿಗೆ ಹೋಗಿದ್ದಾಗಲೂ ಅವರು ಇದೇ ಮಾತು ಹೇಳಿದರು. 'ಕರ್ನಾಟಕದ ಏಕೀಕರಣಕ್ಕೆ ಸಂಬಂಧಿಸಿದಂತೆ ನೀವು ಹೋಗಿ ಶಾಸನ ಸಭೆ, ಕಾಂಗ್ರೆಸ್ ಸಮಿತಿಗಳಲ್ಲಿ ಚರ್ಚಿಸಿ ಒಂದು ತೀರ್ಮಾನಕ್ಕೆ ಬನ್ನಿ, ಆ ಮೇಲೆ ನಿಮ್ಮ ನಿರ್ಧಾರ ತಿಳಿದುಕೊಂಡು ನಿಮ್ಮೊಡನೆ ಚರ್ಚಿಸುತ್ತೇನೆ' ಎಂದು ಹೇಳಿದರು. ಆದರೆ ದೆಹಲಿಯಿಂದ ಹಿಂದಿರುಗಿದ ಮೇಲೆ ಚರ್ಚಿಸಿ ನಿರ್ಧಾರ ತೆಗೆದುಕೊಳ್ಳಲು ಬಿಡದೆ ಫಜಲಾಲಿ ವರದಿಗೆ ವಿರುದ್ಧವಾಗಿ ಕಾಂಗ್ರೆಸ್‌ನವರು ಮಾತನಾಡಕೂಡದು, ಓಟು ಮಾಡಕೂಡದೆಂದು ಹೈಕಮಾಂಡ್‌ನವರು ಸುಗ್ರೀವಾಜ್ಞೆಯನ್ನು ಹೊರಡಿಸಿದರು. ಇದು ನಮ್ಮ ನಿವೇದನೆಯನ್ನು ಕೇಳಿ, ನಮ್ಮ ತೀರ್ಮಾನ ತಿಳಿದು ಮಾಡಿದುದಾಗಿರಲಿಲ್ಲ. ಭರವಸೆ ಕೊಟ್ಟ ರೀತಿ ಚರ್ಚಿಸಲು ಅವಕಾಶ ನೀಡಲಿಲ್ಲ. ರಾಜ್ಯಾಂಗ ದತ್ತವಾಗಿರುವ ನಮ್ಮ ವಾಕ್ ಸ್ವಾತಂತ್ರ್ಯಕ್ಕೆ ಅಡ್ಡಿ ಬಂದು, ಆಜನ್ಮಸಿದ್ಧವಾದ ನಮ್ಮ ಓಟಿನ ಹಕ್ಕನ್ನು ಕಿತ್ತುಕೊಂಡು, 'ಬಹುಮತ' ಬರುವಂತೆ ಸಂಚು ಮಾಡಿ ತೆಗೆದುಕೊಂಡ ತೀರ್ಮಾನಕ್ಕೆ ಎಷ್ಟು ಬೆಲೆ ಕೊಡಬೇಕೋ ಅಷ್ಟು ಬೆಲೆಯನ್ನು ಕೊಡಬೇಕೇ ಹೊರತು ಅದಕ್ಕಿಂತ ಹೆಚ್ಚಿನ ಬೆಲೆಕೊಡುವುದು ಸರಿಯಾದುದಲ್ಲ. ಇದರಿಂದ ಹೈಕಮಾಂಡ್ ನವರ ಆಜ್ಞೆಯನ್ನು ಪಾಲಿಸಿ ನಂನಮ್ಮ ಮನಸ್ಸಾಕ್ಷಿಗೆ ವಿರೋಧವಾಗಿ ನಡೆದುಕೊಂಡ ನಮಗೂ ಜನತೆಗೂ ದ್ರೋಹವೆಸಗಿದಂತಾಗುವುದು. ಇದನ್ನು ನೀವು ಅರ್ಥ ಮಾಡಿಕೊಳ್ಳುವಿರೆಂದು ನಾನು ನಂಬುತ್ತೇನೆ. ಕನ್ನಡ ಮಾತಾಡುವ ಜನರು ಎರಡು ಸಂಸ್ಥಾನಗಳನ್ನು ಏರ್ಪಡಿಸಿಕೊಂಡರೆ ಎಲ್ಲ ಹುದ್ದೆಗಳು, ಸಂಸ್ಥೆಗಳು ಎರಡೆರಡಾಗಿ ಹೆಚ್ಚು ವೆಚ್ಚಕ್ಕೂ ಕಾರಣವಾಗುತ್ತೆಂಬ ವಾದ ಹೂಡಿದ್ದೀರಿ. ಈ ವಾದ ಹೊಸದಲ್ಲ. ನಿರ್ವಿವಾದವಾದ ಮಾತೂ ಅಲ್ಲ. ಶಾಸನ ಸಭೆ ಚಿಕ್ಕದಾಗಿದ್ದರೆ ಸದಸ್ಯರ ಮಾಸಾಶನ ಭತ್ಯ ಇವೆಲ್ಲ ಏಷ್ಟಾಗುವುದೋ, ಶಾಸನ ಸಭೆ ಅದರ ಎರಡರಷ್ಟಾದರೆ ಆ ಎಲ್ಲ ವೆಚ್ಚವೂ ಎರಡರಷ್ಟಾಗುವುದು. ಈ ಮಾತು ಮಂತ್ರಿಮಂಡಲ, ಹೈಕೋರ್ಟು ಮುಂತಾದವುಗಳಿಗೂ ಅನ್ವಯಿಸುವುದು. ಈಗ ಮೈಸೂರಿನಲ್ಲಿ ಆರು ಜನ ಮಂತ್ರಿಗಳಿದ್ದರೆ, ಕರ್ನಾಟಕ ದೊಡ್ಡದಾದರೆ, ಅಲ್ಲಿ ೧೨–೧೪ಜನ ಮಂತ್ರಿಗಳಿರುತ್ತಾರೆ. ಈಗ ಮೈಸೂರು ಹೈಕೋರ್ಟಿನಲ್ಲಿ ೪–೫ ಜನ ನ್ಯಾಯಾಧೀಶರಿದ್ದರೆ ಮೈಸೂರು ಸೇರಿದ ಕರ್ನಾಟಕದಲ್ಲಿ ೧೦–೧೨ ಜನ ನ್ಯಾಯಾಧೀಶರು ಇರಬೇಕಾಗುತ್ತದೆ. ಇಲಾಖೆಗಳ ಮುಖ್ಯಾಧಿಕಾರಿಗಳು ಒಬ್ಬೊಬ್ಬರೆ ಆದರೂ ಅವರ ಕಾರ್ಯವ್ಯಾಪ್ತಿಯ

ವಿಸ್ತೀರ್ಣ ದೊಡ್ಡದಾಗುವುದರಿಂದ ಅದಕ್ಕನುಗುಣವಾಗಿ ಸಂಬಳ, ಭತ್ಯ ಹೆಚ್ಚಾಗುವುದು. ಹೀಗಾಗಿ ಮೈಸೂರು ಕರ್ನಾಟಕದಲ್ಲಿ ಸೇರುವುದರಿಂದ ನೀವು ಹೇಳುವ 'ತಲೆಯ ವೆಚ್ಚ' ಎಷ್ಟು ಮಾತ್ರಕ್ಕೂ ಕಡಿಮೆಯಾಗುವುದಿಲ್ಲ. ಇನ್ನು ರಾಜ ಪ್ರಮುಖರು ಮತ್ತು ಗವರ್ನರರ ಮಾತು. ಮೈಸೂರು ರಾಜ ಪ್ರಮುಖರು ರಾಜ್ಯಶಾಸನ ಪ್ರಕಾರ ಬರೀ ರಾಜಪ್ರಮುಖರಾಗಿರುವುದಾದರು ಮೈಸೂರು ಜನರಿಗೆ ಅವರು ಇನ್ನೂ ಮಹಾರಾಜರಾಗಿಯೇ ಉಳಿದಿದ್ದಾರೆ. ಗವರ್ನರುಗಳಿರುವ ಸಂಸ್ಥಾನಗಳಲ್ಲಿ ನಡೆಯುವ ದಸರಾ ಆಚರಣೆಗು ಮೈಸೂರಲ್ಲಿ ನಡೆಯುವ ದಸರ ಮಹೋತ್ಸವದ ವಿಜೃಂಭಣೆ, ವೈಖರಿ. ಅದರಿಂದ ಮೈಸೂರಿನವರಿಗೆ ಮಾತ್ರವಲ್ಲ ಇಂಡಿಯಾದ ಏಕೆ ಅದನ್ನು ನೋಡಿದ ವಿಶ್ವದ ಬೇರೆ ಬೇರೆ ದೇಶಗಳ ಜನರಿಗಾಗುವ ಆನಂದ ಇವುಗಳೆಲ್ಲದರೊಡನೆ ಹೋಲಿಸಿ ನೋಡಿ, ಆಗ ನಿಮಗೇ ಗೊತ್ತಾಗುತ್ತೆ. ಶ್ರೀಮನ್ಮಹಾರಾಜರು ಹಾಗೆಯೇ ಉಳಿಯಲಿ ಎನ್ನುವುದು. ಅಲ್ಲದೆ ಈ ರಾಜರ ಸ್ಥಾನ ಪ್ರಜಾಪ್ರಭುತ್ವದಲ್ಲಿ ಅಸಮಂಜಸವೂ ಅಲ್ಲವಷ್ಟೆ. ಪ್ರಜಾಪ್ರಭುತ್ವ ಶತಮಾನಗಳಿಂದ ಆಚರಣೆಯಲ್ಲಿರುವ ಇಂಗ್ಲೆಂಡಿನಲ್ಲಿ ದೊರೆತನವನ್ನು ನಿರ್ನಾಮ ಮಾಡಿಲ್ಲವೆಂಬುದು ನನಗಿಂತ ಮೊದಲು ನಿಮಗೆ ತಿಳಿದಿರುವ ವಿಷಯ.

ಕಾಯೌ ಶ್ರೀಗೌರಿ ನಾಡಗೀತೆ, ಮೈಸೂರು ಧ್ವಜ, ಇವು ಅಳಿಸಿ ಹೋದಾಗ ಒಂದು ಅಡ್ಡಿಯ ಮಾತನ್ನು ಆಡಲಿಲ್ಲವೆಂದು ನನ್ನ ಹೆಸರು ಹೇಳಿದ್ದೀರಿ ನಿಜ. ಆದರೆ ಒಂದು ಸಾರಿ ಮುಗ್ಗರಿಸಿದ ಮಾತ್ರಕ್ಕೆ ಇನ್ನೊಂದು ಸಾರಿ ಬಾವಿಗೊ ಹಳ್ಳಕ್ಕೋ ಬಿದ್ದು ಪ್ರಾಣವನ್ನೇ ಕಳೆದುಕೊಳ್ಳಬೇಕೆಂಬುದೇ ನಿಮ್ಮ ಅಭಿಪ್ರಾಯ? 'ಮೈಸೂರಿನ ಹಿರಿಮೆಯನ್ನು ಬಯಸುವವರು ಇಡೀ ಭರತ ವರ್ಷವೇ ಮೈಸೂರು ಎನ್ನಬೇಕು' ಎನ್ನುತ್ತೀರಿ. ಹಾಗಾದರೆ ಕನ್ನಡಿಗರು, ಆಂಧ್ರರು, ತಮಿಳರು ಇತ್ಯಾದಿ ಎಲ್ಲರೂ ಭಾರತೀಯರೇ. ಆದುದರಿಂದ ಯಾವ ಭಾಗ ಎಲ್ಲಿದ್ದರೇನು? ಆಡಳಿತ ದೃಷ್ಟಿಯಿಂದ ಪ್ರಾಂತ್ಯಗಳ ವ್ಯವಸ್ಥೆಯಾಗಲಿ, ಆಂಧ್ರರಾಗಲೀ ತಮಿಳರಾಗಲೀ ಹೊರಗಿನವರೆನ್ನಬೇಡಿ. ಅಷ್ಟೇ ಅಲ್ಲ, ಈ ಭಾಷಾವಾರು ಸರ್ಕಾರಗಳೇ ಬೇಡ. ಇಡಿ ಭಾರತಕ್ಕೆಲ್ಲ ಒಂದೇ ಸರ್ಕಾರವಿರಲಿ ಎಂದು ರಾಜಾಜಿ ಹೇಳಿಲ್ಲವೆ? ಈ ವ್ಯಾಜ್ಯವೇಕೆ? ಈ ಗೊಂದಲವೇಕೆ?

ಕಡೆಯದಾಗಿ ಒಂದು ಮಾತು. 'ಕರ್ನಾಟಕ ಒಂದಾದರೆ ಏನೋ ಆಗಿಬಿಡುತ್ತದೆ ಎಂಬ ಅಸ್ಪಷ್ಟ ಭೀತಿಯಿಂದ 'ಈ ರೀತಿ ಮೈಸೂರು ಹೀಗೆಯೇ ಇರಲಿ ಎನ್ನುತ್ತಿದ್ದಾರೆ ಎಂಬ ಅರ್ಥದಲ್ಲಿ ಮಾತಾಡುತ್ತಿದ್ದೀರ ಎಂದಿದ್ದೀರಿ. ನಮ್ಮ ಭೀತಿ ಅಸ್ಪಷ್ಟವಾದುದಲ್ಲ. ಸ್ಪಷ್ಟವಾದುದು. ಮೈಸೂರಿನ ಜನ ಹೆಚ್ಚಿಗೆ ಕಂದಾಯ ತೆರಿಗೆ ತೆರಬೇಕಾಗುತ್ತದೆ. ಅಧಿಕಾರಿಗಳ ಸಂಬಳ ಸಾರಿಗೆ ಹೆಚ್ಚಾಗಿ ಆ ಭಾರವೂ ಮೈಸೂರು ಜನತೆಯ ಮೇಲೆ ಬೀಳುವುದು. ಮೈಸೂರಿನವರಲ್ಲದ ಕನ್ನಡಿಗರು ಈಗಾಗಲೇ ಆ ಭಾರ ಹೊತ್ತಿದ್ದಾರೆ. ಮೈಸೂರು ಕಾನೂನು ಕಟ್ಟಲೆಗಳಿಗಿಂತ ಹೆಚ್ಚು ಕಠಿಣವಾದ, ಜನರಿಗೆ ತೊಂದರೆಕೊಡುವ ಕಾನೂನು ಕಟ್ಟಲೆಗಳು, ಸಮನ್ವಯ ದೃಷ್ಟಿಯಿಂದ, ಮೈಸೂರು ಜನರ ನಡೆಯನ್ನು ಬಿಗಿಯುತ್ತವೆ. ನಮ್ಮ ಹಿರಿಯರು ಸಾಲ ಮಾಡಿ ಬಡ್ಡಿಗೆ ಹಣ ತಂದು ಅಭಿವೃದ್ಧಿಗೆ ತಂದಿರುವ ಕೆಲಸ ಕಾರ್ಯಗಳ ಪೂರ್ಣಫಲವನ್ನು ಅದರ ಗೊಡವೆ ಇಲ್ಲದಿದ್ದವರೊಡನೆ ಹಂಚಿಕೊಳ್ಳಬೇಕಾಗುವುದು. ವೇದಾಂತ

ಉಪದೇಶ ಮಾಡುವಷ್ಟು, ಅನುಸರಿಸಿ ನಡೆಯುವುದು ಸುಲಭವಲ್ಲವೆಂಬುದು ತಿಳಿವಳಿಕಸ್ಥರಾದ ನಿಮಗೆ ಗೊತ್ತಿಲ್ಲದಿಲ್ಲ.

ಮಾನ್ಯರೆ ಬರವಣಿಗೆ ಹೆಚ್ಚಾಯಿತು. ಇದು ನಿಮ್ಮಂತಹ ಹಿರಿಯರ ಮುಂದೆ 'ತಲೆಹರಟೆ'ಯಾಗಿ ಕಾಣಬಹುದೇನೋ! ಆದರೂ ಕರ್ತವ್ಯ ಭ್ರಷ್ಟನಾಗಲಾರೆ. ಎದುರು ಮಾತಾಡಿದುದಕ್ಕಾಗಿ ಕ್ಷಮೆಯಿರಲಿ ಪ್ರೀತಿವಿಶ್ವಾಸ ಎಂದಿನಂತಿರಲಿ.

ಇಂತಿ ಸೇವಕನ ನಮಸ್ಕಾರಗಳು

ಹೆಚ್.ಕೆ.ವೀರಣ್ಣಗೌಡ

ಯಾವುದೇ ಒಂದು ವಿಚಾರ ಅಥವ ವಾದ ಜನರ ಬಹುಮತ ಅಭಿಪ್ರಾಯ ಪಡೆಯದ ಹೊರತು ಅದು ಸಿದ್ಧಾಂತವಾಗುವುದಿಲ್ಲ. ಪ್ರಜಾಪ್ರಭುತ್ವದ ಆಡಿಪಾಯ ಪ್ರಜೆಗಳ ಅಭಿಪ್ರಾಯದಲ್ಲಿ ಮೂಡಿದೆ. ಈ ಹಿನ್ನೆಲೆಯಲ್ಲಿ ಭರತವರ್ಷ ಒಂದು ರಾಷ್ಟ್ರ, ರಾಷ್ಟ್ರದ ಕ್ಷೇಮಕ್ಕಾಗಿ ಪ್ರಾಂತಗಳು ಹೇಗಿರಬೇಕು ಎನ್ನುವುದನ್ನು ರಾಷ್ಟ್ರದ ಬಹುಜನ ನಿರ್ಧರಿಸುತ್ತಾರೆ. ಆ ಬಹುಮತವನ್ನು ರೂಪಿಸುವುದಕ್ಕೆ ಒಂದೊಂದು ಪ್ರಾಂತದ ಬಹುಜನ ತಮ್ಮ ಇಷ್ಟ ಏನು ಎನ್ನುವುದನ್ನು ತಿಳಿಸುತ್ತಾರೆ. ಕನ್ನಡ ಪ್ರಾಂತದ ಇಷ್ಟವನ್ನು ಸೂಚಿಸುವುದರಲ್ಲಿ ಮೈಸೂರಿನ ಒಳಗಿನ ಅನೇಕ ಜನ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾರೆ. ಮೈಸೂರಿನ ಕೆಲವು ಜನರ ಅಭಿಪ್ರಾಯ ಈ ಅಭಿಪ್ರಾಯಕ್ಕೆ ವಿರೋಧವಾಗಿರಬಹುದು. ಆದರೆ ರಾಷ್ಟ್ರದ ಬಹುಮತ, ಪ್ರಾಂತದ ಬಹುಮತ ಯಾವುದನ್ನು ಬಯಸುತ್ತದೋ ಅದೇ ಜನರ ಇಷ್ಟ.[೮೩] ಎಂಬ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತಾ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಮುಂದುವರೆದು ವೀರಣ್ಣಗೌಡರ ವಾದಕ್ಕೆ ಪ್ರತಿಯಾಗಿ ಈ ರೀತಿ ಮುಂದುವರೆಸಿದ್ದಾರೆ. . . . ನಮ್ಮ ಹಿರಿಯರು ಕಷ್ಟಪಟ್ಟು ಕಟ್ಟಿದ ನಮ್ಮ ಸಂಪತ್ತು ನಮ್ಮದೆಂದು ಬೇರೆಯಾಗಿ ಉಳಿದಿಲ್ಲ. ಅಷ್ಟೇ ನಿಜವಾಗಿ ನಾವು ನಮ್ಮ ಗಳಿಕೆಯಿಂದಲೇ ಉದ್ಧಾರವಾಗುತ್ತೇವೆಂದು ಹೇಳಬೇಕಾಗಿಯೂ ಇಲ್ಲ. ಆರ್ಥಿಕವಾಗಿ ಬೇರೆಯಾಗಿ ಬಾಳುವುದು ಹೇಗೆ ಅಸಾಧ್ಯವೋ ಹಾಗೆ ಸಂಸ್ಕೃತಿಯ ದೃಷ್ಟಿಯಿಂದಲೂ ಅದು ಅಸಾಧ್ಯವೇ ಆಗಿದೆ. ಹಿಂದೆ ತಪ್ಪು ಮಾಡಿದ ಕಾರಣದಿಂದ ಈಗ ಮತ್ತಷ್ಟು ತಪ್ಪು ಮಾಡೋಣವೇ ಎಂದು ಪ್ರಶ್ನೆಮಾಡಿ ಪ್ರಯೋಜನವಿಲ್ಲ. ಒಂದು ದಿನ ಯಾವುದೋ ಕಾರಣದಿಂದ ನಾವು ಒಂದು ದಿಕ್ಕಿನಲ್ಲಿ ಇಟ್ಟಹೆಜ್ಜೆಯ ಪರಿಣಾಮವಾಗಿ ಹತ್ತು ಮಾರ್ಪಾಡು ಮಾಡಿದ್ದಾಗಿದೆ. ಅದನ್ನು ಈಗ ತಪ್ಪಿಸುವುದಕ್ಕೆ ದಾರಿಯಿಲ್ಲವೆಂದು ಮೈಸೂರಿನ ಮಾರ್ಪಾಟಿನ ಬಗ್ಗೆ ವಿವೇಚಿಸುತ್ತಾ, ಮೈಸೂರಿನ ವಿಶಿಷ್ಟ ಲಕ್ಷಣಗಳನ್ನು ತೋರೆದದ್ದಾಯಿತು. ಇನ್ನು ಲಕ್ಷಣವಿಲ್ಲದ ವೈಶಿಷ್ಟ್ಯವೊಂದನ್ನು ಸಿದ್ಧಾಂತ ಮಾಡಿ ಬರುವ ಫಲವೇನು? ಎಂದು ಮಾಸ್ತಿಯವರು ವೀರಣ್ಣಗೌಡರನ್ನು ಪ್ರಶ್ನಿಸಿದ್ದಾರೆ.

ಒಂದು ಕರ್ನಾಟಕವಾಗುವುದರಿಂದ ಮೈಸೂರ ಜನರ ಮೇಲಿನ ಹೊರೆ ಹೆಚ್ಚುತ್ತದೆ ಎನ್ನುವುದು ಒಂದು ರೀತಿಯಿಂದ ನಿಜವೆಂದು ಕಾಣಬಹುದು. ಆದರೆ ಸಂಬಳ ಸಾರಿಗೆಯ ಇಂದಿನ ವ್ಯತ್ಯಾಸಗಳು ಮುಂದೂ

---

[೮೩] ಜೀವನ. ಮಾಸ್ತಿವೆಂಕಟೇಶ್ ಅಯ್ಯಂಗಾರ್. ಪು.೧೬೦

ನಿಲ್ಲಬಲ್ಲವೆಂದು ನಾವು ತಿಳಿಯಬಾರದು. ಇನ್ನು ಹತ್ತು ಇಪ್ಪತ್ತು ವರ್ಷ ಎನ್ನುವ ವೇಳೆಗೆ ರಾಷ್ಟ್ರದ ಈ ಭಾಗದಲ್ಲಿ ಇದರ ಸುತ್ತಿನ ಪ್ರದೇಶಗಳ ಖರ್ಚು ವೆಚ್ಚವೇ ಬಳಕೆಗೆ ಬರುವುದು ದಿಟ.

ಒಟ್ಟಿನಲ್ಲಿ ಮೈಸೂರು ಕರ್ನಾಟಕದಲ್ಲಿ ಬೇರೆಯುವುದರಿಂದ ಭರತವರ್ಷಕ್ಕೆ ತನ್ನದೇ ಸೇವೆ ಸಲ್ಲಿಸಲು ಸುತ್ತು ಐಕ್ಯತೆ ಮೆರೆಯಲು ಅನುವು ಮಾಡಿಕೊಡುವುದರಿಂದ ನಮ್ಮೆಲ್ಲರ ಹಿತವಿದೆ ಎಂಬ ಅರ್ಥ ಬರುವಂತೆ ಹೇಳುವ ಮೂಲಕ ಶ್ರೀಗೌಡರಲ್ಲಿ ಮತ್ತು ಇವರಂತೆ ಮೈಸೂರು ಪ್ರತ್ಯೇಕವಾಗಿ ಇರಬೇಕು ಎಂದು ವಾದಿಸುವ ಮಿತ್ರರಲ್ಲಿ ವಿನಯಪೂರ್ವಕ ವಿಜ್ಞಾಪನೆ ಮಾಡಿಕೊಂಡಿದ್ದಾರೆ.

ಅಲ್ಲದೆ ರಾಜಕೀಯ ಪಕ್ಷದ ಸ್ವರೂಪ ಮತ್ತು ನೀವು ಪ್ರಜಾಸತ್ತಾತ್ಮಕವಾಗಿ ಹೊರ ಹೊಮ್ಮಬೇಕಾಗುತ್ತದೆ ಎಂದು ವೀರಣ್ಣಗೌಡರಿಗೆ ಮಾಸ್ತಿಯವರು ಸಲಹೆಯನ್ನು ನೀಡಿದ್ದಾರೆ.

'ಕಾಂಗ್ರೆಸ್ ವರಿಷ್ಠ ಸಮಿತಿ ಮೈಸೂರಿನ ಕಾಂಗ್ರೆಸ್ ಜನಕ್ಕೆ ತಮ್ಮ ಅಭಿಪ್ರಾಯವನ್ನು ತಿಳಿಸಲು ಸ್ವಾತಂತ್ರ್ಯವನ್ನು ಬಿಡಲಿಲ್ಲ ಎನ್ನುವುದು ಚರ್ಚೆಯ ಮುಖ್ಯ ವಿಷಯಕ್ಕೆ ಸಂಬಂಧಿಸಿದ್ದರೂ ಇಲ್ಲಿ ವಿಸ್ತಾರವಾದ ಪರಿಶೀಲನೆಗೆ ವಿಷಯವಲ್ಲ. ದೇಶದ ಕ್ಷೇಮಕ್ಕಾಗಿ ಒಳ್ಳೆಯ ದಾರಿಯೊಂದು ಬಹುಜನ ಕಾಂಗ್ರೆಸ್ ಪ್ರಮುಖರಿಗೆ ಸರಿ ಕಂಡದ್ದನ್ನು ಉಳಿದ ಕಾಂಗ್ರೆಸ್ ಜನ ಒಪ್ಪಿಕೊಳ್ಳಬೇಕಾಗಿದೆ. ಈ ಉಳಿದವರ ಅಭಿಪ್ರಾಯವೆನ್ನುವುದು ಕೂಡ ಇದೇ ರೀತಿ ಅಂದರೆ ತಮಗೆ ಸರಿ ಕಂಡಿದ್ದನ್ನು ಅವರು ಒಪ್ಪೊಕೊಳ್ಳಬೇಕೆಂಬ ಅಭಿಪ್ರಾಯ. ಇವರಿಗೆ ಮತಕೊಟ್ಟು ಇವರನ್ನು ಆರಿಸಿದವರೆಲ್ಲರೂ ಎಲ್ಲ ವಿವರದಲ್ಲಿ ಇವರಂತೆಯೇ ಯೋಚಿಸುವ ಜನವೇನು? ರಾಜಕೀಯ ಪಕ್ಷ ತನ್ನ ಒಳಗೆ ಎಷ್ಟು ಸ್ವಾತಂತ್ರ್ಯವನ್ನು ಕೊಡಬೇಕು, ಕೊಡಬಹುದು ಎನ್ನುವುದು ಶ್ರೀಗೌಡರಿಗೆ ತಿಳಿದೇ ಇದೆ. ಯಾವ ಮಿತಿ ಸಾಧ್ಯವೋ ಅದಕ್ಕಿಂತ ಹೆಚ್ಚಿನ ಸ್ವಾತಂತ್ರ್ಯಕೊಟ್ಟರೆ ಪಕ್ಷಕ್ಕೆ ನಾಳೆ ಅಧಿಕಾರವಿಲ್ಲ; ಅಧಿಕಾರವಿಲ್ಲವೆಂದ ಮೇಲೆ ಬಲವಿಲ್ಲ, ಬಲವಿಲ್ಲವೆಂದ ಮೇಲೆ ಜೀವ ಇಲ್ಲ. ರಾಜಕೀಯ ಪಕ್ಷಗಳು ಹೀಗೆ 'to be or not to be' ಸಮಸ್ಯೆಯಲ್ಲಿ ಸಿಕ್ಕಿ ತೊಳಲುತ್ತವೆ. ಈ ತೊಳಲಾಟ ಬೇಡವೆಂದವರು ಪಕ್ಷಗಳಲ್ಲಿ ನಡೆಯುವಂತಿಲ್ಲ".[೮೪]

ಈ ರೀತಿಯ ವಾದ ವಿವಾದದ ಮಧ್ಯೆ ೧೯೫೪ರಲ್ಲಿ ಮೈಸೂರು ರಾಜ್ಯದ ಮುಖ್ಯಮಂತ್ರಿ ಕೆ.ಹನುಮಂತಯ್ಯನವರು ಶಾಸನಸಭೆಯ ಅಭಿಪ್ರಾಯದಂತೆ ಏಕೀಕರಣವನ್ನು ಬೆಂಬಲಿಸುತ್ತಿದ್ದರು, ಆದರೆ ರಾಜ್ಯಪುನರ್ವಿಂಗಡಣಾ ಆಯೋಗದ ಸದಸ್ಯರಾದ ಫಜಲ್ ಆಲಿ ಸಮಿತಿಗೆ ಮನವಿ ಸಲ್ಲಿಸುವುದರ ಬದಲು ಎಂ.ಶೇಷಾದ್ರಿ (ಮೈಸೂರು ಸಂಸ್ಥಾನದ ದಿವಾನರಾಗಿದ್ದರು) ಅವರ ನೇತೃತ್ವದಲ್ಲಿ ಪರಿಶೀಲನಾ ಸಮಿತಿಯೊಂದನ್ನು ನೇಮಿಸಿದ್ದು ಏಕೀಕರಣವಾದಿಗಳಿಗೆ ಬೇಸರ ತರಿಸಿತ್ತು. ಫಜಲ್ ಆಲಿ ಆಯೋಗದೆದುರು ಮಿರ್ಜಾ ಇಸ್ಮಾಯಿಲ್ ಮತ್ತು ಎಂ.ವಿಶ್ವೇಶ್ವರಯ್ಯನವರಂತಹ ಹಿರಿಯ ಮುತ್ಸದ್ದಿಗಳೂ ಏಕೀಕರಣದ ವಿರುದ್ಧ ಸಾಕ್ಷಿ ನೀಡಿದರು ಎಂಬ ವಿಷಯವೂ ಏಕೀಕರಣವಾದಿಗಳ ಮನಸ್ಸಿಗೆ ನೋವುಂಟು ಮಾಡಿತ್ತು. ಜೂನ್ ತಿಂಗಳಿನಲ್ಲೇ ರಾಜ್ಯ ಪುನರ್ವಿಂಗಡಣಾ ಆಯೋಗವು ಬೆಂಗಳೂರಿಗೆ ಭೇಟಿ ನೀಡಿದಾಗ ಮೈಸೂರು ಕಾಂಗ್ರೆಸ್ ಸಮಿತಿಯು ಮನವಿ ಸಲ್ಲಿಸಲಿಲ್ಲವಾದರೂ, ಅನೇಕ ಸಂಘ ಸಂಸ್ಥೆಗಳು

---

[೮೪] ಮಾಸ್ತಿ. ಜೀವನ. ಪು.೧೬೨,೧೬೩

ಮನವಿ ಸಲ್ಲಿಸಿದವು. ಕೆಲವು ಸಂಘ ಸಂಸ್ಥೆಗಳು ಮತ್ತು ಸಾಹಿತಿಗಳು ದ್ವಿಕರ್ನಾಟಕ ವಾದವನ್ನೇ ಮಂಡಿಸಿದರು. ಇದಕ್ಕೆ ಅವರು ನೀಡಿದ ಕಾರಣವೆಂದರೆ ಮುಂದುವರಿದಿರುವ ಮೈಸೂರು ರಾಜ್ಯವು ಹಿಂದುಳಿದಿರುವ ವಿಶೇಷವಾಗಿ ಹೈದರಾಬಾದ್ ಕರ್ನಾಟಕದ ಸೇರ್ಪಡೆಯಿಂದ ತೊಂದರೆಯನ್ನು ಎದುರಿಸಬೇಕಾಗುತ್ತದೆ ಎಂಬುದಾಗಿತ್ತು. ಜೊತೆಗೆ ಜಾತೀಯತೆಯ ಕಾರಣಗಳೂ ಇದ್ದವು ಎಂದು ತಿಳಿಯಲಾಗಿದೆ. ಇದಲ್ಲದೆ ರಾಜಕೀಯವಾಗಿ ಅಧಿಕಾರ ಪ್ರಾಬಲ್ಯವನ್ನು ಗಳಿಸುವ ಗುಂಪುಗಾರಿಕೆಯೂ ಏಕೀಕರಣವನ್ನು ವಿರೋಧಿಸುವುದರ ಒಂದು ಅಂಶವಾಗಿತ್ತು. ಹನುಮಂತಯ್ಯನವರ ಅಭಿಪ್ರಾಯಗಳನ್ನು ಒಪ್ಪಬಾರದೆನ್ನುವ ತಂತ್ರಗಾರಿಕೆಯೇ ಏಕೀಕರಣ ವಿರೋಧದ ಒಂದು ಅಂಶದಂತೆ ತೋರುತ್ತಿತ್ತು".[೮೫]ಎಂ.ಶೇಷಾದ್ರಿ ಸಮಿತಿಯ ವರದಿಯ ಪ್ರಕಾರ ಮೈಸೂರಿನೊಡನೆ ವಿಲೀನಗೊಳ್ಳುವ ಪ್ರದೇಶಗಳಲ್ಲಿ ಸುಮಾರು ಒಂದು ಕೋಟಿ ರೂ. ಆದಾಯದ ಕೊರತೆ ಇದ್ದು, ಆ ಪ್ರದೇಶಗಳಲ್ಲಿ ಈಗಾಗಲೇ ಪ್ರಗತಿಯಲ್ಲಿರುವ ಕೆಲಸಗಳು ಮುಗಿಯಲು ೨೦ ಕೋಟಿ ರೂಪಾಯಿಗಳ ಅವಶ್ಯಕತೆ ಇತ್ತು. ವೈದ್ಯಕೀಯ ಆರೋಗ್ಯ, ಶಿಕ್ಷಣ, ನೀರಾವರಿ ಮತ್ತು ವಿದ್ಯುತ್‌ಚ್ಛಕ್ತಿ ಸಂಪರ್ಕ ವಿಷಯಗಳಲ್ಲೂ ಇತರ ಪ್ರದೇಶಗಳು ಮೈಸೂರಿಗಿಂತ ಹಿಂದುಳಿದಿವೆ ಎಂದು ಸಮಿತಿಯ ವರದಿ ತಿಳಿಸಿತು.[೮೬] ಇದರಿಂದ ಈ ವರದಿಯ ಪ್ರಕಾರ ವೀರಣ್ಣಗೌಡರ ಮತ್ತು ಇತರ ಏಕೀಕರಣ ವಿರೋಧಿಗಳ ಊಹೆ ಒಂದರ್ಥದಲ್ಲಿ ಸರಿಯಾಗಿತ್ತು ಎಂದೇಳಬಹುದು.

'ಅನೇಕ ಏಕೀಕರಣವಾದಿಗಳಿಗೆ ಶೇಷಾದ್ರಿ ಸಮಿತಿಯ ವರದಿಯು ಆತಂಕಕಾರಿ ಎಂದೆನಿಸಿತು. ಆ ಪ್ರಕಾರ ೧೯೫೫ರ ಮಾರ್ಚ್ ತಿಂಗಳ ಮೊದಲ ವಾರದಲ್ಲಿ ಮೈಸೂರು ಶಾಸನ ಸಭೆಯು ಸಮಾವೇಶಗೊಂಡಾಗ ಶೇಷಾದ್ರಿ ಸಮಿತಿಯ ವರದಿಯ ಬಗೆಗೂ ಚರ್ಚೆ ನಡೆಯಿತು. ವಿಧಾನ ಪರಿಷತ್ತಿನಲ್ಲಿ ಏಕೀಕರಣದ ಪರ ೧೯ ಜನ ಮತ್ತು ವಿರೋಧ ೧೩ ಜನ ಚರ್ಚೆಯಲ್ಲಿ ಪಾಲ್ಗೊಂಡರು. ಏಕೀಕರಣದ ಪರವಾಗಿ ವಾದಿಸಿದವರಲ್ಲಿ ಮುಖ್ಯರಾದವರೆಂದರೆ ವೈ.ಧರ್ಮಪ್ಪ ಗಾಂಜಿ ವೀರಪ್ಪ, ಎಂ.ಸಿ.ಮಹದೇವಸ್ವಾಮಿ, ಎಂ.ಶಂಕರಯ್ಯ, ಟಿ.ವೀರಣ್ಣ, ಬಿ.ಮಾಧವಾಚಾರ್, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಗುಬ್ಬಿ ವೀರಣ್ಣ. ವಿರೋಧಿಸಿದವರಲ್ಲಿ ಮುಖ್ಯರಾದವರು ಎಂ.ಪಿ.ಎಲ್.ಶಾಸ್ತ್ರಿ, ರಾಜಗೋಪಾಲ ಅಯ್ಯಂಗಾರ್, ಪಿಟೀಲು ಚೌಡಯ್ಯ ಮತ್ತು ಡಿ.ವೆಂಕಟರಾಮಯ್ಯ.'[೮೭] ಈ ಮೊದಲು ೧೯೫೪ ರ ಜೂನ್ ೨೩ ಮತ್ತು ೨೪ರಂದು ರಾಜ್ಯ ಪುನರ್ವಿಂಗಡಣ ಆಯೋಗದ ಸದಸ್ಯರು ಬೆಂಗಳೂರಿನಲ್ಲಿ ಹಲವು ಗಣ್ಯರನ್ನು ಭೇಟಿ ಮಾಡಿದರು. ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷವು ಪಕ್ಷದ ಹೆಸರಿನಲ್ಲಿ ಯಾವ ಮನವಿಯನ್ನು ನೀಡಲಾಗಲೀ, ಹೇಳಿಕೆಯನ್ನು ನೀಡಲಾಗಲೀ ನಿರ್ಬಂಧಿಸಿದ್ದುದರಿಂದ, ವೈಯಕ್ತಿಕವಾಗಿ ಹಲವು ಕಾಂಗ್ರೆಸ್ ನಾಯಕರು ತಮ್ಮ ಹೇಳಿಕೆಗಳನ್ನು ನೀಡಿದರು. ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಹೆಚ್.ಕೆ.ವೀರಣ್ಣಗೌಡರು, ಕಾರ್ಯದರ್ಶಿ ಟಿ.ಮರಿಯಪ್ಪ, ಟಿ.ಸುಬ್ರಹ್ಮಣ್ಯ, ಎ.ಭೀಮಪ್ಪನಾಯಕ

---

[೮೫] ಡಾ.ಎಚ್.ಎಸ್.ಗೋಪಾಲರಾವ್. ಕರ್ನಾಟಕ ಏಕೀಕರಣ ಇತಿಹಾಸ. ೧೯೯೬. ಪು.೨೨೩

[೮೬] ಪೂರ್ವೋಕ್ತಿ. ಪು.೨೨೪

[೮೭] ಪೂರ್ವೋಕ್ತಿ.ಪು.೨೨೫

ಮೊದಲಾದ ಕಾಂಗ್ರೆಸ್ ಧುರೀಣರು ಧೇಬರ್ ಆಯೋಗದ ಸದಸ್ಯರನ್ನು ಭೇಟಿಯಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಮೊದಲಿನಿಂದಲೂ ಹೆಚ್.ಕೆ.ವೀರಣ್ಣಗೌಡರು ಏಕೀಕರಣದ ವಿರೋಧಿಗಳಾಗಿಯೇ ಇದ್ದರು. ಆದರೆ ಕಡಿದಾಳ್‌ಮಂಜಪ್ಪ, ಎ.ಜಿ.ರಾಮಚಂದ್ರರಾವ್, ಎಚ್.ಚೆನ್ನಯ್ಯ, ಟಿ.ಮರಿಯಪ್ಪ ಮೊದಲಾದವರು ಮೊದಲಿಗೆ ಏಕೀಕರಣ ವಿರೋಧಿಗಳಾಗಿದ್ದು, ಅನಂತರದ ಬೆಳವಣಿಗೆಯಲ್ಲಿ ತಮ್ಮ ನಿಲುವನ್ನು ಬದಲಾಯಿಸಿಕೊಂಡಿದ್ದರು. ಈ ದ್ವಂದ್ವ ಬೆಳವಣಿಗೆಗಳ ನಡುವೆಯು ಸತತ ಹೋರಾಟದ ಫಲವಾಗಿ ನವೆಂಬರ್ ೧, ೧೯೫೬ರಂದು ಕರ್ನಾಟಕ ಏಕೀಕರಗೊಂಡು ನಾಡಿನ ಜನತೆಯಲ್ಲಿ ಸಂತೋಷವನ್ನುಂಟು ಮಾಡಿತು. ಆದರೆ ಈ ಸಂತೋಷದ ಒಳಗೆ ಅತೃಪ್ತಿ, ಆತಂಕಗಳು ಅಡಗಿದ್ದವು. ಕೆಲವೇ ವರ್ಷಗಳಲ್ಲಿ ಈ ಅತೃಪ್ತಿ, ಆತಂಕಗಳು ತಮ್ಮ ನಿಜಸ್ವರೂಪವನ್ನು ಪಡೆಯಲಾರಂಭಿಸಿದವು ಎಂದರೆ ತಪ್ಪಾಗಲಾರದು. 'ಕರ್ನಾಟಕ ಏಕೀಕರಣ ಇತಿಹಾಸ' ಎಂಬ ಕೃತಿ ರಚಿಸಿರುವ ಡಾ.ಎಚ್.ಎಸ್.ಗೋಪಾಲರಾವ್ ಅವರು ತಮ್ಮ ಕೃತಿ ರಚನೆಗೆ ಮಾಹಿತಿ ಸಂಗ್ರಹಿಸುವ ಸಂದರ್ಭದಲ್ಲಿ ತಮಗಾದ ಅನುಭವವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ; 'ನಮ್ಮ ಪ್ರವಾಸದ ಫಲವಾಗಿ ಏಕೀಕರಣಗೊಂಡಿರುವ ಕರ್ನಾಟಕದ ವಿಶಿಷ್ಟತೆಯ ಜೊತೆಗೇ, ನೊಂದಿರುವ ನಮ್ಮ ಕೆಲವು ಕನ್ನಡ ಬಂಧುಗಳ ನೋವು ಮತ್ತು ಅಸಮಾಧಾನವನ್ನೂ ತಿಳಿಯಲು ಸಾಧ್ಯವಾಯಿತು. ಕನ್ನಡಿಗರು ಒಂದು ಆಳ್ವಿಕೆಯ ವ್ಯಾಪ್ತಿಗೆ ಸೇರಿದ್ದೇವೆ. ನಿಜ, ಆದರೆ ನಿಜವಾಗಿಯೂ ನಾವು ಎಲ್ಲ ರೀತಿಯಲ್ಲೂ ಒಂದಾಗಿದ್ದೇವೆಯೇ? ಎಂಬ ಪ್ರಶ್ನೆ ಹಲವರನ್ನು ಕಾಡಿದೆ. ಆಡಳಿತಾತ್ಮಕವಾಗಿ, ಸಾಹಿತ್ಯಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಏಕೀಕರಣವಾಗಿರುವುದನ್ನು ಬಹುತೇಕ ಜನ ಒಪ್ಪುತ್ತಾರಾದರೂ ಭಾವನಾತ್ಮಕವಾಗಿ ಎಲ್ಲರೂ ಒಂದಾಗಿಲ್ಲ ಎಂಬ ಅಭಿಪ್ರಾಯ ಹೆಚ್ಚು ಜನರಿಗಿದೆ. ಎಲ್ಲ ಭಾಗಗಳ ಸಾಹಿತಿಗಳು ಮತ್ತು ಕಲಾವಿದರು ಸಮಾನ ಗೌರವ, ಪುರಸ್ಕಾರಗಳನ್ನು ಪಡೆಯುತ್ತಿಲ್ಲ ಎಂಬ ಅಸಮಾಧಾನವಿದೆ. ಇದಕ್ಕೆ ಉತ್ತರ ನೀಡಬೇಕಾದವರು ಆಳುವ ಜನ ಎಂಬ ಅರಿವೂ ಇದೆ'.[೮೮]

ಕರ್ನಾಟಕ ಏಕೀಕರಣದ ಬಗ್ಗೆ ವೀರಣ್ಣಗೌಡರು ಸೇರಿದಂತೆ ಅನೇಕರು ವ್ಯಕ್ತಪಡಿಸಿದ್ದ ಆತಂಕ, ಸಂಶಯಗಳು ಇಂದು ಕಣ್ಣಮುಂದೆ ಗೋಚರಿಸುತ್ತಿರುವುದು ಸತ್ಯ. ವಿಶಾಲ ಕರ್ನಾಟಕದ ಆಳ್ವಿಕೆಗೆ ಸಂಬಂಧಿಸಿದಂತೆ ಜನಪ್ರತಿನಿಧಿಗಳ ಬೇಜವಾಬ್ದಾರಿತನ ರಾಜ್ಯದಲ್ಲಿ ಹಲವು ಪ್ರದೇಶಗಳು ಆರ್ಥಿಕ ಅಸಮಾನತೆಯಿಂದ ನರಳುತ್ತಿರುವುದಕ್ಕೆ ಮತ್ತು ಅವುಗಳ ಅಭಿವೃದ್ಧಿ ಕುಂಠಿತಗೊಳ್ಳಲು ಕಾರಣವಾಗಿದೆ. ಇದರ ಪರಿಣಾಮ ಆ ಪ್ರದೇಶಗಳಲ್ಲಿ ಹಲವಾರು ಸಮಸ್ಯೆಗಳು ತಲೆಯೆತ್ತಿವೆ. ಅವುಗಳಲ್ಲಿ ಪ್ರಮುಖವಾದುದು ನಕ್ಸಲ್ ಸಮಸ್ಯೆ. ಈ ಸಮಸ್ಯೆಗೆ ಸಿಲುಕಿರುವವರು ವಿದ್ಯಾವಂತರೇ ಹೆಚ್ಚು.

---

[೮೮] ಕರ್ನಾಟಕ ಏಕೀಕರಣ ಇತಿಹಾಸ. ಡಾ॥ಎಚ್.ಎಸ್.ಗೋಪಾಲರಾವ್. ನವಕರ್ನಾಟಕ ಪ್ರಕಾಸನ. ೧೯೯೬. ಪು–ix

## ಅಧ್ಯಾಯ – ೫

# ಹೆಚ್.ಕೆ. ವೀರಣ್ಣಗೌಡರು ಮತ್ತು ಕರ್ನಾಟಕ ರಾಜಕಾರಣ

## ಅಧ್ಯಾಯ – ೫

# ಹೆಚ್.ಕೆ.ವೀರಣ್ಣಗೌಡರು ಮತ್ತು ಕರ್ನಾಟಕ ರಾಜಕಾರಣ

**ಪೀಠಿಕೆ:** ಪತ್ರಿಕಾವೃತ್ತಿಯಿಂದ ಬೆಳೆದ ಸಾರ್ವಜನಿಕ ಸಂಪರ್ಕದಿಂದಾಗಿ ಹೆಚ್.ಕೆ.ವೀರಣ್ಣಗೌಡರು ಸಮಾಜ ಮತ್ತು ದೇಶ ಸೇವೆಯ ದೃಷ್ಟಿಯಿಂದ ರಾಜಕಾರಣಕ್ಕೆ ಪ್ರವೇಶಿಸಿದರು. ವಾಸ್ತವವಾಗಿ ಅಂದು ಈ ಶತಮಾನದ ಆದಿಭಾಗದ ರಾಜಕಾರಣ ಕೇವಲ ಸೇವೆಯ ಕ್ಷೇತ್ರವಾಗಿತ್ತು. ಆಗ ರಾಜಕೀಯ ಲಾಭದಾಯಕ ಉದ್ಯಮವಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ನಾಡಿನ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಸಾಕಷ್ಟು ಕಷ್ಟಗಳನ್ನು ಅನುಭವಿಸಿದರು. ಪತ್ರಿಕೆಯ ಲೇಖನಗಳ ಮೂಲಕ, ಸಭೆಗಳಲ್ಲಿ ಭಾಷಣಗಳನ್ನು ಮಾಡುವ ಮೂಲಕ ಜನಜಾಗೃತಿಯನ್ನುಂಟು ಮಾಡುವ ಕಾರ್ಯದಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿದ್ದರು. ಸ್ವಾತಂತ್ರ್ಯ ಪ್ರಾಪ್ತಿಗಾಗಿಯೇ ದುಡಿಯುತ್ತಿದ್ದ ಸಂಸ್ಥೆ ಕಾಂಗ್ರೆಸ್. ಈ ಕಾಂಗ್ರೆಸ್ ಪಕ್ಷ ಮೈಸೂರು ಪ್ರಾಂತ್ಯದಲ್ಲಿ ಪ್ರಬಲವಾಗಿ ಬೆಳೆಯಲು ಸಮರ್ಥ ಸಂಘಟಕರಾಗಿ ದುಡುಯುತ್ತಾ ರಾಜ್ಯ ಮಂತ್ರಿಮಂಡಲದಲ್ಲಿ ತಮಗೆ ದೊರೆತ ಅವಕಾಶವನ್ನು ಜನಸೇವೆಗೆ ಸಾರ್ಥಕವಾಗುವಂತೆ ಬಳಸಿಕೊಂಡಿರುವುದನ್ನು ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

### ೫.೧ ಪ್ರಾದೇಶಿಕ ಪಕ್ಷ ಸಂಘಟನೆಯಲ್ಲಿ

'ಕ್ರಿ.ಶ. ೧೮೮೫ ರಲ್ಲಿ ಸ್ಥಾಪನೆಯಾದ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ರಾಷ್ಟ್ರಾದ್ಯಂತ ಹರಡಿ ಜನಜಾಗೃತಿಗೆ ತನ್ಮೂಲಕ ಭಾರತದ ಸ್ವಾತಂತ್ರ್ಯ ಚಳುವಳಿಗೆ ದುಡಿಯ ತೊಡಗಿತು. ಈ ಪಕ್ಷದ ಚಟುವಟಿಕೆಗಳು ಆಂಗ್ಲರ ನೇರ ಆಡಳಿತಕ್ಕೊಳಪಟ್ಟ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ದೇಶೀಯ ಸಂಸ್ಥಾನಗಳ ಅರಸರು ಸ್ವದೇಶಿಯರೇ ಆಗಿದ್ದುದರಿಂದ ರಾಷ್ಟ್ರೀಯ ಕಾಂಗ್ರೆಸ್‌ನ ಚಟುವಟಿಕೆಗಳು ಬ್ರಿಟಿಷ್ ಇಂಡಿಯಾಗೆ ಮಾತ್ರ ಸೀಮಿತವಾಗಿತ್ತು. ಆದ್ದರಿಂದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಶಾಖೆಗಳನ್ನು ದೇಶೀಯ ಸಂಸ್ಥಾನಗಳಲ್ಲಿ ಆರಂಭಿಸಿರಲಿಲ್ಲ. ಹಾಗಾಗಿ ಕಾಂಗ್ರೆಸ್ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿರಲಿಲ್ಲ.

ಭಾರತದ ರಾಷ್ಟ್ರೀಯ ಕಾಂಗ್ರೆಸ್ ದೇಶೀಯ ಸಂಸ್ಥಾನಗಳ ಅರಸರ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವಲ್ಲಿ,ಆಂಗ್ಲ ಸರ್ಕಾರವು ವಿನಾಕಾರಣ ದೇಶೀಯ ಅರಸರನ್ನು ಅಧಿಕಾರದಿಂದ ಕೆಳಗಿಳಿಸಬಾರದೆಂದು ೧೮೯೬ರಲ್ಲಿ ಒಂದು ನಿರ್ಣಯವನ್ನು ಕೈಗೊಂದಿತು.

ಬ್ರಿಟೀಷ್ ಆಡಳಿತದ ಅವಧಿಯಲ್ಲಿ ದೇಶೀಯ ಸಂಸ್ಥಾನಗಳಲ್ಲಿನ ಜನರಿಗೆ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿ ಇರಲಿಲ್ಲ. ಈ ಹಿನ್ನೆಲೆಯಲ್ಲಿ ನಾಗಪುರದಲ್ಲಿ ಕ್ರಿ.ಶ.೧೯೨೦ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ನಡೆಯಿತು. ಇದರ ಅಧ್ಯಕ್ಷತೆಯನ್ನು ಸೇಲಂನ ವಿಜಯ ರಾಘವಾಚಾರ್ ಅಧ್ಯಕ್ಷತೆ ವಹಿಸಿಕೊಂಡರು. ಅಖಿಲ ಭಾರತ ರಾಷ್ಟ್ರೀಯ ಕಾಂಗೆಸ್ ಅಧಿವೇಶನದಲ್ಲಿ ಭಾಷಾವಾರು ಪ್ರಾಂತ್ಯದ ಆಧಾರದ ಮೇಲೆ ೨೧ ಪ್ರಾಂತೀಯ ಕಾಂಗ್ರೆಸ್ ಘಟಕಗಳನ್ನು ಸ್ಥಾಪಿಸಲಾಯಿತು. ಹೀಗೆ ಅಖಿಲ ಭಾರತ ಕಾಂಗ್ರೆಸ್ ದೇಶೀಯ ಸಂಸ್ಥಾನಗಳಲ್ಲಿಯೂ ತನ್ನ ಘಟಕಗಳನ್ನು ಸ್ಥಾಪಿಸುವುದರ ಮೂಲಕ ತನ್ನ ಕಾರ್ಯ ಚಟುವಟಿಕೆಗಳನ್ನು ದೇಶೀಯ ಸಂಸ್ಥಾನಗಳಲ್ಲಿಯೂ ವಿಸ್ತರಿಸಿತು."[೮೯] "ಹೀಗೆ ಕಾಂಗ್ರೆಸ್ ದೇಶೀಯ ಸಂಸ್ಥಾನಗಳಿಗೂ ತನ್ನ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿ ಕೊಂಡಿತ್ತಾದರೂ, ಸಂಸ್ಥಾನದ ರಾಜಕೀಯದಲ್ಲಿ ಕಾಂಗ್ರೆಸ್ ಪ್ರವೇಶಿಸುವುದಿಲ್ಲವೆಂದು ಒಂದು ಗೊತ್ತುವಳಿಯನ್ನು ಮಾಡಿತು. ಸಂಸ್ಥಾನಗಳ ಜನರಿಗೆ ಕಾಂಗ್ರೆಸ್ ಸದಸ್ಯತ್ವ ಲಭ್ಯವಾದರೂ ಸಂಸ್ಥಾನದ ಆಂತರಿಕ ವ್ಯವಹಾರಗಳಿಗೆ ಕೈ ಹಾಕಲು ರಾಷ್ಟ್ರೀಯ ಕಾಂಗ್ರೆಸ್ ಇಚ್ಚಿಸದೇ ಸುಮಾರು ಹತ್ತು ವರ್ಷಗಳ ಕಾಲ ಮುಂದುವರಿಯಿತು"[೯೦]

೧೯೨೦ ರಲ್ಲಿ ಧಾರವಾಡದಲ್ಲಿ ನಡೆದ ಕರ್ನಾಟಕ ರಾಜ್ಯ ರಾಜಕೀಯ ಸಮ್ಮೇಳನದ ಅಧ್ಯಕ್ಷತೆಯನ್ನು ಮಾಜಿ ದಿವಾನ ವಿ.ಪಿ.ಮಾಧವರಾವ್ ವಹಿಸಿದ್ದರು. ಅಲ್ಲಿ ಕೈಗೊಂಡ ನಿರ್ಣಯದ ಫಲವಾಗಿ ಅದೇ ವರ್ಷ ನಾಗಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಸುಮಾರು ೮೦೦ ರಷ್ಟು ಪ್ರತಿನಿಧಿಗಳು ಪಾಲ್ಗೊಂಡಿದ್ದರು. ಈ ಸಭೆಯಲ್ಲಿ ಪಡೆದ ಅನುಮತಿಯಿಂದಾಗಿ ಪ್ರತ್ಯೇಕ ಪ್ರದೇಶ ಕಾಂಗ್ರೆಸ್ ಸಮಿತಿ ಸ್ಥಾಪಿಸಲಾಯಿತು. ಕರ್ನಾಟಕ ಸಿಂಹ ಎನಿಸಿಕೊಂಡಿದ್ದ ಗಂಗಾಧರರಾವ್ ದೇಶಪಾಂಡೆ ಅವರು ಮೊಟ್ಟಮೊದಲ ಅಧ್ಯಕ್ಷರಾದರು"[೯೧]

ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಂಸ್ಥೆಯ ಅಧೀನದಲ್ಲಿ ೧೯೨೦ರಲ್ಲಿ ಮೈಸೂರು ಸಂಸ್ಥಾನದ ಕಾಂಗ್ರೆಸ್ಸನ್ನು 'ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ' ಎಂಬ ಹೆಸರಿನಲ್ಲಿ ಸ್ಥಾಪಿಸಲಾಯಿತು. ೧೯೨೧ ರ ಆಗಸ್ಟ್‌ನಲ್ಲಿ ರಾಷ್ಟ್ರಾದ್ಯಂತ ಬಾಲಗಂಗಾಧರ ತಿಲಕರ ಜನ್ಮ ದಿನಾಚರಣೆ ಆಚರಿಸಿದಂತೆ ಮೈಸೂರಿನಲ್ಲಿಯೂ ಅರಮನೆಯ ಮುಂದೆ ಕಾಸ್ಮೋಪಾಲಿಟನ್ ಕ್ಲಬ್' ಬಳಿ ಭಾರೀ ಬಹಿರಂಗ ಸಭೆ ನಡೆಸುವ ಮೂಲಕ ತಿಲಕರ ದಿನಾಚರಣೆಯನ್ನು ನಡೆಸಲಾಯಿತು. ಈ ಸಮಾರಂಭದಿಂದ ಮೈಸೂರಿನಲ್ಲಿ ಜನಜಾಗೃತಿ ಮೂಡುವುದರ ಜೊತೆಗೆ ಕಾಂಗ್ರೆಸ್ ಪಕ್ಷವು ಕೆಲವು ಜನರ ಗಮನವನ್ನು ಸೆಳೆಯುವುದರಲ್ಲಿ ಸಫಲವಾಯಿತು.

---

[೮೯] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ. ೨೮. ೨೦೦೨

[೯೦] ಕೆ.ವೀರತಪ್ಪ : ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ.೧೦

[೯೧] ಸಂ. ಸುಶೀಲ ಸುಬ್ರಃಮಣ್ಯಾಂ ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ. ಡಾ॥ ಸೂರ್ಯನಾಥ ಕಾಮತ್ : ವೈವಿಧ್ಯಮಯ ಹೋರಾಟ ನೀಡಿದ ಕರ್ನಾಟಕ. ಪುಟ -೫೨

'ಮೈಸೂರಿನ ಶ್ರೇಷ್ಠ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿ ನಿವೃತ್ತರಾದ ನಂತರ ಕೆಲಕಾಲ ತಿಲಕರ ಸಂಗಡ ಕೆಲಸ ಮಾಡಿದ್ದ ಎಸ್.ಎಸ್.ಸೆಟ್ಲೂರ್‌ರವರು ೧೯೨೧ರಲ್ಲಿ ಮೈಸೂರು ಜಿಲ್ಲಾ ಕಾಂಗ್ರೆಸ್‌ನ ಅಧ್ಯಕ್ಷರಾದರು. ಅದೇ ಕಾಲಕ್ಕೆ ಎಸ್.ಎನ್.ಎಂ.ರಜ್ವಿಯವರು ಕಾರ್ಯದರ್ಶಿಗಳಾದರು. ತುಮಕೂರಿನಲ್ಲಿ ಕೆ.ರಂಗಯ್ಯಂಗಾರ್, ಮೈಸೂರಿನಲ್ಲಿ ಎಂ.ವೆಂಕಟಕೃಷ್ಣಯ್ಯ, ಕಡೂರಿನಲ್ಲಿ ಹೊಸಕೊಪ್ಪದ ಕೃಷ್ಣರಾಯ ಇವರುಗಳ ನೇತೃತ್ವದಲ್ಲಿ ಕಾಂಗ್ರೆಸ್ ಸಂಘಟನೆ ಕೆಲಸ ಕಾರ್ಯಗಳು ಆರಂಭವಾದವು. ಮೈಸೂರಿನಲ್ಲಿ ಕಾಂಗ್ರೆಸ್ ಶಾಖೆಯನ್ನು ಆರಂಭಿಸಿದ ಎಂ.ವೆಂಕಟಕೃಷ್ಣಯ್ಯನವರು ಮೈಸೂರು ಸಂಸ್ಥಾನದಲ್ಲಿ ದಿವಾನರ ಅಧಿಕಾರವನ್ನು ಮೊಟಕು ಮಾಡಿ ಪ್ರಜಾಪ್ರತಿನಿಧಿಗೆ ಹೆಚ್ಚಿನ ಅಧಿಕಾರ ಬೇಕೆಂದು ಕೇಳಿದರು.'[೯೨]

'ಸೆಟ್ಲೂರ್ ಅವರ ಅಧ್ಯಕ್ಷತೆಯಲ್ಲಿ ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ಸಭೆ ಬೆಂಗಳೂರಿನಲ್ಲಿ ಸೇರಿತು. ಈ ಸಭೆಗೆ ಭಾರತದ ಅನೇಕ ನಾಯಕರು ಆಹ್ವಾನಿತರಾಗಿದ್ದರು. ಸಭೆಯಲ್ಲಿ ಮದ್ಯಪಾನ ನಿಷೇಧ, ಖಾದಿ ಪ್ರಚಾರ ಮತ್ತು ಸ್ವದೇಶಿ ಭಾವನೆಯನ್ನು ಬೆಳೆಸಿಕೊಳ್ಳುವ ಬಗೆಗೆ ಹಾಗೂ ಸಂಸ್ಥಾನದ ಜನತೆಯಲ್ಲೂ ರಾಷ್ಟ್ರೀಯ ಭಾವನೆ ಪ್ರಚೋದಿಸುವಂತೆ ಕಾರ್ಯಕ್ರಮಗಳ ಪ್ರಚಾರ ಕಾರ್ಯದಲ್ಲಿ ತೊಡಗಬೇಕೆಂದು ಕೆಲವರು ಅಭಿಪ್ರಾಯ ಪಟ್ಟರು. ಮತ್ತೆ ಕೆಲವರು ಸಂಸ್ಥಾನದಲ್ಲಿ ರಾಜಕೀಯ ಕಾರ್ಯಕ್ರಮ ಬಿಟ್ಟು ಕೇವಲ ರಚನಾತ್ಮಕ ಕಾರ್ಯಗಳಲ್ಲಿಯೇ ತೊಡಗಬೇಕೆಂಬ ರಾಷ್ಟ್ರೀಯ ಕಾಂಗ್ರೆಸ್‌ನ ಧೋರಣೆ ಸರಿಯಲ್ಲವೆಂಬ ನಿಲುವು ತೆಗೆದುಕೊಳ್ಳಲಾಗಿ ಭಿನ್ನಾಭಿಪ್ರಾಯ ತಲೆದೋರಿದಂತಾಯಿತು.'[೯೩] ಕ್ರಿ.ಶ. ೧೯೨೧ ರಲ್ಲಿ ಗಾಂಧೀಜಿಯವರು ಕರ್ನಾಟಕದಾದ್ಯಂತ ಪ್ರವಾಸ ಕೈಗೊಂಡಾಗ ಆಲಿ ಸಹೋದರರು ಗಾಂಧೀಜಿಯವರ ಜೊತೆಗಿದ್ದರು. ಖಿಲಾಫತ್ ಚಳುವಳಿಯ ಪರಿಣಾಮವಾಗಿ ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮುಸ್ಲಿಮರು ಕಾಂಗ್ರೆಸ್ಸನ್ನು ಸೇರಿದರು.

"೧೯೨೧-೨೨ ರಲ್ಲಿ ನಡೆದ ಅಸಹಕಾರ ಚಳುವಳಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಎಲ್ಲಾ ಭಾಗಗಳ ಜನರು ಭಾಗವಹಿಸಿದ್ದರು. ಶಾಲಾ ಕಾಲೇಜುಗಳ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು. ವಿದೇಶ ವಸ್ತುಗಳನ್ನು ಹಾಗೂ ವಿದೇಶಿ ವಸ್ತ್ರಗಳನ್ನು ಮಾರಾಟ ಮಾಡುತ್ತಿದ್ದ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಲಾಯಿತು. ಈ ವಿದೇಶಿ ವಸ್ತು ಬಹಿಷ್ಕಾರ ಚಳುವಳಿಯಿಂದ ಪ್ರೇರಿತರಾದ ತಗಡೂರು ರಾಮಚಂದ್ರರಾಯರು ತಾವು ಮಾರುತ್ತಿದ್ದ ವಿದೇಶಿ ವಸ್ತ್ರಗಳಿದ್ದ ಗಾಡಿಅಯನ್ನು ಬೆಂಕಿಯಲ್ಲಿ ತಳ್ಳಿ ಸುಟ್ಟರು."[೯೪]

೧೯೨೩ರಲ್ಲಿ ನಾಗಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹದ ಅಂಗವಾಗಿ ಮೈಸೂರು ಸಂಸ್ಥಾನದಲ್ಲಿ ನಡೆದ ಚಳುವಳಿಯಲ್ಲಿ ಗೋರೂರು ರಾಮಸ್ವಾಮಿ ಅಯ್ಯಂಗಾರ್, ಕೆ.ಭೀಮಾರಾವ್, ಬಿ.ರಂಗನಾಥರಾವ್,

---

[೯೨] ಕೆ.ವೀರತಪ್ಪ : ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ.೧೪

[೯೩] ಕೆ.ವೀರತಪ್ಪ : ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ.೧೫

[೯೪] ಬಿ.ಆರ್.ಪ್ರಾಣೇಶ್ವರ ರಾವ್ : ಸ್ವಾತಂತ್ರ್ಯದೆಡೆಗೆ. ಪುಟ.೧೨೪

ಬಿ.ಎಸ್.ರಾಮಸ್ವಾಮಿ, ಸಿ.ರಾಜಗೋಪಾಲಾಚಾರ್ ಮುಂತಾದವರು ಶ್ರೀ ನಾ.ಸು.ಹರ್ಡಿಕರ್ ಅವರ ನೇತೃತ್ವದಲ್ಲಿ ಪಾಲ್ಗೊಂಡಿದ್ದರು. ಆ ಸಂದರ್ಭದಲ್ಲಿ ಅವರನ್ನೆಲ್ಲಾ ಬ್ರಿಟಿಷ್ ಸರ್ಕಾರ ಬಂಧಿಸಿ ಶಿಕ್ಷೆಗೆ ಗುರಿಪಡಿಸಿತು. ಅಲ್ಲಿಂದ ಹಿಂದಿರುಗಿದ ನಂತರ ನಾ.ಸು.ಹರ್ಡಿಕರ್ ಅವರು ಭಾರತೀಯ ಸೇವಾ ದಳವನ್ನು ಸ್ಥಾಪಿಸಿದರು.'[೧೫]

'ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ೩೯ನೆಯ ಅಧಿವೇಶನ ಮಹಾತ್ಮ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ೧೯೨೪ನೆಯ ಇಸವಿಯಲ್ಲಿ ಬೆಳಗಾಂನಲ್ಲಿ ನಡೆಯಿತು. ಆಗಿನ ಮೈಸೂರು ಸಂಸ್ಥಾನದ ಸರ್ಕಾರವು ರಚನಾತ್ಮಕ ಕಾರ್ಯಗಳಿಗೆ ಬೆಂಬಲ ನೀಡುತ್ತಿದ್ದರು. ಆದ್ದರಿಂದಲೇ ಬೆಳಗಾಂ ಅಧಿವೇಶನದ ಖರ್ಚಿಗೆ ವಂತಿಗೆಯನ್ನು ನೀಡುವುದರ ಜೊತೆಗೆ ಬೆಳಗಾಂನಲ್ಲಿ ನಡೆಯುವ ಕಾಂಗ್ರೆಸ್ ವಸ್ತು ಪ್ರದರ್ಶನಕ್ಕೆ ವಸ್ತುಗಳನ್ನು ಸಹಾ ಕಳುಹಿಸಲು ದಿವಾನರಿಗೆ ಅಲ್ಬಿಯನ್ ಬ್ಯಾನರ್ಜಿಯವರು ಅಜ್ಞಾಪಿಸಿದರು. ಈ ಬೆಳಗಾಂ ಕಾಂಗ್ರೆಸ್ ಅಧಿವೇಶನದಿಂದ ಮೈಸೂರು ಸಂಸ್ಥಾನದ ಜನರೆಲ್ಲರೂ ಜಾಗೃತರಾದರು. ಈ ಅಧಿವೇಶನದಲ್ಲಿ ಗಾಂಧೀಜಿಯವರು ಮಾಡಿದ ಭಾಷಣ ನಾಡಿನ ಜನತೆಯನ್ನೆಲ್ಲಾ ಬಡಿದೆಬ್ಬಿಸಿತು. ತಾಯ್ನಾಡನ್ನು ಬ್ರಿಟಿಷರ ಬಂಧನದಿಂದ ಮುಕ್ತಗೊಳಿಸಬೇಕೆಂದು ಪಣತೊಟ್ಟರು. ಈ ನಿಟ್ಟಿನಲ್ಲಿ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡುವ, ಅವಶ್ಯಕವೆನಿಸಿದರೆ ತಮ್ಮ ಪ್ರಾಣ ತ್ಯಾಗಕ್ಕೂ ಹಿಂಜರಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದರು. ಈ ಅಧಿವೇಶನದ ಪ್ರಭಾವ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷದ ವಿಕಾಸಕ್ಕೆ ಹಾಗೂ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿಯ ಮೇಲೆ ಅಪಾರ ಪರಿಣಾಮ ಬೀರಿತು.

ಕ್ರಮೇಣ ಮೈಸೂರು ಸಂಸ್ಥಾನದ ಹಲವಾರು ಮುಖಂಡರು 'ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸದಸ್ಯರಾದರು. ಹೀಗೆ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷ ನಿಧಾನವಾಗಿ ಪ್ರವರ್ಧಮಾನಕ್ಕೆ ಬಂದರೂ ಸಹಾ ಈ ಪಕ್ಷವು ಸಂಸ್ಥಾನದಲ್ಲಿ ಕೇವಲ ರಚನಾತ್ಮಕ ಕೆಲಸಗಳಿಗೆ ಮಾತ್ರ ಅದೂ ನಗರ ಪ್ರದೇಶಗಳಿಗೆ ಸೀಮಿತವಾಗಿತ್ತು. ಬ್ರಿಟಿಷ್ ಪ್ರಾಂತ್ಯಗಳ ಮಾದರಿಯ ಸ್ವಾತಂತ್ರ್ಯ ಚಳುವಳಿಯು ದೇಶೀಯ ಸಂಸ್ಥಾನಗಳಲ್ಲಿ ನಡೆಯುವ ಅವಶ್ಯಕತೆ ಇಲ್ಲವೆಂದು ಮಹಾತ್ಮ ಗಾಂಧೀಜಿಯವರು ಭಾವಿಸಿದ್ದರು. ಆದ್ದರಿಂದ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷದ ವತಿಯಿಂದ ಈ ಕಾಲಘಟ್ಟದಲ್ಲಿ ಹೆಚ್ಚಿನ ಹೋರಾಟವೇನೂ ನಡೆಯಲಿಲ್ಲವೆಂದು ಹೇಳಬಹುದು.'[೧೬] '೧೯೨೮ರಲ್ಲಿ ಕಲ್ಕತ್ತದಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದಲ್ಲಿ ದೇಶೀಯ ಸಂಸ್ಥಾನಗಳ ಆಂತರಿಕ ವ್ಯವಹಾರದಲ್ಲಿ ಪ್ರವೇಶಿಸಬಾರದೆಂಬ ನಿರ್ಬಂಧವನ್ನು ಸಡಿಸಲಾಯಿತು. ಹಾಗೂ ದೇಶೀಯ ಸಂಸ್ಥಾನದ ಪ್ರಜೆಗಳಿಗೆ ಲಭ್ಯವಾಗಬೇಕಾದ ಮೂಲಭೂತ ಹಕ್ಕುಗಳನ್ನು ದೊರಕಿಸಿ ಕೊಡಬೇಕೆಂದು ದೇಶೀಯ ಸಂಸ್ಥಾನದ ಅರಸರುಗಳನ್ನು ಕಾಂಗ್ರೆಸ್ ಕೋರಿಕೊಂಡಿತು. ಈ ಧ್ಯೇಯ ಧೋರಣೆಗಳ ಈಡೇರಿಕೆಗಾಗಿ ಜನರು ನಡೆಸುವ ಚಳುವಳಿಯಲ್ಲಿ ಕಾಂಗ್ರೆಸ್ ಪಕ್ಷವು ತಾನು ಸಹಾಯ ಮಾಡುವ ಬಗ್ಗೆ

---

[೧೫] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ. ೩೧. ೨೦೦೨.

[೧೬] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ. ೩೧-೩೨.

ಭರವಸೆಯನ್ನು ನೀಡಿತು.’[೬೭] ಇದರ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ರಚನೆಗಾಗಿ ಹೋರಾಟ ನಡೆಸಲು ‘ಮೈಸೂರು ಸ್ಟೇಟ್ ಕಾಂಗ್ರೆಸ್’ ಸ್ಥಾಪನೆಯಾಯಿತು. ಅದರ ಮೊಟ್ಟ ಮೊದಲ ಅಧಿವೇಶನವು ೧೯೨೮ರಲ್ಲಿ ಮಾಣಿಕ್ಯ ವೇಲು ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ಅದೇವರ್ಷ ಅಂದರೆ ೧೯೨೮ರಲ್ಲಿ ನಡೆದ ಹಿಂದೂ-ಮುಸ್ಲಿಂರ ನಡುವೆ ಕೋಮು ಗಲಭೆಯನ್ನುಂಟುಮಾಡಿದ್ದ ಗಣಪತಿ ಗಲಭೆಯ ಬಗ್ಗೆ ಸರ್.ಎಂ.ವಿಶ್ವೇಶ್ವರಯ್ಯನವರ ವಿಚಾರಣಾ ಆಯೋಗವು ಗಲಭೆಯ ಕಾಲದಲ್ಲಿ ಆಡಳಿತ ವ್ಯವಸ್ಥೆಯು ಕುಸಿದು ಬಿದ್ದಿತ್ತು ಎಂದು ಟೀಕಿಸಿ ಸಾಧ್ಯವಾದಷ್ಟು ಬೇಗನೆ ಒಂದು ರೀತಿಯ ಜವಾಬ್ದಾರಿ ಸರ್ಕಾರ ರಚಿಸಬೇಕೆಂದು ಸರ್ಕಾರಕ್ಕೆ ಸೂಚಿಸಿದ್ದರು. ಇದು ಜವಾಬ್ದಾರಿ ಸರ್ಕಾರಕ್ಕಾಗಿ ಅಗ್ರಹಿಸುತ್ತಿದ್ದ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಿಗೆ ಮತ್ತಷ್ಟು ಹುರುಪು ನೀಡಿತು. ೧೯೨೯ ರಲ್ಲಿ ನಡೆದ ಲಾಹೋರ್ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಸಾಧನೆಯ ಗುರಿ ಘೋಷಣೆ ಮಾಡಿತು. ಇದರ ಪ್ರಭಾವ ಇತರ ಪ್ರಾಂತ್ಯಗಳಲ್ಲಿ ಆದಂತೆ ಮೈಸೂರಿನಲ್ಲಿ ಪ್ರತಿಬಂಧಕಾಜ್ಞೆ ಜಾರಿಯಲ್ಲಿದ್ದರೂ ಸಹಾ ರಾಷ್ಟ್ರ ಧ್ವಜವನ್ನು ಹಾರಿಸಿ ಸ್ವಾತಂತ್ರ್ಯ ಪ್ರತಿಜ್ಞೆ ಕೈಗೊಂಡರು.

ಹಾಗೆಯೇ“ಬ್ರಿಟಿಷ್ ಇಂಡಿಯಾದ ನೇರ ಆಳ್ವಿಕೆಯಲ್ಲಿದ್ದ ಶಿರಸಿ, ಸಿದ್ದಾಪುರ, ಅಂಕೋಲಾ, ಮುಂತಾದ ಸ್ಥಳಗಳಲ್ಲಿ ಬ್ರಿತಿಷ್ ವಿರುದ್ಧ ನಡೆದ ಚಳುವಳಿ ಅತ್ಯಂತ ಮಹತ್ವ ಪೂರ್ಣವಾಗಿತ್ತು. ಈ ಭಾಗದ ಜನರು ಬ್ರಿಟಿಶ್ ಸರ್ಕಾರಕ್ಕೆ ನೀಡಬೇಕಾಗಿದ್ದ ತೆರಿಗೆಯನ್ನು ನಿರಾಕರಿಸಿ ಕರಾ ನಿರಾಕರಣ ಚಳುವಳಿಯನ್ನು ನಡೆಸಿದರು. ಈ ಚಳುವಳಿಯನ್ನು ಮುರಿಯಲು ಸರ್ಕಾರವು ಚಳುವಳಿಯಲ್ಲಿ ತೊಡಗಿದ್ದವರ ಆಸ್ತಿ-ಪಾಸ್ತಿಯನ್ನು ಹರಾಜು ಹ್ಯಾಕಿಸಲು ತೊಡಗಿದ್ದರೂ ಸಹಾ ಜನರು ಆಸ್ತಿ-ಪಾಸ್ತಿಗಳನ್ನು ಕಳೆದುಕೊಳ್ಳಲು ಸಜ್ಜಾದರೇ ವಿನಃ ಚಳುವಳಿಯನ್ನು ನಿಲ್ಲಿಸಲಿಲ್ಲ. ಆ ಪ್ರದೇಶದಲ್ಲಿ ನಡೆದ ಚಳುವಳಿಯಲ್ಲಿ ಮೈಸೂರು ಸಂಸ್ಥಾನದ ಕಾಂಗ್ರೆಸ್ ಕಾರ್ಯಕರ್ತರು ಸಹಾ ಭಾಗವಹಿಸಿ ಬೆಂಬಲ ನೀಡಿದರು. ಇದರಿಂದ ಕೆರಳಿದ ಬ್ರಿಟಿಷ್ ಸರ್ಕಾರ ಮೈಸೂರಿನಲ್ಲಿದ್ದ ತನ್ನ ರೆಸಿಡೆಂಟರ ಮೂಲಕ ಮೈಸೂರು ಆಳರಸರಿಗೆ ಸ್ಪಷ್ಟ ನಿರ್ದೇಶನವೊಂದನ್ನು ನೀಡಿ ಮೈಸೂರು ಜನತೆ ಬ್ರಿಟಿಷ್ ಇಂಡಿಯಾದ ಪ್ರದೇಶದಲ್ಲಿ ಚಳುವಳಿಯಲ್ಲಿ ಭಾಗವಹಿಸುವುದನ್ನು ತಡೆಗಟ್ಟುವಂತೆ ಆದೇಶಿಸಿತು. ಅಷ್ಟರಲ್ಲಿ ೧೯೩೧ ರ ಮಾರ್ಚ್ ೫ ರಂದು ಗಾಂಧೀ –ಇರ್ವಿನ್ ಒಪ್ಪಂದದ ಪರಿಣಾಮವಾಗಿ ಬಂದಿತ ಸತ್ಯಾಗ್ರಹಿಗಳೆಲ್ಲರ ಬಿಡುಗಡೆಯಾಯಿತು. ಹೀಗೆ ಬಿಡುಗಡೆಯಾದ ಮೈಸೂರಿನ ಬಂಧಿಗಳು ವಾಪಸ್ಸು ಹಿಂದಿರುಗಿ ಬಂದು ತಮ್ಮ ಸತ್ಯಾಗ್ರಹದ ಅನುಭವಗಳನ್ನು ಸಂಸ್ಥಾನದಲ್ಲೆಲ್ಲಾ ಹಂಚಿಕೊಂಡರು. ಪರಿಣಾಮವಾಗಿ ಮೈಸೂರು

---

[೬೭] ಕೆ.ವೀರತಪ್ಪ. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ-೧೨

ಸಂಸ್ಥಾನದಾದ್ಯಂತ ಸತ್ಯಾಗ್ರಹವು ಹರಡಿ ಸ್ವಾತಂತ್ರ್ಯವು ನಮ್ಮ ಜನ್ಮಸಿದ್ಧ ಹಕ್ಕು ಅದನ್ನು ಪಡೆಯಬೇಕಾದರೆ ಸತ್ಯಾಗ್ರಹವೊಂದೇ ಮಾರ್ಗವೆಂದು ಅರಿವುಂಟಾಯಿತು."[೯೮]

'೧೯೩೬ ರಲ್ಲಿ ಫೈಜ್‌ಪುರದಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಮೈಸೂರು ಸಂಸ್ಥಾನದ ಹಲವಾರು ಕಾರ್ಯಕರ್ತರು ಭಾಗವಹಿಸಿದ್ದರು. ಅಲ್ಲಿ ಪಂಡಿತ್ ಜವಹರಲಾಲ್ ನೆಹರು, ಬಾಬು ರಾಜೇಂದ್ರ ಪ್ರಸಾದ್, ಮುಂತಾದ ನಾಯಕರನ್ನು ಭೇಟಿ ಮಾಡಿ ಮೈಸೂರು ಸಂಸ್ಥಾನದಲ್ಲಿ ನಡೆಯುವ ಚುನಾವಣೆಗಳಲ್ಲಿ ಮೈಸೂರು ಕಾಂಗ್ರೆಸ್ ಕೂಡ ಸ್ಪರ್ಧಿಸಲು ಅನುಮತಿ ಕೋರಿದರು. ಅವರಿಂದ ಅನುಮತಿ ದೊರಕಿಸಿಕೊಂಡು ೧೯೩೭ ರ ಮಾರ್ಚ್ ನಲ್ಲಿ ನಡೆದ ಪ್ರಜಾ ಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳಿಗೆ ನಡೆದ ಚುನಾವಣೆಯಲ್ಲಿ ಮೈಸೂರು ಕಾಂಗ್ರೆಸ್ ತನ್ನ ಉಮೇದುವಾರರನ್ನು ನಿಲ್ಲಿಸಿತು. ಹೀಗೆ ಮೈಸೂರು ಸಂಸ್ಥಾನದ ಚುನಾವಣೆಯಲ್ಲಿ ಮೊಟ್ಟ ಮೊದಲ ಬಾರಿಗೆ ಚುನಾವಣೆಯ ಮೂಲಕ ಪ್ರತ್ಯಕ್ಷವಾಗಿ ಪ್ರವೇಶಿಸಿತು.

ಈ ಹಿನ್ನೆಲೆಯಲ್ಲಿ ೧೯೩೭ನೇ ಇಸವಿಯಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಚುನಾವಣೆ ನಡೆಯುವ ಕಾರ್ಯಕ್ರಮ ಪ್ರಕಟವಾಯಿತು. ವಿ.ಎಸ್.ನಾರಾಯಣರಾಯರು ಕಾಂಗ್ರೆಸ್ ಪರ ಪ್ರಚಾರ ಸಭೆಗೆ ಮೈಸೂರಿಗೆ ಬರುವಂತೆ ವೀರಣ್ಣಗೌಡರಿಗೆ ಸೂಚಿಸಿದರು. ಕಮಲಾದೇವಿ ಚಟ್ಟೋಪಾಧ್ಯಾಯರು, ಕೆ.ಟಿ.ಭಾಷ್ಯಂ, ತಗಡೂರು ರಾಮಚಂದ್ರರಾಯರು ಬಹಿರಂಗ ಸಭೆಯಲ್ಲಿ ಭಾಷಣ ಮಾಡಬಾರದೆಂದು ಜಿಲ್ಲಾ ಮ್ಯಾಜಿಸ್ಟ್ರೇಟರಾಗಿದ್ದ ಟಿ.ಜಿ.ರಾಮ ಅಯ್ಯರ್ ಆಜ್ಞೆಯೊಂದನ್ನು ಹೊರಡಿಸಿದ್ದರು. ಆಗಿನ್ನೂ ನಿಷೇದಾಜ್ಞೆಗಳನ್ನು ಉಲ್ಲಂಘಿಸಬೇಕೆಂಬ ನಿರ್ಣಯವನ್ನು ಕಾಂಗ್ರೆಸ್ ಸಂಸ್ಥೆಯವರು ಕೈಗೊಂಡಿರಲಿಲ್ಲ. 'ಕಮಲಾದೇವಿಯವರು ಬೆಂಗಳೂರು ನಗರದ ಏಳು ಮೈಲಿ ಸುತ್ತಳತೆಯಲ್ಲಿ ಆರು ತಿಂಗಳ ಕಾಲ ಭಾಷಣ ಮಾಡಬಾರದೆಂದು ಸರ್ಕಾರವು ನಿಷೇದಾಜ್ಞೆ ಜಾರಿ ಮಾಡಿತು. ಆಗ ಕಾಂಗ್ರೆಸ್ಸಿನ ಕೆಲವು ನಾಯಕರು ಆಲೋಚಿಸಿ ಕಮಲಾದೇವಿಯವರ ಭಾಷಣವನ್ನು ಬೇರೆಯವರು ಓದುವುದೆಂದು ತೀರ್ಮಾನಿಸಿದರು. ಈ ತೀರ್ಮಾನದಿಂದ ಜನರು ಹೆಚ್ಚು ಉತ್ಸಾಹಗೊಂಡರು. ಆದರೆ ಇದೊಂದು ರೀತಿ ಸರ್ಕಾರದ ಮುಖಕ್ಕೆ ಮಸಿ ಬಳಿದಂತಾಯಿತು.'[೯೯]

ಆದುದರಿಂದ ಕಮಲಾದೇವಿ ಚಟ್ಟೋಪಾಧ್ಯಾಯ, ಕೆ.ಟಿ.ಭಾಷ್ಯಂ, ತಗಡೂರು ರಾಮಚಂದ್ರರಾಯರು ಈ ಮೂರು ಮಂದಿಯೂ ಭಾಷಣ ಮಾಡುವಂತಿರಲಿಲ್ಲ. ಹೆಚ್.ಕೆ.ವೀರಣ್ಣಗೌಡರು ಮೈಸೂರಿಗೆ ಬರುವ ವರ್ತಮಾನ ತಿಳಿಯದ ಕಾರಣ ಅವರಿಗೆ ನಿಷೇದಾಜ್ಞೆ ಹೊರಡಿಸಿರಲಿಲ್ಲ. ಇದರ ಪರಿಣಾಮ ನಿಷೇದಾಜ್ಞೆಯಿಂದ ಮುಕ್ತರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಸಭೆಯಲ್ಲಿ ಮೂವರು ಮುಖಂಡರು ತೆಗೆದುಕೊಳ್ಳುತ್ತಿದ್ದಷ್ಟು ಕಾಲವನ್ನು ತಾವೊಬ್ಬರೇ ತೆಗೆದುಕೊಂಡು ದೀರ್ಘವೂ ಅತಿ ಕಟುವಾಗಿ ಸರ್ಕಾರದ ಕಾರ್ಯನೀತಿಗಳನ್ನು ಧಮನಕಾರಿ ಆಡಳಿತ ಧೋರಣೆಯನ್ನು ಟೀಕಿಸಿ ಮಾಡಿದ

---

[೯೮] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ-೩೩-೩೪.
[೯೯] ಕೆ.ವೀರತಪ್ಪ. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ. ಪುಟ -೨೭

ಉಗ್ರ ಭಾಷಣದಿಂದ ಸಭಿಕರು ಪ್ರಭಾವಿತರಾದರು. ಹೆಚ್.ಕೆ.ವೀರಣ್ಣಗೌಡರು ಮತ್ತು ಇತರ ಮುಖಂಡರು ತಮ್ಮ ಭಾಷಣಗಳ ವೈಖರಿಯಿಂದ ನಡೆಸಿದ ಪ್ರಚಾರ ಸಭೆಗಳು ಯಶಸ್ವಿಯಾಗಿದ್ದವು ಎನ್ನುವುದಕ್ಕೆ ಚುನಾವಣೆಗೆ ಸ್ಪರ್ಧಿಸಿದ್ದ ಎಲ್ಲಾ ೩೦ ಮಂದಿ ಕಾಂಗ್ರೆಸ್ ಉಮೇದುವಾರರೂ ಜಯಶೀಲರಾದುದೇ ಸಾಕ್ಷಿ. ಆ ಚುನಾವಣೆಯಲ್ಲಿ ಮದ್ದೂರು ತಾಲ್ಲೂಕಿನಿಂದ ಹೆಚ್.ಕೆ.ವೀರಣ್ಣಗೌಡರು ಚುನಾಯಿತರಾದರು. ಮೊದಲ ಪ್ರಯತ್ನದಲ್ಲೇ ಇಷ್ಟರಮಟ್ಟಿನ ಜಯಗಳಿಸಿದುದ್ದಕ್ಕೆ ಮತ್ತಷ್ಟು ಶ್ರಮವಹಿಸಿ ಸಂಸ್ಥಾನದಲ್ಲೇ ಕಾಂಗ್ರೆಸ್ ಬಲವನ್ನು ಹೆಚ್ಚಿಸಬೇಕೆಂಬ ಛಲ ಕಾಂಗ್ರೆಸ್ ನಾಯಕರಲ್ಲುಂಟಾಯಿತು. ಮೈಸೂರು ಸಂಸ್ಥಾನದಲ್ಲೆಲ್ಲ ಕಾಂಗ್ರೆಸನ್ನು ಬಲಪಡಿಸುವ ಉದ್ದೇಶದಿಂದ ಪ್ರತಿಯೊಂದು ಜಿಲ್ಲೆಯ ಪ್ರತಿನಿಧಿಯನ್ನು ಸೇರಿಸಿಕೊಂಡು ‘ಮೈಸೂರು ಕಾಂಗ್ರೆಸ್ ಬೋರ್ಡ್’ ಎಂಬ ಕೇಂದ್ರ ಸಂಸ್ಥೆಯನ್ನು ಬೆಂಗಳೂರಿನಲ್ಲಿ ನಡೆದ ಮೊದಲನೆಯ ರಾಷ್ಟ್ರಕೂಟದಲ್ಲಿ ೧೯೩೭ ರ ಮೇ ತಿಂಗಳಲ್ಲಿ ಸ್ಥಾಪಿಸಲಾಯಿತು.

ಈ ವೇಳೆಗಾಗಲೇ ಇರ್ವಿನ್ ನಾಲಾ ಚಳುವಳಿಯಿಂದ ರೈತರ ಕಷ್ಟಗಳಿಗೆ ಧ್ವನಿಯಾಗಿದ್ದ ಹೆಚ್.ಕೆ.ವೀರಣ್ಣಗೌಡರು ಸ್ಥಳೀಯ ಚುನಾವಣೆಯಲ್ಲಿ ಸೋತರು. ಈ ಸೋಲಿಗೆ ಯಾವುದೇ ಪ್ರಬಲವಾದ ಕಾರಣಗಳಿರಲಿಲ್ಲ. ಸ್ಥಳೀಯ ಜನರಿಗೆ ವ್ಯಕ್ತಿನಿಷ್ಠೆಯ ಮತ್ತು ವಿಶ್ವಾಸದ ಬಗ್ಗೆ ಇದ್ದ ಮನೋಧರ್ಮವೇ ಕಾರಣ. ಚುನಾವಣಾ ಪ್ರಚಾರದ ಸಮಯದಲ್ಲಿ ಮತಯಾಚನೆಗೆ ಬಂದ ಹೆಚ್.ಕೆ.ವೀರಣ್ಣಗೌಡರನ್ನು ಕಂಡು ಜನರು ಪ್ರೀತಿಯಿಂದ ಮಾತನಾಡಿಸಿದರೂ ಮತ ನೀಡುವ ವಿಚಾರದಲ್ಲಿ ‘ನೋಡಿ ಸ್ವಾಮಿ, ನೀವು ಈ ಪ್ರಾಂತ್ಯಕ್ಕೆ ಬಂದು ಕಷ್ಟನಿಷ್ಠೂರಗಳನ್ನು ಅನುಭವಿಸಿ ರೈತರಿಗೆ ಬೇಕಾದಷ್ಟು ಉಪಕಾರ ಮಾಡಿದ್ದೀರಿ. ಅದಕ್ಕಾಗಿ ನಾವು ನಿಮಗೆ ಋಣಿಗಳು. ನೀವು ನಮ್ಮ ಪ್ರತಿನಿಧಿಯಾಗಿ ಚುನಾಯಿತರಾದರೆ ನಮ್ಮ ಹಿತವನ್ನು ದಕ್ಷತೆಯಿಂದ ನೋಡಿಕೊಳ್ಳುವ ಶಕ್ತಿಯೂ ನಿಮಗಿದೆ ಎಂಬುದನ್ನು ನಾವು ಮನಗಂಡಿದ್ದೇವೆ. ಆದರೆ, ನೀವು ಇತ್ತೀಚೆಗೆ ನಮ್ಮ ಮಧ್ಯೆ ಬಂದು ನೆಲೆಸಿರುವವರು. ನಿಮಗಿಂತ ಮೊದಲು ಎಷ್ಟೋ ವರ್ಷಗಳಿಂದ ಪ್ರಜಾಪ್ರತಿನಿಧಿ ಮುಂತಾದ ಸಭೆಗಳಲ್ಲಿ ನಮ್ಮ ಪ್ರತಿನಿಧಿಯಾಗಿ ಈಗಲೂ ನಮ್ಮ ಭರವಸೆಯಿಂದಲೇ ಚುನಾವಣೆಗೆ ನಿಂತಿರುವ ನಮ್ಮ ಹಳೇ ಸ್ನೇಹಿತರನ್ನು ಕೈಬಿಡುವುದು ನಮಗೆ ಧರ್ಮವೇ? ನೀವೇನೋ ಒಂದಿಷ್ಟು ಉಪಕಾರ ಮಾಡಿದ್ದೀರೆಂದು ಹೊಸಬರಾದ ನಿಮ್ಮನ್ನು ತಬ್ಬಿಕೊಂಡು ನಮ್ಮಲ್ಲಿ ವಿಶ್ವಾಸದಿಂದಿರುವ ನಿಮ್ಮ ಎದುರಾಳಿಗಳನ್ನು ಕೈಬಿಡುವುದಕ್ಕೆ ನಮಗೇನು ಕಾರಣವಿದೆ? ಈ ದಿನ ಅವರನ್ನು ಬಿಟ್ಟು ನಿಮ್ಮನ್ನು ಕೈಹಿಡಿದೋ ಎನ್ನಿ. ನಾಳೆ ನಿಮ್ಮನ್ನು ಬಿಟ್ಟು ನಾವು ಮತ್ತೊಬ್ಬರ ಕೈ ಹಿಡಿಯುವುದಿಲ್ಲವೆಂಬ ನಂಬಿಕೆಯೇನು? ಸ್ನೇಹ, ವಿಶ್ವಾಸ ಎಂಬ ಮಾತುಗಳಿಗೆ ಅರ್ಥವೇ ಇಲ್ಲವೇ ಸ್ವಾಮಿ?’[೧೦೦] ಎಂದು ಪ್ರಶ್ನಿಸಿದರು.

ಚುನಾವಣೆ ಸೋತು ಬೆಂಗಳೂರಿಗೆ ಮರಳಿದರು. ಬೆಂಗಳೂರು ಬಸವನಗುಡಿಯಲ್ಲಿ ಬಾಡಿಗೆ ಮನೆಯಲ್ಲಿ ವಾಸಿಸುತ್ತಾ ಒಕ್ಕಲಿಗರ ಪತ್ರಿಕೆ, ಜನಜೀವನ ಪತ್ರಿಕೆಗಳಿಗೆ ಲೇಖನ ಬರೆದು ಕಳಿಸುವ ಕಾರ್ಯದಲ್ಲಿ ತೊಡಗಿದರು. ಎನ್ನನ್ನಾದರೂ ಸಾಧಿಸುವ ಹೊಸತನ ಹೊಂದಿದ್ದ ವೀರಣ್ಣಗೌಡರು ಮತ್ತೆ

---

[೧೦೦] ಬದುಕು ಮೆಲುಕು. ಪುಟ:೧೨೯–೧೩೦

ಮದ್ದೂರಿಗೆ ಮರಳಿ ತಾವು ಕೊಂಡಿದ್ದ ನಾಲ್ಕು ಎಕರೆ ಜಮೀನಿನಲ್ಲಿ ಕಬ್ಬು ಬೆಳೆಯಲು ತೊಡಗಿದರು. ಕೆಲ ದಿನಗಳ ನಂತರ ಹೆಚ್.ಕೆ.ವೀರಣ್ಣಗೌಡರು ಪತ್ರಿಕೋದ್ಯಮ ಬಿಟ್ಟರೆ, ರಾಜಕೀಯದಿಂದ ಜನ ಸಾಮಾನ್ಯರ ಸೇವೆಯನ್ನು ಹೆಚ್ಚಿನ ಮಟ್ಟದಲ್ಲಿ ಮಾಡಲು ಸಾಧ್ಯವೆಂದು ಭಾವಿಸಿದರು. ಕಾಂಗ್ರೆಸ್ ಪಕ್ಷದ ಹೆದ್ದಾರಿಯಲ್ಲಿ ಸಾಗಲು ನಿಶ್ಚಯಿಸಿದರು

ಅಷ್ಟು ಹೊತ್ತಿಗಾಗಲೇ ಅಂದರೆ ಸುಮಾರು ೧೯೨೮ರ ಸುಮಾರಿನಲ್ಲಿಯೇ ವಿದ್ಯಾರ್ಥಿಯಾಗಿದ್ದಾಗಲೇ ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ಸಿಗೆ ನಾಲ್ಕಾಣೆ ಸದಸ್ಯರಾಗಿದ್ದರು. ಎಲ್.ಎಸ್.ರಾಜು ಅವರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ಕಾಂಗ್ರೆಸ್ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ಶ್ರೀಮತಿ ತಾಯಮ್ಮ ಹೆಚ್.ಕೆ.ವೀರಣ್ಣಗೌಡರು ಸಮಿತಿಯ ಉಪಾಧ್ಯಕ್ಷೆಯಾಗಿದ್ದರು (ಸುಮಾರು ೧೯೩೩-೩೮ನೇಇಸವಿ) ಸಂದರ್ಭಾನುಸಾರ ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ ಪರವಾಗಿ ಬಹಿರಂಗ ಸಭೆಗಳನ್ನು ಏರ್ಪಡಿಸುವುದು, ಜವಾಬ್ದಾರಿ ಸರ್ಕಾರ ಸ್ಥಾಪನೆಯ ಅಗತ್ಯ, ಅದಕ್ಕಾಗಿ ಕೈಗೊಳ್ಳಬೇಕಾದ ಕಾರ್ಯಕ್ರಮ ಇತ್ಯಾದಿ ವಿಷಯಗಳ ಮೇಲೆ ಮತ್ತು ಸರ್ಕಾರದ ಕಾರ್ಯ ನೀತಿಗಳನ್ನು, ಆಡಳಿತ ಧೋರಣೆಗಳನ್ನು ಕಟುವಾಗಿ ಟೀಕಿಸಿ ಭಾಷಣ ಮಾಡುತ್ತಿದ್ದರು. ಹೀಗಾಗಿ ಹೆಚ್.ಕೆ.ವೀರಣ್ಣಗೌಡರ ಚಟುವಟಿಕೆಗಳ ಮೇಲೆ ಸರ್ಕಾರದವರು ನಿಗವಹಿಸಿದ್ದರು. ವೀರಣ್ಣಗೌಡರು ೧೯೩೮ನೇ ಇಸವಿಯಲ್ಲಿ ಮೈಸೂರು ಜಿಲ್ಲಾ ಬೋರ್ಡಿನ ಸದಸ್ಯರಾಗಿ, ಮೈಸೂರು ಜಿಲ್ಲಾ ಏಜುಕೇಷನ್ ಬೋರ್ಡಿಗೂ, ಮೈಸೂರು ಪ್ರಜಾ ಪ್ರತಿನಿಧಿ ಸಭೆಗೂ, ಮದ್ದೂರು ಪುರಸಭೆಗೂ ಚುನಾಯಿತರಾಗಿ, ಮದ್ದೂರು ಪುರಸಭೆಯ ಅಧ್ಯಕ್ಷರಾಗಿದ್ದರು.

ಸರ್ಕಾರದ ದಬ್ಬಾಳಿಕೆ ಕಾಂಗ್ರೆಸ್ ಚಳುವಳಿಗಾರ ಹಾಗೂ ಜನಸಾಮಾನ್ಯರ ಮೇಲೆ ಹೆಚ್ಚುತ್ತಿದ್ದುದನ್ನು ಕಂಡ 'ಕಾಂಗೆಸ್ ಪಾರ್ಲಿಮೆಂಟರಿ ಬೋರ್ಡ್‌ನ ಅಧ್ಯಕ್ಷರಾದ ಟಿ.ಸಿದ್ದಲಿಂಗಯ್ಯನವರು ಕಾಂಗ್ರೆಸ್ ಅಧ್ಯಕ್ಷರಾದ ಜವಹರ್ ಲಾಲ್ ನೆಹರು ಅವರಿಗೆ ಪತ್ರ ಬರೆದು ತಿಳಿಸಿ ಅವರ ಸಲಹೆಯಂತೆ ಸಿದ್ದಲಿಂಗಯ್ಯನವರು ಕಾಂಗ್ರೆಸ್ ಕಾರ್ಯಕರ್ತರ ಸಭೆ ಕರೆದು ಚರ್ಚಿಸಿ ಒಂದು ಕ್ರಿಯಾ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಟಿ.ಸಿದ್ದಲಿಂಗಯ್ಯ, ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ತಗಡೂರು ರಾಮಚಂದ್ರರಾಯರನ್ನೊಳಗೊಂಡ ಈ ತ್ರಿಮೂರ್ತಿಗಳು ಮಿಂಚಿನ ವೇಗದಲ್ಲಿ ಸಂಸ್ಥಾನದಲ್ಲೆಲ್ಲ ಸಂಚರಿಸಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಹೋರಾಟ ನಡೆಸಲು ಜನತೆಯನ್ನು ಹುರಿದುಂಬಿಸಿದರು. ಇದರಿಂದ ಕೋಪಗೊಂಡ ಸರ್ಕಾರ ಈ ಮೂವರನ್ನು ಬಂಧಿಸಿ ಒಂದು ವರ್ಷದ ಸಾದಾ ಶಿಕ್ಷೆ ವಿಧಿಸಿ ಸೆರೆಮನೆಗೆ ಹಾಕಿತು. ಆದ್ದರಿಂದ ಮೈಸೂರು ಕಾಂಗ್ರೆಸ್ ಕಮಿಟಿಯನ್ನು ತಾತ್ಕಾಲಿಕವಾಗಿ ರದ್ದುಗೊಳಿಸಿ ಕೆ.ಟಿ.ಭಾಷ್ಯಂರವರನ್ನು ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಲಾಯಿತು.”[೧೦೧] 'ಕೆ.ಟಿ.ಭಾಷ್ಯಂರವರು ನಯ ವಿನಯದಿಂದ ದಿವಾನ್ ಸರ್ ಮಿರ್ಜಾ ಇಸ್ಮಾಯಿಲರ ಮನ ಒಲಿಸಲು ಯತಿಸಿದರು. ಆದರೆ

---

[೧೦೧] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ-೩೫ ೨೦೦೨

೧೯೩೭ ಅಕ್ಟೋಬರ್ ೧೫ನೇ ತಾರೀಖು ಮಧ್ಯ ರಾತ್ರಿ ಕೆ.ಟಿ.ಭಾಷ್ಯಂರನ್ನು ರಾಜದ್ರೋಹ ಮಾಡಿದರೆಂಬ ಆಪಾದನೆಯ ಮೇಲೆ ದಸ್ತಗಿರಿ ಮಾಡಲಾಯಿತು. ಕೆ.ಟಿ.ಭಾಷ್ಯಂರವರು ಆಗ ಪ್ರಜಾ ಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿದ್ದರು. ಪ್ರಜಾಪ್ರತಿನಿಧಿ ಸಭೆ ಸೇರುವ ಮುನ್ನಾ ದಿನ ಈ ಬಂಧನ ಆಯಿತು. ಕೆ.ಟಿ.ಭಾಷ್ಯಂರವರ ಬಂಧನದಿಂದ ಕುಪಿತಗೊಂಡ ಶಾಸನ ಸಭಾ ಸದಸ್ಯರು ಅಕ್ಟೋಬರ್ ೧೬ ರಂದು ಮೈಸೂರಿನಲ್ಲಿ ಶಾಸನ ಸಭಾ ಅಧಿವೇಶನ ಆರಂಭವಾಗುವ ಮುನ್ನ ಸಭೆ ಸೇರಿ ಪ್ರಜಾ ಪ್ರತಿನಿಧಿ ಸಭೆಯ ನಾಯಕತ್ವವನ್ನು ಹೆಚ್.ಕೆ.ವೀರಣ್ಣಗೌಡರಿಗೆ ವಹಿಸಿದರು.'[೧೦೨]

ಪ್ರಜಾ ಪ್ರತಿನಿಧಿ ಸಭೆಯು ಪ್ರಾರಂಭವಾದ ದಿನ ಬ್ರಿಟಿಷ್ ರೆಸಿಡೆಂಟರೂ ಆಸೀನರಾಗಿದ್ದರು. ದಿವಾನರು ಎದ್ದುನಿಂತು ಇಂಗ್ಲೀಷಿನಲ್ಲಿ ಅಚ್ಚಾಗಿದ್ದ ತಮ್ಮ ಭಾಷಣವನ್ನು ಓದಲು ಪ್ರಾರಂಭಿಸಿದರು. ಆ ಕೂಡಲೇ ಹೆಚ್.ಕೆ.ವೀರಣ್ಣಗೌಡರು ಎದ್ದು ನಿಂತು, 'ಅಧ್ಯಕ್ಷರೇ ನಿಮ್ಮ ದುರಾಡಳಿತ ನೀತಿಯನ್ನು ಪ್ರತಿಭಟಿಸುವುದಕ್ಕಾಗಿ ಕಾಂಗ್ರೆಸ್ ಪಕ್ಷದವರಾದ ನಾವು ಹೊರಗಡೆ (ವಾಕ್‌ಔಟ್) ಹೋಗುತ್ತೇವೆ' ಎಂದು ಇಂಗ್ಲೀಷಿನಲ್ಲಿ ಹೇಳಿದರು. ಯಾರೂ ನಿರೀಕ್ಷಿಸದಿದ್ದ ಈ ಘಟನೆಯಿಂದ ದಿವಾನರು ಗೊಂದಲಕ್ಕೊಳಗಾದರೂ ತೋರ್ಪಡಿಸಿಕೊಳ್ಳದೆ ತಮ್ಮ ಭಾಷಣವನ್ನು ಮುಂದುವರಿಸಿದರು. ಪ್ರಜಾ ಪ್ರತಿನಿಧಿ ಸಭೆಯ ಚರಿತ್ರೆಯಲ್ಲಿ ಸದಸ್ಯರು ವಾಕ್‌ಔಟ್ ಮಾಡಿದುದು ಮೊದಲಿಗೆ ೯೩೪ನೇ ಇಸವಿಯಲ್ಲಿ ಪ್ರಜಾಪಕ್ಷದವರು ಡಿ.ಎಸ್.ಮಲ್ಲಪ್ಪನವರ ನೇತೃತ್ವದಲ್ಲಿ ಸರ್ಕಾರದ ಆಡಳಿತ ಕುರಿತು ತಮ್ಮ ಅಸಮಾಧಾನ ಸೂಚಿಸಲು ಸಭಾ ತ್ಯಾಗ ಮಾಡಿದ್ದರು. ಆದರೆ ಅದು ಪ್ರಜಾಪ್ರತಿನಿಧಿ ಸಭೆ ಸೇರಿದ ಮೊದಲನೆ ದಿನವಾಗಿರಲಿಲ್ಲ. ಆ ಸಭೆಯಲ್ಲಿ ರೆಸಿಡೆಂಟರು ಉಪಸ್ಥಿತರಿರಲಿಲ್ಲ. ಆದರೆ ೧೯೩೭ರ ಅಕ್ಟೋಬರ್ ೧೬ ರ ಸಭೆಯ ಪ್ರಾರಂಭದ ದಿನ ಬ್ರಿಟಿಷ್ ರೆಸಿಡೆಂಟರನ್ನು ಆಹ್ವಾನಿಸಿ, ತಮ್ಮ ಆಡಳಿತಾಡಂಬರವನ್ನು ತೋರ್ಪಡಿಸಲು ದಿವಾನರು ಭಾಷಣ ಓದುವುದಕ್ಕೆ ಎದ್ದು ನಿಂತಾಗ, ರೆಸಿಡೆಂಟರ ಸಮ್ಮುಖದಲ್ಲೆ, ಕಾಂಗ್ರೆಸ್ ಸದಸ್ಯರು ಸಭೆಯಲ್ಲಿ ಹೇಳಿಕೆಯೊಂದನ್ನಿತ್ತು, ಹೊರಗಡೆ ಹೋದುದು ಪ್ರಜಾ ಪ್ರತಿನಿಧಿ ಸಭೆಯ ಚರಿತ್ರೆಯಲ್ಲೇ ಮೊದಲ ಸಂಗತಿಯಾಗಿದೆ. ಕಾಂಗ್ರೆಸ್ ಸದಸ್ಯರೊಂದಿಗೆ ಇತರ ಪಕ್ಷದ ಕೆಲವು ಮಂದಿ ಕೂಡಿಕೊಂಡು ಸಭೆಯಿಂದ ಹೊರ ನಡೆದರು.

ಕೆ.ಟಿ.ಭಾಷ್ಯಂರವರ ಬಂಧನ ನಂತರ ಪ್ರಜಾ ಸಂಯುಕ್ತ ಪಕ್ಷವನ್ನು ಆದಷ್ಟು ಬೇಗ ವಿಲೀನಗೊಳಿಸಲು ಹೆಚ್.ಕೆ.ವೀರಣ್ಣಗೌಡರು ಮತ್ತು ಕಾಂಗ್ರೆಸ್‌ನ ಸರ್ದಾರ್ ವೆಂಕಟರಾಮಯ್ಯನವರು ಸೇರಿದಂತೆ ಇತರರು ಎಲ್ಲರನ್ನು ಒಂದೆಡೆ ಸೇರಿಸ ಬೇಕೆಂದು ಮೈಸೂರಿನ ಯಾಲಕ್ಕಪ್ಪಾಚಾರಿ ಛತ್ರದಲ್ಲಿ ಸೇರುವಂತೆ ನಿರ್ಧರಿಸಿದರು. ಮೈಸೂರಿನ ಕೆಂಪಲಿಂಗಯ್ಯನವರು ಈ ಸಂಬಂಧವಾಗಿ ನೆರವಾದರು.

[೧೦೨] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ-೩೫೩೬ ೨೦೦೨

೧೯೩೭ ಅಕ್ಟೋಬರ್ ೧೬ ರ ಬೆಳಿಗ್ಗೆ ಹೆಚ್.ಕೆ.ವೀರಣ್ಣಗೌಡರು ಕೆ.ಸಿ.ರೆಡ್ಡಿಯವರನ್ನು ಕರೆದುಕೊಂಡು ಯಾಲಕ್ಕಪ್ಪಾಚಾರಿ ಛತ್ರ ಸೇರಿದರು.'[೧೦೩]

ಯಾಲಕ್ಕಪ್ಪಾಚಾರಿ ಛತ್ರದಲ್ಲಿ ಸೇರಿದ ಸುಮಾರು ಐದು ನೂರು ಮಂದಿ ಸದಸ್ಯರ ಸಭೆ ಒಂದು ಗೊತ್ತುವಳಿಯನ್ನು ಅಂಗೀಕರಿಸಿತು. 'ಬ್ರಿಟಿಷ್ ಭಾರತ ಮತ್ತು ದೇಶೀಯ ಸಂಸ್ಥಾನಗಳು ಸಮ್ಮೀಳಿತವಾಗಿ ಒಂದೇ ಒಂದು ಸಂಸ್ಥೆಯೆಂದು ತೋರಿಸಲು ಭಾರತವು ಅವಿಭಕ್ತ, ಒಂದೇ ಜನತೆ, ಒಂದೇ ಪಕ್ಷವೆಂದು ತೋರಿಸಲು, ಮತ್ತು ರಾಷ್ಟ್ರೀಯ ಮಹಾಸಭೆ ಮತ್ತು ಪ್ರಜಾ ಸಂಯುಕ್ತ ಪಕ್ಷದ ಕಾರ್ಯಕ್ರಮಗಳೊಂದೇ ಎಂಬುದನ್ನು ಸ್ಪಷ್ಟಪಡಿಸುವುದೇ ಇದರ ಗುರಿಯಾಗಿತ್ತು. ಪ್ರಜಾ ಸಂಯುಕ್ತ ಪಕ್ಷವು ಕಾಂಗ್ರೆಸ್‌ನಿಂದ ಬೇರೆಯಾಗಿರದೆ ಕಾಂಗ್ರೆಸ್ಸನ್ನು ಬಲಪಡಿಸಲು, ಕಾಂಗ್ರೆಸ್ಸನ್ನು ಸೇರುತ್ತದೆ ಎಂಬ ನಿರ್ಣಯವನ್ನು ಕೈಗೊಂಡರು'.[೧೦೪]

ಆದರೆ ಮದ್ದೂರಿನ ಎಂ.ಸಿ.ಲಿಂಗೇಗೌಡರು ಮತ್ತು ಎನ್.ಸಿ.ಮಲ್ಲಯ್ಯನವರು ಇದಕ್ಕೆ ಒಪ್ಪಲಿಲ್ಲ. ಕಾಂಗ್ರೆಸ್‌ಗೆ ಸೇರದೆ ಉಳಿದ ಪಕ್ಷಗಳೆಲ್ಲಾ ಒಂದುಗೂಡಿ ಕಾಂಗ್ರೆಸ್ಸನ್ನು ಎದುರಿಸಿ ಮುಂದೆ ಬರಬೇಕೆಂಬುದು ಅವರ ವಾದ. ಅಂದಿಗೆ ಅದು ಉಚಿತವಾದ ಕ್ರಮವಾಗಿರಲಿಲ್ಲ. ಉತ್ತಮ ಧ್ಯೇಯೋದ್ದೇಶಗಳಿರುವ ರಾಜಕೀಯ ಸಂಸ್ಥೆಯೆಂದರೆ ಕಾಂಗ್ರೆಸ್ ಸಂಸ್ಥೆಯೊಂದೇ ಎಂದೂ ಅದನ್ನುಳಿದು ಯಾರೇ ಗುಂಪಾದರೂ ಅದರಿಂದ ದೇಶದ ಹಿತಸಾಧಿಸಲು ಸಾಧ್ಯವಾಗುವುದಿಲ್ಲವೆಂದು ಎಲ್ಲ ಪಕ್ಷಗಳೂ ಕಾಂಗ್ರೆಸ್‌ನಲ್ಲೇ ವಿಲೀನವಾಗಬೇಕೆಂದು ಅನೇಕ ಮುಖಂಡರು ಅಭಿಪ್ರಾಯ ಪಟ್ಟರು. ಎಂ.ಸಿ.ಲಿಂಗೇಗೌಡರು ಮತ್ತು ಎನ್.ಸಿ.ಮಲ್ಲಯ್ಯನವರು ಸಭೆಯಿಂದ ಹೊರಟು ಹೋದರು. ಅವರಿಬ್ಬರೂ ಕಾಂಗ್ರೆಸ್ಸಿನ ವಿರೋಧಿಗಳಾಗಿಯೇ ಉಳಿದುಕೊಂಡರು.'[೧೦೫]

ವಿಲೀನದ ವಿಶೇಷ ಅಧಿವೇಶನ ವಿ.ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಎಚ್.ಸಿ.ದಾಸಪ್ಪ ಸ್ವಾಗತಾಧ್ಯಕ್ಷರಾಗಿದ್ದರು. ಕೆ.ಸಿ.ರೆಡ್ಡಿಯವರು ನಿರ್ಣಯಗಳನ್ನು ಮಂಡಿಸಿದರು. ಎರಡೂ ಪಕ್ಷಗಳ ಮುಖಂಡರು ಸಭೆಯಲ್ಲಿ ಹಾಜರಾಗಿದ್ದರು. ವಿಲೀನದ ಆ ನಂತರ ಎಲ್ಲರೂ ಕಾಂಗ್ರೆಸ್ ಟೋಪಿ ಧರಿಸುವ ಮೂಲಕ ಕಾಂಗ್ರೆಸ್ಸಿಗರಾದರು. ಮದ್ದೂರಿನ ಶ್ರೀನಿವಾಸಅಯ್ಯಂಗಾರ್ ಕಾರ್ಯಕರ್ತರಿಗೆ ಹೊಸ ಟೋಪಿಗಳನ್ನು ಒದಗಿಸಿದರು.'[೧೦೬] ಇದಕ್ಕೂ ಮೊದಲು ಪ್ರಜಾ ಸಂಯುಕ್ತ ಪಕ್ಷದ ಸದಸ್ಯರ ವಿಶೇಷ ಅಧಿವೇಶನ ನಡೆದು ಕಾಂಗ್ರೆಸ್ ಪಕ್ಷದೊಳಗೆ ಪ್ರಜಾ ಸಂಯುಕ್ತ ಪಕ್ಷವನ್ನು ವಿಲೀನ ಗೊಳಿಸುವ ನಿರ್ಣಯವನ್ನು ಮಾಡಿತು. ಇದರ ಪರಿಣಾಮವಾಗಿ ಪ್ರಜಾ ಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ಪ್ರತಿನಿಧಿಗಳ ಬಲ ಮೂವತ್ತು ಇದ್ದದ್ದು ನೂರ ಮೂವತ್ತಕ್ಕೇರಿತು. ಇದಕ್ಕೆ

---

[೧೦೩] ಹೆಚ್.ಕೆ.ವೀರಣ್ಣಗೌಡ: ಬದುಕು ಮೆಲುಕು. ೧೯೭೪. ಪುಟ ೧೩೮,೧೩೯

[೧೦೪] ಡಿ.ಲಿಂಗಯ್ಯ : ಶಿವಪುರ ಧ್ವಜಸತ್ಯಾಗ್ರಹ. ೧೯೭೯. ಪುಟ- ೫೨

[೧೦೫] ಡಿ.ಲಿಂಗಯ್ಯ : ಶಿವಪುರ ಧ್ವಜಸತ್ಯಾಗ್ರಹ. ೧೯೭೯. ಪುಟ- ೫೨

[೧೦೬] ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ೨೦೦೨. ಪುಟ-೪೧

ಪೂರ್ವಭಾವಿಯಾಗಿ ಕೆಲವು ಬೆಳವಣಿಗೆಗಳು ಆಗಿದ್ದವು. ಬೆಂಗಳೂರು ನಗರ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಎಸ್.ವೆಂಕಟಪತಯ್ಯನವರು ಪ್ರಜಾ ಪಕ್ಷದ ಎನ್.ಬಾಲಕೃಷ್ಣಯ್ಯನವರಿಂದ ಪರಾಜಿತರಾಗಿದ್ದರು. ಇವರ ಸೋಲು ಕಾಂಗ್ರೆಸ್‌ನಲ್ಲಿ ಚಿಂತೆಯನ್ನುಂಟು ಮಾಡಿತು. ಇಂತಹ ಸನ್ನಿವೇಶದಿಂದ ಪಾರಾಗಲು ಮತ್ತು ಕಾಂಗ್ರೆಸ್ಸನ್ನು ಶಕ್ತಿಶಾಲಿಯಾಗಿ ಬೆಳೆಸಲು ಸರ್ದಾರ್ ವೆಂಕಟರಾಮಯ್ಯನವರು ಕೆಲವು ಅಂಶಗಳನ್ನು ಸೂಚಿಸಿದರು.

“ನಮ್ಮಲ್ಲಿ ಬಹುಮಂದಿ ದೇಶಕ್ಕಾಗಿ ತ್ಯಾಗ ಮಾಡಿದವರಿದ್ದೇವೆ. ಸೆರೆಮನೆ ಶಿಕ್ಷೆ ಅನುಭವಿಸಿದ್ದೇವೆ, ರಾಜ್ಯದ ಹೊರಗೆ ಹೋಗಿ ಕೆಲಸ ಮಾಡಿ ಬಂದಿದ್ದೇವೆ. ನಮ್ಮ ಸೇವೆ ಮತ್ತು ತ್ಯಾಗದ ಬಗ್ಗೆ ಜನರು ಪ್ರಶಂಸೆ ಮಾಡುತ್ತಾರೆ. ಅವರು ನಮ್ಮನ್ನು ಗೌರವಿಸುತ್ತಾರೆ. ಆದರೆ ನಮ್ಮ ಯಾರಿಗೂ ರಾಜಕೀಯ ಬೆಂಬಲವಿಲ್ಲ, ಹಿಂಬಾಲಕರಿಲ್ಲ; ಜನ ಸಮುದಾಯದಲ್ಲಿ ನಮ್ಮ ಬೇರು ಇಲ್ಲ, ಇದಕ್ಕೆ ಬದಲಾಗಿ ಪ್ರಜಾಪಕ್ಷದ ಯುವ ನಾಯಕರಿಗೆಲ್ಲ ಜನ ಸಮುದಾಯದ ಬೆಂಬಲವಿದೆ, ವಾಸ್ತವವಾಗಿ ಜನತೆಯ ಪ್ರತಿನಿಧಿಗಳು ಅವರೇ, ಅವರೆಲ್ಲ ಜಸ್ಟಿಸ್ ಪಕ್ಷದ ಚಿಂತನೆ ಮತ್ತು ಸಿದ್ಧಾಂತಕ್ಕೆ ಒಲಿದಿದ್ದಾರೆಂಬುದನ್ನು ಬಿಟ್ಟರೆ ಅವರಲ್ಲಿ ಯಾರೊಬ್ಬರೂ ನಮಗಿಂತ ಭಿನ್ನವಾದವರಲ್ಲ. ಅವರೂ ಗಾಂಧಿಯವರ ಪ್ರಭಾವಕ್ಕೆ ಒಳಗಾದವರೇ, ಅವರ ಪೈಕಿ ಹಲವರು ಬೆಳಗಾವಿ ಕಾಂಗ್ರೆಸ್ ಅಧಿವೇಶನಕ್ಕೆ ಹಾಜರಾಗಿದ್ದವರಿದ್ದಾರೆ, ಖಾದಿಧಾರಣೆ ಮಾಡುತ್ತಾರೆ. ಯುವಕರಿರುವಾಗಲೇ ಗಾಂಧೀ ಸಿದ್ಧಾಂತವನ್ನು ಮೈಗೂಡಿಸಿಕೊಂಡವರಿದ್ದಾರೆ. ಈ ಜನರನ್ನು ಕಾಂಗ್ರೆಸ್‌ಗೆ ಸೇರುವಂತೆ ಒಲಿಸಿಕೊಳ್ಳುವುದರಲ್ಲಿ ನಾವು ಸಫಲರಾದರೆ, ಇಡೀ ಗ್ರಾಮಾಂತರ ಪ್ರದೇಶವನ್ನು ಕಾಂಗ್ರೆಸ್‌ಗೆ ಒಲಿಸಿಕೊಂಡಂತಾಗುತ್ತದೆ ಮತ್ತು ಇದರಿಂದ ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ನೆಲೆಗೊಳಿಸಬೇಕೆಂಬ ಹೋರಾಟಕ್ಕೆ ತೀವ್ರತೆ ಇರುತ್ತದೆ. ಆದ್ದರಿಂದ ಕಾಂಗ್ರೆಸ್‌ಗೆ ಬಂದು ಸೇರುವ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಲು ಕ್ರೋಢೀಕೃತ ಪ್ರಯತ್ನ ನಡೆಯಬೇಕಾಗಿದೆ' ಎಂದು ಸರ್ದಾರ್ ವೆಂಕಟರಾಮಯ್ಯ ಸೂಚಿಸಿದ್ದನ್ನು ಕಾಂಗ್ರೆಸ್ಸಿನ ನಾಯಕರಲ್ಲಿ ಬಹುತೇಕ ಮಂದಿ ಒಪ್ಪಿಕೊಂಡರು.

ಪ್ರಜಾ ಸಂಯುಕ್ತ ಪಕ್ಷವನ್ನು ಕಾಂಗ್ರೆಸ್‌ನಲ್ಲಿ ವಿಲೀನ ಗೊಳಿಸುವ ಪ್ರಯತ್ನವನ್ನು ಕಾಂಗ್ರೆಸ್ ಧುರೀಣರು ಕೈಗೊಳ್ಳುವ ವೇಳೆಗೆ ಬಿ.ಎನ್.ಗುಪ್ತರು ಪ್ರಜಾ ಸಂಯುಕ್ತ ಪಕ್ಷದ ಪ್ರಮುಖರಲ್ಲೊಬ್ಬರಾಗಿದರು. (ಪ್ರಜಾಮಿತ್ರ ಮಂಡಳಿ ಮತ್ತು ಪ್ರಜಾಪಕ್ಷ ೧೯೫೨ರಲ್ಲಿ ವಿಲೀನಗೊಂಡು ಪ್ರಜಾಸಂಯುಕ್ತ ಪಕ್ಷವಾಯಿತು) ಬಿ.ಎನ್.ಗುಪ್ತರಲ್ಲಿ ತಮ್ಮ ನಿಲುವನ್ನು ಇತರರಿಗೆ ಮನದಟ್ಟು ಮಾಡಿಕೊಡುವ, ಒಲಿಸಿಕೊಳ್ಳುವ ಮತ್ತು ಭವಿಷ್ಯದ ಸಲುವಾಗಿ ಚಿಂತಿಸಿ ಕಾರ್ಯಸಾಧನೆ ಮಾಡುವ ಸಾಮರ್ಥ್ಯವಿದ್ದುದನ್ನು ಮನಗಂಡ ಸರ್ದಾರ್ ವೆಂಕಟರಾಮಯ್ಯನವರು ಒಂದು ದಿನ ಲೋಕಾಭಿರಾಮದ ಮಾತುಕತೆಯ ನಡುವೆ ಪ್ರಜಾ ಸಂಯುಕ್ತ ಪಕ್ಷದ ಪ್ರಮುಖರೆಲ್ಲಾ ಕಾಂಗ್ರೆಸ್ಸ್‌ಗೆ ಸೇರುವಂತೆ ಮಾಡಬೇಕೆಂಬ ಸೂಚನೆಯನ್ನು ಗುಪ್ತರ ಮುಂದೆ ಮಂಡಿಸಿದರು.”[೧೦೭]

---

[೧೦೭] +ಆರ್.ವಿ.ರವೀಂದ್ರನಾಥ. ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ. ಪುಟ-೩೬,೩೭.

ಕೋಲಾರದಲ್ಲಿ ಜರುಗಿದ ಪ್ರಜಾಪಕ್ಷದ ಸಭೆ ರಾಜ್ಯ ಸರ್ಕಾರದ ವಿರುದ್ಧ ಸಾಕಷ್ಟು ಅಸಂತೋಷವನ್ನು ವ್ಯಕ್ತಗೊಳಿಸಿತು. ಆ ಸಮ್ಮೇಳನಕ್ಕೆ ವೀರಕೇಸರಿ ಸೀತಾ ರಾಮಶಾಸ್ತ್ರಿಯವರು, ವಿ.ಎಸ್.ನಾರಾಯಣರಾಯರು, ತಗಡೂರು ರಾಮಚಂದ್ರರಾಯರು ಮತ್ತು ಹೆಚ್.ಕೆ.ವೀರಣ್ಣಗೌಡರು ಪ್ರಜಾಪಕ್ಷದವರ ಮನವೊಲಿಸುವ ದೃಷ್ಟಿಯಿಂದ ಹೋಗಿದ್ದರು. ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕೆಂಬುದು ಪ್ರಜಾಪಕ್ಷದವರ ಕಾಂಗ್ರೆಸ್‌ನವರ ಒಂದೇ ಧ್ಯೇಯವಾಗಿತ್ತು. ಆದುದರಿಂದ ಎರಡು ಪಕ್ಷದವರು ಏಕೆ ಒಂದಾಗಬಾರದೆಂಬ ಆಶಯವನ್ನು ಕೋಲಾರದ ಸಮ್ಮೇಳನದಲ್ಲಿ ಪ್ರಜಾಪಕ್ಷದ ಮುಖಂಡರ ಮುಂದಿಟ್ಟಾಗ, ಆ ವಿಷಯವನ್ನು ಇನ್ನೂ ಸ್ವಲ್ಪ ನಿಧಾನವಾಗಿ ಪರ್ಯಾಲೋಚಿಸಬೇಕಾಗಿದೆ ಎಂದು, ಅಂತಹ ಕಾಲ ಬಹುದೂರವಿರಲಾರದೆಂಬ ಚೆಂಗಲರಾಯರೆಡ್ಡಿಯವರ ವೈಯಕ್ತಿಕ ಅಭಿಪ್ರಾಯ ತಿಳಿಸಿದರು. ಹಾಗೆಯೇ ಕಾಂಗ್ರೆಸ್ ನಾಯಕರು ಹಿಂದಿರುಗಿದ್ದರು. ಚೆಂಗಲರಾಯರೆಡ್ಡಿಯವರ ಭವಿಷ್ಯದ ಕನಸು ೧೯೩೭ನೇ ಅಕ್ಟೋಬರ್ ೧೮ರಂದು ನನಸಾಯಿತು.'[೧೧೮]

ವಿಲೀನದ ವಿಶೇಷ ಅಧಿವೇಶನದ ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದ ಎಚ್.ಸಿ.ದಾಸಪ್ಪನವರು ಮಾಡಿದ ಭಾಷಣದ ಕೆಲವು ಮಾತುಗಳು ಹೀಗಿವೆ 'ಪ್ರಸಕ್ತ ಸನ್ನಿವೇಶದಲ್ಲಿ ರಾಜಕೀಯ ಸಂಸ್ಥೆಯ ಅವಶ್ಯಕತೆಯಿಲ್ಲವೆಂದು, ನಮ್ಮ ಸಂಸ್ಥೆಯು ಅಖಿಲ ಭಾರತ ಕಾಂಗ್ರೆಸ್‌ನೊಡನೆ ಏಕೀಕರಣ ಹೊಂದುವುದು ಸೂಕ್ತವೆಂದು ನಮ್ಮ ಸಂಸ್ಥೆಯ ಕಾರ್ಯನಿರ್ವಾಹಕ ಸಮಿತಿಯ ಅಂಗೀಕರಿಸಿದ ನಿರ್ಧಾರಕ್ಕೆ ತಮ್ಮ ಸಮ್ಮತಿಯನ್ನು ಪಡೆಯುವ ಉದ್ದೇಶದಿಂದ ಈ ಅಧಿವೇಶನವನ್ನು ಸೇರಿಸಲಾಗಿದೆ. ಐಕ್ಯಮತ್ಯವೇ ನಮ್ಮ ಜೀವನದ ಉಸಿರು ಈ ಭಾವನಾ ಪ್ರೇರಣೆಯಿಂದಲೇ ಕಾಂಗ್ರೆಸ್‌ನೊಡನೆ ತಡವಿಲ್ಲದೆ ನಮ್ಮ ಸಂಸ್ಥೆಯು ಸೇರಬೇಕೆಂದು ನಿರ್ಧರಿಸಿತು. ಮೈಸೂರು ನಾಡು ಭಾರತ ಭೂಮಿಯ ಒಂದು ಭಾಗ, ಭಾರತ ಭೂಮಿಯ ಸ್ವಾತಂತ್ರ್ಯ ಗಳಿಸಲು ಉದ್ಯುಕ್ತರಾಗಿರುವವರೊಡನೆ ನಾವು ಸೇರುವುದು ಅನಿವಾರ್ಯವೆಂದರು.

ಶ್ರೀಮನ್ಮಹಾರಾಜರವರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸುವುದೇ ನಮ್ಮ ಸದ್ಯದ ರಾಜಕೀಯ ಕಾರ್ಯಕಲಾಪವಾಗಿರಬೇಕೆಂದು ನಾವು ನಿಶ್ಚಯಿಸಿದ್ದೇವೆ. ಇದೇ ಸಂಯುಕ್ತ ಸಂಸ್ಥೆಯ ಗುರಿ. ಇದೇ ಮೈಸೂರು ಕಾಂಗ್ರೆಸ್‌ನ ಆಶಯ. ನಮ್ಮ ಕಾರ್ಯಕ್ರಮಗಳಲ್ಲೂ ವ್ಯತ್ಯಾಸವಿಲ್ಲ, ಹೀಗಿರುವಾಗ ನಾವು ಪ್ರತ್ಯೇಕವಾಗಿ ನಿಲ್ಲುವ ಪ್ರಮೇಯ ಲವಲೇಶವೂ ಇಲ್ಲ. ಅಂದ ಮೇಲೆ ಕಾಂಗ್ರೆಸ್‌ನೊಡನೆ ಸಮ್ಮಿಳಿತವಾಗುವುದು ತಮ್ಮಗಳ ಕರ್ತವ್ಯವೆಂದು ವ್ಯಕ್ತಪಡುತ್ತದೆ, ಇದರಿಂದ ಇಡೀ ಭಾರತ ಭೂಮಿಯ ಹೋರಾಟದಲ್ಲಿ ಭಾಗವಹಿಸಲವಕಾಶ ದೊರೆತಂತಾಗಿ ಮಾತೃ ಭೂಮಿಯಲ್ಲಿ ನಮ್ಮ ಕಾಣಿಕೆಯನ್ನು ಸಲ್ಲಿಸಿದ್ದೇವೆಂಬ ಸಂತೃಪ್ತ ಭಾವನೆಯು ನಮ್ಮಲ್ಲಿ ಮೂಡುತ್ತದೆ. ಬಹುಕಾಲ ಯಶಸ್ವಿಯಾಗಿ ಶ್ರಮಿಸಿದ ನಮ್ಮ ಸಂಸ್ಥೆಯನ್ನು ಮುಕ್ತಾಯಗೊಳಿಸುವುದೆಂದರೆ ಸ್ವಲ್ಪ ವಿವಾದ ಉಂಟಾಗುವುದು ಸಹಜ, ಆದರೆ

---

೧೧೮ ಹೆಚ್.ಕೆ.ವೀರಣ್ಣಗೌಡ: ಬದುಕು ಮೆಲುಕು. ೧೯೭೪. ಪುಟ ೧೩೮

ಕಾಂಗ್ರೆಸ್‌ನೊಂದಿಗೆ ಸಮ್ಮಿಳಿತವಾಗುವುದು ಎಂಬ ಭಾವನೆಯು ನಮ್ಮಲ್ಲಿ ಮೂಡಿ ಅನಂದಾಹ್ಲಾದಗಳನ್ನು ಉಂಟು ಮಾಡಿರುತ್ತದೆ. ಇದೆಲ್ಲಾ ದೈವಿಕವಾದುದು' ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.[೧೧೯]

ಗಾಂಧೀಜಿ ಮತ್ತಿತರ ರಾಷ್ಟ್ರ ನಾಯಕರ ಮೈಸೂರಿನ ಭೇಟಿ ಸಂಸ್ಥಾನದಲ್ಲಿ ಕಾಂಗ್ರೆಸ್ ತತ್ವಗಳನ್ನು ಜನಪ್ರಿಯಗೊಳಿಸುತ್ತಿತ್ತು. ಬದಲಾದ ರಾಜಕೀಯ ಭವಿಷ್ಯ ಸುರಕ್ಷಿತವಾಗಿದ್ದರೆ ಅದು ಕಾಂಗ್ರೆಸ್ ಹಿಂಬಾಲಕರಾಗುವುದರಿಂದ ಮಾತ್ರ ಸಾಧ್ಯ. ಬ್ರಾಹ್ಮಣೇತರ ಚಳುವಳಿ ರಾಷ್ಟ್ರೀಯ ಚಳುವಳಿಯ ಬಿಸಿಯಲ್ಲಿ ರಾಜಕೀಯ ಶಕ್ತಿಯಾಗುವುದು ಸಾಧ್ಯವಿಲ್ಲವೆಂದು ಮನಗಂಡರು. ಮಿಗಿಲಾಗಿ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರಿನ ಹಿಂದುಳಿದ ವರ್ಗಗಳ ನಾಯಕರು ಕಂಕಣಬದ್ಧರಾಗಿದ್ದು, ಕಾಂಗ್ರೆಸ್ ಪಕ್ಷವನ್ನು ಸೇರಲು ಅವರಿಗೆ ಹೆಚ್ಚಿನ ತೊಂದರೆ ಇರಲಿಲ್ಲ.

ನಿರಂಕುಶ ಆಡಳಿತದಿಂದ ರಾಜ್ಯವನ್ನು ಜನರ ಅಧೀನಕ್ಕೆ ಒಳಪಡಿಸುವುದರ ಮೂಲಕ ತಮ್ಮೆಲ್ಲಾ ಸಮಸ್ಯೆಗಳಿಗು ಪರಿಹಾರ ಸಾಧ್ಯವಲ್ಲದೆ ಸರ್ಕಾರದ ವಂದಿಮಾಗದರಂತೆ ವರ್ತಿಸುವುದರಿಂದ ಅಸಾಧ್ಯವೆಂದು, ಈ ವರ್ಗದ ನಾಯಕರು ಅರಿತರು. ಕಾಂಗ್ರೆಸ್ಸಿನ ಬ್ರಾಹ್ಮಣ ವರ್ಗ ನಾಯಕತ್ವವೂ ಆ ಪಕ್ಷ ಯಶಸ್ವಿಯಾಗಿ ಯಾವುದೇ ಹೋರಾಟ ನಡೆಸಲು ಜನ ಬೆಂಬಲವಿಲ್ಲದೆ ಸಾಧ್ಯವಿಲ್ಲ. ಬಹು ಸಂಖ್ಯಾತ ಬ್ರಾಹ್ಮಣೇತರರು ಕಾಂಗ್ರೆಸ್ ಸೇರದೆ ಇದು ಸಾಧ್ಯವಿರಲಿಲ್ಲವಾದ್ದರಿಂದ ಬ್ರಾಹ್ಮಣೇತರರು ಪಕ್ಷ ಸೇರುವಂತಾಗಲು ತಮ್ಮ ನಿಲುವನ್ನು ಸಡಿಲಗೊಳಿಸಬೇಕಾದ ಅವಶ್ಯಕರೆಯನ್ನರಿತರು. ಅಂದರೆ ಮಾನಸಿಕವಾಗಿ ಎರಡೂ ವರ್ಗಗಳ ನಾಯಕತ್ವ ಒಂದಾಗಲು ತಯಾರಾಯಿತು. ಹೀಗಾಗಿ ೧೯೩೭ರ ಅಕ್ಟೋಬರ್ ೧೬ ರಂದು ಎರಡೂ ಪಕ್ಷಗಳು ವಿಲೀನಗೊಂಡು 'ಮೈಸೂರು ಕಾಂಗ್ರೆಸ್' ಅಸ್ಥಿತ್ವಕ್ಕೆ ಬಂದಿತು".[೧೨೦]

ಪ್ರಜಾ ಪ್ರತಿನಿಧಿ ಸಭೆಯ ಅಧಿವೇಶನ ಮುಗಿದ ಮೇಲೆ ಹೆಚ್.ಕೆ.ವೀರಣ್ಣಗೌಡರು ಮೈಸೂರಿನ ಸೂಯನಾರಾಯಣ ಪಂಡಿತರೊಡಗೂಡಿ ಸಂಸ್ಥಾನಾದ್ಯಂತ ಕಾಂಗ್ರೆಸ್ ಪ್ರಚಾರ ಕೈಗೊಳ್ಳುವ ಕಾರ್ಯವನ್ನು ವಹಿಸಲಾಯಿತು. ಅದರಂತೆ ಹೆಚ್.ಕೆ.ವೀರಣ್ಣಗೌಡರು ಸೂರ್ಯನಾರಾಯಣ ಪಂಡಿತರ ಜೊತೆಗೆ ಮೊದಲನೆಯ ದಿನ ನಂಜನಗೂಡಿಗೆ ಹೋಗಿ ಶ್ರೀಕಂಠೇಶ್ವರಸ್ವಾಮಿಯಲ್ಲಿ ತಮ್ಮ ಪ್ರವಾಸ ಕಾರ್ಯ ನಿರ್ವಿಘ್ನವಾಗಿಯೂ ಯಶಸ್ವಿಯಾಗಿಯೂ ನಡೆಯುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥನೆ ಮಾಡುವ ಮೂಲಕ ತಮ್ಮ ಪ್ರವಾಸವನ್ನು ಪ್ರಾರಂಭಿಸಿದರು. ಅಲ್ಲಿಯೇ ಹೊಳೆ ದಡದಲ್ಲಿರುವ ಲಿಂಗಣ್ಣನವರ ಛತ್ರದಲ್ಲಿ ಮೊದಲ ಪ್ರಚಾರ ಸಭೆ ನಡೆಸಿದರು. ಈ ಪ್ರವಾಸಕ್ಕೆ ಟಿ.ಸಿದ್ದಲಿಂಗಯ್ಯನವರ ವಾಹನವನ್ನೇ ಉಪಯೋಗಿಸುವಂತೆ ತೀರ್ಮಾನಿಸಿದ್ದರು. ಇವರು ಹೋದೆಡೆಯಲ್ಲಿ ಸ್ಥಳೀಯ ಕಾಂಗ್ರೆಸ್ ಸಮಿತಿಯವರು

[೧೧೯] ಡಿ.ಲಿಂಗಯ್ಯ : ಶಿವಪುರ ಧ್ವಜಸತ್ಯಾಗ್ರಹ. ೧೯೭೯. ಪುಟ– ೫೨

[೧೨೦] ಡಿ.ಲಿಂಗಯ್ಯ : ಶಿವಪುರ ಧ್ವಜಸತ್ಯಾಗ್ರಹ. ೧೯೭೯. ಪುಟ– ೭೮

ಸಭೆ ನಡೆಸುವ ಎಲ್ಲಾ ಏರ್ಪಾಡು ಮಾಡುತ್ತಿದ್ದರು. ಜವಾಬ್ದಾರಿ ಸರ್ಕಾರ ಸ್ಥಾಪನೆಯ ಉದ್ದೇಶ, ಕಾಂಗ್ರೆಸ್ ಸೇರಿದ ಹುರುಪು ಇವುಗಳಿಂದ ಸಭೆಗೆ ಜನರು ಹೆಚ್ಚು ಹೆಚ್ಚಾಗಿ ಸೇರುತ್ತಿದ್ದರು.

ಹೆಚ್.ಕೆ.ವೀರಣ್ಣಗೌಡರ ಪ್ರವಾಸ ಕಾಲದಲ್ಲಿ ಸಹಾಯಕರಾಗಿ ಅವರೊಂದಿಗೆ ಸಂಸ್ಥಾನಾದ್ಯಂತ ಕಾಂಗ್ರೆಸ್ ಕಾರ್ಯದಲ್ಲಿ ತೊಡಗಿಸಿಕೊಂಡವರು ಶ್ರೀಮತಿ ತಾಯಮ್ಮ ವೀರಣ್ಣಗೌಡ. ಹತ್ತು ವಾರಗಳು ಮೈಸೂರು, ಮಂಡ್ಯ, ಹಾಸನ, ಚನ್ನರಾಯಪಟ್ಟಣ, ಶಿವಮೊಗ್ಗ, ತುಮಕೂರು, ಕೋಲಾರಜಿಲ್ಲೆಗಳಲ್ಲಿ ಎಡಬಿಡದೆ ಕಾಂಗ್ರೆಸ್ ಪ್ರಚಾರ ಪ್ರವಾಸವನ್ನು ಮಾಡಿದರು. ಈ ಪ್ರವಾಸ ಕಾರ್ಯಕ್ರಮ ಯಾವುದೇ ಚ್ಯುತಿ ಬಾರದಂತೆ ನಿರ್ವಿಘ್ನವಾಗಿ ನಡೆಯಲು ಹೆಚ್.ಕೆ.ವೀರಣ್ಣಗೌಡರ ಪೂರ್ವಬಾವಿ ತಯಾರಿ ಜೊತೆಗೆ ಕಾಂಗ್ರೆಸ್ ಕಾರ್ಯಕರ್ತರ ನಿಷ್ಠೆ, ಉತ್ಸಾಹ ಪ್ರಮುಖ ಕಾರಣವಾಗಿತ್ತು.

ಶಿವಪುರ ರಾಷ್ಟ್ರಕೂಟದಲ್ಲಿ ಜನರಲ್ ಸೆಕ್ರೆಟರಿಯಾಗಿ ಸಮರ್ಥವಾಗಿ ಕಾರ್ಯ ನಿರ್ವಹಿಸಿದ ಹೆಚ್.ಕೆ.ವೀರಣ್ಣಗೌಡರನ್ನು ಮೈಸೂರ್ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಬೆಂಗಳೂರಲ್ಲಿ ಸಭೆ ಸೇರಿ ವ್ಯವಸ್ಥಾಪಕ ಕಾರ್ಯದರ್ಶಿಯನ್ನಾಗಿ ಗೊತ್ತುಮಾಡಿತು. ಹೆಚ್.ಕೆ.ವೀರಣ್ಣಗೌಡರು ಜನರಲ್ ಸೆಕ್ರೆಟರಿಯಾಗಿ ಜವಾಬ್ದಾರಿ ವಹಿಸಿಕೊಂಡ ಮೇಲೆ ಕಾಂಗ್ರೆಸ್ ಕಚೇರಿಯಲ್ಲಿ ಕಾಗದ ಪತ್ರಗಳೆಲ್ಲ ಅಸ್ತವ್ಯಸ್ತವಾಗಿದ್ದು ಗೊಂದಲವನ್ನುಂಟು ಮಾಡುತ್ತಿತ್ತು. ಆ ಸಂದರ್ಭದಲ್ಲಿ ಇಂದಿನ ಜಾನಪದ ಪರಿಷತ್ ಅಧ್ಯಕ್ಷರು ಬೆಂಗಳೂರಿನ ಮಾಜಿ ಮೇಯರ್ ಶ್ರೀ ಜಿ.ನಾರಾಯಣ ದೇಶಹಳ್ಳಿಯವರನ್ನು ತಮ್ಮ ಸಹಾಯಕರಾಗಿ ಕರೆಸಿಕೊಂಡರು. ಆಗವರು 'ಅಕ್ಷರ ಕಲಿಯಿರಿ' ಎಂಬ ತಾವೇ ರಚಿಸಿದ್ದ ಲಾವಣಿಗಳ ಸಣ್ಣ ಸಣ್ಣ ಪುಸ್ತಕಗಳನ್ನು ತಮ್ಮ ಸ್ವಂತ ವೆಚ್ಚದಲ್ಲಿ ಅಚ್ಚು ಹಾಕಿಸಿ ಹಳ್ಳಿ ಹಳ್ಳಿಗೆ ಹೋಗಿ ಉಚಿತವಾಗಿ ಹಂಚುವ ಕೆಲಸದಲ್ಲಿ ತೊಡಗಿದ್ದರು. ಶಿವಪುರ ರಾಷ್ಟ್ರಕೂಟದ ಸಮಯದಲ್ಲಿ ಪರಿಚಿತರಾಗಿದ್ದ ಜಿ.ನಾರಾಯಣರ ಕಾರ್ಯವೈಖರಿಯನ್ನು ಗಮನಿಸಿದ ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ ಕಾರ್ಯ ಅವರು ಮಾಡುತ್ತಿದ್ದ ಅಕ್ಷರ ಪ್ರಚಾರ ಕಾರ್ಯದಷ್ಟೇ ಮುಖ್ಯವಾದುದೆಂದು ವಿವರಿಸಿದ ಮೇಲೆ ಅವರು ಕಾಂಗ್ರೆಸ್ ಆಫೀಸಿಗೆ ಬಂದು ವೀರಣ್ಣಗೌಡರಿಗೆ ನೆರವಾಗುತ್ತಿದ್ದರು. ಎಲ್ಲಾ ಕಾಗದ ಪತ್ರಗಳನ್ನು ವಿಷಯವಾರು, ಜಿಲ್ಲಾವಾರು ವಿಂಗಡಿಸಿ ಒಂದು ಸ್ಥಿತಿಗೆ ತರಬೇಕಾದರೆ ನಾರಾಯಣ ಅವರಿಗೆ ಎರಡು ತಿಂಗಳಿಗೂ ಹೆಚ್ಚು ಸಮಯ ತೆಗೆದುಕೊಂಡಿತ್ತೆಂದು ಜಿ.ನಾರಾಯಣರೇ ನೆನಪಿಸಿಕೊಳ್ಳುತ್ತಾರೆ.

"ವಿದುರಾಶ್ವತ್ಥ ಘಟನೆಗೆ ಪೂರಕವಾಗಿ ಕೋಲಾರದ ಕಾಂಗ್ರೆಸ್ ಕಾರ್ಯಕರ್ತರು ಚಿನ್ನದ ಗಣಿಗಳಿರುವ ಕೆ.ಜಿ.ಎಫ್.ನಲ್ಲಿ ಸಭೆ ನಡೆಸುವುದಾಗಿ ಆ ಸಭೆಗೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಮುಖಂಡರೆಲ್ಲರೂ ಬಂದು ಭಾಷಣ ಮಾಡಬೇಕೆಂದು ವಿನಂತಿಸಿಕೊಂಡರು. ೧೯೩೮ರ ಸೆಪ್ಟೆಂಬರ್‌ನಲ್ಲಿ ಈ ಸಭೆ ಏರ್ಪಟ್ಟಿತು. ಆಗ ಸರ್ಕಾರ ಕಾಂಗ್ರೆಸ್ ನಾಯಕರು ಕೆ.ಜಿ.ಎಫ್. ಪ್ರವೇಶದೊಳಗೆ ಪ್ರವೇಶಿಸಕೂಡದೆಂದು ನಿಷೇದಾಜ್ಞೆ ವಿಧಿಸಿತು.

ಪೊಲೀಸರು ನಿಷೇದಾಜ್ಞೆ ಉಲ್ಲಂಘಿಸಿದ ಕಾಂಗ್ರೆಸ್ ನಾಯಕರನ್ನು ಬಂಧಿಸಿ ಕೆ.ಜಿ.ಎಫ್ ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಪಡಿಸಿದರು. 'ನಾವು ನಿಷೇದಾಜ್ಞೆ ದಿಕ್ಕರಿಸಿದ್ದು ನಿಜ, ಅದು ನಮ್ಮ

ಆಜನ್ಮ ಸಿದ್ದ ಹಕ್ಕು' ಎಂದು ಕೋರ್ಟಿಗೆ ತಿಳಿಸಿದರು. ಕೋರ್ಟ್ ಆ ನಾಯಕರಿಗೆ ಮೂರು ತಿಂಗಳ ಕಠಿಣ ಸಜೆ ವಿಧಿಸಿ ಕತ್ತಲೆಯ ಮನೆಗೆ ತಳ್ಳೀತು. ಜೈಲಿನಲ್ಲಿ ಅವರನ್ನು ಕಠಿಣವಾಗಿ ನಡೆಸಿಕೊಂಡರು. ಆಗ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಲ್ಲಿ ಹೊರಗುಳಿದವರು ಕೆ.ಹನುಮಂತಯ್ಯನವರು ಮಾತ್ರ.

ಅವರು ದಿನ ನಿತ್ಯದಂತೆ ಬೆಳಗ್ಗೆ ತಮ್ಮ ವಕೀಲ ವೃತ್ತಿಯಲ್ಲಿ ಕಾರ್ಯಮಗ್ನರಾಗಿದ್ದರು. ಒಂದು ಪತ್ರ ಬಂತು, ಅದನ್ನು ಓದಿದರು. ಮತ್ತೆ ಓದಿದರು. ಅವರ ಕಣ್ಣಿಂದ ನೀರು ಬರುತ್ತಿತ್ತು. ಅದು ಕೆ.ಸಿ.ರೆಡ್ಡಿಯವರ ಪತ್ರ. ಅದರಲ್ಲಿ 'ಶ್ರೀ ಹನುಮಂತಯ್ಯನವರೆ, ನಾವೆಲ್ಲ ಅಂದರೆ ಎಚ್.ಸಿ.ದಾಸಪ್ಪ, ವಿ.ವೆಂಕಟಪ್ಪ, ಟಿ.ಸುಬ್ರಹ್ಮಣ್ಯಂ, ಹೆಚ್.ಕೆ.ವೀರಣ್ಣಗೌಡ, ಹೆಂಜಾರಪ್ಪ, ಎಂ.ಸಿ.ಪೆರುಮಾಳ್ ಮುಂತಾದವರೆಲ್ಲ ಪ್ರತಿಬಂಧಿಕಾಜ್ಞೆ ಉಲ್ಲಂಘಿಸಿ ಕೆ.ಜಿ.ಎಫ್‌ನಲ್ಲಿ ಬಂಧಿತರಾಗಿದ್ದೇವೆ. ಈಗ ನೀವು ಹೊರಗೆ ಉಳಿದ ನಾಯಕರು. ನೀವು ದೇಶದ ದೃಷ್ಟಿಯಿಂದ ನಾಯಕತ್ವ ವಹಿಸಬೇಕು' ಎಂದು ಬರೆದಿತ್ತು.[೧೧೧]

ಕೆ.ಜಿ.ಎಫ್ ನಲ್ಲಿ ನಿಷೇದಾಜ್ಞೆ ಉಲ್ಲಂಘಿಸಿದ ಕಾರಣ ಮೂರು ತಿಂಗಳ ಸೆರೆಮನೆ ವಾಸಕ್ಕೆ ಒಳಗಾದ ಕಾಂಗ್ರೆಸ್ ಮುಖಂಡರು ಜೈಲಿನಲ್ಲಿ ಕಠಿಣ ಸಜೆಯನ್ನು ಅನುಭವಿಸಬೇಕಾಯಿತು. ಹೆಚ್.ಕೆ.ವೀರಣ್ಣಗೌಡರು ತಮಗೆ ನೀಡಿದ ರಾಗಿ ಬೀಸುವ ಕೆಲಸ ಮಾಡಿದ್ದರಿಂದ ಕೈಗಳಲ್ಲಿ ಬೊಬ್ಬೆ ಬರಿಸಿಕೊಂಡಿದ್ದರು. ನಂತರ ಹೊಲಿಗೆ ಕೆಲಸವನ್ನು ಮಾಡುತ್ತಾ ಸಜೆಯ ಕಾಲಾವಧಿಯನ್ನು ಪೂರ್ಣಗೊಳಿಸಿದರು. ಸ್ವಾತಂತ್ರ್ಯಸೇನಾನಿಗಳಿಗೆ ಯಾವುದೇ ರೀತಿಯ ರಿಯಾಯಿತಿ ನೀಡದೆ ಕೊಲೆಗಡುಕರಿಗೆ, ದರೋಡೆಕೋರರಿಗೆ ನೀಡಿದ ಕಠಿಣ ಶಿಕ್ಷೆಯನ್ನೇ ಇವರಿಗೂ ನೀಡಿದ್ದು ಅಂದಿನ ಸರ್ಕಾರದ ನಿರ್ದಯ ದಮನಕಾರಿ ನೀತಿಯನ್ನು ತೋರ್ಪಡಿಸುತ್ತದೆ.

ಸೆರೆಮನೆ ವಾಸದಿಂದ ಹೊರಬಂದ ಹೆಚ್.ಕೆ.ವೀರಣ್ಣಗೌಡರು ವ್ಯವಸ್ಥಾಪಕ ಕಾರ್ಯದರ್ಶಿಯ ಕಾರ್ಯದಲ್ಲಿ ನಿರತರಾಗಲು ಬೆಂಗಳೂರಿಗೆ ಹಿಂದಿರುಗಿದರು. ಕಾಂಗ್ರೆಸ್ ಆಫೀಸಿನಲ್ಲಿ ಹತ್ತು, ಇಪ್ಪತ್ತು ಮಂದಿ ಕಾಂಗ್ರೆಸ್ ಸ್ವಯಂ ಸೇವಕರೆಂದು ಹೇಳಿಕೊಂಡು ಸೇರಿಕೊಂಡಿದ್ದರು. ಇವರು ದಿನ ನಿತ್ಯ ಅಂಗಡಿ ಸಾಲುಗಳೀಗೆ, ಜನಗಳ ಹತ್ತಿರ ಕಾಂಗ್ರೆಸ್ ನಾಯಕರು ಜೈಲಿನಲ್ಲಿದ್ದಾರೆಂದು ಸಹಾಯ ಮಾಡುವಂತೆ ಹಣ ಸಂಗ್ರಹಿಸಿ ಆ ಹಣದಿಂದ ತಮ್ಮ ಊಟೋಪಚಾರಗಳಿಗೆ ಖರ್ಚು ಮಾಡಿಕೊಂಡಿದ್ದರು. ಕಾಂಗ್ರೆಸ್ ಹೆಸರಿನಲ್ಲಿ ಭಿಕ್ಷೆ ಬೇಡುತ್ತ ಹೊಟ್ಟೆ ತುಂಬಿಕೊಳ್ಳುತ್ತಿದ್ದ ಆ ಸೋಮಾರಿಗಳ ಗುಂಪನ್ನು ಚದುರಿಸದಿದ್ದರೆ ಮುಂದೆ ಅನೇಕ ತೊಡಕಿನ ಸಮಸ್ಯೆಗಳಿಗೆ ದಾರಿಯಾಗುವುದೆಂದು ತಿಳಿದು ಹೆಚ್.ಕೆ.ವೀರಣ್ಣಗೌಡರು ಅವರನ್ನು ಉಪಾಯದಿಂದ ಕಾಂಗ್ರೆಸ್ ಆಫೀಸಿನಿಂದ ಹೊರಹಾಕಿದರು.

ಕಾಂಗ್ರೆಸ್ ಕೆಲಸ ದೇವರ ಕೆಲಸ, ದೇಶದ ಕೆಲಸ ಎಂದು ನಂಬಿ ನಿಸ್ವಾರ್ಥ ಸೇವೆ ಮಾಡುತ್ತಿದ್ದವರ ಮಧ್ಯೆ ಕಾಂಗ್ರೆಸ್ ಹೆಸರಿನಲ್ಲಿ ಸ್ವಾರ್ಥ ಸಾಧನೆಗಾಗಿಯೇ ಕೆಲವು ಮಂದಿ ಇದ್ದುದನ್ನು

---

[೧೧೧] ಕೋಣಂದೂರು ವೆಂಕಟಪ್ಪ. ನವ ಮೈಸೂರು ಶಿಲ್ಪಿ ಕೆಂಗಲ್ ಹನುಮಂತಯ್ಯ. ಪು.೮೨

ಕಂಡ ಹೆಚ್.ಕೆ.ವೀರಣ್ಣಗೌಡರು ವಿಷಾಧ ವ್ಯಕ್ತಪಡಿಸುತ್ತಾ, ತಮ್ಮ ಕಣ್ಣಮುಂದೆಯೇ ಕೆಲ ಮೋಸಗಾರ ಕಾಂಗ್ರೆಸ್ ವ್ಯಕ್ತಿಗಳ ಕೆಲವು ಪ್ರಕರಣಗಳನ್ನು ವಿವರಿಸುತ್ತಾರೆ. ಆಗ ಬೆಂಗಳೂರು ನಗರ ಮತ್ತು ಗ್ರಾಮ ಪ್ರದೇಶಗಳಿಗೆಲ್ಲಾ ಒಂದೇ ಜಿಲ್ಲಾ ಕಾಂಗ್ರೆಸ್ ಸಮಿತಿ ಇತ್ತು. ಆ ಸಮಿತಿಯ ಆಫೀಸ್ ಸಹ ಪ್ರದೇಶ ಕಾಂಗ್ರೆಸ್ ಸಮಿತಿ ಇದ್ದ ಕಟ್ಟಡದ ಒಂದು ಭಾಗದಲ್ಲಿತ್ತು. ಆ ಸಂದರ್ಭದಲ್ಲಿ ಒಬ್ಬ ಮಹನೀಯರು ಒಂದು ಸಾವಿರ ಮಂದಿ ಕಾಂಗ್ರೆಸ್ ಸದಸ್ಯರನ್ನು ಸೇರಿಸಿದ್ದರು. ಸದಸ್ಯತ್ವದ ಚಂದಾ ವರ್ಷಕ್ಕೆ ನಾಲ್ಕು ಆಣೆಯಂತೆ ಸಾವಿರ ಮಂದಿ ಸದಸ್ಯರಿಂದ ೨೫೦ ರೂಪಾಯಿಗಳನ್ನು ತೆಗೆದುಕೊಂಡು, ಕೇವಲ ಸದಸ್ಯತನದ ಸಾವಿರ ಫಾರಂಗಳನ್ನು ಬೆಂಗಳೂರು ಕಾಂಗ್ರೆಸ್ ಸಮಿತಿ ಆಫೀಸಿಗೆ ಕೊಟ್ಟು ಹಣವನ್ನು ಆ ಮೇಲೆ ಕೊಡುವುದಾಗಿ ವಂಚಿಸಿದರು.

ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ ವ್ಯವಸ್ಥಾಪಕ ಕಾರ್ಯದರ್ಶಿಯಾಗಿ ಸಂಸ್ಥಾನದ ಪ್ರತಿ ಜಿಲ್ಲೆ, ತಾಲ್ಲೂಕುಗಳಲ್ಲೂ ಇದ್ದ ಕಾಂಗ್ರೆಸ್ ಆಫೀಸುಗಳ ಕಾರ್ಯಕಲಾಪಗಳನ್ನೂ, ಲೆಕ್ಕಪತ್ರಗಳನ್ನು ನೋಡಲು ಸಂಚಾರ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಒಬ್ಬ ವ್ಯಕ್ತಿ ಕಾಂಗ್ರೆಸ್ ನಿಧಿಗೆ ತಮಗೆ ದೊರೆತ ಚಿನ್ನದ ನಾಣ್ಯವನ್ನು ಅರ್ಪಿಸಿದರು. ಸಂಗ್ರಹಿತ ಹಣವನ್ನು ಲೆಕ್ಕಾಚಾರ ಮಾಡುವಾಗ ಕಾಂಗ್ರೆಸ್ ನಾಯಕರೊಬ್ಬರು ಚಿನ್ನದ ನಾಣ್ಯವನ್ನು ತೆಗೆದುಕೊಂಡು ಅದರ ಮೌಲ್ಯದಷ್ಟು ಹಣ ನೀಡುವುದಾಗಿ ಹೇಳಿ ಕೊನೆಯವರೆಗೂ ನೀಡಲೇ ಇಲ್ಲ ಎಂಬ ಸಂದರ್ಭಗಳನ್ನು ಕಣ್ಣಾರೆ ಕಂಡು ಕಾಂಗ್ರೆಸ್ ಕಾರ್ಯಕ್ಕೆ ತಮ್ಮನ್ನೇ ಅರ್ಪಿಸಿಕೊಂಡಿದ್ದ ಹೆಚ್.ಕೆ.ವೀರಣ್ಣಗೌಡರು ಈ ಸಮಸ್ಯೆಗಳನ್ನು ಸರಿಪಡಿಸಿಕೊಳ್ಳುತ್ತಾ ಪಕ್ಷ ಸಂಘಟನೆಯಲ್ಲಿ ಮಗ್ನರಾದರು.

೧೯೪೪ರಲ್ಲಿ ನಿಜಲಿಂಗಪ್ಪನವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರನ್ನು ಜನರಲ್ ಸೆಕ್ರೆಟರಿಯಾಗಿ ನೇಮಕ ಮಾಡಿದರು. ನಿಜಲಿಂಗಪ್ಪನವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಮಯದಲ್ಲಿ ಕಾಂಗ್ರೆಸ್ ಕಚೇರಿ ದಿವಾಳಿಯಾಗಿ ಆರ್ಥಿಕ ದುಃಸ್ಥಿತಿಯಲ್ಲಿತ್ತು. ಬೆಂಗಳೂರಿಗೆ ಬಂದಾಗ ಕಾಂಗ್ರೆಸ್ ಕಚೇರಿಯಲ್ಲಿಯೇ ಉಳಿಯುತ್ತಿದ್ದ ನಿಜಲಿಂಗಪ್ಪನವರಿಗೆ ಕಾಫಿ, ತಿಂಡಿಗೂ ಸಹ ಹಣವಿರುತ್ತಿರಲಿಲ್ಲ. ಅದರಲ್ಲೂ ಹೆಚ್.ಕೆ.ವೀರಣ್ಣಗೌಡರು ರೈಲ್ವೆ ಸ್ಟೇಷನ್ನಿನಲ್ಲಿ ಕಡಿಮೆ ಬೆಲೆಗೆ ಸಿಗುತ್ತಿದ್ದ ಅಂದರೆ ಎರಡೆರಡು ಆಣೆಗೆ ಹುಳಿ ಅನ್ನ ಮತ್ತು ಮೊಸರನ್ನ ಒಂದೊಂದು ಪ್ಲೇಟ್ ತರಿಸಿ ತಮಗೆ, ಜಿ.ನಾರಾಯಣರಿಗೆ, ಅಧ್ಯಕ್ಷರಿಗೆ, ಒಬ್ಬ ಸ್ವಯಂ ಸೇವಕನಿಗೆ ಸೇರಿದಂತೆ ಹಂಚಿಕೊಂಡು ಹಸಿವು ನೀಗಿಸಿಕೊಳ್ಳುತ್ತಿದ್ದನ್ನು ನಿಷ್ಠ ಕಾಂಗ್ರೆಸ್ಸಿಗರಾದ ಶ್ರೀಯುತ ಜಿ.ನಾರಾಯಣರು ಈಗಲೂ ಸ್ಮರಿಸುತ್ತಾರೆ. ಮನೆ ಮಠಗಳನ್ನು ಬಿಟ್ಟು ಒಂದು ಹೊತ್ತಿನ ಊಟಕ್ಕೂ ಕಷ್ಟ ಪಡಬೇಕಾದ ದುರ್ಭರ ಪರಿಸ್ಥಿತಿಯಲ್ಲೂ ಕಾಂಗ್ರೆಸ್ ಕಾಯಕವನ್ನು ದೇವರ ಕೆಲಸವೆಂಬಂತೆ ಭಾವಿಸಿ ಮುನ್ನೆಡೆದು ಮೈಸೂರು ಕಾಂಗ್ರೆಸ್ಸಿನ ಸಂಸ್ಥಾಪಕ ನಾಯಕರಲ್ಲಿ ಒಬ್ಬರಾದವರು ಹೆಚ್.ಕೆ.ವೀರಣ್ಣಗೌಡರು.

ಚುನಾವಣೆಗಳು ಬಂದಾಗ, ಕಾಂಗ್ರೆಸ್ ಸದಸ್ಯರನ್ನು ಸೇರಿಸುವಾಗ, ದೇಶಾದ್ಯಂತ ನಾಯಕರ ಪ್ರವಾಸ ಕಾಲಗಳಲ್ಲಿ ಕಾಂಗ್ರೆಸ್ ನಿಧಿಗೆ ಹೆಚ್ಚು ಹೆಚ್ಚಾಗಿ ಹಣ ಸಂಗ್ರಹವಾಗುತ್ತಿತ್ತು. ಆ ಹಣದಿಂದ ಡ್ರೈವರ್ ಸಂಬಳ, ಉಟೋಪಚಾರಗಳ ಖರ್ಚು, ಸ್ವಯಂ ಸೇವಕರು ಮತ್ತು ಆಫೀಸ್ ಖರ್ಚು

ಇವುಗಳನ್ನೆಲ್ಲವನ್ನು ತಮ್ಮ ಪ್ರಾಮಾಣಿಕತನದಿಂದ ಹೆಚ್.ಕೆ.ವೀರಣ್ಣಗೌಡರು ಸರಿದೂಗಿಸಿಕೊಂಡು ಹೋಗುತ್ತಿದ್ದರು. ಕಾಂಗ್ರೆಸ್ ಕಚೇರಿ ಮೊದಲಿಗೆ ಅರಳೇಪೇಟೆಯ ಕೆ.ಟಿ.ಭಾಷ್ಯಂ ಅವರ ಮನೆ ಎದುರಿಗಿದ್ದ ರಾಮರೆಡ್ಡಿ ಎಂಬುವರ ಬಾಡಿಗೆ ಕಟ್ಟಡವೊಂದರಲ್ಲಿದ್ದು, ಹೆಚ್.ಕೆ.ವೀರಣ್ಣಗೌಡರು ಜನರಲ್ ಸೆಕ್ರೆಟರಿಯಾಗುವುದಕ್ಕೂ ಮೊದಲೇ ಕೆಲವು ತಿಂಗಳು ಅದರ ಬಾಡಿಗೆ ಕಟ್ಟಿರಲಿಲ್ಲ. ಹಾಗಾಗಿ ಅವರ ಬದುಕು ಹಣವಿಲ್ಲದೆ ಪರದಾಡಬೇಕಾದ ಪರಿಸ್ಥಿತಿಯಲ್ಲಿಯೇ ಮುಂದುವರೆದಿತ್ತು. ಆ ಪರಿಸ್ಥಿತಿಯನ್ನು ಹೆಚ್.ಕೆ.ವೀರಣ್ಣಗೌಡರು ತಾವು ಜನರಲ್ ಸೆಕ್ರೆಟರಿಯಾಗಿ ಬಂದ ಕಾಲದಲ್ಲಿ ಖರ್ಚನ್ನು ಸರಿದೂಗಿಸಿ ನಿಭಾಯಿಸಿದ್ದರು.

೧೯೪೭೦ರಲ್ಲಿ ಕಾಂಗ್ರೆಸ್ ಅಧ್ಯಕ್ಷರ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಹೆಚ್.ಕೆ.ವೀರಣ್ಣಗೌಡರು ಕೇವಲ ಏಳೆಂಟು ಮತಗಳನ್ನು ಹೆಚ್ಚಾಗಿ ಪಡೆದು ಅಧ್ಯಕ್ಷರಾಗಿದ್ದರು. ಆ ಚುನಾವಣೆಯು ಪೈಪೋಟಿಯಿಂದ ಕೂಡಿದ್ದು, ಬಹಳ ಬಿರುಸಿನಿಂದ ನಡೆದುದರಿಂದ ಕೆಲವೇ ಕೆಲವು ಮತಗಳ ಅಂತರದಲ್ಲಿ ಹೆಚ್.ಕೆ.ವೀರಣ್ಣಗೌಡರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದರು. ಚುನಾಯಿತರಾದ ಅಧ್ಯಕ್ಷರು ಆ ಸ್ಥಾನದಲ್ಲಿ ಎರಡು ವರ್ಷಗಳು ಕಾರ್ಯ ನಿರ್ವಹಿಸಿದ್ದರು. ಅತಿ ಕಡಿಮೆ ಕಾಲಾವಧಿಯಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ನಿವ್ರಹಿಸಬೇಕಾಗಿತ್ತು. ಆ ಸಮಯದಲ್ಲಿ ಹೆಚ್.ಕೆ.ವೀರಣ್ಣಗೌಡರು ಉತ್ತಮವಾಗಿ ಕಾರ್ಯನಿರ್ವಹಿಸಿದರು.

೧೯೫೨ರಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಹೆಚ್.ಕೆ.ವೀರಣ್ಣಗೌಡರು ಚುನಾಯಿತರಾದರು. ಅಂತಹ ಗುರುತರವಾದ ಜವಾಬ್ದಾರಿಯನ್ನು ವಹಿಸಿಕೊಂಡ ಹೆಚ್.ಕೆ.ವೀರಣ್ಣಗೌಡರು ಅದನ್ನು ಯಶಸ್ವಿಯಾಗಿ ನಿಭಾಯಿಸಿದರೆಂದೇ ಹೇಳಬೇಕು. ಅಧ್ಯಕ್ಷ ಸ್ಥಾನಕ್ಕೆ ತೀವ್ರ ಪ್ರತಿಭಟನೆ ಇದ್ದಾಗ ಚುನಾವಣೆ ಮುಗಿದ ನಂತರ ಕಾಂಗ್ರೆಸ್‌ನಲ್ಲಿ ಒಡಕುಂಟಾಗದಂತೆ ನೋಡಿಕೊಳ್ಳುವ ಜವಾಬ್ದಾರಿಯು ಬಹಳ ಮಹತ್ತರವಾದುದಾಗಿತ್ತು. ಆ ದೃಷ್ಟಿಯಿಂದ ಹೆಚ್.ಕೆ.ವೀರಣ್ಣಗೌಡರು ಅಧ್ಯಕ್ಷರಾಗಿ ಚುನಾಯಿತರಾದ ಎರಡು ಸಾರಿಯೂ ಅವರಿಗೆ ಎದುರಾಳಿಗಳಾಗಿ ಸ್ಪರ್ಧಿಸಿದ್ದ ಸ್ನೇಹಿತರನ್ನು, ಅವರಿಗಾಗಿ ಕೆಲಸ ಮಾಡಿದ ಸ್ನೇಹಿತರನ್ನೂ ಬಹು ಮಟ್ಟಿಗೆ ಕಾರ್ಯಕಾರಿ ಸಮಿತಿಗೆ ಆರಿಸಿಕೊಳ್ಳುವ ಮೂಲಕ ಸಮತೋಲನ ಕಾಯ್ದುಕೊಳ್ಳುವ ಕೆಲಸ ಮಾಡುತ್ತಿದ್ದರು. 'ಪ್ರತಿಸ್ಪರ್ಧಿಗಳಾಗಿದ್ದವರನ್ನೂ, ಅವರಿಗೆ ಬೆಂಬಲ ನೀಡಿದವರನ್ನೂ ಅವರು ಮೊದಮೊದಲು ಒಪ್ಪದಿದ್ದರೂ ತಾವೇ ಅವರ ಮನೆಗಳಿಗೆ ಹೋಗಿ ಬಲವಂತದಿಂದ ಅವರ ಮನವೊಲಿಸಿಕೊಂಡು ಕೆಲಸ ಮಾಡುತ್ತಿದ್ದರೆಂದು, ಈ ಕಾರಣದಿಂದ ಅಧ್ಯಕ್ಷ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಎರಡು ಗುಂಪಾಗಿದ್ದವರೆಲ್ಲರೂ ಒಂದೇ ಗುಂಪಾಗಿ, ಸಹಕಾರ ಸಹಾಯಗಳನ್ನು ನೀಡುತ್ತಿದ್ದರೆಂದು, ಅದು ತನ್ನ ಸುದೈವವೆಂದೂ, ಯಾರೋ ಒಬ್ಬಿಬ್ಬರು ತನಗೆ ವಿರೋಧಿಗಳಾಗಿ ಉಳಿದಿದ್ದರೂ ಸರ್ವೆಸಾಮಾನ್ಯವಾಗಿ ಎಲ್ಲ ಸ್ನೇಹಿತರೂ ಚುನಾವಣೆಯ ಘರ್ಷಣೆಯನ್ನು ಮರೆತು ಒಗ್ಗಟ್ಟಾಗಿ ಕೆಲಸ ಮಾಡುತ್ತಿದ್ದರು'. ಎಂಬುದಾಗಿ ಹೆಚ್.ಕೆ.ವೀರಣ್ಣಗೌಡರು ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ.

೧೯೬೦ರಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಾಗ ಹೆಚ್.ಕೆ.ವೀರಣ್ಣಗೌಡರು ಭಾರತೀಯ ಕಾಂಗ್ರೆಸ್ ಮಹಾಧಿವೇಶನವನ್ನು ಬೆಂಗಳೂರಿನಲ್ಲಿ ನಡೆಸಲು ಭಾರತೀಯ ಕಾಂಗ್ರೆಸ್ ವರ್ಕಿಂಗ ಕಮಿಟಿಯ ಎದುರು ಪ್ರಸ್ತಾಪವಿಟ್ಟು ಅನುಮತಿ ಪಡೆದರು. ಅದರಂತೆ ಬೆಂಗಳೂರಿನಲ್ಲಿ ನದೆಯುವ ಭಾರತೀಯ ಕಾಂಗ್ರೆಸ್ ಮಹಾಧಿವೇಶನಕ್ಕೆ ಹೆಚ್.ಕೆ.ವೀರಣ್ಣಗೌಡರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿ, ಎಸ್.ನಿಜಲಿಂಗಪ್ಪನವರು ಹಣಕಾಸಿನ ಜವಾಬ್ದಾರಿಯನ್ನು ವಹಿಸಿಕೊಂಡಂತೆ ಬೇರೆ ಬೇರೆ ಸಮಿತಿಗಳನ್ನು ಮಾಡಿ ಅದರ ಜವಾಬ್ದಾರಿಯನ್ನು ಇತರರಿಗೆ ವಹಿಸಿಕೊಡಲಾಯಿತು. ಹಣಕಾಸು ಜವಾಬ್ದಾರಿ ಹೊತ್ತ ಎಸ್.ನಿಜಲಿಂಗಪ್ಪನವರೊಡನೆ ಧನಸಹಾಯ ಪಡೆಯಲು ಬೊಂಬಾಯಿ, ಮದರಾಸು, ಮೈಸೂರು ಮುಂತಾದೆಡೆಗಳಲ್ಲಿ ಸಂಚರಿಸಿ ವರ್ತಕರುಗಳಿಂದ ಸುಮಾರು ೧೫ ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದರು. ಇದರಿಂದಾಗಿ ಬೆಂಗಳೂರಿನ ಕಾಂಗ್ರೆಸ್ ಮಹಾಧಿವೇಶನವು ಅತ್ಯಂತ ವಿಜೃಂಭಣೆಯಿಂದ, ಯಶಸ್ವಿಯಾಗಿ ನೆರವೇರಿತು. ಆ ಅಧಿವೇಶನಕ್ಕೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಅಧ್ಯಕ್ಷರಾದ ಶ್ರೀ ಸಂಜೀವರೆಡ್ಡಿಯವರೇ। ಅಧ್ಯಕ್ಷರಾದರು. ಅಧಿವೇಶನದ ಯಶಸ್ಸು ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುವಂತೆ ಗೌಡರು ಶ್ರಮಿಸಿದರೆಂದೇ ಹೇಳಬೇಕು. ಒಟ್ಟಾರೆ ಈ ಅಧಿವೇಶನಕ್ಕೆ ೨೩ ಲಕ್ಷ ರೂಪಾಯಿ ವಸೂಲಾಗಿದ್ದು, ಅದರಲ್ಲಿ ೧೯ ಲಕ್ಷ ರೂ.ಗಳು ಖರ್ಚಾದವೆಂದು ಕೆಲವು ಸಮಿತಿಯವರು ಅಪವ್ಯಯಕ್ಕೆ ಅವಕಾಶ ನೀಡದಿದ್ದರೆ ಮತ್ತಷ್ಟು ಹಣವನ್ನು ಉಳಿತಾಯ ಮಾಡ\ಬಹುದಿತ್ತು ಎಂಬುದು ಹೆಚ್.ಕೆ.ವೀರಣ್ಣಗೌಡರ ಅಭಿಮತ. 'ಕಾಂಗ್ರೆಸ್ ಹೆಸರಿನಲ್ಲಿ ನಡೆಯುವ ಇಂತಹ ಮಹಾ ಕಾರ್ಯಗಳಲ್ಲಿ ದುರ್ವ್ಯಯಗಳು, ಸುಳ್ಳುಲೆಕ್ಕ, ಮಾಡಿದ ಖರ್ಚಿಗೆ ಸರಿಯಾದ ವಿವರಗಳನ್ನು ಕೊಡದೆಯೂ ಇರುವಂತಹ ಕೆಲವು ವಿಷಯಗಳು ತೀರಾ ನೋವನ್ನುಂಟು ಮಾಡುವ ಸಂಗತಿಯಾಗಿವೆ' ಈ ಮಾತನ್ನು ಆತ್ಮ ಸಾಕ್ಷಿಯಾಗಿ ನೊಂದ ಮನಸ್ಸಿನಿಂದ ನಾನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ. ಎಲ್ಲರೂ ನಿಸ್ಪೃಹರಾಗಿಯೂ, ಸತ್ಯ ಸಂಧತೆಯಿಂದಲೂ ನಡೆದುಕೊಂಡಿದ್ದರೆ, ಕಾರ್ಯನಿರ್ವಹಿಸಿದ್ದರೆ ಇನ್ನೂ ಸುಮಾರು ನಾಲ್ಕೈದು ಲಕ್ಷ ರೂಪಾಯಿಗಳನ್ನು ಉಳಿಸಬಹುದಿತ್ತು ಎಂಬುದು ನನ್ನ ನಿಶ್ಚಲವಾದ ನಂಬಿಕೆ'.[೧೧೨] ಈ ಮಾತುಗಳು ಹೆಚ್.ಕೆ.ವೀರಣ್ಣಗೌಡರ ನಿಸ್ವಾರ್ಥ ಕಾರ್ಯವೈಖರಿಗೆ ಮತ್ತು ಅವರ ಕಾಂಗ್ರೆಸ್ ನಿಷ್ಠೆಗೆ ಕನ್ನಡಿ ಹಿಡಿದಂತಿವೆ.

ಸ್ವಾಗತ ಸಮಿತಿಯ ಅಧ್ಯಕ್ಷರಿಗೆ ಇರುವಷ್ಟೆ ಜವಾಬ್ದಾರಿ ನಮಗೂ ಇದೆ. ಆದುದರಿಂದ ಅವರಿಗೆ ಲೆಕ್ಕ ಒಪ್ಪಿಸಬೇಕಾದ ಅಗತ್ಯವೇನು? ಪ್ರತಿ ಖರ್ಚಿಗೂ ಅವರ ಅನುಮತಿ ಪಡೆಯಬೇಕಾದ ಅಗತ್ಯವೇನು? ಎಂಬ ಉದ್ಧಟತನದ ಇತರ ಸಮಿತಿಯವರ ಮಾತು ಹೆಚ್.ಕೆ.ವೀರಣ್ಣಗೌಡರ ಮನ ನೋಯುವಂತೆ ಮಾಡಿದವು. ಇವುಗಳೆಲ್ಲವನ್ನು ನಿಭಾಯಿಸುವ ಛಾತಿ ಹೆಚ್.ಕೆ.ವೀರಣ್ಣಗೌಡರಲ್ಲಿ ಇದ್ದುದು, ಅವರ ಜನಪ್ರಿಯತೆ ಕೆಲವು ಪೊಳ್ಳು ಕಾಂಗ್ರೆಸ್ಸಿನ ಕೆಲವರಿಗೆ ಸಹಿಸದಾಯಿತು. ಹೀಗಾಗಿ ಗೌಡರನ್ನು ಕಂಡರೆ ಕರುಬುವವರ ಸಂಖ್ಯೆಯೂ ಹೆಚ್ಚುತ್ತಾ ಹೋಯಿತು.

---

[೧೧೨] ಬದುಕು ಮೆಲುಕು. ಪು.೨೦೦

ಹೆಚ್.ಕೆ.ವೀರಣ್ಣಗೌಡರು ಎಂದೂ ತಮ್ಮನ್ನು ತಾವು ಶ್ರೇಷ್ಠರೆಂದು ಅಹಂ ಪಟ್ಟವರಲ್ಲ. ಬದಲಾಗಿ ಅವರೇ ತಮ್ಮ ಬಗ್ಗೆ ವ್ಯಾಖ್ಯಾನಿಸುವಂತೆ ಕಾಂಗ್ರೆಸ್ ಸಂಸ್ಥೆಯಲ್ಲಿ ಅನೇಕ ವಿದ್ಯಾವಂತರೂ, ಅನುಭವಸ್ಥರು, ನಿಸ್ಸೀಮ ಆಡಳಿತಗಾರರು, ಕಾರ್ಯದಕ್ಷತೆಯುಳ್ಳವರು ಇದ್ದಾರೆಂದು ಕೊಂಡಿದ್ದರು. ಇಂಥವರ ಮಧ್ಯೆ ನನ್ನಂತಹ ಸಾಮಾನ್ಯ ಮನುಷ್ಯನಿಗೆ ಈ ಮಹಾಕಾರ್ಯ ದೊರೆತಿದ್ದು ನನ್ನ ಪೂರ್ವಜನ್ಮದ ಪುಣ್ಯವೆಂದು ಭಾವಿಸುತ್ತೇನೆ' ಎಂದು ಹೇಳುವುದು ಎಲ್ಲರೊಳಗೆ ತಾನು ಒಬ್ಬ ಎಂಬ ಸಾಮಾನ್ಯತನ ತೋರುತ್ತದೆ.

ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷವನ್ನು ಕಟ್ಟಿದವರಲ್ಲೊಬ್ಬರಾಗಿ, ಕಾಂಗ್ರೆಸ್ ಪಕ್ಷವನ್ನು ಪ್ರಚಾರಗೊಳಿಸಿ ಜನಪ್ರಿಯಗೊಳಿಸುವ ಮೂಲಕ ಪ್ರಬಲವಾಗಿಸುವ ನಿಟ್ಟಿನಲ್ಲಿ ಹೆಚ್.ಕೆ.ವೀರಣ್ಣಗೌಡರು ತಮ್ಮ ಪತ್ನಿ ತಾಯಮ್ಮನವರೊಂದಿಗೆ ಸತತವಾಗಿ ಒಂದು ತಿಂಗಳ ಕಾಲ ನಾಡಿನ ಬಹುತೇಕ ಎಲ್ಲಾ ಪ್ರದೇಶಗಳಲ್ಲಿ ಪ್ರವಾಸ ಕೈಗೊಂಡು ಶ್ರಮಿಸಿದ್ದರು. ಆದರೆ ೬೦ರ ದಶಕದಲ್ಲಿ ಬದಲಾದ ರಾಜಕೀಯ ರಂಗಿನಾಟಕ್ಕೆ ಹೆಚ್.ಕೆ.ವೀರಣ್ಣಗೌಡರು ಬಲಿಯಾದರು. ಗೌಡರ ವಿರೋಧಿಗಳು ೧೯೬೬ರಲ್ಲಿ ಗೌಡರಿಗೆ ಕಾಂಗ್ರೆಸ್ ಪಕ್ಷದಿಂದ ಟಿಕೇಟು ಸಿಗದಂತೆ ಮಾಡುವುದರಲ್ಲಿ ಯಶಸ್ವಿಯಾಗಿದ್ದರು. ಇದರಿಂದ ಮನನೊಂದ ಗೌಡರು ಪ್ರದೇಶ ಕಾಂಗ್ರೆಸ್ ತ್ಯಜಿಸಿ ಹಳೆಯ ಮೈಸೂರು ಕಾಂಗ್ರೆಸ್ ಕಟ್ಟುತ್ತೇನೆ ಎಂದು ಮುಂದಾದರು.

**೫.೨ ಚುನಾವಣೆಯಲ್ಲಿ:**

೧೯೧೯ ರಿಂದ ೧೯೨೫ ರವರೆಗೆ ಚುನಾವಣೆಗಳನ್ನು ಗಮನಿಸಿದರೆ ಆಗ ಹೆಚ್ಚಿನ ಸ್ಪರ್ಧೆ ಮತ್ತು ವೆಚ್ಚವಿಲ್ಲದೆ ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರು ಚುನಾಯಿತರಾಗುತ್ತಿದ್ದರು. ೧೯೨೪ರಲ್ಲಿ ಚುನಾವಣೆಗೆ ಸಂಬಂಧಿಸಿದಂತೆ ಕೆಲವು ಸುಧಾರಣೆಗಳಾದವು. ಅಂದರೆ ಮತ ಕೊಡುವವರ ಕಂದಾಯದ ಅರ್ಹತೆಯನ್ನು ೨೫ ರೂಪಾಯಿಗೆ ಇಳಿಸಲಾಯಿತು. ಮೊಹತರ್ಫವನ್ನು ೫ ರೂಪಾಯಿಗೆ ಕಡಿಮೆ ಮಾಡಲಾಯಿತು. ಆದುದರಿಂದ ಮತದಾರರ ಸಂಖ್ಯೆ ಅಧಿಕವಾಯಿತು. ಹೀಗಾಗಿ ಪ್ರತಿಯೊಂದು ತಾಲ್ಲೂಕು ಪ್ರಜಾಪ್ರತಿನಿಧಿ ಸಭೆಯ ಚುನಾವಣಾ ಕ್ಷೇತ್ರವಾಯಿತು. ಆ ಸಂದರ್ಭದಲ್ಲಿ ಪ್ರಜಾಪ್ರತಿನಿಧಿ ಸಭೆಯ ಕ್ಷೇತ್ರದಲ್ಲಿ ೮೦೦ ರಿಂದ ೨೦೦೦ ದವರೆವಿಗೂ ಮತದಾರರಿರುತ್ತಿದ್ದರು. ಶಾಸನ ಸಭೆಯ ಕ್ಷೇತ್ರಕ್ಕೆ ೧೫ ರಿಂದ ೧೬ಕ್ಕಿಂತ ಹೆಚ್ಚಿಗೆ ಮತದಾರರು ಇರುತ್ತಿರಲಿಲ್ಲ. ಉಮೇದುವಾರರ ಸಂಖ್ಯೆಯು ಹೆಚ್ಚಾಯಿತು. ಪರಿಣಾಮವಾಗಿ ಗ್ರಾಮಗಳಿಗೆ ಭೇಟಿ ಕೊಟ್ಟು ಮತಗಳನ್ನು ಕೇಳುವ ಪದ್ಧತಿ ರೂಢಿಗೆ ಬಂದಿತು. ಎತ್ತಿನ ಗಾಡಿಗಳಲ್ಲಿಯೇ ಹಳ್ಳಿಯಿಂದ ಹಳ್ಳಿಗೆ ಹೋಗಿ ವೋಟನ್ನು ಯಾಚಿಸುತ್ತಿದ್ದರು. ಆಗಲೇ ಕೆಲವು ಅಕ್ರಮ ಪದ್ಧತಿಗಳು ತಲೆದೋರ ತೊಡಗಿದವು. ಅಂದರೆ ವೋಟರುಗಳಿಗೆ ಚುನಾವಣೆಯ ದಿವಸ ಊಟ, ತಿಂಡಿ ಏರ್ಪಾಡು ಮಾಡುವುದು, ಪ್ರಯಾಣ ಮಾಡಲು ಗಾಡಿ ಬಾಡಿಗೆ ಕೊಡುವುದು ಪ್ರಾರಂಭವಾಯಿತು. ಎಲ್ಲಾ ಮತದಾರರು ತಾಲ್ಲೂಕು ಹೆಡ್‌ಕ್ವಾಟ್ರರಿಗೆ ಬಂದು ಮತವನ್ನು ಕೊಡಬೇಕಾಗಿದ್ದಿತು. ಆದರೂ ಪ್ರಸ್ತುತ ಸ್ಥಿತಿಗೆ ಹೋಲಿಸಿದರೆ ಆಗಿನ ಮತದಾರರಲ್ಲಿ ನೀತಿಯ ಮಟ್ಟವು ಮೇಲ್ತರಗತಿಯಾಗಿದ್ದಿತು. ಬಹು ಜನರು

ಯಾವ ಪ್ರತಿಫಲವನ್ನೂ ಅಪೇಕ್ಷಿಸುತ್ತಿರಲಿಲ್ಲ. ಲಂಚವನ್ನು ತೆಗೆದುಕೊಂಡು ಮತ ಕೊಡುವವರು ಬಹಳ ಕಡಿಮೆ ಇರುತ್ತಿದ್ದರು. ವೋಟು ಕೋಡುವುದಾಗಿ ವಾಗ್ದಾನ ಮಾಡಿದವರು ಕೊನೆಯವರೆಗೂ ಅದಕ್ಕೆ ಬದ್ಧರಾಗಿರುತ್ತಿದ್ದರು. ಕೋಮುವಾರು ಭಾವನೆಯ ಅತ್ಯಲ್ಪವಾಗಿದ್ದಿತು. ಮುಖ್ಯವಾಗಿ ವ್ಯಕ್ತಿಯ ಅರ್ಹತೆ ಮತ್ತು ದಕ್ಷತೆಯನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದರು.[೧೧೩]

ಇಂತಹ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಇರ್ವಿನ್ ನಾಲಾ ಚಳುವಳಿಯ ನಂತರ ಸ್ನೇಹಿತರ ಒತ್ತಾಯದ ಮೇರೆಗೆ ೧೯೩೩ರಲ್ಲಿ ಮೊಟ್ಟಮೊದಲ ಬಾರಿಗೆ ಪ್ರಜಾಪ್ರತಿನಿಧಿ ಸಭೆಯ ಚುನಾವಣೆಗೆ ಮದ್ದೂರು ಕ್ಷೇತ್ರದಿಂದ ಉಮೇದುವಾರರಾಗಿ ನಿಂತರು. ತಮ್ಮಪರ ಚುನಾವಣಾ ಪ್ರಚಾರದಲ್ಲಿ ಹೆಚ್.ಕೆ.ವೀರಣ್ಣಗೌಡರು ತೊಡಗಿದ್ದಾಗ ಮತದಾರರ ಮನೋಭಾವ ಎಂತಹ ನಿಷ್ಠೆಯಿಂದ ಕೂಡಿದೆ ಎಂಬುದರ ಅನುಭವವಾಯಿತು. ಗೌಡರು ರೈತರಿಗೆ ಸರ್ಕಾರದಿಂದ ಆಗುತ್ತಿದ್ದ ಅನ್ಯಾಯದ ವಿರುದ್ಧ ರೈತ ಚಳವಳಿ ನಡೆಸಿ ಹೋರಾಡಿದ್ದರೂ ಜನರ ಮನದಲ್ಲಿ ಮಾತ್ರ ತಾವು ಪರಕೀಯರೇ ಆಗಿರುವುದು ಗಮನಕ್ಕೆ ಬಂತು. ಚುನಾವಣಾ ಪ್ರಚಾರಕ್ಕಾಗಿ ಹೋದ ಗ್ರಾಮಗಳಲ್ಲೆಲ್ಲಾ ಜನರು ಆದರದಿಂದ ಬರಮಾಡಿಕೊಂಡು ಕಾಫಿಯೋ ಎಳನೀರೋ ಕೊಟ್ಟು ಉಪಚರಿಸಿದರು. ಗೌಡರು ಅವರ ವೋಟನ್ನು ತನಗೇ ಕೊಡುವುದಲ್ಲದೆ ಬೇರೆಯವರಿಂದಲೂ ಕೊಡಿಸಿ ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಬೇರೆ ಬೇರೆ ಊರಿನ ಜನರಾದರೂ ಅವರು ಕೊಟ್ಟ ಉತ್ತರ ಮಾತ್ರ ಹೆಚ್ಚು ಕಡಿಮೆ ಒಂದೇ ರೀತಿಯದಾಗಿತ್ತು. ಜನರು ನೀಡಿದ ಮಾತಿನ ಸಾರಾಂಶವೆಂದರೆ, 'ನೋಡಿ ಸ್ವಾಮಿ ನೋವು ಈ ಪ್ರಾಂತ್ಯಕ್ಕೆ ಕಷ್ಟ ನಿಷ್ಠೂರಗಳನ್ನನ್ನುಭವಿಸಿ ರೈತರಿಗೆ ಬೇಕಾದಷ್ಟು ಉಪಕಾರ ಮಾಡಿದ್ದೀರಿ. ಅದಕ್ಕಾಗಿ ನಾವು ನಿಮಗೆ ಋಣಿಗಳು. ನೀವು ನಮ್ಮ ಪ್ರತಿನಿಧಿಯಾಗಿ ಚುನಾಯಿತರಾದರೆ ನ್ಬಮ್ಮ ಹಿತವನ್ನು ದಕ್ಷತೆಯಿಂದ ನೋಡಿಕೊಳ್ಳುವ ಶಕ್ತಿಯೂ ನಿಮಗಿದೆ ಎಂಬುದನ್ನು ನಾವು ಮನಗಂಡಿದ್ದೇವೆ. ಆದರೆ, ನೀವು ಇತ್ತೀಚೆಗೆ ನಮ್ಮ ಮಧ್ಯೆ ಬಂದು ನೆಲೆಸಿರುವವರು ನಿಮಗಿಂತ ಮೊದಲು ಎಷ್ಟೋ ವರ್ಷಗಳೀಚೆದ ಪ್ರಜಾಪ್ರತಿನಿಧಿ ಮುಂತಾದ ಸಭೆಗಳಲ್ಲಿ ನಮ್ಮ ಪ್ರತಿನಿಧಿಯಾಗಿ ಈಗಲೂ ನಮ್ಮ ಭರವಸೆಯಿಂದಲೇ ಚುನಾವಣೆಗೆ ನಿಂತಿರುವ ನಮ್ಮ ಹಳೇ ಸ್ನೇಹಿತರನ್ನು ಕೈಬಿಡುವುದು ನಮಗೆ ಧರ್ಮವೇ? ನೀವೇನೋ ಒಂದಿಷ್ಟು ಉಪಕಾರ ಮಾಡಿದ್ದೀರೆಂದು ಹೊಸಬರಾದ ನಿಮ್ಮನ್ನು ತಬ್ಬಿಕೊಂಡು ನಮ್ಮಲ್ಲಿ ವಿಶ್ವಾಸದಿಂದಿರುವ ನಿಮ್ಮ ಎದುರಾಳಿಗಳನ್ನು ಕೈಬಿಡುವುದಕ್ಕೆ ನಮಗೇನು ಕಾರಣವಿದೆ? ಈ ದಿನ ಅವರನ್ನು ಬಿಟ್ಟು ನಿಮ್ಮನ್ನು ಕೈಹಿಡಿದೋ ಎನ್ನಿ, ನಾಳೆ ನಿಮ್ಮನ್ನು ಬಿಟ್ಟು ನಾವು ಮತ್ತೊಬ್ಬರ ಕೈ ಹಿಡಿಯುವುದಿಲ್ಲವೆಂಬ ಬಂಬಿಕೆಯೇನು? ಸ್ನೇಹ, ವಿಶ್ವಾಸ ಎಂಬ ಮಾತುಗಳಿಗೆ ಅರ್ಥವೇ ಇಲ್ಲವೇ ಸ್ವಾಮಿ? [೧೧೪] ಎಂದು ಕೇಳಿದರು.

'ಸ್ವಾತಂತ್ರ್ಯ ಪೂರ್ವ ಕಾಲದ ವೋಟರುಗಳ ಮನೋಭಾವಕ್ಕೂ ಸ್ವಾತಂತ್ರ್ಯ ನಂತರದ ವೋಟರುಗಳ ಮನೋಭಾವಕ್ಕೂ ಹೋಲಿಸಿದರೆ ಅಜಗಜಾಂತರ ವ್ಯತ್ಯಾಸ ಕಾಣುತ್ತದೆ. ಆಗಿನ ಕಾಲದ ಸ್ನೇಹಿತರು ಸ್ನೇಹವೆಂಬುದನ್ನು ಪರಮನಿಷ್ಠೆಯಿಂದ ಪಾಲಿಸುತ್ತಿದ್ದರು. ರಾಜಕೀಯಕ್ಕೂ ಸ್ನೇಹಕ್ಕೂ ಪರಸ್ಪರ

---

[೧೧೩] ಜೆ.ಮಹಮದ್ ಇಮಾಂ. ಮೈಸೂರು ಆಗ ಮತ್ತು ಈಗ. ೧೯೯೭. ಪುಟ-೧೫.

[೧೧೪] ಬದುಕು ಮೆಲುಕು. ಪುಟ-೧೩೦.

ಸಂಬಂಧವೇ ಇಲ್ಲದಂತೆ ಅವರು ನಡೆದುಕೊಳ್ಳುತ್ತಿದ್ದರು. ಈಗಿನ ವಾತಾವರಣ ರಾಜಕೀಯದಲ್ಲಿ ತದ್ವಿರುದ್ಧವಾಗಿದೆ. ಈಗ ಹಣ ಕೊಟ್ಟವರ ಕಡೆ ಇನ್ನಾವುದನ್ನೂ ಲಕ್ಷಿಸದೆ ವೋಟು ಕೊಡುವವರು ಹೆಚ್ಚಾಗಿದ್ದಾರೆ. ಅದರ ಜೊತೆಗೆ ಸ್ನೇಹ, ಪಕ್ಷ, ಗುಂಪುಗಾರಿಕೆ, ಸ್ವಾರ್ಥಸಾಧನೆ ಇವು ಈಗ ಎದ್ದು ಕಾಣುತ್ತಿವೆ. ಇದರಿಂದಾಗಿ ಸಾಮಾನ್ಯವಾಗಿ ಪ್ರತಿ ಹಳ್ಳಿಗಳಲ್ಲಿಯೂ ದ್ವೇಷಾಸೂಯೆಗಳು ಹೆಚ್ಚಿದೆ. ಚುನಾವಣೆಯಲ್ಲಿ ಸ್ಪರ್ಧಿಸಿದ್ದವರು ಫಲಿತಾಂಶ ಹೊರಬಿದ್ದ ಮೇಲೆ ಆ ವಿಷಯವನ್ನು ಮರೆತು ಎಂದಿನಂತೆ ಗ್ರಾಮಾಂತರಗಳಲ್ಲಿ ಸೌಹಾರ್ದ ಸೌಜನ್ಯಗಳಿಂದ ನಡೆದುಕೊಳ್ಳುತ್ತಿದ್ದವರೇ ಹೆಚ್ಚು. ಈಗ ಚುನಾವಣೆಯ ಫಲಿತಾಂಶದ ವಿಷ ಬೀಜ ತಲೆ ತಲಾಂತರಕ್ಕೂ ಮೊಳೆತು ಬೆಳೆದು ಬರುವುದೊ ಎಂಬಂತೆ ಹಳ್ಳಿಗಾಡಿನಲ್ಲಿ ಎಲ್ಲೆಲ್ಲೂ ಎದ್ದು ಕಾಣುತ್ತದೆ. ಇದೊಂದು ದುರದೃಷ್ಟಕರವಾದ ಸಂಗತಿ'[೧೧೫] ಎಂದು ಹೆಚ್.ಕೆ.ವೀರಣ್ಣಗೌಡರು ಉದ್ಗರಿಸಿರುತ್ತಾರೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಕಾಲ ಘಟ್ಟಗಳೆರಡರಲ್ಲೂ ಚುನಾವಣೆಗಳಲ್ಲಿ ಸ್ಪರ್ಧಿಸಿ ಅನುಭವಗಳಿಸಿದವರು. ಈ ಹಿನ್ನೆಲೆಯಲ್ಲಿ ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಮತದಾನ ಬಹಳ ಅಮೂಲ್ಯವಾದ ಹಕ್ಕು. ಇದು ಯಶಸ್ವಿಯಾಗಬೇಕಾದರೆ ರಾಷ್ಟ್ರದ ಜನಗಳು ವಿದ್ಯಾವಂತರಾಗಿರಬೇಕು ಅಥವಾ ರಾಜಕೀಯದ ತಿಳುವಳಿಕೆಯಿರಬೇಕು. ಅಲ್ಲದೆ ಶಿಸ್ತು, ಸತ್ಯನಿಷ್ಠತೆ ಇರಬೇಕು. ಇಲ್ಲವಾದರೆ ಮತದಾನದ ಹಕ್ಕನ್ನು ದುರುಪಯೋಗಪಡಿಸಿಕೊಳ್ಳಲು ಅವಕಾಶವಾಗಿ ಅದರಿಂದ ಪ್ರಜಾಪ್ರಭುತ್ವಕ್ಕೆ ಧಕ್ಕೆ ಬರುತ್ತದೆ. ಪ್ರಜೆಗಳಲ್ಲಿ ವಿದ್ಯೆಯು ಹರಡುವವರೆಗೂ ವಯಸ್ಕರ ಮತದಾನವು ಯಶಸ್ವಿಯಾಗಲಾರದೆಂದು ಮಹಾತ್ಮ ಗಾಂಧೀಜಿಯವರು ಅಭಿಪ್ರಾಯ ಪಟ್ಟಿದ್ದರು.'[೧೧೬]

ಈ ಹಿನ್ನೆಲೆಯಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ನಡೆಯುವ ಚುನಾವಣೆಗಳಿಗೂ, ಭಾರತದಲ್ಲಿ ನಡೆಯುತ್ತಿರುವ ಚುನಾವಣೆಗಳಿಗೂ ಬಹಳ ವ್ಯತ್ಯಾಸವಿದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಸುವ್ಯವಸ್ಥಿತವಾದ ಎರಡು ಪಾರ್ಟಿಗಳಿರುತ್ತವೆ. ಪ್ರತಿಯೊಂದು ಪಾರ್ಟಿಗಳವರು ಚುನಾವಣೆ ಮತ್ತು ಪ್ರಚಾರ ಕಾರ್ಯಗಳಿಗೆ ಅಧಿಕವಾಗಿ ಹಣವನ್ನು ಶೇಖರಿಸಿರುತ್ತಾರೆ. ಅಭ್ಯರ್ಥಿಗಳ ಚುನಾವಣೆ ಖರ್ಚಿನ ಬಹುಭಾಗವನ್ನು ಪಾರ್ಟಿ ಫಂಡಿನಿಂದಲೇ ಕೊಡುತ್ತಾರೆ. ಅಲ್ಲದೆ ಅಲ್ಲಿ ಎಲ್ಲಾ ಮತದಾರರೂ ವಿದ್ಯಾವಂತರು. ಅವರಲ್ಲಿ ಶಿಸ್ತು ಮತ್ತು ಬಹುಮಟ್ಟಿಗೆ ನೀತಿಯೂ ಇರುತ್ತದೆ. ಈ ಪರಿಸ್ಥಿತಿಯು ನಮ್ಮ ಇಂಡಿಯಾ ದೇಶದಲ್ಲಿ ಇನ್ನೂ ಬಂದಿಲ್ಲ.[೧೧೭]

೧೯೬೧ ರಲ್ಲಿ ಮೈಸೂರು ಕಾಂಗ್ರೆಸ್ ಚುನಾವಣಾ ಸಮಿತಿಯ ಸದಸ್ಯರ ಆಯ್ಕೆಗಾಗಿ ನಡೆದ ಚುನಾವಣೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಪರವಿದ್ದ ಸ್ನೇಹಿತರೊಬ್ಬರು (ತಮ್ಮ ಮಗಳಿಗೆ ಮೆಡಿಕಲ್ ಸೀಟ್ ಪಡೆಯುವುದಕ್ಕೋಸ್ಕರ) ಪಕ್ಷಾಂತರ ಮಾಡಿದ್ದರಿಂದ ಗೌಡರು ಚುನಾವಣೆಯಲ್ಲಿ ಸೋಲಬೇಕಾಗಿ ಬಂತು. ವಿರೋಧಿ ಕಣದಲ್ಲಿ ಎಸ್.ನಿಜಲಿಂಗಪ್ಪನವರಿದ್ದರು. ಈ ವೇಳೆಗಾಗಲೇ ಹೆಚ್.ಕೆ.ವೀರಣ್ಣಗೌಡರು ಮತ್ತು ನಿಜಲಿಂಗಪ್ಪನವರ ಮಧ್ಯೆ ಕೆಲವು ಭಿನ್ನಾಭಿಪ್ರಾಯಗಳಿಂದಾಗಿ ವಿರಸವೇರ್ಪಟ್ಟಿತ್ತು. ಈ

---

[೧೧೫] ಪೂರ್ವೋಕ್ತಿ. ಪುಟ-೧೩೦

[೧೧೬] ಳಿ.ಮಹಮದ್ ಇಮಾಂ. ಮೈಸೂರು ಆಗ ಮತ್ತು ಈಗ. ೧೯೯೭. ಪು-೧೦೨.

[೧೧೭] ಪೂರ್ವೋಕ್ತಿ. ಪುಟ-೧೦೨

ಸಂದರ್ಭದಲ್ಲಿ ಎಸ್.ನಿಜಲಿಂಗಪ್ಪ ಮತ್ತು ಹೆಚ್.ಕೆ.ವೀರಣ್ಣಗೌಡರ ನಡುವೆ ಸಂದಾನ ಮಾಡಲು ಕೆಲವರು ಪ್ರಯತ್ನಿಸಿದರು. ಚುನಾವಣಾ ಸಮಿತಿಯ ಸದಸ್ಯರ ಆಯ್ಕೆಯಲ್ಲಿ ತಮ್ಮ ಗುಂಪಿನವರಿಗೆ ಮೂರು ಸ್ಥಾನಗಳನ್ನು ಬಿಟ್ಟುಕೊಟ್ಟರೆ ತಾವು ಒಪ್ಪುವುದಾಗಿ ಹೆಚ್.ಕೆ.ವೀರಣ್ಣಗೌಡರು ಹೇಳಿದರು. ಆದರೆ ಎರಡು ಸ್ಥಾನಗಳನ್ನು ಬಿಟ್ಟುಕೊಡುವುದಾಗಿ, ಆ ಎರಡೂ ಸ್ಥಾನಗಳಿಗೂ ತಾವು ಸೂಚಿಸಿದವರನ್ನೇ ಸದಸ್ಯರನ್ನಾಗಿ ಮಾಡಬೇಕೆಂದು ನಿಜಲಿಂಗಪ್ಪನವರು ಮರುತ್ತರಿಸಿದರು. ಇದಕ್ಕೆ ಹೆಚ್.ಕೆ.ವೀರಣ್ಣಗೌಡರು ಒಪ್ಪದೆ ಚುನಾವಣೆಯನ್ನು ಎದುರಿಸಿದರು. ಮೂರನೇ ಒಂದರಷ್ಟು ಮತ ಪಡೆದು ಹೆಚ್.ಕೆ.ವೀರಣ್ಣಗೌಡರ ಗುಂಪು ಸೋಲಬೇಕಾಯಿತು. ಸ್ನೇಹಿತರೆಂದು ನಂಬಿದ್ದವರ ವಿಶ್ವಾಸಘಾತುಕತನ ಹೆಚ್.ಕೆ.ವೀರಣ್ಣಗೌಡರ ಮನಸ್ಸನ್ನು ನೋಯಿಸಿತ್ತು.

೧೯೬೨ರಲ್ಲಿ ಮೈಸೂರು ಶಾಸನಸಭೆಗೆ ನಡೆದ ಚುನಾವಣೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಮದ್ದೂರು ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಆದರೆ ಸೋಲನ್ನನುಭವಿಸಬೇಕಾಯಿತು. ಆ ವೇಳೆಗಾಗಲೇ ರಾಜಕೀಯ ಭ್ರಷ್ಟಾಚಾರ ತಲೆಯೆತ್ತಿದ್ದ ಪರಿಣಾಮ ವೋಟರುಗಳ ಮನೋಭಾವದಲ್ಲಿ ಬದಲಾವಣೆಗಳು ಕಾಣಿಸ ತೊಡಗಿದ್ದವು. ಆದಕಾರಣ ಮದ್ದೂರಿನ ಜನ ಹೆಚ್.ಕೆ.ವೀರಣ್ಣಗೌಡರ ಕೈ ಬಿಟ್ಟರು. ೧೯೬೪ರಲ್ಲಿ ಪಾರ್ಲಿಮೆಂಟ್ ಸದಸ್ಯರೂ, ಕೇಂದ್ರ ಸರ್ಕಾರದ ಮಂತ್ರಿಗಳಾಗಿದ್ದ ಹೆಚ್.ಸಿ.ದಾಸಪ್ಪನವರು ಮೃತರಾದರು. ಇದರಿಂದ ತೆರವಾಗಿದ್ದ ಆ ಸ್ಥಾನಕ್ಕೆ ಹೆಚ್.ಕೆ.ವೀರಣ್ಣಗೌಡರು ಸ್ಪರ್ಧಿಸಬೇಕೆಂದು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯವರು ನಿರ್ಣಯ ಮಾಡಿದರು. ಇದಕ್ಕೆ ಸಮ್ಮತಿಸುವಂತೆ ಹೆಚ್.ಕೆ.ವೀರಣ್ಣಗೌಡರನ್ನು ಒಪ್ಪಿಸಲು ಗೌಡರ ಸ್ನೇಹಿತರಾದ ವಿ.ವೆಂಕಟಪ್ಪನವರನ್ನು ಕಳುಹಿಸಿದರು. ಹೀಗೆ ಸ್ನೇಹಿತರ ಒತ್ತಾಯದಿಂದಾಗಿ ಮರುಚುನಾವಣೆಯಲ್ಲಿ ಸ್ಪರ್ಧಿಸಿದ ಹೆಚ್.ಕೆ.ವೀರಣ್ಣಗೌಡರು ಎರಡು ವರ್ಷಕ್ಕೆ ಲೋಕಸಭಾ ಸದಸ್ಯರಾಗಿ ಚುನಾಯಿತರಾದರು.

೧೯೬೭ರಲ್ಲಿ ನಡೆದ ಮಹಾಚುನಾವಣೆಯಲ್ಲಿ ಮದ್ದೂರು ಕ್ಷೇತ್ರದಿಂದ ಗೌಡರಿಗೆ ಕಾಂಗ್ರೆಸ್ ಟಿಕೇಟು ನೀಡದ ಕಾರಣ ಕಾಂಗ್ರೆಸ್ ವಿರೋಧಿಗಳು ಒತ್ತಾಯಿಸಿದ್ದರಿಂದ ಹೆಚ್.ಕೆ.ವೀರಣ್ಣಗೌಡರನ್ನು ಕಿರುಗಾವಲು ಕ್ಷೇತ್ರದಿಂದ ಸ್ಪರ್ಧಿಸಿದರು. ಆ ಚುನಾವಣಾ ಪ್ರಚಾರದಲ್ಲಿ ತಮ್ಮ ವಿರೋಧಿ ಗುಂಪಿನ ವಿರುದ್ಧ ತಾವು ಗೆಲ್ಲಲೇ ಬೇಕೆಂದು ಹಟ ಬಂದಿದ್ದರಿಂದ ಹೆಚ್.ಕೆ.ವೀರಣ್ಣಗೌಡರು ಚುನಾವಣಾ ಪ್ರಚಾರಕ್ಕಾಗಿ ಹೆಚ್ಚು ಹಣವನ್ನು ಖರ್ಚು ಮಾಡಬೇಕಾಗಿ ಬಂತು. ಅಷ್ಟೋತ್ತಿಗಾಗಲೆ ಕೆಲವು ಚುನಾವಣೆಗಳಲ್ಲಿ ಸೋಲನ್ನು ಕಂಡಿದ್ದ ಹೆಚ್.ಕೆ.ವೀರಣ್ಣಗೌಡರ ಮನ ಬೇಸತ್ತಿತ್ತು. ಹಟ ಸ್ವಭಾವದ ಗೌಡರು ಇತರ ಕಾಂಗ್ರೆಸ್ ವಿರೋಧಿ ಸ್ನೇಹಿತರ ಮಾತಿಗೆ ಬಿದ್ದು ಚುನಾವಣೆ ಗೆಲ್ಲಲು ತಮ್ಮ ಪ್ರಚಾರ ಶೈಲಿಯಲ್ಲೂ ಅಂದಿನ ಸ್ಥಿತಿಗತಿಗಳಿಗೆ ಅನುಗುಣವಾಗಿ ಬದಲಾವಣೆ ಮಾಡಿಕೊಂಡಿದ್ದರಿಂದಾಗಿ ಅಧಿಕ ಹಣವನ್ನು ಖರ್ಚು ಮಾಡಬೇಕಾಗಿ ಬಂದಿತು. ಆದರೆ ಯಾವುದೇ ಪ್ರಯೋಜನವಾಗಲಿಲ್ಲ. ಚುನಾವಣೆಯಲ್ಲಿ ಸೋಲನ್ನನುಭವಿಸಿದರು. ಅಷ್ಟೋತ್ತಿಗಾಗಲೇ ಎಪ್ಪತ್ತನಾಲ್ಕರ ಇಳಿವಯಸ್ಸಿನಲ್ಲಿದ್ದ ಹೆಚ್.ಕೆ.ವೀರಣ್ಣಗೌಡರ ಮನಸ್ಸಿಗೆ ಇನ್ನು ಈ ಚುನಾವಣೆಗಳ ಗೋಜಲು ಸಾಕೆನಿಸಿತ್ತು.

ಸ್ವಾತಂತ್ರ್ಯಪೂರ್ವದಲ್ಲಿ ಚುನಾವಣೆಯಲ್ಲಿ ಹೆಚ್.ಕೆ.ವೀರಣ್ಣಗೌಡರ ಭಾಷಣ ಚುನಾವಣೆಗೆ ಸೀಮಿತವಾಗಿರದೆ ಜನರಲ್ಲಿ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಜಾಗೃತಿ ಉಚಿಟುಮಾಡುವ ನಿಟ್ಟಿನಲ್ಲಿ

ಸಾಗುತ್ತಿತ್ತು. ಅದು ೧೯೪೨ರ ' ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ' ಚಳುವಳಿಯಲ್ಲಿ ಪ್ರತಿಧ್ವನಿತವಾಗಿ ಸಹಸ್ರಾರು ಜನರು ಕಾರಾಗೃಹ ಸೇರಿದರು.

ಹೆಚ್.ಕೆ.ವೀರಣ್ಣಗೌಡರು ಬಾಷಣ ಮಾಡಲು ಎದ್ದರೆಂದರೆ ಸಭೆಯು ನಿಶ್ಯಬ್ದ ಹೊಂದಿ ಏಕಾಗ್ರತೆ ಹೊಂದುತ್ತಿತ್ತು. ಗೌಡರು ಅಷ್ಟೆ ಹೃದಯಾಂತರಾಳದಿಂದ ಹೊರಟ ಮಾತುಗಳನ್ನು ಬಳಸುತ್ತಿದ್ದು ಜನಜೀವನದ ನೈಜ ಚಿತ್ರವನ್ನು ಅವರಲ್ಲಿ ಮೂಡಿಸುತ್ತಿದ್ದರು. ಅವರ ಭಾಷಣದ ಬಹು ಭಾಗ ಜನರು ಬಾಳ್ವೆ ಸಾಗಿಸುವ ರೀತಿ ನೀತಿಗಳನ್ನು ಪ್ರತಿಪಾದಿಸುತ್ತಿದ್ದುದರ ಜೊತೆಗೆ ತಮ್ಮ ಭಾಷಣದಿಂದ ಯಾರಲಾದರೂ ಅತೃಪ್ತಿ ಅಸಹನೆ ಉಂಟಾದೀತೆಂಬ ಭಾವನೆಯಿಂದ ಮಾತಾಡಿದವರೇ ಅಲ್ಲ. ಮತದಾರರು ಹೇಳುವುದು ಸರಿಯೋ ತಪ್ಪೋ ಅದನ್ನು ಹಿಡಿದು ವಾದಿಸಿದವರಲ್ಲ. ಗೌಡರು ತಾವೇ ನಿಂತ ಚುನಾವಣೆಯಲ್ಲು ಸಹ ಮತದಾರರು ಹೇಳಿದ ತಪ್ಪು ಹೇಳಿಕೆಗಳನ್ನು ಪ್ರತಿಪಾದಿಸಿ ಹೇಗಾದರು ಮಾಡಿ ಚುನಾವಣೆಯಲ್ಲಿ ಗೆಲ್ಲಲೇ ಬೇಕೆಂಬ ಹಂಬಲದಿಂದ ದೂರವಿದ್ದವರು.'[೧೧೮]

ರೈತನ ಬಾಳು ಹಸನಾಗಬೇಕು, ಆತನು ಕಷ್ಟದಿಂದಲೇ ಹುಟ್ಟಿ, ಕಷ್ಟದಿಂದಲೇ ಬಾಳಿ ಕಷ್ಟದಿಂದಲೇ ಸಾಯುವ ಸ್ಥಿತಿ ದೂರವಾಗಿ ಕೈ ಕೆಸರಾದರೆ ಬಾಯಿ ಮೊಸರೆಂಬ ನಾಣ್ಣುಡಿಯಂತೆ ರೈತಸಮಾಜ ಮಾರ್ಪಾಟಾಗಬೇಕೆಂಬುದೇ ನನ್ನ ಆಶಯವೆಂದು ಗೌಡರು ತಮ್ಮ ಮನದಾಳವನ್ನು ಸಭೆ ಸಂಘಗಳಲ್ಲಿ ತೋಡಿಕೊಳ್ಳುತ್ತಿದ್ದರು.''[೧೧೯] ಹೆಚ್.ಕೆ.ವೀರಣ್ಣಗೌಡರು ಚುನಾವಣೆಗಳನ್ನು ಗೆಲ್ಲುವುದನ್ನೇ ಗುರಿಯಾಗಿಟ್ಟುಕೊಂಡು ಮತದಾರರು ಮಾಡುವ ತಪ್ಪುಗಳನ್ನು ಎತ್ತಿ ಹಿಡಿದವರೂ ಅಲ್ಲ ಹಾಗೂ ಸರ್ಕಾರದಿಂದ ವಿಧೇಯಕಗೊಂಡ ತೆರಿಗೆಗಳ ಬಗ್ಗೆಯೂ ಸಹ ಮತದಾರರಲ್ಲಿ ತಪ್ಪು ಕಲ್ಪನೆಗಳನ್ನು ಕಲ್ಪಿಸಲು ಪ್ರಯತ್ನ ಪಟ್ಟವರೂ ಅಲ್ಲ. ಉದಾಹರಣೆಗೆ ಸ್ವರಾಜ್ಯ ಬಂದ ಆರಂಭದಲ್ಲಿ ಎಲ್ಲಾ ರಾಜ್ಯಗಳಲ್ಲು ರಾಜ್ಯಾಂಗ ಸಭೆ ಏರ್ಪಡಿಸಲಾಗಿತ್ತು. ಮೈಸೂರಿನಲ್ಲು ಸಹ ರಾಜ್ಯಾಂಗ ಸಭೆ ಚುನಾವಣೆಗಳು ೧೯೪೮ರಲ್ಲಿ ನಡೆದು ಹೆಚ್.ಕೆ.ವೀರಣ್ಣಗೌಡರು ಸಹ ಮಂಡ್ಯ ಜಿಲ್ಲೆಯಿಂದ ಸ್ಪರ್ಧಿಸಿದ್ದರು. ಮತದಾರರನ್ನು ಭೇಟಿ ಮಾಡಿ ರಾಜ್ಯಾಂಗ ಸಭೆಗೆ ಕಾಂಗ್ರೆಸ್ ಸ್ಪರ್ಧಿಗಳನ್ನು ಆರಿಸಲು ಮಳವಳ್ಳಿ ಬಳಿ ತಳಗವಾಡಿಯಲ್ಲಿ ಸಭೆಯೊಂದರಲ್ಲಿ ಮಾತನಾಡುತ್ತಿದ್ದ ಗೌಡರನ್ನು ಮತದಾರನೊಬ್ಬ ಆಗ ತಾನೆ ಹೊಸದಾಗಿ ತಲೆ ಹಾಕಿದ್ದ ಮಾರಾಟ ತೆರಿಗೆ ಬಗ್ಗೆ ಕೇಳಿದನು. ಆಗ ಗೌಡರು ನೇರವಾಗಿ ಸರ್ಕಾರದ ಪರ ವಾದಿಸಿ ತೆರಿಗೆಯನ್ನು ಪುಷ್ಟೀಕರಿಸಿ ನಿಮ್ಮ ಏಳಿಗೆಗೆ ಮುಂದೆ ಸಹ ನಾನಾ ತೆರಿಗೆಗಳು ಬರಬಹ್ಮದೆಂದು''[೧೨೦]ಒಪ್ಪಿಕೊಂಡರು. ಹೀಗೆ ಹೆಚ್.ಕೆ.ವೀರಣ್ಣಗೌಡರು ಚುನಾವಣೆಯ ಸಮಯದಲ್ಲಿ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದರೂ ತಾವು ಸ್ಪರ್ಧಿಸಿದ ಕೊನೆಯ ಚುನಾವಣೆಯಲ್ಲಿ ಅಂದರೆ ೧೯೬೬ರಲ್ಲಿ ಹಟಕ್ಕೆ ಬಿದ್ದ ಗೌಡರು ತಮ್ಮ ಪ್ರಚಾರದ ನೀತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಹಣವ್ಯಯ ಮಾಡಿದ್ದು ದುರದೃಷ್ಟಕರ.

---

[೧೧೮] ಚಿತ್ರಗುಪ್ತ ಸ್ಮರಣೆ. ಪುಟ:೨೮-೨೯

[೧೧೯] ಪೂರ್ವೋಕ್ತಿ ಪುಟ-೨೯

[೧೨೦] ಪೂರ್ವೋಕ್ತಿ.

೧೯೬೪ರಲ್ಲಿ ಕೇಂದ್ರದಲ್ಲಿ ರೈಲ್ವೆ ಸಚಿವರಾಗಿದ್ದ ಹೆಚ್.ಸಿ.ದಾಸಪ್ಪನವರ ನಿಧನದಿಂದ ತೆರವಾಗಿದ್ದ ಸ್ಥಾನಕ್ಕೆ ಮರುಚುನಾವಣೆಗೆ ನಿಂತ ಹೆಚ್.ಕೆ.ವೀರಣ್ಣಗೌಡರು ಗೆದ್ದು ಲೋಕಸಭೆಗೆ ಸದಸ್ಯರಾಗಿ ಚುನಾಯಿತರಾದರು. ನಂತರ ೧೯೭೩ರಲ್ಲಿ ವಿಧಾನ ಪರಿಷತ್ತಿನ ಚುನಾವಣೆಯಲ್ಲಿ ಸೋಲು ಖಚಿತವೆಂದು ತಿಳಿದಿದ್ದರೂ ಚುನಾವಣೆಯಲ್ಲಿ ಸ್ಪರ್ಧಿಸಿ ಸೋಲು ಕಂಡರು. ಇದೇ ಕೊನೆಯ ಚುನಾವಣೆ ಹೆಚ್.ಕೆ.ವೀರಣ್ಣಗೌಡರು ಸ್ಪರ್ಧಿಸಿದ್ದು.

೧೯೩೩ ರಿಂದ ೧೯೭೩ರವರೆಗೆ ಅಂದರೆ ೪೦ ವರ್ಷಗಳ ಅವಧಿಯಲ್ಲಿ ಹೆಚ್.ಕೆ.ವೀರಣ್ಣಗೌಡರು ಹಲವಾರು ಚುನಾವಣೆಗಳಲ್ಲಿ ಸ್ಪರ್ಧಿಸಿ ಕಂಡ ಏಳು ಬೀಳುಗಳು ಅವರ ವ್ಯಕ್ತಿತ್ವದಲ್ಲಿ ಯಾವುದೇ ರೀತಿಯ ಹೆಚ್ಚಿನ ಬದಲಾವಣೆಯನ್ನೇನು ಉಂಟು ಮಾಡಲಿಲ್ಲವೆಂದು ಹೇಳಬಹುದು.

**೫.೩ ಶಾಸನ ಸಭೆಯಲ್ಲಿ:-**

೧೯೪೭ರ ಅಕ್ಟೋಬರ್ ೨೪ರ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯೊಂದಿಗೆ ಸಂವಿಧಾನ ರಚನಾ ಸಭೆಯು ಶಾಸನ ಸಭೆಯಾಗಿ ಮಾರ್ಪಟ್ಟಿತು. ಆ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಸಂವಿಧಾನ ರಚನಾ ಸಭೆಯ ಸದಸ್ಯರಾಗಿದ್ದಂತೆ ಶಾಸನ ಸಭೆಯ ಸದಸ್ಯರಾದರು. ಈ ಹೀಗೆ ಹೆಚ್.ಕೆ.ವೀರಣ್ಣಗೌಡರು ಶಾಸನಸಭೆಗೆ ಮೊಟ್ಟಮೊದಲ ಪ್ರವೇಶ ಪಡೆದರು. ಇದಕ್ಕೂ ಮೊದಲು ೧೯೩೪ ಮತ್ತು ೧೯೩೭ರಲ್ಲಿ ಮದ್ದೂರು ತಾಲ್ಲೂಕಿನಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಆಯ್ಕೆಗೊಂಡಿದ್ದರು.

ಶಾಸನ ಸಭೆಯ ಸದಸ್ಯರಾಗಿ ಹೆಚ್.ಕೆ.ವೀರಣ್ಣಗೌಡರು ಶಾಸಕಾಂಗದ ಕಾರ್ಯಕಲಾಪಗಳಲ್ಲಿ ಜವಾಬ್ದಾರಿಯುತವಾಗಿ ಭಾಗವಹಿಸುತ್ತಿದ್ದರು. ಶಾಸಕಾಂಗದಲ್ಲಿ ಗೌಡರ ವರ್ತನೆಯು ಒಬ್ಬ ಉತ್ತಮ ಸಂಸದೀಯ ಪಟುವಿನ ನಡವಳಿಕೆಯಿಂದ ಕೂಡಿರುತ್ತಿತ್ತು ಎಂಬುದನ್ನು ಅವರ ಶಾಸಕಾಂಗದ ಭಾಷಣಗಳ ವೈಖರಿಯಿಂದ ಗುರುತಿಸಬಹುದಾಗಿದೆ. ಅವರ ಭಾಷಣಗಳು ಪೂರ್ವಯೋಜಿತ ತಯಾರಿಯಿಂದ ಕೂಡಿದ್ದು ನಿಖರ ಮಾಹಿತಿಯನ್ನು ಒಳಗೊಂಡಿರುತ್ತಿತ್ತು. ಅಲ್ಲದೆ ವಿಷಯ ವಿವರಣೆಯಲ್ಲಿ ಗಾದೆ ಮಾತುಗಳನ್ನು ಸಾಂದರ್ಭಿಕವಾಗಿ ಸೇರಿಸಿಕೊಂಡು ಸರಳವಾಗಿ ಅರ್ಥವಾಗುವ ರೀತಿಯಲ್ಲಿ ಪ್ರತಿಯೊಬ್ಬ ಹಳ್ಳಿಗನಿಗೂ ತಿಳಿಯುವಂತಹ ಶೈಲಿಯಲ್ಲಿ ಅವರ ಮಾತಿನ ಧಾಟಿ ಇರುತ್ತಿತ್ತು.

ಮೈಸೂರಿನ ಮೊದಲ ಚುನಾಯಿತ ಮಂತ್ರಿ ಮಂಡಲದಲ್ಲಿ ರಾಜ್ಯ ವಿಸ್ತರಣೆಗೆ ಸಂಬಂಧಿಸಿದಂತೆ ಹಲವು ಪ್ರಮುಖ ವಿಷಯಗಳು ಚರ್ಚೆಯಾದವು. ಅವುಗಳಲ್ಲಿ 'ಆಂಧ್ರ ಪ್ರದೇಶ ಮಸೂದೆ'ಯೂ ಒಂದು. ಅನ್ಯರಾಜ್ಯಕ್ಕೆ ಸೇರಿದ್ದ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕು ಪ್ರದೇಶಗಳು ಮೈಸೂರಿಗೆ ಸೇರುವ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ತಮ್ಮ ಅಭಿಪ್ರಾಯವನ್ನು ಮಂಡಿಸಿದ ಕ್ರಮ ಗಮನಾರ್ಹವಾಗಿದೆ. ಆ ಪ್ರದೇಶಗಳು ಮೈಸೂರಿಗೆ ಯಾದೆ ಸೇರಬೇಕು ಎಂಬುದರ ಬಗೆಗೆ ಅವರ ನಿಲುವಿನ ವೈಜ್ಞಾನಿಕತೆ ಸ್ಪಷ್ಟವಾಗುತ್ತದೆ.

ದಿನಾಂಕ ೨೨-೭-೧೯೫೩ರಂದು 'ಲೆಜಿಸ್ಲೇಟೀವ್ ಅಸೆಂಬ್ಲಿ'ಯಲ್ಲಿ ಆಂಧ್ರ ಮಸೂದೆಯನ್ನು ಸ್ವಾಗತಿಸುತ್ತಾ ಕೆಲವು ಅಂಶಗಳನ್ನು ಸೂಚಿಸಲು ಅಪೇಕ್ಷೆ ಪಡುತ್ತೇನೆ. ಇಂಡಿಯಾ ಸರಕಾರದವರು

ಬಳ್ಳಾರಿಯ ೭ ತಾಲ್ಲೂಕುಗಳನ್ನು ಮೈಸೂರು ಸರ್ಕಾರದ ಆಡಳಿತಕ್ಕೊಳಪಡಿಸಬೇಕೆಂಬ ಬಗ್ಗೆ ಮಸೂದೆಯನ್ನು ಪಾರ್ಲಿಮೆಂಟಿನ ಮುಂದೆ ತರುವ ಮೊದಲು ಸಂಬಂಧಪಟ್ಟ ಸರ್ಕಾರಗಳ ಮತ್ತು ಶಾಸನ ಸಭೆಗಳ ಅಭಿಪ್ರಾಯವನ್ನು ತಿಳಿದುಕೊಳ್ಳುವುದಕ್ಕಾಗಿ ಮಸೂದೆಯ ಒಂದು ಪ್ರತಿಯನ್ನು ನಮಗೆ ಕಳುಹಿಸಿದ್ದಾರೆ. ಈ ಸಂದರ್ಭದಲ್ಲಿ ಸಾಮಾನ್ಯವಾಗಿ ನಾನು ಈ ಮಸೂದೆಯನ್ನು ಸ್ವಾಗತಿಸುತ್ತಾ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳ ಜನರು ಮೈಸೂರು ಸಂಸ್ಥಾನದ ಸರ್ಕಾರದ ಆಡಳಿತಕ್ಕೆ ಬರುವ ವಿಚಾರದಲ್ಲಿ ನನ್ನ ಸಂತೋಷವನ್ನು ವ್ಯಕ್ತಪ್ಡಿಸುತ್ತಿದ್ದೇನೆ. ಕೇವಲ ಭಾಷೆಯ ಆಧಾರದ ಮೇಲೆ ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳವರು ಮೈಸೂರು ಸಂಸ್ಥಾನಕ್ಕೆ ಸೇರುತ್ತಾರೆ ಎನ್ನುವುದಕ್ಕಿಂತ ಹೆಚ್ಚಾಗಿ ಆಡಳಿತ ದೃಷ್ಟಿಯಿಂದ ಮೈಸೂರು ದೇಶದ ಸೆರಗಾಗಿರುವ ಪ್ರದೇಶದ ಜನರು ಅನಿವಾರ್ಯವಾಗಿ ಇಲ್ಲಿಗೆ ಬರುವವರಾಗಿದ್ದಾರಾದ್ದರಿಂದ ಇವರನ್ನು ಸ್ವಾಗತಿಸುವುದಕ್ಕೆ ಸಂತೋಷ ಪಡುತ್ತಿದ್ದೇನೆಂದು ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದೇನೆ. ಮದ್ರಾಸು ಪ್ರಾಂತದಲ್ಲಿದ್ದ ಆಂಧ್ರರು ತಮ್ಮದೇ ಬೇರೆ ಆಡಳಿತ ಏರ್ಪಡಿಸ್ಕೊಳ್ಳಲು ಹೇಳಿದಂತೆ ಬಳ್ಳಾರಿ ಜಿಲ್ಲೆಯಲ್ಲಿನ ಅಧಿಕ ಕನ್ನಡಿಗರು ತಾವು ಆಂಧ್ರಕ್ಕೆ ಸೇರುವುದಿಲ್ಲವೆಂದರು. ಈ ಕಾರಣ ಆಡಳಿತ ದೃಷ್ಟಿಯಿಂದ ಅವರ್ನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸುವುದಾಗಿ ಕೇಂದ್ರ ಸರ್ಕಾರ ತೀರ್ಮಾನಿಸುವುದು ನ್ಯಾಯಯುತವಾಗಿದೆ. ಈ ಮಸೂದೆಯ ಬಗ್ಗೆ ಇತರ ಸದಸ್ಯರು ಮೈಸೂರು ಸಂಸ್ಥಾನಕ್ಕೆ ಆಗುವ ಲಾಭ-ನಷ್ಟಗಳ ಬಗೆಗಿನ ಸಮಸ್ಯೆಗಳ ಬಗ್ಗೆ ಪ್ರಶ್ನೆ ಎತ್ತಿದ್ದಾರೆ. ಆದರೆ ಇದು ಆಡಳಿತ ದೃಷ್ಟಿಯಿಂದ ಆ ಪ್ರಾಂತದ ಜನರ ಇಷ್ಟದಂತೆ ಆಗುತ್ತಿರುವುದರಿಂದ ಅವರಿಗೆ ನಾವು ಸ್ವಾಗತ ನೀಡಬೇಕಾದದ್ದು ಉಚಿತ. ಅಲ್ಲದೆ ಮುಖ್ಯಮಂತ್ರಿಗಳು ಅವರ ಭಾಷಣದಲ್ಲಿ ಹೇಳಿರುವಾಗ, ಇದು ಮೈಸೂರು ರಾಜ್ಯ, ಇದು ಮದ್ರಾಸು ರಾಜ್ಯ, ಇದು ಆಂಧ್ರ ರಾಜ್ಯಗಳೆಲ್ಲವೂ ಕೇವಲ ಒಂದು ಆಡಳಿತ ಸೌಕರ್ಯದ ದೃಷ್ಟಿಯಿಂದ ಬೇರೆ ಬೇರೆ ಸರ್ಕಾರಗಳ ಆಡಳಿತಕ್ಕೆ ಒಳಪಟ್ಟಿವೆಯೇ ಹೊರತು ಮತ್ತೆ ಬೇರೆಯೇನೂ ಇಲ್ಲ. ಆದ್ದರಿಂದ ಅಲ್ಲಿರತಕ್ಕ ಜನರೇ ಬೇರೆ ಎಂಬ ಭಿನ್ನಭಾವನೆ ಮಾಡುವುದಕ್ಕೆ ಅವಕಾಶವೇ ಇಲ್ಲ. ಕಾರಣವೇನೆಂದರೆ ನಾವೆಲ್ಲರೂ ಭಾರತೀಯರು, ಭಾರತದ ಯೂನಿಯನ್ನಿಲ್ಲಿರತಕ್ಕಂಥವರು. . . ನಾವೆಲ್ಲರೂ ಒಂದೇ ಕೋರ್ಟು ಕಚೇರಿಗಳಿಗೆ ಹೋಗಬೇಕು, ಒಂದೇ ಶಾಸನಸಭೆಗೆ ಸೇರಿರಬೇಕು ಎಂದರೆ ಅದರಿಂದ ಬಹಳ ಕಷ್ಟವಾಗುತ್ತದೆ. ಅದಕ್ಕಾಗಿ ಅಂಥ ತೊಂದರೆಗಳನ್ನು ನಿವಾರಣೆ ಮಾಡಬೇಕೆಂದೇ ಹೀಗೆ ಬೇರೆ ಬೇರೆ ಸರ್ಕಾರಗಳನ್ನು ಏರ್ಪಾಡು ಮಾಡಿ ಅವರವರ ದಿನಚರಿ ಕೆಲಸಕಾರ್ಯಗಳೂ ಸುಗಮವಾಗಿ ನಡೆಯಲಿ ಎಂಬ ಉದ್ದೇಶದಿಂದ ಹೀಗೆ ಮಾಡಿರುತ್ತಾರೆ. . . ಇನ್ನು ಎರಡನೆಯದಾಗಿ ಜಿಜ್ಞಾಸಾಸ್ಪದವಾದ ಕೆಲವು ಅಂಶಗಳೂ ಇರುತ್ತವೆ. ಈಗ ಆ ಆಲೂರು, ಆದವಾನಿ, ರಾಯದುರ್ಗ ಈ ಸ್ಥಳಗಳಲ್ಲಿ ಹೆಚ್ಚು ಭಾಗದ ಜನ್ರು ಕನ್ನಡ ಮಾತನಾಡತಕ್ಕವರೇ ಆಗಿದ್ದಾರೆ. ಅವರೂ ಮೈಸೂರು ಆಡಳಿತಕ್ಕೊಳಪಡಬೇಕೆಂದು ಕೆಲವ್ರು ಹೇಳುತ್ತಿದ್ದಾರೆ. ನಾನೀಗ ಕೇವಲ ಒಂದು ಭಾಷಾವಾರು ದೃಷ್ಟಿಯಿಂದ ಚರ್ಚೆಮಾಡುತ್ತಿಲ್ಲ. ಅಲ್ಲಿ ಕನ್ನಡ ಮಾತನಾಡುವ ಜನರೇ ಹೆಚ್ಚಾಗಿರಬಹುದು. ಆದರೆ ಆಡಳಿತ ಸೌಕರ್ಯ ದೃಷ್ಟಿಯಿಂದ ಆ ಮೂರು ತಾಲ್ಲೂಕುಗಳೂ ಮೈಸೂರಿಗೇ ಸೇರಬೇಕೆಂದು ಕೇಳುತ್ತಿರುವುದು ಸೂಕ್ತವಾಗಿ ಇದೆಯೆಂದು ಎಲ್ಲರಿಗೂ ಕಂಡು ಬರುತ್ತಿದೆ. ಉದಾಹರಣೆಗೆ ಈಗ ಪಾವುಗಡ ತಾಲ್ಲೂಕನ್ನು ತೆಗೆದುಕೊಳ್ಳೋಣ, ಈ ತಾಲ್ಲೂಕು ತುಮಕೂರು ಜಿಲ್ಲೆಗೆ ಸೇರಿದೆ. ನಾವೀಗ ಪಾವಗಡಕ್ಕೆ ಹೋಗಬೇಕಾಗಿದ್ದರೆ ಮದರಾಸಿಗೆ

ಸೇರಿರತಕ್ಕ ಮಡಕಶಿರಾ ತಲ್ಲೂಕನ್ನು ಹಾದು ಹೋಗಬೇಕಾಗಿದೆ. ಹೀಗಿರುವುದರಿಂದ ಮಡಕಶಿರಾ ತಾಲ್ಲೂಕು ಸಹ ಈಗ ಆಡಳಿತ ಸೌಕರ್ಯ ದೃಷ್ಟಿಯಿಂದ ಮೈಸೂರಿಗೆ ಸೇರತಕ್ಕದ್ದು ಸೂಕ್ತವಾಗಿದೆಯೆಂದು ಹೇಳಿದರೆ ಯಾರಾದರೂ ಇದನ್ನು ಒಪ್ಪಿಕೊಳ್ಳಲೇಬೇಕು. ಹೀಗೆ ಒಂದು ಆಡಳಿತ ದೃಷ್ಟಿಯಿಂದಲೂ ಮತ್ತು ಇನ್ನೂ ಅನೇಕ ದೃಷ್ಟಿಯಿಂದಲೂ ಅನಂತಪುರ ಜಿಲ್ಲೆಗೆ ಸೇರಿರತಕ್ಕ ಮಡಕಶಿರಾ ತಲ್ಲೂಕು ಸಹ ಮೈಸೂರಿಗೆ ಸೇರತಕ್ಕದ್ದು ಸೂಕ್ತವಾಗಿದೆ. ಈ ರೀತಿಯಾಗಿ ಬ್ನಾವು ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ನಾವು ಒಂದು ದುರಾಸೆಯಿಂದ ನೆಲದಾಹದಿಂದ್, ಹೆಚ್ಚಾಗಿ ರಾಜ್ಯವಿಸ್ತರಣೆ ಮಾಡಬೇಕೆಂಬ ದೃಷ್ಟಿಯಿಂದ ಕೇಳುತ್ತಿದ್ದೇವೆಂದು ಯಾರಾದರೂ ಭಾವಿಸಿಕೊಂಡಲ್ಲಿ ಅದು ಸರಿಯಲ್ಲವೆಂದು ಹೇಳುತ್ತೇನೆ. ಇದರಲ್ಲಿ ಯಾರಿಗೂ ಅಂಥ ನೆಲದಾಹವಿಲ್ಲ.. ಇದು ಪಾಳೇಗಾರರ ಕಾಲವಲ್ಲ್. ಒಂದು ಸ್ವತಂತ್ರ ಆಡಳಿತ ನಡೆಸಬೇಕೆಂಬ ಒಂದು ದುರಾಸೆಯಿಂದ ಪ್ರವರ್ತಿಸುತ್ತಿದ್ದರೆಂಬ ಅಭಿಪ್ರಾಯಕ್ಕೆ ಎಳಷ್ಟೂ ಅವಕಾಶವಿಲ್ಲ. . . ಆದುದರಿಂದ ನಾವು ಆಡಳಿತ ಅನುಕೂಲದ ಮತ್ತು ಸೌಕರ್ಯದ ದೃಷ್ಟಿಗಳಿಂದ ನಮ್ಮ ಅಕ್ಕಪಕ್ಕದ ಇನ್ನೂ ಕೆಲವು ಭಾಗಗಳು ನಮ್ಮ ಮೈಸೂರಿನ ಆಡಳಿತಕ್ಕೆ ಒಳಪಡಕ್ಕಂಥಾದ್ದು ಸೂಕ್ತವೆಂದು ಮಾಡುವ ಸಲಹೆಗಳನ್ನು ಖಂಡಿತ ನಮ್ಮಸ್ನೇಹಿತರು ಯಾರೇ ಆಗಲಿ, ಅದರಲ್ಲೂ ಮುಖ್ಯವಾಗಿ ನಮ್ಮ ಆಂಧ್ರ ಸ್ನೇಹಿತರು ತಪ್ಪಾಗಿ ತಿಳಿದುಕೊಳ್ಳಬಾರದೆಂದು ನಾನು ಕೇಳಿಕೊಳ್ಳುತ್ತೇನೆ. ಆದುದರಿಂದ ಪುನಃ ಈ ಪ್ರಶ್ನೆಯನ್ನು ಬೌಂಡರಿ ಕಮಿಷನ್ ತೀರ್ಮಾನಕ್ಕೆ ಒಳಪಡಿಸಬೇಕೆಂದು ಸೂಚನೆಯನ್ನು ಕೊಡಬಯಸುತ್ತೇನೆ.'[೧೨೧]

ಬಳ್ಳಾರಿ ಪ್ರದೇಶಗಳು ಮೈಸೂರಿಗೆ ಸೇರುವುದನ್ನು ಸ್ವಾಗತಿಸಿದ ವೀರಣ್ಣಗೌಡರು ಕರ್ನಾಟಕ ಏಕೀಕರಣವನ್ನು ವಿರೋಧಿಸಿದರು. ಅದಕ್ಕೆ ಅವರದೇ ಆದ ಕಾರಣಗಳಿದ್ದವು. ಮೈಸೂರ ಹೆಸರನ್ನು ಹಾಗೇ ಇಟ್ಟುಕೊಂಡು, ಹೊಸದಾಗಿ ಸೇರುವ ಪ್ರದೇಶಗಳಿಗೆ ಪ್ರತ್ಯೇಕ ಹೆಸರಿಟ್ಟು ಆಳಬೇಕು, ಮೈಸುರಿನ ಅಭಿವೃದ್ಧಿ ಕುಂಠಿತವಾಗುವುದನ್ನು ತಪ್ಪಿಸಬೇಕು, ಕನ್ನಡ ಭಾಷೆಯ ಎರಡು ರಾಜ್ಯಗಳಾದರೆ ಕೇಂದ್ರ ಸರಕಾರದಲ್ಲಿ ಪ್ರಧಾನ ಪಾತ್ರವಹಿಸಬಹುದು, ಉತ್ತರ ಭಾರತದ ಹಿಂದೀಯ ಪ್ರದೇಶಗಳಂತೆ ಕರ್ನಾಟಕ ಪ್ರದೇಶಗಳೂ ಕೇಂದ್ರದ ಮೇಲೆ ಪ್ರಭಾವ ಬೀರಬಹುದು, ಹಿಂದುಳಿದ ಪ್ರದೇಶಗಲ ಅಭಿವೃದ್ಧಿಗೆ ಪ್ರತ್ಯೇಕ ಗಮನ ಕೊಡಲು ಅನುಕೂಲವಾಗುವುದು. ಆಡಳಿತ ಬಿಗಿಯಾಗಿ, ವ್ಯವಸ್ಥಿತವಾಗಿ ನಡೆಯುವುದು ಎಂಬ ಅಭಿಪ್ರಾಯಗಳನ್ನು ಹೆಚ್.ಕೆ.ವೀರಣ್ಣಗೌಡರು ಹೊಂದಿದ್ದರು. ಹಾಗಾಗಿ ರಾಜ್ಯ ಪುನರ್ವಿಂಗಡನೆ ಮಸೂದೆ ಶಾಸನ ಸಭೆಯಲ್ಲಿ ದೀರ್ಘವಾಗಿ ಚರ್ಚೆಯಾಯಿತು. ಈ ವಿಷಯದಲ್ಲಿ ಹೆಚ್.ಕೆ.ವೀರಣ್ಣಗೌಡರ್ರು ಶಾಸನ ಸಭೆಯಲ್ಲಿ ಸಮರ್ಥಿಸಿಕೊಂಡ ರೀತಿ ಲೆಜಿಸ್ಲೇಟಿವ್ ಅಸೆಂಬ್ಲಿ ೨-೪-೧೯೫೬ರ ವರದಿಯಲ್ಲಿ ವಿವರವಾಗಿ ದಾಖಲಾಗಿದೆ. ಅದರಲ್ಲಿ ವೀರಣ್ಣಗೌಡರು ಲೌಕಿಕವಾಗಿ ಒಂದು ಕುಟುಂಬಕ್ಕೆ ರಾಜ್ಯವನ್ನು ಹೋಲಿಕೆ ಮಾಡಿ ಇತರ ಭಾಗಗಳು ಶಾಶ್ವತವಾಗಿ ಬಂದು ಸೇರುವುದರಿಂದ ಆಗಬಹುದಾದ ತೊಂದರೆಗಳನ್ನು ವಿವರಿಸಿದ್ದಾರೆ. . . . ಈ ಪ್ರಾಂತಗಳ ವಿಂಗಡನೆ ಏಕೆ ಬೇಡ ಎಂಬುದನ್ನು ಒಂದೆರಡು ಮಾತಿನಲ್ಲಿ ಹೇಳಬಹುದು. ನಮ್ಮಲ್ಲಿ ಒಂದು ಸುವ್ಯವಸ್ಥಿತ ಸರ್ಕಾರ, ಒಂದು ಆಡಳಿತಕ್ರಮವೇರ್ಪಟ್ಟಿದೆ. ಬೇರೆ ಭಾಗಗಳಿಂದ ಬರತಕ್ಕವರ ಆಡಳಿತ ಕ್ರಮಕ್ೂ ನಮ್ಮ ಆಡಳಿತ ಕ್ರಮಕ್ಕೂ ವ್ಯತ್ಯಾಸವಿದೆ. ನಮ್ಮ

[೧೨೧] ಲೆಜಿಸ್ಲೇಟೀವ್ ಅಸೆಂಬ್ಲಿ : ಆಂಧ್ರಸ್ಟೇಟ್ ಬಿಲ್. ಪುಟ ೨೫೦೫-೨೫೦೮,೧೯೫೩

ಕಾನೂನುಗಳಿಗೂ ಅವರ ಕಾನೂನುಗಳಿಗೂ ವ್ಯತ್ಯಾಸವಿದೆ. ಬೇರೆ ಕಡೆಯಿಂದ ಬರತಕ್ಕ ಜನರ ನಡೆ, ನುಡಿ, ಆಚಾರ, ವಿಚಾರ, ವ್ಯವಹಾರಗಳಿಗೂ ನಮ್ಮದಕ್ಕೂ ವ್ಯತ್ಯಾಸವಿದೆ. ಹೀಗೆ ಏರುಪೇರಾಗಿರತಕ್ಕ ಎರಡು ಭಾಗಗಳನ್ನು ಒಟ್ಟುಗೂಡಿಸುತ್ತೇವೆಂದರೆ ಹತ್ತಾರು ವರ್ಷಗಳಾದರೂ ಈ ಏರುಪೇರನ್ನು ಸಮತೂಗಿಸಿ ಒಂದು ಮಟ್ಟಕ್ಕೆ ತರುವುದಕ್ಕೆ ನಿಧಾನವಾಗುತ್ತದೆ. ಕಷ್ಟವಾಗುತ್ತದೆ. ಅದುವರೆಗೂ ಇಲ್ಲಿ ನಮಗೆ ತೊಂದರೆಯಾಗುತ್ತದೆಂಬ ಉದ್ದೇಶ ಒಂದು. ಮತ್ತೊಂದು ವಿಷಯ: ನಮ್ಮಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿವೆ. ಇಲ್ಲಿ ನಡೆಯುತ್ತಿರುವಂತೆ ಅಭಿವೃದ್ಧಿ ಕಾರ್ಯಗಳು ಅಲ್ಲಿ ನಡೆಯುತ್ತಿಲ್ಲ. ಬೇರೆ ಪ್ರಾಂತಗಳು ಬಂದು ಸೇರಿದಮೇಲೆ ಇಲ್ಲಿನ ಮೇಲ್ಮೆಗಾಗಿಯೇ ಕೆಲಸ ನಡೆಯುವುದಿಲ್ಲ. ಬೇರೋಂದು ಸಂದರ್ಭದಲ್ಲಿ ಮಾನ್ಯ ನಾಯಕರೇ ಹೇಳಿದ ಹಾಗೆ, ಈಗಾಗಲೇ ಆಗಿರತಕ್ಕ ಅಭಿವೃದ್ಧಿಯನ್ನು ಕಿತ್ತುಹಾಕುವುದಕ್ಕಾಗುವುದಿಲ್ಲ. ಇದೂ ಒಂದು ಕಾರಣ.

೧೯೫೧ರ ಅಕ್ಟೋಬರ್ ೮ರ ದಿನ ಶಾಸನ ಸಭೆಯ ಕಲಾಪದಲ್ಲಿ ವೀರಣ್ಣಗೌಡರು ಬೆಟರ್‌ಮೆಂಟ್ ಫೀ ಯನ್ನು ವಿಧಿಸುವ ಬಗ್ಗೆ ಮಾತನಾಡುತ್ತ ಸಮರ್ಥವಾದ ವಿವರಣೆಯನ್ನು ನೀಡಿದ್ದಾರೆ. ಅಂದರೆ ಹಿಂದಿನ ಸರ್ಕಾರದವರು ಗ್ರಾಮೀಣ ಪ್ರದೇಶಗಳಲ್ಲಿ ನೀರಾವರಿ ಜಮೀನಿನ ಮೇಲೆ ವಿಧಿಸಿದ ಸುಂಕ ಅಥವ ಕಂದಾಯವನ್ನು ಪಟ್ಟಣಗಳ ಅಭಿವೃದ್ಧಿಗೆ ಬಳಸುತ್ತಿದ್ದರೆಂದರೆ ಅವರ ಕೆಲಸ 'ಹಾವು ಹೊಡೆದು ಹದ್ದಿಗೆ ಹಾಕುತ್ತಿದ್ದರು ಎಂಬಂತಹ ನೀತಿಯದಾಗಿತ್ತು ಆದರೆ ತಮ್ಮ ಸರ್ಕಾರ ಆಯಾಯ ಪ್ರದೇಶ ಅಂದರೆ ಪಟ್ಟಣ ಪ್ರದೇಶಗಳ ಅಭಿವೃದ್ಧಿಗೆ ಪಟ್ಟಣದವರಿಗೇ ಬೆಟರ್‌ಮೆಂಟ್ ಫೀ ಹಾಕಬೇಕಾಗಿದೆ ಎಂದು ಸೂಕ್ತ ಉದಾಹರಣೆಗಲನ್ನು ನೀಡಿದರು. ಶ್ರೀಕಂಠೇಶ್ವರರು ಈ ಮಸೂದೆಯ ಮೇಲೆ ಬೆಂಗಳೂರು ಟ್ರಸ್ಟ್ ಬೋರ್ಡನ್ನು ವಜಾ ಮಾಡಿ ಎಂದು ವಾದಿಸಿದ್ದಕ್ಕೆ 'ಕನ್ನಂಬಾಡಿಯಲ್ಲಿ ಕಂಬಳಿ ಕಿತ್ತುಕೊಂಡರೆ ಬಲ್ಲಮುರಿ ಹತ್ತಿರ ಹಲ್ಲು ಮುಡಿಕಚ್ಚಿದ' ಎಂಬಂತೆ ಅಸಂಬದ್ಧವಾಗಿದೆ. ಕಾರ್ಪೋರೇಷನ್ನಿಗೂ ಟ್ರಸ್ಟ್ ಬೋರ್ಡಿಗೂ ಭಿನ್ನಾಭಿಪ್ರಾಯವಿದ್ದ ಮಾತ್ರಕ್ಕೆ ಟ್ರಸ್ಟ್ ಬೋರ್ಡ್ ವಜಾ ಮಾಡಿ ಎನ್ನುವುದು ಅಸಂಬದ್ಧವಾದ ಎಂದು ವಿವರಿಸುತ್ತಾ, ಏನೇ ಹೇಳಿದರೂ ಒಪ್ಪಿಕೊಳ್ಳುವುದಿಲ್ಲವೆಂದು ಮೊದಲೇ ನಿರ್ಧರಿಸಿರುವವರಿಗೆ ಎಷ್ಟು ಹೇಳಿದರೂ ಪ್ರಯೋಜನವಿಲ್ಲ ಎಂದು ಅನುಭವದಿಂದ ನನಗೆ ಅನ್ನಿಸುತ್ತದೆ. ಇದು 'ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು' ಎಂದು ಹೇಳುವಂತೆ ಆಗುತ್ತದೆ, ಎಂದು ಬೆಂಗಳೂರು ಬೋರ್ಡ್ ಇರುವುದಕ್ಕೂ ಬೆಟರ್‌ಮೆಂಟ್ ಫೀ ಕೊಡುವುದಕ್ಕೂ ಯಾವುದೇ ಸಂಬಂಧವಿಲ್ಲವೆಂದು ವಾದಿಸುತ್ತಾ ಶಕ್ತಿವಂತರು ಒನೇ ಒಂದು ಭಾಗವನ್ನು ಬೆಟರ್‌ಮೆಂಟ್ ಫೀ ಕೊಡುವುದು ಸರಿಯಾದುದಾಗಿದೆ. ಆದ್ದರಿಂದ ಈ ಮಸೂದೆಯನ್ನು ಎಲ್ಲರೂ ಅಂಗೀಕಾರ ಮಾಡಬೇಕೆಂದು ಕೇಳಿಕೊಂಡರು.

ದವಸ ಧಾನ್ಯಗಳನ್ನು ತೆರಿಗೆಯ ರೂಪದಲ್ಲಿ ಸಂಗ್ರಹಿಸುವ ಪದ್ಧತಿಯೇ 'ಲೇವಿ ಸಿಸ್ಟಂ'. ಈ ಪದ್ಧತಿಯಲ್ಲಿದ್ದ ನ್ಯೂನ್ಯತೆಗಳನ್ನು ಗಮನಿಸಿ ಸಾರ್ವಜನಿಕ ಪ್ರತಿನಿಧಿಯಾಗಿ ರೈತರಿಗಾಗುತ್ತಿದ್ದ ಕಿರುಕೂಳಗಳನ್ನು ಗಮನಿಸಿದ ವೀರಣ್ಣಗೌಡರು 'ಲೇವಿ ಸಿಸ್ಟಂ' ನಲ್ಲಿ ಕೆಲವು ಬದಲಾವಣೆಗಳನ್ನು ತರುವ ಮೂಲಕ ರೈತರ ಕಷ್ಟಗಳನ್ನು ನಿವಾರಿಸುವ ಜೊತೆಗೆ ಸರ್ಕಾರಕ್ಕೂ ಲಾಭವಾಗುವಂತಹ ಸಲಹೆಗಳನ್ನು ೨೧ನೇ ಅಕ್ಟೋಬರ್ ೧೯೫೨ರ ಶಾಸನಸಭೆಯಲ್ಲಿ ವೀರಣ್ಣಗೌಡರು ಈ ರೀತಿ ವಿವರಿಸುತ್ತಾರೆ; ತಮ್ಮನ್ನೇ

ಉದಾಹರಿಸುತ್ತಾ ಕಳೆದ ಐದು ಆರು ವರ್ಷಗಳಿಂದಲೂ ನಾನು ಸರ್ಕಾರಕ್ಕೆ ಪ್ರತಿವರ್ಷವೂ ಒಂದು ನೂರು ಪಲ್ಲ ದವಸವನ್ನು ಸಲ್ಲಿಸುತ್ತಿದ್ದೇನೆ. ಈ ವರ್ಷ ಆ ನೂರು ಪಲ್ಲಕ್ಕೆ ಬದಲಾಗಿ ೭೫ ಪಲ್ಲ ಮಾತ್ರ ಕೊಡುವಂತೆಯೂ ಒಂದು ನೀತಿಯನ್ನು ಹಾಕಿಕೊಂಡರೆ ಸರ್ಕಾರಕ್ಕೆ ಸರಿಯಾಗಿ ಧಾನ್ಯ ಸಂಗ್ರಹಣವಾಗುವುದೊಂದೇ ಅಲ್ಲದೆ ಗ್ರಾಮಾಂತರ ಪ್ರದೇಶಗಳಲ್ಲಿ ರೈತಾಪಿ ಜನರಿಗೆ ಆಗುತ್ತಿರುವ ಕಿರುಕೂಳಗಳು ಅದರಿಂದ ತಪ್ಪಿ ಹೋಗುತ್ತದೆ. ಅಧಿಕಾರಿಗಳು ರೈತನ ಮನೆಗಳಿಗೆ ನುಗ್ಗಿ ಧಾನ್ಯ ಹುಡುಕಬೇಕಾದಂಥ ಪರಿಸ್ಥಿತಿ ಒದಗುವುದಿಲ್ಲ. ಲಂಚರುಷುವತ್ತುಗಳು ಮತ್ತು ಜನರ ದಾಕ್ಷಿಣ್ಯ ಇವುಗಳೆಲ್ಲ ನಿಂತು ಹೋಗಲು ಅವಕಾಶವಾಗುತ್ತದೆ. ಹಾಗೆ ಯಾರು ಬೇಕಾದರು ಸರ್ಕಾರಕ್ಕೆ ನಿಗದಿಮಾಡಿದ ಪ್ರಕಾರ ಕೊಡತಕ್ಕದ್ದನ್ನು ಕೊಟ್ಟುಬಿಟ್ಟು ಬಳಿಕ ರಿಯಾಯಿತಿರೂಪದಲ್ಲಿ ಬಿಡಲಾಗುವ ದವಸವನ್ನು ಅಂದರೆ ಶೇ ೯೫ರಷ್ಟನ್ನು ಅವರು ಸಂಸ್ಥಾನದೊಳಗಡೆ ಸ್ವತಂತ್ರವಾಗಿ ಯಾರ ಅಡ್ಡಿ ಆತಂಕಗಳು ಇಲ್ಲದಂತೆ ಎಲ್ಲಿ ಬೇಕಾದರೂ, ತಮಗೆ ದೊರೆಯಬಹುದಾದ ಅಧಿಕ ಬೆಲೆಗೆ ಮಾರಾಟ ಮಾಡಿಕೊಳ್ಳಲು ಅವಕಾಶವಿರಬೇಕು. ಹೀಗೆ ಮಾಡುವುದರಿಂದ ರೈತರಿಗೆ ಮತ್ತು ಸರ್ಕಾರ ಇಬ್ಬರಿಗೂ ಉಪಯುಕ್ತವಾಗುತ್ತದೆ' ಎಂದು ಚರ್ಚಿಸಿದ್ದಾರೆ.

ಗ್ರಾಮಪಂಚಾಯಿತಿಗಳ ಅಧಿಕಾರಗಳ ಬಗ್ಗೆ ೧೯೫೧ರ ಮೇ ೩೦ ರಂದು ಶಾಸನಸಭೆಯಲ್ಲಿ ಮಾತನಾಡುತ್ತಾ, ಸಣ್ಣಪುಟ್ಟ ತಪ್ಪುಗಳಿಗೆ ಶಿಕ್ಷೆ ವಿಧಿಸುವ ಅಧಿಕಾರ ನೀದುವುದರ ಬಗ್ಗೆ ತಿದ್ದುಪಡಿಯನ್ನು ತಂದುದ್ದಕ್ಕೆ ಪೂರಕವಾಗಿ ವೀರಣ್ಣಗೌಡರು ವಾದಿಸಿದರು. ಮನುಷ್ಯ ಸ್ವಭಾವ ಹಳ್ಳಿಯಲ್ಲಿರಲಿ ಪಟ್ಟಣದಲ್ಲಿರಲಿ ಒಂದೇ ಆಗಿರುತ್ತದೆ.... ನಮ್ಮ ಮುಂದಿರುವ ತಿದ್ದುಪಡಿಯ ಪ್ರಕಾರ ಈ ಕಾನೂನಿನಲ್ಲಿ ಹಳ್ಳಿಗಾಡಿನಲ್ಲಿ ಜನ ಮಾಡುವ ಸಣ್ಣಪುಟ್ಟ ತಪ್ಪುಗಳಿಗೆ ಶಿಕ್ಷೆ ವಿಧಿಸುವ ಅಧಿಕಾರವನ್ನು ಗ್ರಾಮ ಪಂಚಾಯಿತಿಗೆ ಕಡ್ಡಾಯವಾಗಿ ಕೊಡಬೇಕೆಂಬುದು. ಈ ಮಸೂದೆಯಲ್ಲಿ ಪಂಚಾಯಿತಿಯವರಿಗೆ ಈ ಅಧಿಕಾರಗಳನ್ನು ಕೊಡಬಾರದೆಂದು ಎಲ್ಲಿಯೂ ಹೇಳಿಲ್ಲ.. ಇದರಲ್ಲಿ ಎರಡು ಭಾಗಗಳನ್ನು ಮಾಡಿದ್ದಾರೆ. ಕೆಲವು ಕಾರ್ಯಗಳನ್ನು ಪಂಚಾಯಿತಿಗಳ ವಿವೇಚನೆಗೆ ಬಿಟ್ಟಿದ್ದಾರೆ. ಕೆಲವನ್ನು ಬಲವಂತವಾಗಿ ಮಾಡಲೇಬೇಕೆಂದು ಮಾಡಿದ್ದಾರೆ. ಕೆಲವಕ್ಕೆ ಪ್ರೋತ್ಸಾಹ ಕೊಡಬೇಕು ಮತ್ತೆ ಕೆಲವಕ್ಕೆ ಕಡ್ಡಾಯ ಮಾಡಬೇಕು, ಎಂದು ಹಳ್ಳಿಗಾಡಿನ ಜನತೆಯಲ್ಲಿ ಮೊದಲಿಗೆ ಕಾನೂನಿನ ಅರಿವು ಮೂಡಿಸಿ ತದನಂತರ ಅವರೇ ಅದನ್ನು ಪಾಲಿಸುವಂತೆ ಮಾಡಬೇಕೇ ಹೊರತು ಬಲವಂತ ಮಾಡಿದರೆ ಕೆಲಸ ಕೆಡುತ್ತದೆ ಮತ್ತು ಅದು ಕಾನೂನಾಗಿಯೇ ಉಳಿಯುತ್ತದೆ ಎಂಬುದನ್ನು ತಮ್ಮ ಹಳ್ಳಿಯ ನೆಲೆಗಟ್ಟಿನ ಅನುಭವದಿಂದ ಚರ್ಚಿಸಿದ್ದಾರೆ.

ಪಾನನಿರೋಧವನ್ನು ಕಡ್ಡಾಯವಾಗಿ ಆಚರಣೆಗೆ ತರಬೇಕೆಂಬ ವಿಚಾರದಲ್ಲಿ ವೀರಣ್ಣಗೌಡರು ೧೯೫೪ರ ಮಾರ್ಚ್ ೧೭ರಂದು ಶಾಸನ ಸಭೆಯಲ್ಲಿ ತಮ್ಮ ಅಭಿಪ್ರಾಯ ಮಂಡಿಸಿದ್ದಾರೆ. ಪಾನನಿರೋಧ ಜಾರಿಯಲ್ಲಿರುವ ಪ್ರದೇಶದಲ್ಲಿ ಅದನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಾರದೇ ಇರುವುದು ಕಳ್ಳಭಟ್ಟಿ ತಯಾರಿಕೆ ಮತ್ತು ಮಾರಾಟಕ್ಕೆ ದಾರಿಮಾಡಿಕೊಟ್ಟಂತಾಗುತ್ತದೆ ಎಂದಿದ್ದಾರೆ. ಕೆಲವು ಕಡೆಗಳಲ್ಲಿ ಪಾನನಿರೋಧ ಕಾನೂನನ್ನು ನಿಷ್ಪಕ್ಷಪಾತವಾಗಿ, ನಿಷ್ಠುರವಾಗಿ ಜಾರಿಗೆ ತರುವುದು ಬಹಳ ಕಷ್ಟ. ಇದು ಮನುಷ್ಯ ಸ್ವಾಭಾವವನ್ನು ಅವಲಂಬಿಸಿರುತ್ತದೆ. ಈಗ ಎಲ್ಲೀಲ್ಲಿ ಪಾನ ನಿರೋಧ ಜಾರಿಯಲ್ಲಿದೆಯೋ

ಅಲ್ಲಲ್ಲಿ ಕಳ್ಳಭಟ್ಟಿ ಮಾರಾಟ ಅವ್ಯಾಹತವಾಗಿ ನಡೆಯುತ್ತಿದೆ. ಸರ್ಕಾರದವರು ತಮ್ಮ ಪಾನನಿರೋಧ ನೀತಿಯನ್ನು ಯಶಸ್ವಿಯಾಗಿ ಮಾಡಬೇಕಾದರೆ ಸಂಸ್ಥಾನಾದ್ಯಂತ ಪೂರ್ಣವಾಗಿ ಪಾನನಿರೋಧವನ್ನು ಆಚರಣೆಗೆ ತಂದು ಅದನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರಬೇಕು. ಇದರಿಂದ ದೇಶದ ವರಮಾನ ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತದೆಂದು ಸರ್ಕಾರದವರು ಅಂದುಕೊಳ್ಳಬಹುದು. ಆದರೂ ಸಹ ಒಳ್ಳೆಯದು.. . . . ಎಕ್ಸೈಸ್ ಹರಾಜಿನಿಂದ ವರಮಾನ ಬಾರದೆ ಇದ್ದರೂ ಪರವಾಗಿಲ್ಲ, ದೇಶಕ್ಕಾದರೂ ಹಿತವಾಗುವುದು. ಸರ್ಕಾರದವರು ಧೈರ್ಯ ಮಾಡಿ ಸಂಸ್ಥಾನಾದ್ಯಂತ ಪೂರ್ಣವಾಗಿ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಒತ್ತಾಯಪೂರ್ವಕವಾಗಿ ತಮ್ಮ ವಾದವನ್ನು ಮಂಡಿಸಿದರು.

ಹೆಚ್.ಕೆ.ವೀರಣ್ಣಗೌಡರು ಶಾಸಕರಾಗಿ, ಸಚಿವರಾಗಿ ಶಾಸನಸಭೆಯಲ್ಲಿ ಹಲವಾರು ಪ್ರಮುಖ ವಿಷಯಗಳ ಚರ್ಚೆಯಲ್ಲಿ ಭಾಗವಹಿಸಿ ಸರ್ಕಾರ ಜನಪರವಾದ ಕಾನೂನುಗಳನ್ನು ತರುವುದಕ್ಕೆ ಅನುಕೂಲಕರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರೆಂಬುದನ್ನು ಗಮನಿಸಬಹುದು.

**ಮಂತ್ರಿಗಳಾಗಿ ಹೆಚ್.ಕೆ.ವೀರಣ್ಣಗೌಡರು ;**

೧೯೫೦ರಲ್ಲಿ ಲೋಕೋಪಯೋಗಿ ಮಂತ್ರಿಗಳಾದ ಹೆಚ್.ಕೆ.ವೀರಣ್ಣಗೌಡರು ಮೊದಲಿಗೆ ನೀರಾವರಿ ಮತ್ತು ಸಾರಿಗೆ ವ್ಯವಸ್ಥೆಗೆ ಹೆಚ್ಚಿನ ಆದ್ಯತೆ ನೀಡಿ ಕಾರ್ಯಮಗ್ನರಾದರು. ಒಟ್ಟಾರೆ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಹಲವಾರು ಹಳ್ಳಿಗಳಿಗೆ ಪ್ರಾಥಮಿಕ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ಹಲವಾರು ಕೆರೆ ಕಟ್ಟೆ, ಬಾವಿ, ನೀರಾವರಿ ಯೋಜನೆಗಳಿಗೆ ಜೀವ ತುಂಬಿದರು. ಉದಾಹರಣೆಗೆ ಮದ್ದೂರು ಕ್ಷೇತ್ರದ ಕಿಲಾರ್ ಕೆರೆ, ಕೆರಕೋಡ್, ಮದ್ದೂರು ಕೆರೆಗಳ ಹೂಳು ತೆಗಿಸಿ ಕಟ್ಟೆ ಕಟ್ಟಿಸಿ ರೈತರಿಗೆ ಅನುಕೂಲವಾಗುವಂತೆ ಮಾಡಿದರು. ಅಲ್ಲದೆ ನೀರಾವರಿಗೆ ಸಂಬಂಧಿಸಿದಂತೆ ಹೆಚ್ಚು ಪಿಕಪ್ ನಾಲೆಗಳಿಗೆ ಆದ್ಯತೆ ನೀಡಿ ಹಲವಾರು ಕಡೆ ಚೆಕ್ ಡ್ಯಾಮ್‌ಗಳನ್ನು ಕಟ್ಟಿಸಿದರು.

'ಗ್ರಾಮೀಣ ಕಾಳಜಿಯ, ಸಾಮಾಜಿಕ ಹಿತದ ಯಾವುದೇ ಕೋರಿಕೆಯನ್ನು ಯಾರೇ ಹೇಳಿದರೂ ತುಂಬ ಮುತುವರ್ಜಿಯಿಂದ ಕೇಳಿ ಸಾಧ್ಯವಾದಷ್ಟು ಬೇಗ, ಸಮರ್ಥವಾಗಿ ಮಾಡಿಸುತ್ತಿದ್ದುದು ಗೌಡರ ಜಾಯಮಾನವಾಗಿತ್ತು. ಹೀಗೆ ಹಳ್ಳಿಗಳಿಗೆ ರಸೆ, ಸೇತುವೆ, ಬಾವಿ, ವಿದ್ಯುತ್‌ಚ್ಛಕ್ತಿ ಶಾಲೆ ಕೆರೆ ಕಟ್ಟೆ ರಿಪೇರಿ, ಹೆಂಗಸರು ಬಟ್ಟೆ ಒಗೆಯಲು ಊರಂಚಿನ ಹಳ್ಳಕೊಳ್ಳಗಳಿಗೆ ಕಲ್ಲು ಚಪ್ಪಡಿಗಳು, ಸೋರಲು ನೀರು ಸಂಗ್ರಹಣೆಗೊಂಡು ಪುನರ್ ಬಳಕೆಯಾಗುವ ಪಿಕಪ್ ನಾಲೆಗಳು ಹೀಗೆ ಹಲವು ರೀತಿಯ ಗ್ರಾಮ್ಭಿಣಾಭಿವೃದ್ಧಿ ಕಾರ್ಯಗಳಿಗೆ ಆದ್ಯತೆ ನೀಡುತ್ತಿದ್ದರು. ಇದರಿಂದಾಗಿಯೇ ೬೦ರ ದಶಕಕ್ಕೆ ಮೊದಲೇ ನಮ್ಮ ಪ್ರದೇಶದಲ್ಲಿ ಗ್ರಾಮ್ಭಿಣಾಭಿವೃದ್ಧಿ ಅಗಾಧ ಪ್ರಮಾಣದಲ್ಲಿ ಸಾಧ್ಯವಾಯಿತೆನ್ನುತ್ತಾರೆ ಮದ್ದೂರು ತಾಲ್ಲೂಕಿನ ಉಪ್ಪಿನಕೆರೆ ಗ್ರಾಮದವರಾದ ಡಾಕ್ಟರ್ ರಾಮಲಿಂಗಯ್ಯ. ಇವರು ತಮ್ಮ ಎಂ.ಬಿ.ಬಿ.ಎಸ್ ಅಧ್ಯಯನದ ನಂತರ ಕಾರಣಾಂತರಗಳಿಂದ ದೇಶದ ಹಲವು ರಾಜ್ಯಗಳ ಗ್ರಾಮೀಣ ಪ್ರದೇಶಗಳನ್ನೆಲ್ಲಾ ಸುತ್ತಾಡ ಬೇಕಾಗಿ ಬಂತು. ದೀರ್ಘಕಾಲ ಪ್ರಧಾನಿಗಳಾಗಿದ್ದ ನೆಹರೂ, ಇಂದಿರಾಗಾಂಧಿಯವರ ಅಲಹಾಬಾದ್, ರಾಯ್‌ಬರೇಲಿ ಲೋಕಸಭಾ ಕ್ಷೇತ್ರಗಳ ಗ್ರಾಮಗಳಲ್ಲಿ ಸುತ್ತಾಡಿದ ಡಾಕ್ಟರ್ ರಾಮಲಿಂಗಯ್ಯನವರಿಗೆ ೧೯೬೦ಕ್ಕೆ ಮೊದಲೇ ನಮ್ಮ ಪ್ರದೇಶದಲ್ಲಿ ಈ ಗೌಡರು ಸಾಧಿಸಿದ್ದ ಗ್ರಾಮೀಣ ಅಭಿವೃದ್ಧಿ ಕಾರ್ಯಗಳು ಈ ಭಾಗಗಳಲ್ಲಿ ೧೯೮೦ರಲ್ಲೂ ಸಾಧ್ಯವಾಗಿರಲಿಲ್ಲ' ಎಂದು ತಮ್ಮ ಅನುಭವದ

ಮೂಲಕ ಗೌಡರು ಸಚಿವರಾಗಿ ಮಾಡಿದ್ದ ಗ್ರಾಮೀಣಾಭಿವೃದ್ಧಿಯ ಮೇಲೆ ಬೆಳಕು ಚೆಲ್ಲುವ ಮೂಲಕ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಅಲ್ಲದೆ ೧೯೫೭ರಲ್ಲಿಯೇ ಗೌಡರು ಮದ್ದೂರಿನ ಉಪ್ಪಿನಕೆರೆ ಗ್ರಾಮಕ್ಕೆ ವಿದ್ಯುತ್‌ಚ್ಛಕ್ತಿ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದ್ದನ್ನು ಸ್ಮರಿಸಿದ್ದಾರೆ.

ಹೆಚ್.ಕೆ.ವೀರಣ್ಣಗೌಡರು ಮಂತ್ರಿಯಾಗಿದ್ದಷ್ಟು ಕಾಲ ಬಹು 'ಜಬರದಸ್ತ್ ಮಂತ್ರಿ' ಎಂದೇ ಹೆಸರು ಗಳಿಸಿಕೊಂಡಿದ್ದರು. ಗೌಡರು ಅಧಿಕಾರ ನಡೆಸುವಲ್ಲಿ ಒಂದು ವಿಶಿಷ್ಟ ನೀತಿ, ಕೈಕೆಳಗಿನವರಿಗೆ ಪೂರ್ಣ ಸ್ವಾತಂತ್ರ್ಯ ನೀಡುತ್ತಿದ್ದರು. ಯಾವುದೇ ರೀತಿಯ ಪ್ರಭಾವವನ್ನು ಬೀರದೆ ನಡೆಸಿಕೊಳ್ಳುತ್ತಿದ್ದರು. ಇತ್ತ ತಮಗೆ ದೊರೆತ ಸ್ವಾತಂತ್ರ್ಯವನ್ನು ಯೋಗ್ಯ ರೀತಿಯಲ್ಲಿ ಬಳಸಿ ಅಧಿಕಾರ ನಡೆಸುವ ಅಧಿಕಾರಿಗಳ ಬಗ್ಗೆ ಅಪಾರ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಇಲ್ಲವಾದರೆ ಬಹಳ ಕೋಪಗೊಳ್ಳುತ್ತಿದ್ದರು. ಲಂಚವೆಂದರೆ ಕೆಂಡಾಮಂಡಲವಾಗುತ್ತಿದ್ದರು. ಪ್ರಭಾವ ಬೀರಿ ಕೆಲಸ ಮಾಡಿಸಿಕೊಳ್ಳಲು ಬರುತ್ತಿದ್ದ ಗೋಸಂಬಿಗಳ ಬಗ್ಗೆ ಬಹಳ ಎಚ್ಚರಿಕೆಯಿಂದ ಇರುತ್ತಿದ್ದರು. ಅಂತವರಿಗೆ ಸೊಪ್ಪು ಹಾಕದೆ ಧೈರ್ಯವಾಗಿ ಅಧಿಕಾರ ನಡೆಸುತ್ತಿದ್ದರು.

ನೌಕರಶಾಹಿಯ ನಿರ್ಲಕ್ಷ್ಯ, ವಿಳಂಬ ನೀತಿಯ ಬಗ್ಗೆ ಅರಿವಿದ್ದ ವೀರಣ್ಣಗೌಡರು ಅಧಿಕಾರಿಗಳಿಗೆ ಸ್ವಾತಂತ್ರ್ಯ ನೀಡಿದಂತೆ ಅವರನ್ನು ತಮ್ಮ ಹಿಡಿತದಲ್ಲೂ ಇಟ್ಟುಕೊಂಡಿದ್ದರು ಎಂಬುದಕ್ಕೆ ಎರಡು ಸನ್ನಿವೇಶಗಳನ್ನು ಇಲ್ಲಿ ನೀಡಲಾಗಿದೆ. 'ಒಮ್ಮೆ ಕಚೇರಿಯಲ್ಲಿ ಗೌಡರು ಆಪ್ತ ಕಾರ್ಯದರ್ಶಿಯನ್ನು ಕರೆದು ಇಂಗ್ಲೀಷಿನಲ್ಲಿ ಡಿಕ್ಟೇಟ್ ಮಾಡಿದರು. ಸ್ವಲ್ಪ ಸಮಯದ ನಂತರ ಟೈಪ್ ಮಾಡಿ ಅದನ್ನು ಅವರ ಸಹಿಗಾಗಿ ಮುಂದಿಟ್ಟಾಗ ಗೌಡರು ಪರಿಶೀಲಿಸಿ ಒಂದು ಶಬ್ದ ಬದಲಾಗಿರುವುದನ್ನು ಗಮನಿಸಿದರು 'ನಾನು ಈ ಶಬ್ದ ಹೇಳಿದ್ದೇನಾ? ಎಂದು ಅಧಿಕಾರಿಯನ್ನು ಕೇಳಿದರು. ಆತ ಮಾತು ಮುಗಿಸುವಷ್ಟರಲ್ಲಿಯೇ ಗೌಡರು ಆತನ ಕೆನ್ನೆಗೆ ಬಾರಿಸಿದ್ದರು. ಆತ ಕೆನ್ನೆ ಉಜ್ಜಿಕೊಂಡು ಸುಧಾರಿಸಿಕೊಳ್ಳುತ್ತಿದ್ದಂತೆ 'ನೀನು ಏನಾದರು ಓದಿರು, ನಾನು ಇಂಟರ್ ಮೀಡಿಯೇಟ್ ಓದಿದ್ದು, ನನಗೂ ಸಾಕಷ್ಟು ಇಂಗ್ಲೀಷ್ ಗೊತ್ತಿದೆ. ಅದು ಸರಿಯೋ ತಪ್ಪೋ ಅದರ ಜವಾಬ್ದಾರಿಯನ್ನು ಸಹಿ ಮಾಡುವ ನಾನು ತಾನೇ ಹೊರೋದು, ನೀನಲ್ಲವಲ್ಲ. ಇದೇ ಕೊನೆ ನಾನು ಹೇಳಿದಷ್ಟು ಮಾತ್ರ ಮಾಡಬೇಕು' ಎಂದರು.

ಮತ್ತೊಂದು ಸನ್ನಿವೇಶ, ಒಮ್ಮೆ ವೀರಣ್ಣಗೌಡರು ಒಂದು ಹಳ್ಳಿಗೆ ಹೋಗಿದ್ದರು. ಆ ಹಳ್ಳಿಯವರು ಒಂದು ರಸ್ತೆಗಾಗಿ ಕೇಳಿಕೊಂಡರು. ಗೌಡರು ನಿಂತಲ್ಲೆ ಆ ಬಗ್ಗೆ ಚರ್ಚೆ ಆರಂಭಿಸಿದರು. ಅಲ್ಲೇ ಇದ್ದ ಇಂಜನಿಯರ್ ದೂರ ಸೇತುವೆಗಳು, ತಗಲುವ ವೆಚ್ಚ ಇತ್ಯಾದಿಗಳ ಬಗ್ಗೆ ವಿವರಿಸಿದ. ಅಲ್ಲಿದ್ದ ಒಬ್ಬ ಮುದುಕನಿಗೆ ಇದು ಹಿಡಿಸಲಿಲ್ಲ. ಅವನು ಎಲ್ಲೂ ಇಲ್ಲದ ಧೈರ್ಯ ತಂದು ಕೊಂಡು 'ಅಂಗೆ ಮಾದೂಕಿಂತ ಇಂಗೆ ಮಾಡಿದ್ರೆ ಸಂದಾಕಿರತೈತೆ' ಎಂದು ತನಗೆ ತಿಳಿದಂತೆ ವಿವರಿಸಿದ. ಇಂಜನಿಯರ್ ಇದನ್ನು ಒಪ್ಪದೆ ಏನೇನೋ ಹೇಳತೊಡಗಿದ. ಇಂಜನಿಯರ್‌ಗೆ ಗೌಡರು 'ನಿನಗೆ ಈ ಪ್ರದೇಶವೆಲ್ಲಾ ಚೆನ್ನಾಗಿ ಗೊತ್ತಾ? ಎಂದು ಕೇಳಿದರು. 'ಇಲ್ಲ' ಎಂದನು. ಆಗ ಮಂತ್ರಿಗಳು ಹೇಳಿದರು 'ಆದರೆ ಈ ಮುದುಕನಿಗೆ ಇಲ್ಲಿಯ ಪ್ರತಿ ಅಂಗುಲವೂ ಗೊತ್ತು. ನಿಮ್ಮ ಯಾವುದೇ ಟೇಪು, ಇತ್ಯಾದಿಗಳಿಲ್ಲದೆ ನಿಂತಲ್ಲೆ ಲೆಕ್ಕಾಚಾರ ಹಾಕಿ ಹೇಳಬಲ್ಲ. ಅವರು ಹೇಳಿದ್ದರಲ್ಲಿ ನೀವು ಹೇಳಿದ್ದಕ್ಕಿಂತ ದೂರ, ಸೇತುವೆಗಳು, ಅಂದಾಜು ವೆಚ್ಚ ಕಡಿಮೆ. ನಿಮ್ಮ ಸ್ವಪ್ರತಿಷ್ಠೆ ಬಿಟ್ಟು ಅವನು ಹೇಳಿದಂತೆ ಪ್ಲಾನ್

ತಯಾರು ಮಾಡಿ' ಎಂದರು. ವೀರಣ್ಣಗೌಡರು ತಮ್ಮ ಆಪ್ತ ಕಾರ್ಯದರ್ಶಿ, ಇಂಜಿನಿಯರ್, ಹಾಗು ಹಳ್ಳಿಯ ಮುದುಕನೊಡನೆ ವರ್ತಿಸಿದ ರೀತಿ ಇವರ ಆಡಳಿತ ದಕ್ಷತೆ ಹಾಗು ಜನಪರ ಕಾಳಜಿಗೆ ಸಾಕ್ಷಿ ಎನ್ನಬಹುದು.'[೧೨೨]

ಹೆಚ್.ಕೆ.ವೀರಣ್ಣಗೌಡರು ಸಚಿವರಾದಾಗ ಗ್ರಾಮೀಣಾಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಕೆರೆ ಕಟ್ಟೆ, ರಸ್ತೆಗಳು, ನೀರಾವರಿಗೆ ಹೆಚ್ಚು ಆದ್ಯತೆ ನೀಡಿದ್ದರು ಎಂಬುದು ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ. ಉದಾ. ಮದ್ದಾರೂ ತಾಲ್ಲೂಕಿನ ಕೊನೆಯ ಪ್ರದೇಶವಾದ ಬೊಳಾರ್ ಪ್ರದೇಶದಲ್ಲಿ ಅಣೆಕಟ್ಟೆ ಕಟ್ಟಲು ಸ್ಥಳ ಪರಿಶೀಲನೆ ಮಾಡಿ ಕೆಲಸವನ್ನು ಆರಂಭಿಸಿದರು. ಆದರೆ ಆ ಕಾರ್ಯ ಪೂರ್ಣಗೊಳ್ಳುವಷ್ಟರಲ್ಲಿ ಗೌಡರು ಸಚಿವ ಸ್ಥಾನದಿಂದ ಕೆಳಗಿಳಿದ್ದಿದ್ದರು. ಮದ್ದೂರಿನ ಕಿಲಾರ್, ಕರಗೋಡ್, ಮದ್ದೂರು ಕೆರೆಗಳ ಹೂಳು ತೆಗೆಸಿ ಕಟ್ಟೆ ಕಟ್ಟಿಸಿ, ರಸ್ತೆ ಮಾಡಿಸಿಕೊಟ್ಟ ಬಗ್ಗೆ ಅಲ್ಲಿನ ಸ್ಥಳೀಯ ಕೆ.ಟಿ.ಚಂದು ಅವರು ಸ್ಮರಿಸುತ್ತಾರೆ. ಮತ್ತು ಚನ್ನಪಟ್ಟಣ ತಾಲ್ಲೂಕಿನ ಸುಳ್ಳೇರಿ ಕೆರೆ ಸೇರಿದಂತೆ ಸುತ್ತಮುತ್ತಲಿನ ಗ್ರಾಮಗಳ ಕೆರೆಗಳ ದುರಸ್ಥಿತಿ ಮಾಡಿ ರೈತರಿಗೆ ಅನುಕೂಲ ಮಾಡಿಸಿಕೊಟ್ಟರೆಂದು ಅಲ್ಲಿನ ಸ್ಥಳೀಯ ರೈತರಾಗಿರುವ ವೀರಮಲ್ಲೇಶ್ ಅವರು ಹೇಳುತ್ತಾರೆ.

'ಮಂಡ್ಯದಲ್ಲಿರುವ ಸಕ್ಕರೆ ಕಾರ್ಖಾನೆಗೆ ಬರುವ ಕಬ್ಬಿನ ಮೇಲೆ ಸರಕಾರದವರು ಒಂದು ಸಮಿತಿಯನ್ನು ನೇಮಿಸಿ ಅದರ ಅಧ್ಯಕ್ಷರಾಗಿ ಹೆಚ್.ಕೆ.ವೀರಣ್ಣಗೌಡರು ನೇಮಿಸಲ್ಪಟ್ಟರು. ಒಂದು ತೆರಿಗೆಯನ್ನು ನೇಮಿಸಿ ಆ ಹಣವನ್ನು ಆ ಪ್ರಾಂತ್ಯದ ಏಳಿಗೆಗಾಗಿ ಉಪಯೋಗಿಸಲು ಯೋಚಿಸಿದರು. ಆ ಅವಧಿಯಲ್ಲಿ ಮಂಡ್ಯ ಜಿಲ್ಲೆಯ ಈ ಎಲ್ಲ ಗ್ರಾಮಗಳಿಗೂ ರಸ್ತೆಯನ್ನು ಏರ್ಪಾಡು ಮಾಡಿದರು'[೧೨೩]

### ೫.೪ ಕರ್ನಾಟಕ ರಾಜಕಾರಣ :

ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ೪೨ ದಿನಗಳ ಕಾಲ ಯಶಸ್ವಿಯಾಗಿ ನಡೆದ ಮೈಸೂರು ಚಲೋ ಚಳುವಳಿಯ ಪರಿಣಾಮವಾಗಿ ೧೯೪೭ರ ಅಕ್ಟೋಬರ್ ೨೪ರ ವಿಜಯದಶಮಿಯಂದು ಕೆ.ಸಿ.ರೆಡ್ಡಿಯವರ ನೇತೃತ್ವದ ಒಂಬತ್ತು ಜನ ಮಂತ್ರಿಗಳನ್ನೊಳಗೊಂಡ ಮಂತ್ರಿಮಂಡಲ ಅಧಿಕಾರ ವಹಿಸಿಕೊಂಡು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಿತು.

"ಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಮೈಸೂರು ಸಂಸ್ಥಾನಕ್ಕೆ ಪ್ರತ್ಯೇಕ ರಾಜ್ಯಾಂಗವನ್ನು ಸಿದ್ದಪಡಿಸುವ ಸಲುವಾಗಿ ಸಂಸ್ಥಾನದಲ್ಲಿ ಒಂದು ರಾಜ್ಯಾಂಗ ಸಭೆಯನ್ನು ರಚಿಸಲಾಯಿತು. ರಾಜ್ಯಾಂಗ ಸಭೆಯು ೧೯೪೦ನೆಯ ಇಸವಿಯ ಶಾಸನದಂತೆ ೧೬ ಜನ ಚುನಾಯಿತ ಸದಸ್ಯರಿಂದ ಕೂಡಿರಬೇಕೆಂದು ಏರ್ಪಾಡಾಗಿದ್ದಿತು. ಈ ಸಭೆಗೆ ಮಾರ್ಚ್ ೧೯೪೮ರಲ್ಲಿ ಚುನಾವಣೆ ನಡೆಯಿತು. ಅದರಲ್ಲಿ ಒಟ್ಟು ೭೬ ಸ್ಥಾನಗಳಲ್ಲಿ ೬೭ ಸ್ಥಾನಗಳನ್ನು ಕಾಂಗ್ರೆಸ್ ಗೆದ್ದುಕೊಂಡಿತು. ಈ ಚುನಾವಣೆಯಲ್ಲಿ ಜಿಲ್ಲೆಯ ಜನಸಂಖ್ಯೆಗೆ ಅನುಗುಣವಾಗಿ ಉಮೇದುವಾರರನ್ನು ಕಣಕ್ಕಿಳಿಸಲು ತೀರ್ಮಾನವಾಗಿತ್ತು. ಅದರಂತೆ ಮಂಡ್ಯ ಜಿಲ್ಲೆಯಿಂದ

---

[೧೨೨] ಜೂನ್ ೧,೨೦೦೦. ಬಹುಜನ ಕ್ಷಣ್ಣಡಿಗರು ಪತ್ರಿಕೆ.

[೧೨೩] ಚಿತ್ರಗುಪ್ತ ಸ್ಮರಣೆ. ಪುಟ-೬೮.

ಕೆ.ವಿ.ಶಂಕರೇಗೌಡರು, ಕೆ.ಸಿಂಗಾರಿಗೌಡರು, ಮಳವಳ್ಳಿಯ ವೆಂಕಟೇಶ್, ಎ.ಜಿ.ಬಂದೀಗೌಡರು ಮತ್ತು ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ ಐದು ಜನ ಉಮೇದುವಾರರು ಜಯಗಳಿಸಿದರು. ಇವರ ಜೊತೆಗೆ ಡಿ.ವಿ.ಗುಂಡಪ್ಪನವರನ್ನು ಸಂವಿಧಾನ ರಚನಾ ಸಭೆಗೆ ಸರ್ಕಾರದವರು ಸದಸ್ಯರನ್ನಾಗಿ ನಾಮಕರಣ ಮಾಡಿದರು. ಈ ಸಭೆಗೆ ಹೆಸರಿಡುವ ವಿಚಾರವಾಗಿ ಡಿ.ವಿ.ಗುಂಡಪ್ಪನವರಿಗೂ ಹೆಚ್.ಕೆ.ವೀರಣ್ಣಗೌಡ ಮತ್ತು ಇತರ ಸದಸ್ಯರ ನಡುವೆ ಭಿನ್ನಾಭಿಪ್ರಾಯ ಉಂಟಾಯಿತು. ಹೆಚ್.ಕೆ.ವೀರಣ್ಣಗೌಡರು ಮತ್ತು ಇತರ ಸದಸ್ಯರು ಸೂಚಿಸಿದ ರಾಜ್ಯಾಂಗ ಸಭೆ ಹೆಸರೇ ಒಮ್ಮತವಾಗಿ ಒಪ್ಪಿಕೊಂಡಿದ್ದರಿಂದ ಡಿ.ವಿ.ಗುಂಡಪ್ಪನವರು ಈ ಸಭೆಯ ಸದಸ್ಯತನಕ್ಕೆ ರಾಜೀನಾಮೆ ನೀಡಿದರು. ಗೌಡರಿಗೆ ಇದೊಂದು ವಿಷಾದಕರ ಸಂಗತಿಯಾಗಿತ್ತು. ದಿ: ೭.೦೪.೧೯೪೮ರಲ್ಲಿ ನೂತನ ರಾಜ್ಯಾಂಗ ಸಭೆಯ ಪ್ರಥಮಾಧಿವೇಶನ ನಡೆಯಿತು. ದೀರ್ಘಕಾಲ ಕಾಂಗ್ರೆಸ್ಸಿನ ಅಗ್ರ ನಾಯಕರಾಗಿದ್ದ ಟಿ.ಸುಬ್ರಹ್ಮಣ್ಯಂ ಅವರು ರಾಜ್ಯಾಂಗ ಸಭೆಯ ಪ್ರಥಮಾಧ್ಯಕ್ಷರಾದರು.

ಆದರೆ ಜುಲೈ ೧೯೪೮ ರ ಒಳಗಾಗಿ ರಾಜ್ಯಾಂಗ ಸಭೆ ತನ್ನ ಕಾರ್ಯ ಕಲಾಪಗಳನ್ನು ಪೂರ್ಣಗೊಳಿಸಲು ಸಾಧ್ಯವಾಗದ ಕಾರಣ ಸ್ವಲ್ಪ ಸಮಯದ ನಂತರ ಕೆಲಸ ಮುಂದುವರೆಯ ಬೇಕಾಗಿದ್ದಿತು. ಈ ನಡುವೆ ರಾಜ್ಯಾಂಗ ರಚನೆಯ ಕೆಲಸವನ್ನು ಕೇಂದ್ರದ ಮಾರ್ಗದರ್ಶನವಿಲ್ಲದೆ ಪೂರ್ಣವಾಗಿ ಸ್ಥಳೀಯ ರಾಜ್ಯಾಂಗ ಸಭೆಗಳಿಗೇ ಬಿಟ್ಟುಕೊಡುವುದು ಸೂಕ್ತವಲ್ಲವೆಂದು ಭಾವಿಸಿದ ಕೇಂದ್ರ ಸರ್ಕಾರವು ಎಲ್ಲ ದೇಶೀಯ ಸಂಸ್ಥಾನಗಳಿಗೂ ಅನ್ವಯಿಸುವ ಒಂದು ಮಾದರಿ ರಾಜ್ಯಾಂಗವನ್ನು ಸಿದ್ದಪಡಿಸಲು ಸರ್. ಬಿ.ಎನ್.ರಾಯರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿ ಸಿದ್ದಪಡಿಸುವ ರಾಜ್ಯಾಂಗದ ಪ್ರರೂಪ(ಡ್ರಾಫ್ಟ್) ಬರುವವರೆಗೆ ಮೈಸೂರು ರಾಜ್ಯಾಂಗ ಸಭೆಯು ತನ್ನ ಕಾರ್ಯಕಲಾಪಗಳನ್ನು ತಡೆಹಿಡಿಯುವಂತೆ ನಿರೂಪ ನೀಡಿತು. ಈ ರಾಜ್ಯಾಂಗ ಪ್ರರೂಪವು ಮೇ ೧೯೪೯ರಲ್ಲಿ ನಡೆದ ಮುಖ್ಯಮಂತ್ರಿಗಳ ಸಭೆಯಲ್ಲಿ ಚರ್ಚಿತವಾಯಿತು.

ನಂತರ ಸಮಗ್ರ ಭಾರತಕ್ಕೆ ಸಿದ್ದವಾದ ಸಂವಿಧಾನವನ್ನೇ ಸೂಕ್ತವಾದ ಮಾರ್ಪಾಡುಗಳೊಡನೆ ಸಂಸ್ಥಾನಗಳಿಗೂ ಕಳುಹಿಸಲ್ಪಟ್ಟಿತು. 'ಮುಂದೆ ೨೬.೧೧.೧೯೪೯ ರಲ್ಲಿ ಭಾರತದ ಸಂವಿಧಾನವೇ ಎಲ್ಲಾ ರಾಜ್ಯಗಳಿಗೂ ಅನ್ವಯಿಸುತ್ತದೆ ಎಂಬ ಕೇಂದ್ರದ ಪ್ರಕಟಣೆಯಿಂದ ರಾಜ್ಯಕ್ಕೆ ಪ್ರತ್ಯೇಕ ಸಂವಿಧಾನ ರಚಿಸುವ ಕಾರ್ಯ ಸ್ಥಗಿತಗೊಂಡಿತು. ೧೯೫೦ರಲ್ಲಿ ಜಾರಿಗೆ ಬಂದ ಭಾರತದ ಸಂವಿಧಾನದಂತೆ ಮೈಸೂರು 'ಬಿ' ವರ್ಗದ ರಾಜ್ಯವಾಯಿತು. ರಾಜ್ಯದ ಪ್ರಮುಖರಾಗಿದ್ದ ಮಹಾರಾಜರು ರಾಜ್ಯಪಾಲರಾದರು. ಕೇವಲ ಕಾಂಗ್ರೆಸ್ ಸದಸ್ಯರೇ ಇದ್ದ ಕೆ.ಸಿ.ರೆಡ್ಡಿಯವರ ಮಂತ್ರಿ ಮಂಡಲವು ೬.೦೨.೧೯೫೦ ರಲ್ಲಿ ಪ್ರಮಾಣ ವಚನ ಸ್ವೀಕರಿಸಿತು. ಆ ವೇಳೆಗೆ ಹಿಂದಿನ ಪ್ರಜಾಪ್ರತಿನಿಧಿ ಸಭೆಯ ಮತ್ತು ನ್ಯಾಯ ವಿಧಾಯಕ ಸಭೆಯ ಅಧಿಕಾರಾವಧಿ ಪೂರ್ಣಗೊಂಡಿದ್ದರಿಂದ ಅವೆರಡೂ ಸಭೆಗಳು ವಿಸರ್ಜನೆಗೊಂಡವು. ಮೈಸೂರಿನ ಸಂವಿಧಾನ ಸಭೆಯು ವಿಧಾನ ಸಭೆಯಾಗಿ ಮಾರ್ಪಾಟಾಯಿತು.'[೧೨೪]

---

[೧೨೪] ಎಸ್.ವಿ.ಶ್ರೀನಿವಾಸರಾವ್. ಕರ್ನಾಟಕದ ಮುಖ್ಯಮಂತ್ರಿಗಳು. ೨೦೦೩. ಪು.೮

ರಾಜ್ಯಾಂಗ ಸಭೆಯೇ ನ್ಯಾಯವಿಧಾಯಕ ಸಭೆಯಾಗಿ ಪರಿವರ್ತಿತವಾಗಿ ವಯಸ್ಕ ಮತದಾನಾಧಾರದ ಮೇಲೆ ನೂತನ ಶಾಸನ ಸಭೆಗಳು ರಚಿತವಾಗುವರೆಗೂ ಅದುವೇ ಶಾಸನ ಕಾರ್ಯಕಲಾಪಗಳನ್ನು ನಿರ್ವಹಿಸಬೇಕೆಂದು ತೀರ್ಮಾನವಾಯಿತು. ಹಿಂದಿನ ತಾತ್ಕಾಲಿಕ ಮಂತ್ರಿ ಮಂಡಲ ರಾಜೀನಾಮೆ ನೀಡಿ ಹೊಸ ಮಂತ್ರಿಮಂಡಲ ರಚಿತವಾಯಿತು. ನೂತನ ಮಂತ್ರಿ ಮಂಡಲದಲ್ಲೂ ಕೆ.ಸಿ.ರೆಡ್ಡಿಯವರೇ ಮುಖ್ಯ ಮಂತ್ರಿಗಳಾದರು. ಎಚ್.ಸಿ.ದಾಸಪ್ಪ, ಕೆ.ಟಿ.ಭಾಷ್ಯಂ, ಟಿ.ಸಿದ್ದಲಿಂಗಯ್ಯ, ಎಚ್.ಸಿದ್ದಯ್ಯ, ಟಿ.ಮರಿಯಪ್ಪ, ಆರ್.ಚೆನ್ನಿಗರಾಮಯ್ಯ ಇವರು ಮಂತ್ರಿಗಳಾದರು. ಇವರೆಲ್ಲರೂ ನ್ಯಾಯವಿದಾಯಕ ಸಭೆಯಲ್ಲಿ ಬಹುಮತವಿದ್ದ ಕಾಂಗ್ರೆಸ್ ಪಕ್ಷದವರಾಗಿದ್ದರು. ಹೀಗೆ ಹಲವಾರು ವರ್ಷಗಳ ನಂತರ ಮೈಸೂರಲ್ಲಿ ಜನಪ್ರಿಯ ಸರ್ಕಾರ ಸ್ಥಾಪಿತವಾಯಿತು."[೧೨೫] ಹೀಗೆ ಸಂವಿಧಾನ ಸಭೆಗೆ ಚುನಾಯಿತರಾಗಿ ಶಾಸನ ಸಭೆಯಲ್ಲಿ ಮುಂದುವರಿಯುವ ಅವಕಾಶ ದೊರೆತದ್ದು ಹೆಚ್.ಕೆ.ವೀರಣ್ಣಗೌಡರ ರಾಜಕೀಯ ಜೀವನದಲ್ಲಿ ಮೊಟ್ಟಮೊದಲ ಶಾಸನ ಸಭೆಯ ಪ್ರವೇಶಕ್ಕೆ ಆರಂಭಿಕ ಘಟ್ಟವಾಯಿತು.

ಮುಂದೆ ಮಹಾರಾಜರಿಂದ ಜವಾಬ್ದಾರಿ ಸರ್ಕಾರ ಘೋಷಣೆಯ ನಂತರ ಪ್ರಜಾಸತ್ತಾತ್ಮಕವಾಗಿ ಸರ್ಕಾರ ರಚಿಸಬೇಕೆಂಬ ಒತ್ತಡಗಳಿಂದ ಕೆ.ಸಿ.ರೆಡ್ಡಿಯವರ ಸರ್ಕಾರವನ್ನು ರದ್ದುಗೊಳಿಸಿ ಕೆ.ಹನುಮಂತಯ್ಯನವರ ನಾಯಕತ್ವದಲ್ಲಿ ೧೯೫೨ನೇ ಮಾರ್ಚಿನಲ್ಲಿ ಸರ್ಕಾರ ರಚನೆಯಾಯಿತು. ಕೆ. ಹನುಮಂತಯ್ಯನವರು ಮಂತ್ರಿಮಂಡಲದ ರಚನೆಗೆ ಮುನ್ನ ಕಾಂಗ್ರೆಸ್‌ನ ಹಿರಿಯ ಮುಖಂಡರಾದ ಹೆಚ್.ಕೆ.ವೀರಣ್ಣಗೌಡರ ಸಲಹೆಯನ್ನು ಕೇಳಲು 'ನಿಮ್ಮ ವಿಚಾರದಲ್ಲಿ ನಾನು ವಿದ್ಯಾರ್ಥಿಯಾಗಿದ್ದ ಕಾಲದಿಂದಲೂ ಅಭಿಮಾನವನ್ನು ಇಟ್ಟುಕೊಂಡಿದ್ದೇನೆ. ಆದುದರಿಂದ ಈ ದಿನ ಬೇರೆಯವರನ್ನು ಕರೆಸಿ ಕೇಳುವುದಕ್ಕೆ ಮೊದಲೇ ನಿಮ್ಮ ಸಂಗಡ ಆಲೋಚಿಸಬೇಕೆಂದು ನಿಮ್ಮ ಸಲಹೆ ಕೇಳುತ್ತಿದ್ದೇನೆ. ನಿಮಗೂ ನನಗೂ ಯಾವ ವಿಚಾರಗಳಲ್ಲೆ ಆಗಲಿ ಭಾನ್ನಾಭಿಪ್ರಾಯಗಳಿಲ್ಲ. ಆದರೆ ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಕಾರ್ಯಕಾರಿ ಸಭೆಯಲ್ಲಿ ನಿಮಗೂ ನನಗೂ ಕೆಲವು ತೀಷ್ಣವಾದ ಮಾತುಗಳು ನಡೆದವು. ಅದನ್ನು ಬಿಟ್ಟರೆ ನಿಮ್ಮಲ್ಲಿ ಯಾವಾಗಲೂ ಸದಭಿಪ್ರಾಯವನ್ನೇ ಹೊಂದಿದ್ದೇನೆ"[೧೨೬] ಎಂದರು. ಆದರೆ ವೀರಣ್ಣಗೌಡರಿಗೆ ಕೆ.ಹನುಮಂತಯ್ಯನವರನ್ನು ಬೆಂಬಲಿಸಿ ಅವರ ಮಂತ್ರಿ ಮಂಡಲದಲ್ಲಿ ಒಂದು ಸ್ಥಾನ ಪಡೆಯುವ ಅವಕಾಶವಿದ್ದರೂ ಅಧಿಕಾರದಾಸೆ ತೊರೆದು ತಮ್ಮ ಆತ್ಮಸಾಕ್ಷಿಯಂತೆ ನಡೆದುಕೊಂಡರು. ಚೆಂಗಲರಾಯರೆಡ್ಡಿಯವರ ಬೆಂಬಲಿಗರಾಗಿದ್ದ ವೀರಣ್ಣಗೌಡರಿಗೆ ಕೆ.ಹನುಮಂತಯ್ಯನವರು ತಾವು ಅಧಿಕಾರಕ್ಕೆ ಬರುವ ಸಲುವಾಗಿ ಕೆ.ಸಿ.ರೆಡ್ಡಿಯವರ ಸರ್ಕಾರದ ಅವಧಿ ಪೂರ್ಣಗೊಳ್ಳುವ ಮುನ್ನವೇ ಇನ್ನಾರು ತಿಂಗಳಲ್ಲಿ ನಡೆಯಬೇಕಾಗಿದ್ದ ಸಾರ್ವತ್ರಿಕ ಚುನಾವಣೆಗೂ ಅವಕಾಶ ಕೊಡದೆ ಗುಂಪುಗುಳಿತನದಿಂದ ಅವರನ್ನು ಅಧಿಕಾರದಿಂದ ಕೆಳಗಿಳಿಸಿದ್ದ ಕಾರಣ ಹೆಚ್.ಕೆ.ವೀರಣ್ಣಗೌಡರು ಮತ್ತು ಕೆಲವು ಸ್ನೇಹಿತರು ಕೆ.ಹನುಮಂತಯ್ಯನವರನ್ನು ಸಹ ಪೂರ್ಣಾವಧಿಯ ಕಾಲ ಆಡಳಿತ ನಡೆಸುವುದಕ್ಕೆ ಅವಕಾಶ ಕೊಡದೆ ಅವರನ್ನು ಕೆಳಗಿಳಿಸುವ ಮಸಲತ್ತು ನಡೆಸುತ್ತಿದ್ದರು.

---

[೧೨೫] ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟ. ಕರ್ನಾಟಕದ ಇತಿಹಾಸ ದರ್ಶನ. ಪುಟ-೬೫೦

[೧೨೬] ಹೆಚ್.ಕೆ.ವೀರಣ್ಣಗೌಡ. ಬದುಕು-ಮೆಲುಕು. ಪು.೧೯೨,೧೯೩

ಇದರ ಪರಿಣಾಮವಾಗಿ ಚುನಾವಣೆಗೆ ಇನ್ನೆರಡು ತಿಂಗಳು ಉಳಿದಿರುವಂತೆಯೇ ಹನುಮಂತಯ್ಯನವರ ವಿರೋಧಿಗಳ ಭರಾಟೆಯಿಂದ ಅವರು ರಾಜೀನಾಮೆ ನೀಡಬೇಕಾಗಿ ಬಂದಿತು. ನಂತರ ಕಡಿದಾಳ್ ಮಂಜಪ್ಪನವರು ಪ್ರಭಾರಿ ಮುಖ್ಯಮಂತ್ರಿಗಳಾದರು. ಹೀಗೆ ೧೯೫೭ರಲ್ಲಿ ಚುನಾವಣೆ ಘೋಷಣೆಯಾಯಿತು.

೧೯೫೭ರಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಗಳಲ್ಲಿ ಹೆಚ್.ಕೆ.ವೀರಣ್ಣಗೌಡರು ಜಯಗಳಿಸಿದರು. ಮುಖ್ಯಮಂತ್ರಿಗಳಾಗಿ ಆಯ್ಕೆಯಾದ ಎಸ್.ನಿಜಲಿಂಗಪ್ಪನವರು ತಮ್ಮ ಮಂತ್ರಿಮಂಡಲ ರಚನೆಯ ಕಾರ್ಯದಲ್ಲಿ ತೊಡಗಿದರು. ಆ ಸಂದರ್ಭದಲ್ಲಿ ಅಧಿಕಾರ ಹಂಚಿಕೆಯ ಯಾವ ಗೋಜಿಗೂ ಹೋಗದೆ ತಮ್ಮ ಸ್ವಂತ ಕೆಲಸ ಮಾಡುತ್ತಿದ್ದ ಹೆಚ್.ಕೆ.ವೀರಣ್ಣಗೌಡರನ್ನು ಮಿತ್ರರಾದ ವಿ.ವೆಂಕಟಪ್ಪನವರು, ಟಿ.ಮರಿಯಪ್ಪನವರು ಮಂತ್ರಿಗಳಾಗಿ ಪ್ರಮಾಣವಚನ ಸ್ವೀಕರಿಸಬೇಕೆಂದು ಕರೆದೊಯ್ದರು. ಇಲ್ಲಿ ನಾವು ಗಮನಿಸಬೇಕಾದ್ದು ಎಸ್.ನಿಜಲಿಂಗಪ್ಪನವರು ಪ್ರಾಮಾಣಿಕತನ, ನಿಷ್ಠೆಗೆ, ಶ್ರಮಕ್ಕೆ ನ್ಯಾಯ ಒದಗಿಸಿದರೆಂಬುದು. ಅಂದರೆ ಮೈಸೂರು ಕಾಂಗ್ರೆಸ್‌ನ ಸಂಘಟನೆಗೆ ತಮ್ಮನ್ನೇ ಒಪ್ಪಿಸಿಕೊಂಡು ದುಡಿದ ಹೆಚ್.ಕೆ.ವೀರಣ್ಣಗೌಡರನ್ನು ಚುನಾವಣೆಯಲ್ಲಿ ಗೆದ್ದರೂ ಮಂತ್ರಿಗಿರಿಗಾಗಿ ಅಲೆದಾಡುವ ಗೋಜಿಗೆ ಹೋಗದೆ ತಮ್ಮ ಪಾಡಿಗೆ ಇದ್ದವರನ್ನು ಗುರ್ತಿಸಿದರು. ಇದು ವೀರಣ್ಣಗೌಡರಿಗೆ ಆಶ್ಚರ್ಯವೂ, ಸಂತೋಷವೂ ಆಯಿತು. ಯಾವ ಖಾತೆ ನೀಡಬೇಕೆಂದು ಕೇಳಿದ ನಿಜಲಿಂಗಪ್ಪನವರಿಗೆ 'ನನಗೆ ಯಾವ ಖಾತೆ ಕೊಟ್ಟರೆ ಅದು ಯಶಸ್ವಿಯಾಗಿ ನಡೆಯಬಲ್ಲದೆಂಬುದನ್ನು ನೀವೇ ಯೋಚಿಸಿ ತೀರ್ಮಾನ ಮಾಡಿ ನನಗೆ ತಿಳಿಸಿ, ಅಂತಹ ಖಾತೆಯನ್ನು ನಾನು ವಹಿಸಿಕೊಳ್ಳುತ್ತೇನೆ' ಎಂಬುದು ಹೆಚ್.ಕೆ.ವೀರಣ್ಣಗೌಡರ ಉತ್ತರವಾಗಿತ್ತು. ತನ್ನ ಆಪ್ತ ಸ್ನೇಹಿತನೇ ಮುಖ್ಯಮಂತ್ರಿಯಾಗಿದ್ದ ಸಂದರ್ಭವಾದರೂ ತಾನು ಇನ್ನೂ ಹೆಚ್ಚಿನ ಅಧಿಕಾರವುಳ್ಳ, ಲಾಭದಾಯಕವಾದ ಖಾತೆಯನ್ನು ಪಡೆಯುವ ಅವಕಾಶವಿತ್ತು. ಆದರೆ ಮೊದಲಿನಿಂದಲೂ ಜನಪರ ಕಾರ್ಯಗಳಿಗೆ ಹೆಚ್ಚಿನ ಆಸಕ್ತಿಹೊಂದಿದ್ದ ವೀರಣ್ಣಗೌಡರಿಗೆ ತಮ್ಮ ಸ್ವಾರ್ಥಕ್ಕಿಂತ ಜನರ, ನಾಡಿನ ಏಳಿಗೆ ಮುಖ್ಯವಾಗಿ ಕಂಡಿದ್ದು ಸಹಜವಾಗಿಯೇ ಇತ್ತು. ಈ ಹಿನ್ನೆಲೆಯಲ್ಲಿ ತಮ್ಮ ಸ್ನೇಹಿತನ ಸ್ವಭಾವ ಮತ್ತು ಕಾರ್ಯವೈಖರಿಯನ್ನು ಕಂಡಿದ್ದ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪನವರಿಗೆ ಮೂಲಭೂತ ಸೌಕರ್ಯಗಳ ಸುಧಾರಣೆ ಮತ್ತು ಅಭಿವೃದ್ಧಿಯನ್ನು ಮನದಲ್ಲಿಟ್ಟುಕೊಂಡು ವೀರಣ್ಣಗೌಡರಿಗೆ ವಿದ್ಯುತ್‌ಚ್ಛಕ್ತಿ ಮತ್ತು ಲೋಕೋಪಯೋಗಿ ಖಾತೆಯನ್ನು ನೀಡಿದರು.

ಎಸ್.ನಿಜಲಿಂಗಪ್ಪನವರು ೧೯೫೭ರಲ್ಲಿ ಮುಖ್ಯಮಂತ್ರಿಗಳಾದ ನಂತರವೂ ಕಾಂಗ್ರೆಸ್ ಪಕ್ಷದಲ್ಲಿ ಗುಂಪುಗುಳಿತನ ಕಡಿಮೆಯಾಗದೇ ಹೆಚ್ಚುತ್ತಲೇ ಹೋಯಿತು. ಹೀಗಾಗಿ ಸರ್ಕಾರದ ಎಲ್ಲಾ ಕಾರ್ಯಗಳ ಬಗ್ಗೆ ಆಕ್ಷೇಪಣೆಗಳನ್ನು ಸತತವಾಗಿ ವಿರೋಧಿಗಳು ಮಾಡುತ್ತಾ ನಿಜಲಿಂಗಪ್ಪನವರನ್ನು ಅಧಿಕಾರದಿಂದ ಕೆಳಗಿಳಿಸಲು ಹವಣಿಸುತ್ತಿದ್ದರು. ಈ ಸಂದಿಗ್ಧ ಸಂದರ್ಭದಲ್ಲಿ ಅಧಿಕಾರದಲ್ಲಿ ಮುಂದುವರಿಯ ಬೇಕೇ? ಬೇಡವೇ? ಎಂಬ ವಿಚಾರವಾಗಿ ನಿಜಲಿಂಗಪ್ಪನವರು ತಮ್ಮ ಸಚಿವ ಸಂಪುಟದವರೊಂದಿಗೆ ಚರ್ಚಿಸಿದರು. ರಾಜೀನಾಮೆ ನೀಡುವುದೇ ಸರಿ ಎಂದು ಸಚಿವ ಸಂಪುಟ ತೀರ್ಮಾನಿಸಿತು. ಹೀಗೆ 'ರಾಜೀನಾಮೆ ಕೊಟ್ಟು

ವಿಧಾನ ಸೌಧದ ಮೆಟ್ಟಿಲು ಇಳಿದು ಬರುತ್ತಿದ್ದ ಹೆಚ್.ಕೆ.ವೀರಣ್ಣಗೌಡರನ್ನು 'ಏನು ಸಮಾಚಾರ' ಎಂದು ಪತ್ರಿಕಾ ಪ್ರತಿನಿಧಿಗಳು ಕೇಳಿದ್ದಕ್ಕೆ 'ದರ್ಬಾರು ಮುಗಿಸಿ ಬಂದೆವು' ಎಂದರಂತೆ. ಆಗಿನ ಇನ್ನಿತರ ಮಂತ್ರಿಗಳನ್ನು ನೋಡಿ ಬಂದ 'ಪತ್ರಿಕಾ ಪ್ರತಿನಿಧಿಗಳು ನಗು ನಗುತ್ತಾ ಅಧಿಕಾರ ಬಿಟ್ಟು ಬಂದ ಮಂತ್ರಿಮಂಡಲವಿದು' ಎಂದು ವರದಿ ಮಾಡಿತ್ತು.'[೧೨೭]

ಎಸ್.ನಿಜಲಿಂಗಪ್ಪನವರ ನಂತರ ಶ್ರೀಮಾನ್ ಬಿ.ಡಿ.ಜತ್ತಿಯವರು ಮುಖ್ಯಮಂತ್ರಿಗಳಾದ ಮೇಲೆ ಕಾಂಗ್ರೆಸ್ಸಿಗರಿಗೆ ಅಸಮಾಧಾನವೇ ಇತ್ತು. ನಿಜಲಿಂಗಪ್ಪನವರನ್ನು ರಾಜೀನಾಮೆ ನೀಡುವಂತೆ ಮಾಡಿ ಲಿಂಗಾಯಿತ ಕೋಮಿನವರೇ ಆದ ಬಿ.ಡಿ. ಜತ್ತಿಯವರನ್ನು ಅಧಿಕಾರಕ್ಕೆ ತಂದಿದ್ದು ಇದಕ್ಕೆ ಕಾರಣವಾಗಿತ್ತು. ಇದೇ ಸಂದರ್ಭದಲ್ಲಿ ಜತ್ತಿಯವರ ಮತ್ತು ನಿಜಲಿಂಗಪ್ಪನವರ ಗುಂಪುಗಳ ಮಧ್ಯೆ ಆಗಿಂದಾಗ್ಗೆ ತಿಕ್ಕಾಟವು ನಡೆಯುತ್ತಲೇ ಇದ್ದಿತು. ಜತ್ತಿಯವರನ್ನು ಅಧಿಕಾರದಿಂದ ಕೆಳಗಿಳಿಸಲು ಕಾಂಗ್ರೆಸ್ ನಾಯಕತ್ವದಿಂದ ಅವರನ್ನು ಕೆಳಗಿಳಿಸುವಂತೆ ಹೆಚ್.ಕೆ.ವೀರಣ್ಣಗೌಡರು, ನಿಜಲಿಂಗಪ್ಪನವರು, ಕೆ.ಹನುಮಂತಯ್ಯನವರು ಸೇರಿದಂತೆ ಇನ್ನು ಹಲವಾರು ಕಾಂಗ್ರೆಸ್ ಧುರೀಣರು ನೆಹರೂರವರಿಗೆ ಆಗ್ರಹಪಡಿಸಿದರು. ನೆಹರೂರವರು ಜತ್ತಿಯವರನ್ನು ಅಧಿಕಾರದಿಂದ ಕೆಳಗಿಳಿಸಿದ ನಂತರ ಮುಂದಿನ ನಿಮ್ಮ ನಾಯಕರು ಯಾರು? ಎಂಬುದನ್ನು ನಿರ್ಧರಿಸಿದ್ದೀರೋ? ಎಂದು ಕೇಳಿದರು. ಅಷ್ಟರಲ್ಲಿ ಕೆ.ಹನುಮಂತಯ್ಯವರು, ಎಸ್.ನಿಜಲಿಂಗಪ್ಪನವರು, ಶ್ರೀ ಕೊಲ್ಲೀರು ಮಲ್ಲಪ್ಪನವರು ಮತ್ತು ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ ಈ ನಾಲ್ವರಲ್ಲಿ ಒಬ್ಬರು ನಾಯಕರಾಗಬೇಕೆಂದು ಶಾಸಕಾಂಗದ ಸದಸ್ಯರು ಸೂಚಿಸಿದ್ದರು. ನಾಯಕ ಸ್ಥಾನಕ್ಕೆ ನಿಜಲಿಂಗಪ್ಪನವರು ಮತ್ತು ಕೊಲ್ಲೂರು ಮಲ್ಲಪ್ಪನವರು ಸ್ಪರ್ಧಿಸಲು ಹಿಂದೆ ಸರಿದಿದ್ದರಿಂದ ಹೆಚ್.ಕೆ.ವೀರಣ್ಣಗೌಡರು ಮತ್ತು ಕೆ.ಹನುಮಂತಯ್ಯನವರಲ್ಲಿ ಒಬ್ಬರು ಮುಖ್ಯಮಂತ್ರಿ ಸ್ಥಾನಕ್ಕೆ ಆಯ್ಕೆ ಮಾಡಲು ಸದಸ್ಯರಲ್ಲಿ ಮತಾಭಿಪ್ರಾಯ ಸಂಗ್ರಹಿಸಿ ಅದರಂತೆ ಕೆ.ಹನುಮಂತಯ್ಯನವರನ್ನು ನಾಯಕರನ್ನಾಗಿ ಆಯ್ಕೆ ಮಾಡಿಕೊಳ್ಳಲಾಯಿತು. ನೆಹರೂರವರು ನಿಮ್ಮ ಮುಂದಿನ ನಾಯಕರು ಯಾರು ಎಂದು ಕೇಳಿದಾಗ, ಕೆ.ಹನುಮಂತಯ್ಯನವರೆಂದು ನಿಜಲಿಂಗಪ್ಪನವರು ಉತ್ತರಿಸಿದರು. 'ಏನು ನೀವು ಹನುಮಂತಯ್ಯನವರನ್ನು ನಿಮ್ಮ ನಾಯಕರನ್ನಾಗಿ ಆರಿಸಿಕೊಳ್ಳಲು ನಿಶ್ಚಯಿಸಿದ್ದೀರೋ? ನನಗೆ ಗೊತ್ತಿದೆ, ನಿಮ್ಮಲ್ಲಿ ಮುಖ್ಯರಾದವರು ಶ್ರೀ ಹನುಮಂತಯ್ಯನವರನ್ನು ದ್ವೇಷಿಸುತ್ತೀರೆಂದು. ಕೆಲವೇ ತಿಂಗಳ ಹಿಂದೆ ಹೆಚ್.ಕೆ.ವೀರಣ್ಣಗೌಡರು ಅವರ ಬಗ್ಗೆ ನೂರಾರು ಪ್ಯಟಗಳಷ್ಟು ಆರೋಪವನ್ನು ಹೊರಿಸಿ ಅವರನ್ನು ಮುಖ್ಯಮಂತ್ರಿ ಪದವಿಯಿಂದ ತೆಗೆಯದ ಹೊರತು ಕಾಂಗ್ರೆಸ್ಸಿಗೆ ಮೈಸೂರಲ್ಲಿ ಒಳ್ಳೆಯ ಹೆಸರು ಬರುವುದಿಲ್ಲವೆಂದು ತಿಳಿಸಿದ್ದರು. ನಿಜಲಿಂಗಪ್ಪನವರೂ ಇದಕ್ಕೆ ಬೆಂಬಲ ಕೊಟ್ಟಿದ್ದರೆಂದು ನನಗೆ ತಿಳಿದಿದೆ. ಹೀಗಿದ್ದರೂ ಹನುಮಂತಯ್ಯನವರನ್ನೇ ನಾಯಕರನ್ನಾಗಿ ಆಯ್ಕೆ ಮಾಡಿಕೊಂಡಿರುವುದು ಆಶ್ಚರ್ಯವನ್ನುಂಟು ಮಾಡಿದೆ. ಮೈಸೂರು ಕಾಂಗ್ರೆಸ್ ನಾಯಕರಿಗೆ ನಿಷ್ಠೆ ನೀತಿಗಳೇನೂ ಇಲ್ಲವೆಂದು ನನಗನ್ನಿಸುತ್ತದೆ. ಆದ್ದರಿಂದ ಜತ್ತಿಯವರೇ ಮುಂದುವರಿಯಲಿ'[೧೨೮] ಎಂದು ಬಿಟ್ಟರು.

ನಿಜಲಿಂಗಪ್ಪನವರಿಗೆ ಹೆಚ್.ಕೆ.ವೀರಣ್ಣಗೌಡರನ್ನು ಮುಖ್ಯಮಂತ್ರಿ ಮಾಡುವ ಬಯಕೆ ಇದ್ದರೂ ಸದಸ್ಯರ ಅಭಿಪ್ರಾಯಕ್ಕೆ ತಲೆಬಾಗಿ ಕೆ.ಹನುಮಂತಯ್ಯನವರ ಹೆಸರನ್ನು ನೆಹರು ಬಳಿ ಹೇಳಿದ್ದರು.

---

[೧೨೭] ಚಿತ್ರಗುಪ್ತ ಸ್ಮರಣೆ. ಪುಟ-೧೬

[೧೨೮] ಬದುಕು ಮೆಲುಕು. ಪುಟ-೨೦೩

ನಂತರ 'ಈ ಎರಡು ಗುಂಪುಗಳ ನಡುವೆ ಸಮಾಧಾನವನ್ನುಂಟು ಮಾಡಬೇಕೆಂದು ನೀಲಂ ಸಂಜೀವರೆಡ್ಡಿಯವರ ಸಲಹೆಯ ಮೇರೆಗೆ ಶ್ರೀ ನಿಜಲಿಂಗಪ್ಪನವರ ಪಾರ್ಟಿಯಿಂದ ಹೆಚ್.ಎಸ್.ರುದ್ರಪ್ಪ, ವೀರೇಂದ್ರ ಪಾಟೀಲ್ ಮತ್ತು ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ ನಾಲ್ಕು ಜನರನ್ನು ಜತ್ತಿಯವರ ಸಂಪುಟದಲ್ಲಿ ಮಂತ್ರಿಗಳನ್ನಾಗಿ ತೆಗೆದುಕೊಂಡರು.[೧೨೯]

ಹೆಚ್.ಕೆ.ವೀರಣ್ಣಗೌಡರು ತಮಗೆ ಉಪಮುಖ್ಯಮಂತ್ರಿಯ ಸ್ಥಾನವನ್ನು ನೀಡಬೇಕೆಂದು ಮತ್ತು ತಾವು ಹಿಂದೆ ನಿರ್ವಹಿಸಿದ ಖಾತೆಯನ್ನು ಪೂರ್ತಿಯಾಗಿ ನೀಡಬೇಕೆಂದು ಹಾಕಿದ ಶರತ್ತಿಗೆ ಒಪ್ಪಿ ಅದರಂತೆ ಗೌಡರಿಗೆ ಲೋಕೋಪಯೋಗಿ ಇಲಾಖೆಯನ್ನು ನೀಡಲಾಯಿತು. ಆದರೆ ಉಪಮುಖ್ಯಮಂತ್ರಿ ಸ್ಥಾನವನ್ನು ಅಧಿಕೃತವಾಗಿ ನೀಡಲಿಲ್ಲ. ಇನ್ನು ಒಂದೇ ವರ್ಷದಲ್ಲಿ ಚುನಾವಣೆ ನಡೆಯುವುದರಲ್ಲಿ ಇದ್ದುದರಿಂದ ಆ ವಿಚಾರವಾಗಿ ಗೌಡರು ಒತ್ತಾಯ ಪಡಿಸಲು ಹೋಗಲಿಲ್ಲ. ಹೀಗೆ ೨ನೇ ಬಾರಿಗೆ ವೀರಣ್ಣಗೌಡರು ಮಂತ್ರಿಗಳಾದರೂ ನಿರ್ವಹಿಸಿದ ಖಾತೆ ಮಾತ್ರ ಒಂದೇ. ಅದು ಲೋಕೋಪಯೋಗಿ ಖಾತೆ.

೧೯೬೨ರಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಹೆಚ್.ಕೆ.ವೀರಣ್ಣಗೌಡರು ಟಿಕೇಟ್ ಪಡೆಯುವ ವಿಚಾರದಲ್ಲಿ ಕೇಂದ್ರ ವರಿಷ್ಠ ಮಂಡಲಿಯ ನಾಯಕರು ಸಹಕರಿಸದೇ ಹೋದರು. ಈ ಮಧ್ಯೆ ಕೆಲವು ಭಿನ್ನಾಭಿಪ್ರಾಯಗಳಿಂದಾಗಿ ಮುಖ್ಯಮಂತ್ರಿಗಳಾಗಿದ್ದ ನಿಜಲಿಂಗಪ್ಪನವರಿಗೂ ವೀರಣ್ಣಗೌಡರಿಗೂ ಮನಸ್ತಾಪವುಂಟಾಗಿತ್ತು. ಕಾರಣ ಹೆಚ್.ಕೆ.ವೀರಣ್ಣಗೌಡರೇ ತಮ್ಮ ಆತ್ಮಕಥೆಯಲ್ಲಿ ಹೇಳಿರುವಂತೆ ಎಸ್.ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ವೀರೇಂದ್ರಪಾಟೀಲರು ಉಪಮುಖ್ಯಮಂತ್ರಿಗಳಾಗಿದ್ದರು. ಗಣಿಗಳ ಖಾತೆ ಆಗ ಅವರ ಅಧೀನದಲ್ಲಿತ್ತು. ಗಣಿ ವಿಚಾರದಲ್ಲಿ ಶ್ರೀವೀರೇಂದ್ರಪಾಟೀಲರ ವಿರುದ್ಧ ಕೆಲವು ಆಪಾದನೆಗಳನ್ನು ಕೇಳಿದ ಹೆಚ್.ಕೆ.ವೀರಣ್ಣಗೌಡರು ಎಸ್.ನಿಜಲಿಂಗಪ್ಪನವರಿಗೆ ಅವರ ವಿಷಯದಲ್ಲಿ ಸ್ವಲ್ಪ ಎಚ್ಚರವಾಗಿರಬೇಕೆಂದು ಹೇಳಿದ್ದು ನಿಜಲಿಂಗಪ್ಪನವರಿಗೆ ಅಸಮಾಧಾನವನ್ನುಂಟು ಮಾಡಿತು. ಅಲ್ಲದೆ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಬೋರ್ಡ್ ಅಧ್ಯಕ್ಷರನ್ನು ನೇಮಕ ಮಾಡುವ ಸಂದರ್ಭದಲ್ಲಿ ಎಸ್.ನಿಜಲಿಂಗಪ್ಪನವರ ಸಲಹೆಯಂತೆ ತಾಲ್ಲೂಕು ಬೋರ್ಡ್ ಅಧ್ಯಕ್ಷರುಗಳನ್ನು ಆರಿಸಲು ಬಳ್ಳಾರಿಗೆ ಹೋದರು. ಅಲ್ಲಿ ನಿಷ್ಠಾವಂತ ಕಾಂಗ್ರೆಸ್ಸಿಗರೆಂದು ಕಂಡು ಬಂದವರನ್ನು ಹೆಚ್.ಕೆ.ವೀರಣ್ಣಗೌಡರು ಅಧ್ಯಕ್ಷರನ್ನಾಗಿ ಆರಿಸಿ ಎಸ್.ನಿಜಲಿಂಗಪ್ಪನವರಿಗೆ ತಿಳಿಸಿದರು. ಅದರಲ್ಲಿ ಎಸ್.ನಿಜಲಿಂಗಪ್ಪನವರ ಮನಸ್ಸಿನಲ್ಲಿದ್ದವರ್‍ಯಾರು ಇಲ್ಲದ್ದಿದ್ದುದು ಬೇಸರವನ್ನುಂಟು ಮಾಡಿತು. ಇನ್ನೊಂದು ವಿಷಯವೆಂದರೆ ೧೯೫೬ರಲ್ಲಿ ಸರ್ಕಾರದಿಂದ ವಿಧಾನ ಪರಿಷತ್ತಿಗೆ ಮೂವರನ್ನು ನಾಮಕರಣ ಮಾಡುವಾಗ ಎಸ್.ನಿಜಲಿಂಗಪ್ಪನವರು ಶಾಸನಸಭೆಗೆ ತಾವು ಅವಿರೋಧವಾಗಿ ಆರಿಸಿ ಬರಲು ಅವಕಾಶ ಮಾಡಿಕೊಟ್ಟ ಶ್ರೀ ಮುರುನಾಳ್ ಅವರನ್ನು ಪರಿಷತ್ತಿನ ಸದಸ್ಯರನ್ನಾಗಿ ತೀರ್ಮಾನಿಸಿದರು. ಮುಖ್ಯಮಂತ್ರಿಗಳೇ ಈ ಸದಸ್ಯರನ್ನು ಆಯ್ಕೆ ಮಾಡಲು ಮೈಸೂರು ಪ್ರದೇಶ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯವರು ಒಪ್ಪಿದ್ದರು. ಹಾಗಾಗಿ ಮುರುನಾಳ್ ಯಾವ ತಜ್ಞರೂ ಅಲ್ಲದಿದ್ದರೂ ವಿಧಾನ ಪರಿಷತ್ ಸದಸ್ಯರಾಗಿದ್ದುದ್ದನ್ನು ವೀರಣ್ಣಗೌಡರು ಪ್ರತ್ಯಕ್ಷವಾಗಿಯೇ ಖಂಡಿಸಿದ್ದರು.

[೧೨೯] ಜೆ.ಎಮ್.ಇಮಾಂ. ಮೈಸೂರು ಆಗ ಮತ್ತು ಈಗ. ಪುಟ-೧೪೮

ಈ ರೀತಿಯ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳ ಕಾರಣದಿಂದ ಎಸ್.ನಿಜಲಿಂಗಪ್ಪ ಮತ್ತು ಹೆಚ್.ಕೆ.ವೀರಣ್ಣಗೌಡರ ನಡುವೆ ಮನಸ್ತಾಪವುಂಟಾಗಿತ್ತು.

ಹಾಗಾಗಿ ಹೆಚ್.ಕೆ.ವೀರಣ್ಣಗೌಡರಿಗೆ ಕಾಂಗ್ರೆಸ್ ಟಿಕೇಟು ನೀಡುವ ವಿಚಾರದಲ್ಲಿ ಮುಖ್ಯಮಂತ್ರಿಗಳಿಗೆ ಅರ್ಜಿ ಬರೆದುಕೊಳ್ಳಬೇಕೆಂಬ ಕೇಂದ್ರ ನಾಯಕರ ಸಲಹೆಯನ್ನು ನಿರಾಕರಿಸಿ ಗೌಡರು ಟಿಕೇಟ್‌ಗಾಗಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪನವರಿಗೆ ಬರೆದುಕೊಳ್ಳಲಿಲ್ಲ. ಆದರೆ ತಮ್ಮ ಸ್ವಾಭಿಮಾನ ಬಿಟ್ಟುಕೊಡದ ವೀರಣ್ಣಗೌಡರು ಸ್ವತಂತ್ರ ಅಭ್ಯರ್ಥಿಯಾಗಿ ಕಿರುಗಾವಲು ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಿದರು. ಹೆಚ್.ಕೆ.ವೀರಣ್ಣಗೌಡರಿಗೆ ವಿರುದ್ಧವಾಗಿ ಶ್ರೀಎಸ್.ಎಂ.ಕೃಷ್ಣ ಅವರಿಗೆ ಕಾಂಗ್ರೆಸ್ಸಿನಿಂದ ಟಿಕೇಟ್ ನೀಡಿದ್ದರು. ಚುನಾವಣೆಯ ಬಿರುಸು ಹೆಚ್ಚಾಗುತ್ತಲೇ ಹೋಯಿತು. ತಮ್ಮದಲ್ಲದ ಕ್ಷೇತ್ರದಿಂದ ಸ್ಪರ್ಧಿಸಿದ ವೀರಣ್ಣಗೌಡರು ಈ ಚುನಾವಣೆಯಲ್ಲಿ ಸೋಲಬೇಕಾಯಿತು.

ನಂತರ ೧೯೬೪ರಲ್ಲಿ ಕೇಂದ್ರದಲ್ಲಿ ರೈಲ್ವೆ ಸಚಿವರಾಗಿದ್ದ ಹೆಚ್.ಸಿ.ದಾಸಪ್ಪನವರ ನಿಧನದಿಂದ ತೆರವಾಗಿದ್ದ ಸ್ಥಾನಕ್ಕೆ ಮರುಚುನಾವಣೆಗೆ ನಿಂತ ವೀರಣ್ಣಗೌಡರು ಗೆದ್ದು ಲೋಕಸಭೆಗೆ ಸದಸ್ಯರಾಗಿ ಚುನಾಯಿತರಾದರು. ವೀರಣ್ಣಗೌಡರಿಗೆ ಲೋಕಸಭೆಯ ಸದಸ್ಯರಾಗಿದ್ದು ಅಷ್ಟೇನು ಸಂತಸವಾಗಿರಲಿಲ್ಲ. ಕಾರಣ ಸಂಸತ್ತಿನಲ್ಲಿ ತಮ್ಮ ರಾಜ್ಯಕ್ಕೆ ಸಂಬಂಧಿಸಿದಂತೆ ಮಾತನಾಡಲು ಏಳುತ್ತಿದ್ದಂತೆ 'ಬೈಟೊ ಬೈಟೊ' ಎಂದು ಕಿರುಚಾಡುತ್ತಾರೆ, ಎದ್ದು ನಿಲ್ಲುವಂತಿಲ್ಲ, ಬಾಯಿ ಬಿಡುವಂತಿಲ್ಲ. ಈ ಎಂ.ಪಿ. ಯಾಕಾದೆನೋ ಅನ್ನಿಸಿ ಬಿಟ್ಟಿದೆ. ರಾಜ್ಯದಲ್ಲಿ ಹುಲಿಯಂತಿದ್ದ ನಾನು, ಅಲ್ಲಿ ಇಲಿಯಂತಿರಬೇಕಾಗಿದೆ. ಇದರಿಂದ ನನಗೆ ರೋಸಿ ಹೋಗಿದೆ' ಎಂದು ತಮ್ಮ ಆತ್ಮೀಯರಲ್ಲಿ ಗೌಡರು ಹೇಳಿಕೊಳ್ಳುತ್ತಿದ್ದರೆಂದು ಮದ್ದೂರಿನ ಡಾಕ್ಟರ್ ರಾಮಲಿಂಗಯ್ಯನವರು ಸ್ಮರಿಸುತ್ತಾರೆ. ತಮಗೆ ಹಿಂದಿ ಭಾಷೆಯನ್ನು ಮಾತನಾಡಲು ಬರುತ್ತಿರಲಿಲ್ಲ ಎಂಬ ಕೊರತೆ ಸಹ ಗೌಡರ ಬೇಸರಕ್ಕೆ ಕಾರಣವೆನ್ನಬಹುದು.

**೫.೫ ಸಮುದಾಯ ಸಂಘಟನೆ**

ಒಬ್ಬ ವ್ಯಕ್ತಿ ಪ್ರಜ್ಞಾ ಪೂರ್ವಕವಾಗಿ ತನ್ನ ಕಾರ್ಯವನ್ನು ಬದ್ಧತೆಯಿಂದ, ನಿಷ್ಠೆಯಿಂದ, ಪ್ರಾಮಾಣಿಕವಾಗಿ ಮಾಡಿದರೆ ಸಾಕು ಅದೇ ಆತ ಸಮಾಜಕ್ಕೆ, ತನ್ನ ಸಮುದಾಯಕ್ಕೆ ನೀಡಬಹುದಾದ ಕೊಡುಗೆ. ಈ ಹಿನ್ನೆಲೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ತಾವು ಹುಟ್ಟಿ ಬೆಳೆದ ಸಮುದಾಯ ಮತ್ತು ಸಮಾಜದ ಏಳಿಗೆಗೆ ಪೂರಕವಾದ ಕೆಲಸಕಾರ್ಯಗಳನ್ನು ನಿರ್ವಂಚನೆಯಿಂದ ನಿರ್ವಹಿಸಿದ್ದಾರೆ.

ಸಮಾಜದ ಬೆಳವಣಿಗೆಗೆ ಪೂರಕವೆಂಬಂತೆ ವೀರಣ್ಣಗೌಡರು ತಮ್ಮ ಕರ್ಮಭೂಮಿ ಮದ್ದೂರಿನಲ್ಲಿ ಮತ್ತು ಜನ್ಮಸ್ಥಳ ಚನ್ನಪಟ್ಟಣದ ಅಕ್ಕೂರು–ಹೊಸಹಳ್ಳಿಯಲ್ಲಿ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ತಮ್ಮ ಮಾವನವರಾದ ದಿ.ಎಂ.ಎಚ್.ಚನ್ನೇಗೌಡರ ನೆನಪಿನಲ್ಲಿ ಎಂ.ಎಚ್.ಚನ್ನೇಗೌಡ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ತಾಯಮ್ಮ ವೀರಣ್ಣಗೌಡ ಶಿಶು ವಿಹಾರ (೧೯೬೧), ಹಿರಿಯ ಪ್ರಾಥಮಿಕ ಶಾಲೆ, ಮಹಿಳಾ ಶಾಲೆ(೧೯೬೯), ಹೆಣ್ಣು ಮಕ್ಕಳಿಗಾಗಿ ಕಮಲಾನೆಹರೂ ಪ್ರೌಢಶಾಲೆ (೧೯೬೬), ಗಂಡು ಮಕ್ಕಳಿಗಾಗಿ ಜವಹರ್ ಪ್ರೌಢಶಾಲೆ (೧೯೬೫), ಅರ್ಜುನಪುರಿ ಜೂನಿಯರ್ ಕಾಲೇಜು(೧೯೭೧), ವೀರಣ್ಣಗೌಡ ಪ್ರಥಮ ದರ್ಜೆ ಕಾಲೇಜು (೧೯೭೮) ಮೊದಲಾದವುಗಳನ್ನು ಇಲ್ಲಿ

ಹೆಸರಿಸಬಹುದು. ಹಾಗೇ ಹೊಸಹಳ್ಳಿ ಪ್ರಾಥಮಿಕ ಪಾಠಶಾಲೆ, ಅಕ್ಕೂರು ಹೊಸಹಳ್ಳಿ ಹೈಸ್ಕೂಲು, ಅಪ್ಪೇರಹಳ್ಳಿ ಪ್ರೈಮರಿ ಶಾಲೆ ಮತ್ತು ಅಕ್ಕೂರು ಹೊಸಹಳ್ಳಿಯ ಪ್ರಾಥಮಿಕ ಚಿಕಿತ್ಸಾ ಕೇಂದ್ರ ಇವು ವೀರಣ್ಣಗೌಡರ ಜನೋಪಕಾರದ ಸಮಾಜದ ಬೆಳವಣಿಗೆಗೆ ಪ್ರತೀಕವಾಗಿವೆ. ದೇಶದ ಸಮಸ್ತ ಜನರಿಗೆ ಶಿಕ್ಷಣ ದೊರಕದಿದ್ದರೆ ದೇಶದ ಸರ್ವತೋಮುಖ ಏಳಿಗೆಯಾಗುವುದಿಲ್ಲವೆಂದು ಸ್ಪಷ್ಟವಾಗಿ ತಿಳಿದುಕೊಂಡಿದ್ದ ವೀರಣ್ಣಗೌಡರು ತಮ್ಮ ಉದಾರತೆಯಿಂದ ಶಿಕ್ಷಣ ಸಂಸ್ಥೆಗಳ ನಿರ್ಮಾಣಕ್ಕೆ ಮುಂದಾದರು.

ಬೆಂಗಳೂರು ಒಕ್ಕಲಿಗರ ಸಂಘ ರಾಜ್ಯದ ಸಮುದಾಯದ ಹಿರಿಯ ಸಂಸ್ಥೆಗಳಲ್ಲಿ ಒಂದು. ಪರಸ್ಥಳದ ವಿದ್ಯಾಕಾಂಕ್ಷಿಗಳಿಗಾಗಿ ವಿದ್ಯಾರ್ಥಿ ನಿಲಯ ನಡೆಸುವುದು, ಒಕ್ಕಲಿಗರ ಪತ್ರಿಕೆ ಪ್ರಕಟಿಸುವುದು ಸಂಸ್ಥೆಯ ಪ್ರಮುಖ ಚಟುವಟಿಕೆಗಳು. ಒಕ್ಕಲಿಗರ ಸಂಘ ಪ್ರಾರಂಭದಲ್ಲಿ ಮಹದಾಶೆಗಳಿಂದ ಪ್ರಾರಂಭವಾದರೂ ಕ್ರಮೇಣ ನಿಷ್ಕ್ರಿಯವಾಯಿತು. ಕಾರಣಾಂತರಗಳಿಂದ ಒಕ್ಕಲಿಗರ ಪತ್ರಿಕೆಯ ಪ್ರಕಟಣೆಯೂ ನಿಂತಿತು. ಹೇಳಿಕೊಳ್ಳುವಂತಹ ಅಭಿವೃದ್ಧಿ ಕಾರ್ಯಗಳಿರಲಿಲ್ಲ. ಅಂತಹ ಸಂದರ್ಭದಲ್ಲಿ ೧೯೬೪ ರಿಂದ ೧೯೭೨ ರವರೆಗೆ ವೀರಣ್ಣಗೌಡರು ಒಕ್ಕಲಿಗರ ಸಂಘದ ಅಧ್ಯಕ್ಷರಾದರು. ಆರ್ಥಿಕ ಮುಗ್ಗಟ್ಟಿನ ಕಾರಣದಿಂದ ಅವರ ಅವಧಿಯಲ್ಲೂ ಸಂಘವನ್ನು ಚುರುಕುಗೊಳಿಸಲು ಆಗಲಿಲ್ಲ. ಅಭಿವೃದ್ಧಿ ಕೆಲಸಗಳಿಗೆ ಅಡ್ಡಿಯೇ ಅಧಿಕವಾಗಿರುತ್ತಿದ್ದವು.

ಬೆಂಗಳೂರು ವಿಶ್ವವಿದ್ಯಾಲಯ ಪ್ರಾರಂಭವಾದಾಗ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಒಕ್ಕಲಿಗರ ಸಂಘ ಉದ್ದೇಶಿಸಿತು. ಅದರ ಫಲವಾಗಿ ೧೯೬೬ರಲ್ಲಿ ವಿಶ್ವೇಶ್ವರಪುರ ಕಲೆ, ವಿಜ್ಞಾನ ಕಾಲೇಜು ಮತ್ತು ವಿಶ್ವೇಶ್ವರಪುರ ಸಂಜೆ ಕಾಲೇಜು ಪ್ರಾರಂಭವಾದವು. ಶಿಕ್ಷಣ ಪಕ್ಷಪಾತಿಯಾದ ಹೆಚ್.ಕೆ.ವೀರಣ್ಣಗೌಡರ ಅಧಿಕಾರಾವಧಿಯಲ್ಲಿ ಪ್ರಾರಂಭವಾದ ಈ ಶಿಕ್ಷಣ ಸಂಸ್ಥೆಗಳಿಂದ ಒಕ್ಕಲಿಗರ ಸಂಘದ ಇತಿಹಾಸವೇ ಬದಲಾಯಿತು. ಸಂಘದ ಆಶ್ರಯದಲ್ಲಿ ಈಗ ಹಲವು ಕಾಲೇಜುಗಳು ಪ್ರಾರಂಭವಾಗಿವೆ. ಇದಕ್ಕೆ ಕಾರಣರಾದ ಹೆಚ್.ಕೆ.ವೀರಣ್ಣಗೌಡರನ್ನು, ಅವರ ಜೊತೆಯಲ್ಲಿ ಬೆಂಬಲವಾಗಿ ನಿಂತ ಉಪಾಧ್ಯಕ್ಷರಾಗಿದ್ದ ಎಲ್.ಬಿ.ಶಿವಲಿಂಗಯ್ಯನವರನ್ನು, ಪ್ರಧಾನ ಕಾರ್ಯದರ್ಶಿಗಳಾಗಿದ್ದ ಎಂ.ಎಲ್.ಮಲ್ಲಿಕಾರ್ಜುನ ಮತ್ತಿತರ ಪದಾಧಿಕಾರಿಗಳನ್ನು ಜನಾಂಗ ಮರೆಯುವಂತಿಲ್ಲ.

ಹೆಚ್.ಕೆ.ವೀರಣ್ಣಗೌಡರು ೧೯೬೧ರಲ್ಲಿ ಬಿ.ಡಿ.ಜತ್ತಿಯವರ ಮಂತ್ರಿಮಂಡಲದಲ್ಲಿದ್ದ ಸಂದರ್ಭದಲ್ಲಿ ಒಕ್ಕಲಿಗರ ಸಂಘದ ಮಹಾಧಿವೇಶನವನ್ನೂ ದಕ್ಷಿಣ ಭಾರತದ ಒಕ್ಕಲಿಗರ ಮಹಾಸಮ್ಮೇಳನವನ್ನು ನಡೆಸಬೇಕೆಂದು ಒಕ್ಕಲಿಗ ಸಂಘದವರು ತೀರ್ಮಾನಿಸಿದ್ದರು. ಈ ಮಹಾಕಾರ್ಯದ ಜವಾಬ್ದಾರಿಯನ್ನು ನಿಭಾಯಿಸಬಲ್ಲ ಅನುಭವವುಳ್ಳವರಿಗೆ ವಹಿಸಿಕೊಡಬೇಕೆಂದು ಒಕ್ಕಲಿಗರ ಸಂಘದವರು ನಿರ್ಧರಿಸಿದರು. ಆದಕಾರಣ ವಿದ್ಯಾರ್ಥಿ ದೆಸೆಯಿಂದಲೂ ಒಕ್ಕಲಿಗ ಸಮುದಾಯದ ಏಳಿಗೆಗಾಗಿ ಶ್ರಮಿಸುತ್ತಿದ್ದ ವೀರಣ್ಣಗೌಡರನ್ನು ಈ ಜವಾಬ್ದಾರಿ ವಹಿಸಿಕೊಳ್ಳುವಂತೆ ಸಂಘದ ಅಧ್ಯಕ್ಷರಾಗಿದ್ದ ಎಮ್.ಸಿ.ಲಿಂಗೇಗೌಡರು ಮತ್ತು ಇತರ ಸ್ನೇಹಿತರು ಕೇಳಿಕೊಂಡರು. ವೀರಣ್ಣಗೌಡರು ಒಪ್ಪಿದರಾದರೂ ಸಂಪೂರ್ಣ ಜವಾಬ್ದಾರಿ ಹೊರಲು ಮುಂದಾಗದೆ ಈ ಕಾರ್ಯಕ್ರಮದ ಕಲಾಪಗಳು

ಯಶಸ್ವಿಯಾಗಿ ನಡೆಯುವುದಕ್ಕೆ ಅಗತ್ಯವಾದ ವ್ಯವಸ್ಥೆಗಳನ್ನು ಮಾಡಿದರು. ಅಂದರೆ ಶ್ರೀ ವೆಂಕಟಪ್ಪನವರನ್ನು ಹಣಕಾಸು ಸಮಿತಿಯ ಅಧ್ಯಕ್ಷರಾಗಿ, ಶ್ರೀ ಬಿ.ಟಿ.ಕೆಂಪಣ್ಣನವರು ಖಜಾಂಚಿಯಾಗಿ, ಶ್ರೀ ಡಿ.ಆರ್.ರಾಮಯ್ಯನವರು ಕೈಪಿಡಿಯ ಸಂಪಾದಕತ್ವವನ್ನು ವಹಿಸಿಕೊಳ್ಳುವಂತೆ, ಟಿ.ಮಾದೇಗೌಡರು ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವಂತೆ ಮಾಡಿದರು. ಮಹಾಸಭೆಯ ಅಧ್ಯಕ್ಷತೆಯನ್ನು ಶ್ರೀ ಸೀತಾರಾಮಯ್ಯನವರು, ಮಹಿಳಾ ವಿಭಾಗದ ಅಧ್ಯಕ್ಷತೆಯನ್ನು ಶ್ರೀಮತಿ ಲೀಲಾವತಿ ರೈ ಅವರು ವಹಿಸಿದರು. ವಸ್ತು ಪ್ರದರ್ಶನಗಳನ್ನು ಈ ಸಂದರ್ಭದಲ್ಲಿ ಏರ್ಪಡಿಸಲಾಗಿತ್ತು. ವೀರಣ್ಣಗೌಡರು ಇತರ ಕುಲಮುಖಂಡರ ಸಮೇತ ಹೋಗಿ ಮಾಡಿಕೊಂಡ ಮನವಿಗೆ ಶ್ರೀಮನ್ಮಾಹಾರಾಜರವರು, ಶ್ರೀಮನ್ಮಾರಾಣಿಯವರು, ರಾಜಕುಮಾರಿ ಗಾಯತ್ರಿದೇವಿಯವರು ಮಹಾಸಭೆಗಳಲ್ಲಿ ಭಾಗವಹಿಸಿದರು. ಜೊತೆಗೆ ಮಹಾರಾಜರು ಮಹಾಸಭೆಯ ಉದ್ಘಾಟನೆ ಮಾಡಿದರು. ಮಹಾರಾಣಿಯವರು ವಿದ್ಯಾರ್ಥಿನಿ ನಿಲಯದ ಕಟ್ಟಡಕ್ಕೆ ಅಸ್ತಿಭಾರ ಶಿಲೆಯನ್ನು ಹಾಕಿದರು. ಈ ರೀತಿ ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಿತು. ನಂತರ ೧೯೬೨ರ ಚುನಾವಣೆಯಲ್ಲಿ ವೀರಣ್ಣಗೌಡರನ್ನು ಒಕ್ಕಲಿಗ ಸಂಘದ ಕೆಲ ಮಿತ್ರರು ಬಂದು ಒಕ್ಕಲಿಗ ಸಂಘದ ಅಧ್ಯಕ್ಷರಾಗುವಂತೆ ಒತ್ತಾಯಿಸಿದರು. ಆಗ ತಾನೆ ಶಾಸನಸಭೆಗೆ ನಡೆದ ಚುನಾವಣೆಯಲ್ಲಿ ವೀರಣ್ಣಗೌಡರು ಸೋತಿದ್ದರು. ಸೋಲಿನ ಬೇಸರದ ಮನಃಸ್ಥಿತಿಯಲ್ಲಿದ್ದ ವೀರಣ್ಣಗೌಡರ ಮುಂದೆ ಒಕ್ಕಲಿಗ ಸಂಘದವರು ಇಟ್ಟ ಪ್ರಸ್ತಾಪವನ್ನು ಗೌಡರು ಒಪ್ಪದೆ ಹೋದರು. ನಂತರ ಸ್ನೇಹಿತರ ಒತ್ತಾಯಕ್ಕೆ ಮಣಿದು ಹಾಗೂ ಸಂಘದ ಅಭಿವೃದ್ಧಿ ವಿಚಾರದಲ್ಲಿ ಚಿಕ್ಕಂದಿನಿಂದಲೂ ಅಭಿಮಾನವಿದ್ದುದರಿಂದ ಕೊನೆಗೆ ಅಧ್ಯಕ್ಷರಾಗಲು ಒಪ್ಪಿದರು.

ಒಕ್ಕಲಿಗರ ಸಂಘದಲ್ಲಿ ಗುಂಪುಗುಳಿತನ ಹೆಚ್ಚಾಗಿ ಸಮಯಸಾಧಕ ವ್ಯಕ್ತಿಗಳು ಕಾರ್ಯನಿರ್ವಾಹಕ ಸಮಿತಿಗೆ ಚುನಾಯಿತರಾಗುವ ಮೂಲಕ ಸಂಘದೊಳಗೆ ನುಸುಳಿದ್ದರು. ಇವರು ಸಂಘವನ್ನು ಹಿಡಿತದಲ್ಲಿಟ್ಟುಕೊಳ್ಳುವ ಹವಣಿಕೆಯಲ್ಲಿದ್ದರು. ಈ ಸಂದರ್ಭದಲ್ಲಿ ವೀರಣ್ಣಗೌಡರಂತಹ ನಿಸ್ವಾರ್ಥಸೇವೆಯಿಂದ ಸಮುದಾಯಕ್ಕಾಗಿ ದುಡಿಯುವವರನ್ನು ಅಧ್ಯಕ್ಷರನ್ನಾಗಿ ಮಾಡಿದರೆ ಸಂಘದ ಅಭಿವೃದ್ಧಿಯ ದೃಷ್ಟಿಯಿಂದ ಸಹಾಯಕವಾಗುತ್ತದೆ ಎಂಬ ಭಾವನೆ ಒಕ್ಕಲಿಗ ಮುಖಂಡರದಾಗಿತ್ತು. ಹೀಗಾಗಿ ಎಲ್ಲರೂ ಸರ್ವಾನುಮತದಿಂದ ಗೌಡರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಒಕ್ಕಲಿಗರ ಸಂಘ ಆರ್ಥಿಕ ಸಂಕಷ್ಟವನ್ನು ಎದುರಿಸುತ್ತಿದ್ದ ಸಂದರ್ಭದಲ್ಲಿ ವೀರಣ್ಣಗೌಡರು ಅಧ್ಯಕ್ಷತೆಯನ್ನು ವಹಿಸಿಕೊಂಡಾಗ ನಿಷ್ಠಾವಂತ ನಿಸ್ಪೃಹ ವ್ಯಕ್ತಿ ಶ್ರೀ ಎಮ್.ಚಿನ್ನಸ್ವಾಮಿಯವರು ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದಕ್ಕೆ ಒಪ್ಪಿಕೊಳ್ಳುವಂತೆ ಒತ್ತಡ ತಂದರು. ಕಾರಣ ಚಿನ್ನಸ್ವಾಮಿಯವರು ವೀರಣ್ಣಗೌಡರಿಗೆ ಅನೇಕ ವರ್ಷಗಳಿಂದ ಪರಿಚಯವಿದ್ದು, ಬಹಳ ವರ್ಷಗಳ ಹಿಂದೆ ತುಮಕೂರಿನ ಸಹಕಾರ ಸಂಘದಲ್ಲಿ ಬಹಳಷ್ಟು ಹಣ ಅಪವ್ಯಯವಾಗಿದೆ ಎಂದು ತಿಳಿದುಬಂದಾಗ ಸಹಕಾರ ಸಂಘದವರು ಅಲ್ಲಿನ ಅಧಿಕಾರ ವರ್ಗದವರನ್ನು ತೆಗೆದುಹಾಕಿ ಚಿನ್ನಸ್ವಾಮಿಯವರನ್ನು ಹಣ ದುರುಪಯೋಗವಾಗಿರುವ ಬಗ್ಗೆ ತನಿಖೆ ಕೈಗೊಳ್ಳುವಂತೆ ನೇಮಿಸಿದ್ದರು. ಅವರು ತಮಗೆ ವಹಿಸಿದ ಕಾರ್ಯವನ್ನು ಅತ್ಯಂತ ಸಮರ್ಥವಾಗಿಯೂ, ನಿರ್ದಾಕ್ಷಿಣ್ಯ, ನಿಷ್ಪಕ್ಷಪಾತವಾಗಿ ನಡೆಸಿ ಹೆಸರು ಪಡೆದಿದ್ದರು. ನಂತರ

ವಿ.ವೆಂಕಟಪ್ಪನವರು ವಿದ್ಯಾಮಂತ್ರಿಯಾಗಿದ್ದಾಗ ಅವರ ಆಪ್ತ ಕಾರ್ಯದರ್ಶಿಯಾಗಿ ನೇಮಕವಾಗಿದ್ದರು. ದಕ್ಷರೂ, ಪ್ರಾಮಾಣಿಕರೂ ಆಗಿದ್ದ ಚಿನ್ನಸ್ವಾಮಿಯವರು ಸಂಘದ ಪ್ರಧಾನ ಕಾರ್ಯದರ್ಶಿಯಾದರೆ ಸಂಘದ ಆಡಳಿತ ಸುಸೂತ್ರವಾಗಿ ನಡೆಯುವುದೆಂಬ ನಂಬಿಕೆಯಿಂದ ವೀರಣ್ಣಗೌಡರು ಚಿನ್ನಸ್ವಾಮಿಯವರನ್ನು ಒಪ್ಪಿಸುವಲ್ಲಿ ಯಶಸ್ವಿಯಾದರು. ನಿವೃತ್ತಿ ಹೊಂದಿದ್ದ ಚಿನ್ನಸ್ವಾಮಿಯವರು ತಮ್ಮ ವಯೋಮಾನದ ಕಾರಣದಿಂದಾಗಿ ಸಂಘದ ಲೆಕ್ಕಪತ್ರಗಳನ್ನು ಪರಿಶೀಲಿಸಿ ಎಲ್ಲಾ ಕೆಲಸಗಳನ್ನು ಒಂದು ಸುಭದ್ರವಾದ ತಳಹದಿಯ ಮೇಲೆ ನಿಲ್ಲಿಸುವ ಕಾರ್ಯವನ್ನು ನಿರ್ವಹಿಸುವುದಾಗಿ ಆರು ತಿಂಗಳವರೆಗೆ ಮಾತ್ರ ಕಾರ್ಯದರ್ಶಿಗಳಾಗಿ ಇರುವುದಾಗಿ ಹೇಳಿದರು.

ಗುಂಪುಗುಳಿತನದಿಂದ ಸಂಘದ ಕೆಲಸ ಕಾರ್ಯಗಳಿಗೆ ಅಡ್ಡಿಯನ್ನುಂಟು ಮಾಡಬೇಕೆಂದೇ ಕೆಲ ವ್ಯಕ್ತಿಗಳು ಇರುವುದನ್ನು ಮನಗಂಡ ವೀರಣ್ಣಗೌಡರು ಅಂತಹವರ ವಿರುದ್ಧ ವೈಮನಸ್ಯವನ್ನು ಕಟ್ಟಿಕೊಳ್ಳುವ ಬದಲು ಎಲ್ಲರೊಂದಿಗೆ ಒಗ್ಗಟ್ಟಿನಿಂದ ಕೆಲಸ ಮಾಡುವ ಪ್ರಯತ್ನವನ್ನು ನಡೆಸಿದರು. ಆದರೆ ವೀರಣ್ಣಗೌಡರ ಪ್ರಯತ್ನ ಸಫಲವಾಗಲಿಲ್ಲ. ಬದಲಾಗಿ ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು ಎಂಬ ಗಾದೆಯಂತೆ ವೀರಣ್ಣಗೌಡರ ವಿರುದ್ಧ ಕತ್ತಿ ಮಸೆಯುತ್ತಿದ್ದವರೆಲ್ಲ ಗೌಡರು ಸಂಘದ ಹಿತದೃಷ್ಟಿಯಿಂದ ಅಗತ್ಯವೆಂದು ಮನಗಂಡ ಕೆಲಸ ಕಾರ್ಯಗಳಿಗೆಲ್ಲಾ ಅಡ್ಡಗಾಲು ಹಾಕುತ್ತಾ ತೊಂದರೆ ನೀಡುವ ಕಾರ್ಯದಲ್ಲಿ ಮಗ್ನರಾಗಿದ್ದರು. ಸಂಘದಲ್ಲಿ ಹಣ ಲಪಟಾಯಿಸುವ ಮೋಸಗಾರರು, ವಂಚಕರು ಇದ್ದರು. ಅಂತಹವರ ಮೋಸ, ಕಳ್ಳತನವನ್ನು ವೀರಣ್ಣಗೌಡರು ತನಿಖೆ ಮಾಡಿ ಪತ್ತೆ ಹಚ್ಚಿದ ಕಾರಣ ಅಂತವರೆಲ್ಲರೂ ಸ್ವಾಭಾವಿಕವಾಗಿ ಗೌಡರ ವಿರೋಧಿಗಳಾಗಿ ವರ್ತಿಸುತ್ತಿದ್ದರು. ಹೆಸರಿಗೆ ೭೦ ಮಂದಿ ಸದಸ್ಯರು ಕಾರ್ಯಕಾರಿ ಸಮಿತಿಯಲ್ಲಿದ್ದರೂ ಯಾವ ಮೀಟಿಂಗಿಗೂ ೧೬,೧೮ ಜನ ಸದಸ್ಯರಿಗಿಂತ ಹೆಚ್ಚು ಜನ ಹಾಜರಾಗುತ್ತಿರಲಿಲ್ಲ. ಹೀಗಿದ್ದರೂ ಹೆಚ್.ಕೆ.ವೀರಣ್ಣಗೌಡರನ್ನು ಪದವಿಯಿಂದ ತೆಗೆಯುವಾಗ ಮಾತ್ರ ತಮ್ಮ ಅನ್ಯಾಯದ ಕೆಲಸಕಾರ್ಯಗಳಿಗೆ ತೊಡಕುಂಟುಮಾಡುತ್ತಿದ್ದವನನ್ನು ಅಧ್ಯಕ್ಷ ಪದವಿಯಿಂದ ಕೆಳಗಿಳಿಸಬೇಕೆಂದು ಎಲ್ಲಾ ವಿರೋಧಿಗಳು ಒಟ್ಟುಗೂಡಿ ಬಂದಿದ್ದರು ಎಂಬುದಾಗಿ ಹೇಳಿರುವ ವೀರಣ್ಣಗೌಡರ ಮಾತಿನಲ್ಲಿ ಒಬ್ಬ ಪ್ರಾಮಾಣಿಕ, ನಿಷ್ಪಕ್ಷಪಾತ ವ್ಯಕ್ತಿಯನ್ನು ವಂಚಕರು ತಮ್ಮ ಮಧ್ಯೆ ಇರುವುದಕ್ಕೆ ಬಿಡುವುದಿಲ್ಲ ಎಂಬುದನ್ನು ಸೂಚಿಸುತ್ತದೆ.

ಶ್ರೀ ಚಿನ್ನಸ್ವಾಮಿಯವರು ಕಾರ್ಯದರ್ಶಿಗಳಾಗಿದ್ದಾಗ ಅವರ ಸತತ ಪ್ರಯತ್ನದಿಂದ ಮಾಗಡಿ ರಸ್ತೆಯಲ್ಲಿ ಹತ್ತು ಎಕರೆ ಜಮೀನನ್ನು ನಾಮಮಾತ್ರದ ಗುತ್ತಿಗೆಗೆ ಸರ್ಕಾರದವರು ಸಂಘಕ್ಕೆ ಕೊಟ್ಟಿದ್ದರು. ಅಲ್ಲದೆ ಪಕ್ಕದಲ್ಲೆ ಬೇರೊಂದು ವಿದ್ಯಾಸಂಸ್ಥೆಗೆ ಸೇರಿದ್ದ ಇಪ್ಪತ್ತು ಎಕರೆ ಜಮೀನನ್ನು ಸಂಘಕ್ಕೆ ವಹಿಸಿಕೊಡುವುದಾಗಿ ಆ ಸಂಸ್ಥೆಯ ಸ್ಥಾಪಕರು ಒಪ್ಪಿಕೊಂಡಿದ್ದರು. ಈ ಜಮೀನುಗಳಿಗೆ ಸಂಘದಿಂದ ಕೇವಲ ಐದು ಸಾವಿರ ರೂಪಾಯಿಗಳನ್ನು ಕಟ್ಟಿ ಗೌಡರು ತಮ್ಮ ಕಾಲಾವಧಿಯಲ್ಲಿ ಸಂಘದ ಸ್ವಾಧೀನಕ್ಕೆ ತೆಗೆದುಕೊಂಡರು. ಈ ವಿಚಾರವನ್ನು ಅರಿತ ಕೆಲವು ಸಮಯಸಾಧಕರು ಸರ್ಕಾರಕ್ಕೆ ನೀಡಿರುವ ಹಣದಷ್ಟೆ ಹಣವನ್ನು ಕೊಡುವುದಾಗಿ ಮತ್ತು ಆ ಜಾಗವನ್ನು ಬಡ ಒಕ್ಕಲಿಗರು ಮನೆ ಕಟ್ಟಿಕೊಳ್ಳಲು ಹಂಚಿಕೆ ಮಾಡುವುದಾಗಿ ಹೇಳಿ ಸುಲಭವಾಗಿ ಆ ಜಮೀನನ್ನು ಕಬಳಿಸಲು ಹವಣಿಸಿದರು. ಆದರೆ ಇಂತಹ

ನಯವಂಚಕರ ದ್ರೋಹ ತಿಳಿದ ವೀರಣ್ಣಗೌಡರು ಸಂಘಕ್ಕೆ ಸಂಬಂಧಿಸಿದ ಆಸ್ತಿಯನ್ನು ಅವರು ಹೇಳುವ ರೀತಿಯಲ್ಲಿ ಪರಾಧೀನ ಮಾಡಲು ತಮಗೆ ಅಧಿಕಾರವಿಲ್ಲವೆಂದು ಸ್ಪಷ್ಟಪಡಿಸಿದರು. ಆ ಜಮೀನಿನಲ್ಲಿ ಇಂದು ಪ್ರಾಥಮಿಕ ಶಾಲೆಯಿಂದ ಪದವಿ ಕಾಲೇಜಿನವರೆಗೂವಿದ್ಯಾಸಂಸ್ಥೆಗಳನ್ನು ಪ್ರಾರಂಭಿಸಲಾಗಿದೆ. ಸುಮಾರು ೩೬ ವರ್ಷಗಳಿಂದಲೂ ಅನೇಕ ಬಡ ವಿದ್ಯಾರ್ಥಿಗಳಿಗೆ ಸಹಾಯಕವಾಗುವ ನಿಟ್ಟಿನಲ್ಲಿ ನಡೆಸಿಕೊಂಡು ಬರಲಾಗುತ್ತಿದೆ. ಅಲ್ಲದೆ ಇತ್ತೀಚೆಗೆ ಕಾನೂನು ಪದವಿ ಕಾಲೇಜನ್ನು ಮತ್ತು ಐ.ಟಿ.ಐ ತರಬೇತಿ ಕೇಂದ್ರವನ್ನು ತೆರೆಯಲಾಗಿದೆ. ಹಾಗೆಯೇ ಎಲ್ಲಾ ವರ್ಗದ ಬಡ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಲಾಗಿದೆ. ಒಕ್ಕಲಿಗರ ಸಂಘದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ವಿದ್ಯಾಸಂಸ್ಥೆಗಳು ಇಂದು ಬಡ ವಿದ್ಯಾರ್ಥಿಗಳಿಗೆ ಕಡಿಮೆ ದರದಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡುತ್ತಿರುವುದಕ್ಕೆ ದೂರದೃಷ್ಟಿಯುಳ್ಳ ಹೆಚ್.ಕೆ.ವೀರಣ್ಣಗೌಡರ ಅಂದಿನ ಪರಿಶ್ರಮದ ಫಲವೆಂದೇ ಹೇಳಬಹುದು.

ಹೆಚ್.ಕೆ,ವೀರಣ್ಣಗೌಡರಿಗೆ ತಮ್ಮ ಅಧ್ಯಕ್ಷ ಅವಧಿಯಲ್ಲಿ ಎದುರಾದ ಮತ್ತೊಬ್ಬ ವಂಚಕ ಸಂಘದ ಹೆಸರಿನಲ್ಲಿದ್ದ ಎಂಟು ಹತ್ತು ಎಕರೆ ನೀರಾವರಿ ಜಮೀನನ್ನು ತಾವು ಖಾಯಂ ಗುತ್ತಿಗೆದಾರರೆಂದು ದಾಖಲೆ ಮಾಡಿಕೊಡಬೇಕಾಗಿ ವೀರಣ್ಣಗೌಡರನ್ನು ಕೇಳಿದರು. ಆದರೆ ಗೌಡರು ತಾವು 'ಸಂಘದ ಪರವಾಗಿ ಆ ಜಮೀನನ್ನು ಸಾಗುವಳಿ ಮಾಡುತ್ತಿದ್ದಾರೆಯೇ ಹೊರತು ಆ ಜಮೀನಿನ ಗುತ್ತಿಗೆದಾರರಲ್ಲವೆಂದು ದಾಖಲೆ ಮಾಡುವೆ' ಎಂಬುದಾಗಿ ನಿರ್ದಾಕ್ಷಿಣ್ಯ, ನಿಷ್ಪಕ್ಷಪಾತದಿಂದ ತಮ್ಮ ನಿಲುವನ್ನು ತೋರ್ಪಡಿಸಿದರು. ಇದರಿಂದ ಸಂಘದ ಆಸ್ತಿ ಉಳಿದು ಬೆಳೆಯಲು ಸಾಧ್ಯವಾಯಿತು. ಹಾಗೆಯೇ ಸಂಘಕ್ಕೆ ಸೇರಿದ ಕಟ್ಟಡವೊಂದನ್ನು ತಮ್ಮ ಮೇಲ್ವಿಚಾರಣೆಯಲ್ಲಿ ಕಟ್ಟಿಸುವುದಾಗಿ ಹೇಳಿದ ಮಹನೀಯರೊಬ್ಬರು ಅದಕ್ಕೆ ಅಂದಾಜಾಗಿದ್ದ ೧೪ ಸಾವಿರ ರೂಪಾಯಿಗಳಿಗೆ ಬದಲಾಗಿ ೨೦ ಸಾವಿರ ರೂಪಾಯಿಗಳವರೆಗೂ ಖರ್ಚು ಮಾಡಿರುವುದಾಗಿ ಅಧ್ಯಕ್ಷರೊಂದಿಗೆ ಜಗಳವಾಡಿ ಹಣ ಪಡೆದು ಕೆಲಸವನ್ನು ಅರ್ಧಂಬರ್ಧ ನಿಲ್ಲಿಸಿದ ಪ್ರಸಂಗಗಳೂ ವೀರಣ್ಣಗೌಡರು ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವಲ್ಲಿ ಬಹಳಷ್ಟು ಘಾಸಿಗೊಳಿಸಿದವು. ಮೇಲೇಳುವವನ ಕಾಲೆಳೆಯುವ ಇಂತಹ ಜನರ ಮಧ್ಯೆ ಗೌಡರು ಧೈರ್ಯಗುಂದದೆ ಮುನ್ನುಗ್ಗಿ ಸಂಘದ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದರು.

ಒಂದು ಜನ ಸಮುದಾಯದ ಶೈಕ್ಷಣಿಕ ಬೆಳವಣಿಗೆ ಆ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಶಿಕ್ಷಣ ವ್ಯಕ್ತಿಯ ವ್ಯಕ್ತಿತ್ವವನ್ನು ವಿಕಸನಗೊಳಿಸಿ ಜೀವನೋಪಾಯಕ್ಕೆ ಬೇಕಾದ ಕುಶಲತೆಗಳನ್ನು ಒದಗಿಸುತ್ತದೆ. ಈ ಹಿನ್ನೆಲೆಯಲ್ಲಿ ಒಕ್ಕಲಿಗರ ಸಂಘ ಶಿಕ್ಷಣದ ಮಹತ್ವವನ್ನು ಮನಗಂಡು ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸುವ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಯಿತು. ಹೆಚ್.ಕೆ.ವೀರಣ್ಣಗೌಡರು ಸಂಘದ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಗೌಡರ ಮತ್ತು ಆಡಳಿತ ಮಂಡಳಿಯ ಶ್ರಮದಿಂದ ಸಂಘದ ಪ್ರಪ್ರಥಮ ಶಿಕ್ಷಣ ಸಂಸ್ಥೆಯಾಗಿ ೧೯೬೬ರಲ್ಲಿ ವಿ.ವಿ.ಪುರಂ ವಿಜ್ಞಾನ ಕಾಲೇಜು ಅಸ್ತಿತ್ವವನ್ನು ಪಡೆಯಿತು. ಅಜ್ಞಾನ ಕತ್ತಲನ್ನು ಹೋಗಲಾಡಿಸಿ

ಸುಜ್ಞಾನದ ಬೆಳಕನ್ನು ನೀಡುವ ಶಿಕ್ಷಣ ಪ್ರಸಾರದ ಮಹತ್ತರವಾದ ಕೆಲಸ ಒಕ್ಕಲಿಗರ ಸಂಘದಿಂದ ಹೀಗೆ ಪ್ರಾರಂಭವಾಯಿತು. ಮರುವರ್ಷ ೧೯೬೭ರಲ್ಲಿ ವಾಣಿಜ್ಯ ಮತ್ತು ಕಲಾ ವಿಭಾಗಗಳೂ ಈ ಕಾಲೇಜಿಗೆ ಸೇರಿಸಲ್ಪಟ್ಟವು. ೧೯೮೦ರಲ್ಲಿ ವಿ.ವಿ.ಪುರಂ ಕಲೆ ಮತ್ತು ವಾಣಿಜ್ಯ ಕಾಲೇಜು ಹಾಗೂ ವಿ.ವಿ.ಪುರಂ ವಿಜ್ಞಾನ ಕಾಲೇಜು ಎಂದು ಪ್ರತ್ಯೇಕಿಸಲ್ಪಟ್ಟವು. ಹಳೆಯ ಕಟ್ಟಡದಲ್ಲಿ ವಾಣಿಜ್ಯ ಮತ್ತು ಕಲಾ ಕಾಲೇಜಿದ್ದು ಹೊಸ ಕಟ್ಟಡದಲ್ಲಿ ವಿಜ್ಞಾನ ಕಾಲೇಜು ಕಾರ್ಯನಿರ್ವಹಿಸುತ್ತಿವೆ. ೧೯೬೭ರಲ್ಲಿ ಹಳೆಯ ವಿಜ್ಞಾನ ಕಾಲೇಜಿನಲ್ಲಿಯೇ ವಿ.ವಿ.ಪುರಂ ಸಂಜೆ ಕಾಲೇಜನ್ನು ಪ್ರಾರಂಭಿಸಲಾಯ್ತು. ಈಗ ಸಂಘವು ಪ್ರೌಢಶಾಲೆಗಳಿಂದ ಹಿಡಿದು ವಿ.ವಿ.ಪುರ ಪದವಿ ಕಾಲೇಜುಗಳು, ಟಿ.ಐ.ಟಿ ಎಂಜಿನಿಯರಿಂಗ್ ಕಾಲೇಜು, ಕೆಂಪೇಗೌಡ ವೈದ್ಯಕೀಯ ಕಾಲೇಜು, ಔಷಧೀಯ ಕಾಲೇಜು, ದಂತ ವೈದ್ಯಕೀಯ ಕಾಲೇಜು, ಕಾನೂನು ಕಾಲೇಜು ಮೊದಲಾದ ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ನಡೆಸುತ್ತಿದೆ.

ಈ ರೀತಿಯಾಗಿ ಹೆಚ್.ಕೆ.ವೀರಣ್ಣಗೌಡರು ಒಕ್ಕಲಿಗ ಸಮುದಾಯಕ್ಕೆ ತಮ್ಮ ಸೇವಾ ಮನೋಭಾವನೆಯಿಂದ ದುಡಿದು ಕೊಡುಗೆ ನೀಡಿದ್ದಾರೆ. ಅವರು ಅಂದು ಒಕ್ಕಲಿಗ ಸಂಘದ ಅಧ್ಯಕ್ಷರಾಗಿ ಸಮಯ ಸ್ಫೂರ್ತಿಯಿಂದ ತೆಗೆದುಕೊಂಡ ನಿರ್ಧಾರಗಳು ಇಂದು ಸಂಘವು ಶೈಕ್ಷಣಿಕ ಕ್ಷೇತ್ರದಲ್ಲಿ ಸಮಾಜಕ್ಕೆ ತನ್ನ ಕೊಡುಗೆ ನೀಡುವುದಕ್ಕೆ ನಾಂದಿಯಾಯಿತೆಂದು ನಿಸ್ಸಂಶಯವಾಗಿ ಹೇಳಬಹುದು.

# ಸಮಾರೋಪ

ಸಾಮಾಜಿಕ ವಿಜ್ಞಾನಗಳಿಗೆ ಸಂಬಂಧಿಸಿದ ವಿಷಯಗಳ ಸಂಶೋಧನೆಯಲ್ಲಿ ವೈಜ್ಞಾನಿಕ ಪದ್ಧತಿಯನ್ನು ಅಳವಡಿಸುವುದಕ್ಕೆ ಕೆಲವೊಂದು ಇತಿಮಿತಿಗಳು ಎದುರಾಗುತ್ತವೆ. ಇಲ್ಲಿ ಮಾನವ ಮಾನವನನ್ನೇ ಅಧ್ಯಯನ ಮಾಡುವುದರಿಂದ ಮಿತಿಗೊಳ್ಳಪಟ್ಟು ಖಚಿತವಾದ ತೀರ್ಮಾನಗಳನ್ನು ಹೇಳಲು ಬರುವುದಿಲ್ಲ. ಕಾರಣ ಬದಲಾಗುತ್ತಾ ಸಾಗುವ ಮಾನವ ಸ್ವಭಾವ ಮತ್ತು ಚಲನಾತ್ಮಕ ಸಮಾಜ ಇವು ಒಂದು ನಿರ್ದಿಷ್ಟ ನಿರ್ಣಯಕ್ಕೆ ಬರಲು ಅಡ್ಡಿಯಾಗುತ್ತವೆ. ಅಲ್ಲದೆ ಯಾವುದೇ ಪ್ರಯೋಗ, ಸನ್ನಿವೇಶ, ಘಟನೆಗಳಿಂದ ಹೊರಬೀಳುವ ಫಲಿತಾಂಶಗಳು ಸಾರ್ವತ್ರಿಕವಾಗಿರುವುದಿಲ್ಲ. ಹಾಗೆಯೇ ಭವಿಷ್ಯವನ್ನು ನುಡಿಯಲು ಸಾಧ್ಯವಿರುವುದಿಲ್ಲ. ಈ ಕಾರಣಗಳಿಂದಾಗಿ ನಾನು ಕೈಗೊಂಡಿರುವ ಅಧ್ಯಯನ ವ್ಯಕ್ತಿಗೆ ಸಂಬಂಧಿಸಿರುವುದರಿಂದ ಇಲ್ಲಿ ಗಮನಿಸಲಾಗಿರುವ ವಿಚಾರಗಳಿಂದ ಯಾವುದೇ ಖಚಿತತೆಯನ್ನು ವ್ಯಕ್ತಪಡಿಸಲಾಗದು. ಆದರೆ 'ಹಿಸ್ಟರಿ ರಿಪೀಟ್ಸ್'(ಇತಿಹಾಸ ಮರುಕಳಿಸುತ್ತದೆ) ಎಂಬ ಮಾತಿನಂತೆ, 'ಇತಿಹಾಸದಿಂದ ಪಾಠ ಕಲಿಯದವರು ಇತಿಹಾಸವನ್ನು ಸೃಷ್ಟಿಸುವುದಿಲ್ಲ' ಎಂಬ ಡಾ.ಬಿ.ಆರ್. ಅಂಬೇಡ್ಕರ್ ಹೇಳಿಕೆ ಸತ್ಯವೆಂದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಭಾರತೀಯರು ಪರಕೀಯರ ದಾಸ್ಯದಿಂದ ಮುಕ್ತರಾಗಲು ಹೋರಾಡಿದ ವಿಧಾನ ಮತ್ತು ನಾಡು ಕಟ್ಟುವ ನಿಟ್ಟಿನಲ್ಲಿ ಅಂದು ಹಲವಾರು ಮಹನೀಯರು ಎದುರಿಸಿದ ಸಮಸ್ಯೆಗಳನ್ನು ನಿಭಾಯಿಸಿದ ರೀತಿ ಇವುಗಳಿಂದ ಸಮಾಜದ ಮೇಲಾದ ಪರಿಣಾಮ ಇವೆಲ್ಲಾ ಪ್ರಸ್ತುತ ಜನತೆಗೆ ಮಾರ್ಗದರ್ಶಕಗಳಾಗುತ್ತವೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಹೀಗೆ ಹೋರಾಟದ ಬದುಕನ್ನು ತಮ್ಮದಾಗಿಸಿಕೊಂಡು ಸಮಾಜದ ಒಳಿತಿಗಾಗಿ ತಮ್ಮನ್ನೇ ಅರ್ಪಿಸಿಕೊಂಡ ಎಷ್ಟೋ ಮಹನೀಯರು ಇತಿಹಾಸದ ಪುಟಗಳಲ್ಲಿ ಕಂಡು ಬರುತ್ತಾರೆ. ಅಂತಹವರಲ್ಲಿ ೨೦ನೇ ಶತಮಾನದ ಮಧ್ಯದವರೆಗೂ ಬದುಕಿದ್ದು ಅಹಿಂಸಾತ್ಮಕ ತತ್ವ ಸಿದ್ಧಾಂತದಲ್ಲಿ ನಂಬಿಕೆಯಿಟ್ಟು ಗಾಂಧೀಜಿಯವರ ಅನುಯಾಯಿಯಾಗಿದ್ದವರು, ತಮ್ಮ ಬದುಕಿನ ಕೊನೆಯವರೆಗೂ ಜನಸೇವೆಗಾಗಿಯೇ ಶ್ರಮಿಸಿದ ಹೆಚ್.ಕೆ.ವೀರಣ್ಣಗೌಡರ ಬಗೆಗೆ ಲಭ್ಯವಾದ ಮಾಹಿತಿ, ದಾಖಲೆ, ಕೃತಿಗಳನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಮೂಲತಃ ರಾಜ್ಯಶಾಸ್ತ್ರ ಪದವಿಧರೆಯಾದ ನಾನು ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಕೈಗೊಂಡಿರುವ ಅಧ್ಯಯನದಲ್ಲಿ ಅವರ ರಾಜಕೀಯ ಜೀವನದ ಚಟುವಟಿಕೆಗಳ ಮೇಲೆ ಹೆಚ್ಚಿನ ಗಮನಹರಿಸಿದ್ದೇನೆ. ಅದರ ಜೊತೆಗೆ ಸಾಹಿತ್ಯ, ಪತ್ರಿಕೋದ್ಯಮ, ಸಮಾಜಸೇವೆ, ಶಿಕ್ಷಣ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಅವರ ಕೊಡುಗೆಯನ್ನು ಪರಿಗಣಿಸಿ ಅಧ್ಯಯನ ಮಾಡಲಾಗಿದೆ.

ಮೊದಲ ಅಧ್ಯಾಯದಲ್ಲಿ ಗೌಡರ ಬದುಕಿನ ಪ್ರಮುಖ ಘಟ್ಟಗಳ ಬಗ್ಗೆ ವಿವರಿಸಲಾಗಿದೆ. ಹಾಗೆಯೇ ಈ ಎಲ್ಲಾ ಘಟ್ಟಗಳಲ್ಲಿ ಅವರ ವ್ಯಕ್ತಿತ್ವ ವಿಕಸನಗೊಳ್ಳಲು ಒದಗಿದ ಸನ್ನಿವೇಶ, ಘಟನೆಗಳು,

ವ್ಯಕ್ತಿಗಳ, ಸಿದ್ಧಾಂತಗಳ ಪ್ರಭಾವ ಎಷ್ಟರ ಮಟ್ಟಿಗೆ ಪಾತ್ರವಹಿಸಿತು ಎಂಬುದನ್ನು ಗಮನಿಸಿದ್ದೇನೆ. ಆ ಮೂಲಕ ವ್ಯಕ್ತಿಯ ಉತ್ತಮ ವ್ಯಕ್ತಿತ್ವ ನಿರ್ಮಾಣಕ್ಕೆ ಅಗತ್ಯವಾದ ಅಂಶಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಹೆಚ್.ಕೆ.ವೀರಣ್ಣಗೌಡರ ಮೂಲನೆಲೆ ಚನ್ನಪಟ್ಟಣ. ಬಯಲುಸೀಮೆಯ ಸೌಂದರ್ಯವನ್ನು ಹೊಂದಿರುವ, ಕರಕುಶಲಕರ್ಮಿಗಳ ತಾಣವಾಗಿರುವ ಚನ್ನಪಟ್ಟಣ ''ಬೊಂಬೆಗಳ ನಗರಿ'' ಎಂಬ ಅಭಿದಾನಕ್ಕೆ ಪಾತ್ರವಾಗಿದೆ. ಕರ್ನಾಟಕರಾಜ್ಯದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು ಶ್ರೀಗಂಧದ ಕೆತ್ತನೆ ಕೆಲಸಗಳಿಗೆ ಪ್ರಸಿದ್ಧವಾಗಿದ್ದರೆ, ಚನ್ನಪಟ್ಟಣ ಮರದ ಆಟಿಕೆಗಳಿಗೆ ಪ್ರಸಿದ್ಧಿಯಾಗಿದೆ. ಇಲ್ಲಿನ ಗೊಂಬೆಗಳು ತಮ್ಮ ಸೌಂದರ್ಯ, ವೈವಿಧ್ಯತೆ ಮತ್ತು ಉತ್ತಮ ಗುಣಮಟ್ಟದಿಂದಾಗಿ ಮಕ್ಕಳಿಂದ ಹಿಡಿದು ವೃದ್ಧರವರೆಗೂ ಎಲ್ಲರನ್ನು ಆಕರ್ಷಿಸುತ್ತವೆ. ಅಲ್ಲದೆ ಚನ್ನಪಟ್ಟಣ ತಾಲ್ಲೂಕು ಕಲೆ, ಸಾಹಿತ್ಯ, ಸಂಸ್ಕೃತಿ, ಪರಿಸರ, ವ್ಯವಹಾರ ಕ್ಷೇತ್ರಗಳಲ್ಲಿ ತನ್ನದೇ ಆದ ವೈಶಿಷ್ಟ್ಯಗಳನ್ನು ಒಳಗೊಂಡಿದೆ. ಇಲ್ಲಿನ ಕಣ್ವ ನದಿ ಕೃಷಿಗೆ ಹೆಚ್ಚು ಸಹಾಯಕವಾಗಿದ್ದು, ಇಲ್ಲಿನ ಮಣ್ಣಿನ ಗುಣದಿಂದಾಗಿ ಭತ್ತ, ಕಬ್ಬು, ರಾಗಿ, ಬಾಳೆ, ಮಾವು, ಅಡಿಕೆ, ವೀಳ್ಯದೆಲೆ ಮುಂತಾದ ಬೆಳೆ ಬೆಳೆಯಲು ಸಹಕಾರಿಯಾಗಿದೆ. ಇಲ್ಲಿ ರೇಷ್ಮೆ ಬೆಳೆಯು ಉತ್ಕೃಷ್ಟವಾಗಿ ಬೆಳೆಯುವುದರಿಂದ ರೇಷ್ಮೆ ಕೈಗಾರಿಕೆಗೂ ಪ್ರಸಿದ್ಧಿ ಹೊಂದಿದೆ. ಐತಿಹಾಸಿಕವಾಗಿ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟು ಆಯಕಟ್ಟಿನ ಸ್ಥಾನವನ್ನು ಹೊಂದಿದ ಪ್ರದೇಶವಾಗಿದೆ. ಇಲ್ಲಿನ ಮಳೂರು ಗ್ರಾಮದ ಅಪ್ರಮೇಯದೇವಾಲಯದ ಬಾಲಕೃಷ್ಣನ ಶಿಲೆ ಉತ್ಕೃಷ್ಟ ಕಲೆಗೆ ಹೆಸರಾಗಿದೆ. ಹೀಗೆ ಸುತ್ತಮುತ್ತಲಿನ ಗ್ರಾಮಗಳಲ್ಲಿ ಹಲವಾರು ದೇವಾಲಯಗಳನ್ನು, ಕಲಾಕೃತಿಗಳನ್ನು ಇಲ್ಲಿ ಕಾಣಬಹುದು. ಹೀಗೆ ಕಲೆ, ಸಂಸ್ಕೃತಿಯಲ್ಲಿ ಸಮಾಜಕ್ಕೆ ಕೊಡುಗೆ ನೀಡಿರುವಂತೆ, ರಾಜಕೀಯ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಚನ್ನಪಟ್ಟಣದ ಕೊಡುಗೆ ಮಹತ್ತರವಾದುದು. ಚನ್ನಪಟ್ಟಣ ತಾಲ್ಲೂಕಿನ ಮಹನೀಯರಲ್ಲಿ ಸ್ವಾತಂತ್ರ್ಯ ಹೋರಾಟಗಾರ ಕಾನಕನಹಳ್ಳಿ ಕರಿಯಪ್ಪ, ವಿದ್ಯಾಮಂತ್ರಿಗಳಾಗಿದ್ದ ವಿ.ವೆಂಕಟಪ್ಪ, ಅರ್ಥಶಾಸ್ತ್ರಜ್ಞ ಪ್ರೊ.ಕೆ.ವೆಂಕಟಗಿರಿಗೌಡ, ಪ್ರಸಿದ್ಧ ಸಾಹಿತಿ ಎಂ.ಎಸ್.ಪುಟ್ಟಣ್ಣ, ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಉಪಕುಲಪತಿ ಪ್ರೊ.ದೇ.ಜವರೇಗೌಡ ಮುಂತಾದವರನ್ನು ಹೆಸರಿಸಬಹುದು. ಈ ಮಹನೀಯರ ಸಾಲಿನಲ್ಲಿ ಹೆಚ್.ಕೆ.ವೀರಣ್ಣಗೌಡರು ಮೊದಲಿಗರು.

ಮಾನವನ ಬದುಕು ಆಕಸ್ಮಿಕಗಳ ಆಗರ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಈ ಆಕಸ್ಮಿಕಗಳನ್ನೇ ಹೆಚ್.ಕೆ.ವೀರಣ್ಣಗೌಡರು ತಮ್ಮ ಜೀವನದಲ್ಲಿ ಒದಗಿ ಬಂದ ಅವಕಾಶಗಳೆಂದು ಭಾವಿಸಿ ಅವುಗಳನ್ನು ಜನತೆಯ ಒಳಿತಿಗಾಗಿ ಉಪಯೋಗಿಸಿ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಂಡು ಇತರರಿಗೆ ಮಾದರಿಯಾಗಿದ್ದಾರೆ. ಹೀಗೆ ಅವಕಾಶಗಳನ್ನು ಸದುಪಯೋಗ ಪಡಿಸಿಕೊಂಡು ಸಮಾಜಕ್ಕೆ ಅನುಕೂಲವಾದ ರೀತಿಯಲ್ಲಿ ಬದುಕು ಸಾಗಿಸಬೇಕೆಂಬ ಮನೋಭಾವನೆ ಪ್ರತಿ ಮನುಷ್ಯನಲ್ಲಿ ಮೂಡಬೇಕೆಂಬುದೇ ಈ ಅಧ್ಯಯನದ ಆಶಯ.

ಹೆಚ್.ಕೆ.ವೀರಣ್ಣಗೌಡರು ಒಕ್ಕಲಿಗ ಕುಟುಂಬದ ಪಟೇಲ್ ಕೆಂಚೇಗೌಡ ಮತ್ತು ಕೆಂಪಮ್ಮ ಎಂಬ ದಂಪತಿಗಳ ಹಿರಿಯ ಪುತ್ರನಾಗಿ ೧೮೯೯ರ ಮೇ ೧೮ರಂದು ಚನ್ನಪಟ್ಟಣದ ಸಾದಹಳ್ಳಿಯಲ್ಲಿ ಜನಿಸಿದರು. ಚೊಚ್ಚಲ ಮಗುವಾಗಿದ್ದ ವೀರಣ್ಣಗೌಡರನ್ನು ಅಪಾರ ಪ್ರೀತಿವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಬೇಸಿಗೆ

ಕಾಲದಲ್ಲಿ ನಿಂಬೆಹುಳಿ ಪಾನಕಕ್ಕೆ ಬೆಲ್ಲ ಹಾಕಿದರೆ ಉಷ್ಣವಾಗಬಹುದೆಂದು ಬತಾಸ್‌ಗಳನ್ನು ಪುಡಿ ಮಾಡಿ ಹಾಕಿಕೊಡುತ್ತಿದ್ದರಂತೆ. ಮಗುವಿಗೆ ಶಿಸ್ತು, ಸಂಯಮ, ಸಂಸ್ಕಾರವನ್ನು ಕಲಿಸುವಲ್ಲಿ ತಂದೆ ತಾಯಿಗಳಿಗೆ ತಮ್ಮ ಪ್ರೀತಿ ಅಡ್ಡಬರಲಿಲ್ಲ. ವೀರಣ್ಣಗೌಡರ ಬಾಲ್ಯ ಹೆಚ್ಚಾಗಿ ಅವ್ವೇರಹಳ್ಳಿ ಮತ್ತು ಹೊಸಹಳ್ಳಿಯಲ್ಲಿ ಕಳೆಯಿತು. ಬಾಲ್ಯದಲ್ಲಿ ವೀರಣ್ಣಗೌಡರು ಮಾಡುತ್ತಿದ್ದ ತಪ್ಪುಗಳನ್ನು ತಿದ್ದುವಲ್ಲಿ ತಂದೆ ತಾಯಿ, ಗುರು ಹಿರಿಯರು ವಹಿಸಿದ ಪಾತ್ರ ಬಹಳ ಮುಖ್ಯವಾದುದು. ಎಳೆವಯಸ್ಸಿನಲ್ಲಿ ರೂಢಿಸಿಕೊಂಡ ಅಭ್ಯಾಸಗಳೇ ದೊಡ್ಡವರಾದ ಮೇಲೆ ಹೆಮ್ಮರವಾಗಿ ಬೆಳೆಯುತ್ತವೆ ಎಂಬುದಕ್ಕೆ ಮಹಾತ್ಮಗಾಂಧಿ, ಅಂಬೇಡ್ಕರರು ತಮ್ಮ ಚಿಕ್ಕಂದಿನಲ್ಲಿ ಮಾಡಿದ ತಪ್ಪುಗಳನ್ನು ತಿದ್ದಿಕೊಳ್ಳುವ ಮೂಲಕ ಒಳ್ಳೆಯ ಹವ್ಯಾಸಗಳನ್ನು ರೂಢಿಸಿಕೊಂಡ ಫಲವಾಗಿ ಮುಂದೆ ದೇಶವೇ ಹೆಮ್ಮೆ ಪಡುವಂತಹ ಬದುಕು ಸಾಗಿಸಿದರು. ಅದರಂತೆ ಹೆಚ್.ಕೆ.ವೀರಣ್ಣಗೌಡರು ಸಹ ತಮ್ಮ ಜೀವನವನ್ನು ಸಾಗಿಸಿರುವುದನ್ನು ಕಾಣಬಹುದು.

'ತಾಯಿ ಮಾಡಿದ ಹೊಟ್ಟೆ ಊರು ಮಾಡಿದ ಕೊಳಗ' ಎಂಬ ಗಾದೆಯಂತೆ ಗೌಡರ ತಾಯಿ ದೈವಭಕ್ತೆಯಾಗಿದ್ದುದರ ಜೊತೆಗೆ ಸಾಧ್ವಿಯಾಗಿದ್ದರು. ಹೀಗಾಗಿ ಊಟದ ವಿಚಾರದಲ್ಲಿ ಮಿತಹಾರಿಯಾಗಿದ್ದು, ವಾರಕ್ಕೆ ಒಂದು ದಿನ ಉಪವಾಸ ಮಾಡುತ್ತಿದ್ದರು. ತಮ್ಮಂತೆ ತಮ್ಮ ಮಕ್ಕಳಿಗೂ ಊಟೋಪಚಾರದ ವಿಷಯದಲ್ಲಿ ಉತ್ತಮ ಸಂಸ್ಕಾರವನ್ನು ಕಲಿಸಿದ್ದರು. ಪರಿಣಾಮವಾಗಿ ವೀರಣ್ಣಗೌಡರು ಮಿತಾಹಾರಿ ಹಾಗು ಸಸ್ಯಹಾರಿಯಾಗಲು ಸಹಾಯಕವಾಯಿತು ಎನ್ನಬಹುದು. ಒಮ್ಮೆ ಗೌಡರ ತಂದೆಯ ವಿನಂತಿಯ ಮೇರೆಗೆ ಶಾಲೆಯಲ್ಲಿ ಉಪಾಧ್ಯಾಯರು ಬಡಿಸಿದ್ದ ಊಟದ ಬಗ್ಗೆ ಬಾಲಕ ವೀರಣ್ಣಗೌಡ ಸಂಕಟ ಪಟ್ಟುಕೊಂಡಾಗ ತಾಯಿ 'ನಿನಗೆಷ್ಟು ಬೇಕೋ ಅಷ್ಟು ಮಾತ್ರ ತಿನ್ನು, ಯಾವಾಗಲೂ ಹೆಚ್ಚು ತಿನ್ನಬೇಡ, ಒಂದೊಂದು ಸಾರಿ ಊಟ ಬಿಡುವುದು ಒಳ್ಳೆಯದು'ಎಂದು ಹೇಳಿದ ಮಾತು ಅನ್ನದ ಬಗ್ಗೆ ಗೌರವ ಹೊಂದಿರಬೇಕು ಎಂಬುದನ್ನು ಮನದಟ್ಟು ಮಾಡಿಕೊಟ್ಟಿತು. ಹಾಗೆಯೇ ಒಮ್ಮೆ ಬಾಲಕ ವೀರಣ್ಣಗೌಡ ತಮ್ಮ ಹೊಲದಲ್ಲಿ ಹುಲ್ಲು ಕೊಯ್ದ ಬಡ ಹೆಂಗಸಿನ ಕುಡುಗೋಲನ್ನು ಕಿತ್ತುಕೊಂಡು ನಾಲ್ಕಾಣೆ ದಂಡ ನೀಡುವಂತೆ ಒತ್ತಾಯಿಸಿದ್ದನ್ನು ಕಂಡು ಸಂಕಟ ಪಟ್ಟುಕೊಂಡ ಗೌಡರ ತಾಯಿ 'ನೀನು ದೊಡ್ಡವನಾದ ಮೇಲೆ ಬಡಬಗ್ಗರನ್ನು ಹುರಿದು ಮುಕ್ಕಿಬಿಡುತ್ತಿಯೇ' ಬಡವನಾದವನು ತನ್ನಲ್ಲಿಲ್ಲದ ವಸ್ತುವಿಗೆ ಇರುವೆಡೆಗೆ ಕೈ ಚಾಚುತ್ತಾನೆ. ಹೀಗಾಗಿ ಉಳ್ಳವರ್‍ರು ಇಲ್ಲದವರ ಬಗ್ಗೆ ಉಪಕಾರ ಮನೋಭಾವವನ್ನು ಹೊಂದಿರಬೇಕು ಎಂಬರ್ಥದಲ್ಲಿ ಹೇಳಿದ ಮಾತು ಗೌಡರಿಗೆ ಬಡಬಗ್ಗರ ಬಗ್ಗೆ ಅನುಕಂಪ, ಪರೋಪಕಾರದ ಮನೋಭಾವನೆಯನ್ನು ಮೂಡಿಸಿತೆನ್ನಬಹುದು. ಹಾಗೆಯೇ ಇನ್ನೊಂದು ಸಂದರ್ಭದಲ್ಲಿ ರೇಷ್ಮೆಗೂಡುಗಳನ್ನು ತನ್ನ ಸ್ನೇಹಿತನು ಕದಿಯುವುದಕ್ಕೆ ಸಹಕರಿಸಿದ ವೀರಣ್ಣಗೌಡರನ್ನು ಕಂಡ ತಾಯಿ ಕಳ್ಳತನ ಮಾಡಬಾರದು, ಕದಿಯುವವರಿಗೆ ಸಹಕರಿಸಬಾರದು ಇದರಿಂದ ಮನೆಯಲ್ಲಿನ ಲಕ್ಷ್ಮೀ ಹೊರಟು ಹೋಗುತ್ತಾಳೆ ಎಂದು ಹೇಳಿದರು. ಹೀಗೆ ಬಾಲ್ಯದಲ್ಲಿ ಶಿವಾಜಿಗೆ ಅವರ ತಾಯಿ ಜೀಜಾಭಾಯಿ ಮಾಡುತ್ತಿದ್ದ ಬೋಧನೆಯಂತೆ ವೀರಣ್ಣಗೌಡರಿಗೆ ಅವರ ತಾಯಿ ತಿಳುವಳಿಕೆ ನೀಡುತ್ತಿದ್ದರು. ವೀರಣ್ಣಗೌಡರ ತಪ್ಪುಗಳನ್ನು ತಿದ್ದುವಲ್ಲಿ ತಾಯಿಯ ಬುದ್ದಿವಾದ ಗೌಡರ ಸ್ವಭಾವದ ದಿಕ್ಕನ್ನೇ ಬದಲಿಸಿತು. ಇದನ್ನು ಗಮನಿಸಿದಾಗ ಮಕ್ಕಳ ಬೆಳವಣಿಗೆಯ ಕಾಲದಲ್ಲಿ ತಾಯಿಯ ಪಾತ್ರ

ಅತಿಮುಖ್ಯವಾದುದು ಎಂದು ತಿಳಿದು ಬರುತ್ತದೆ. ಆದರೆ ಇಂದಿನ ಆಧುನಿಕ ಮಹಿಳೆಯರು ಜಾಗತೀಕರಣದ ಸುಳಿಯಲ್ಲಿ ಸಿಲುಕಿ ಇಂತಹ ಜವಾಬ್ದಾರಿಯುತವಾದ ತಮ್ಮ ಸ್ಥಾನದ ಬಗ್ಗೆ ಮರೆಯುತ್ತಿರುವುದು ವಿಷಾಧನೀಯ ಸಂಗತಿ. ಈ ಸಂದರ್ಭದಲ್ಲಿ "ಉತ್ತಮಳಾದ ಮತ್ತು ಉದಾರಳಾದ ತಾಯಿಗಿಂತ ಜವಾಬ್ದಾರಿಯುಳ್ಳ, ಪ್ರಯೋಜನಕಾರಿಯಾದ ಮತ್ತು ಗೌರವವುಳ್ಳ ಪದವಿಯು ಮತ್ತಾರಿಗೂ ಇಲ್ಲ. ಏಕೆಂದರೆ ಆ ಪದವಿಗೆ ಸಂಪೂರ್ಣ ಸ್ವಾರ್ಥತ್ಯಾಗವೂ ಮತ್ತು ಜ್ಞಾನವೂ ವಿವೇಚನಾಶಕ್ತಿಯೂ ಬೇಕು" ಎಂಬ ಥಿಯೋಡೋರ್ ರೂಸ್‌ವೆಲ್ಟ್‌ರ ಈ ನುಡಿಗಳು ಎಷ್ಟು ಅರ್ಥಪೂರ್ಣವಾದವು ಎಂಬುದನ್ನು ಪ್ರತಿಯೊಬ್ಬರು ಯೋಚಿಸಬೇಕಾಗಿದೆ.

ಒಮ್ಮೆ ಹೆಚ್.ಕೆ.ವೀರಣ್ಣಗೌಡರ ತಂದೆಯವರು ಹಬ್ಬಕ್ಕಾಗಿ ಮಗನನ್ನು ಕರೆದುಕೊಂಡು ಸಂತೆಯಲ್ಲಿ ದಿನಸಿಯನ್ನು ಕೊಂಡು ತರುವಾಗ ಅವರ ಸ್ನೇಹಿತರೊಬ್ಬರು ಮೂಟೆಗಟ್ಟಲೆ ದಿನಸಿಯನ್ನು ಕೊಂಡು ಹೋಗುತ್ತಿದ್ದರು. ಅದನ್ನು ಕಂಡು ವೀರಣ್ಣಗೌಡರಿಗೆ ಅವರ ತಂದೆ ನಮ್ಮಷ್ಟೆ ಆಸ್ತಿ ಇದ್ದರೂ ಇಷ್ಟೋಂದು ದಿನಸಿಯನ್ನು ಕೊಂಡುಕೊಳ್ಳಲು ಅವರು ತೆಗೆದುಕೊಳ್ಳುವ ಲಂಚದ ಹಣವೇ ಕಾರಣ. ಯಾವತ್ತಿದ್ದರೂ ಲಂಚ ತಿಂದವನ ಮನೆ ಹಾಳು. ಆದ್ದರಿಂದ ಅಂತಹ ಕೆಲಸವನ್ನು ಎಂದಿಗೂ ಮಾಡಬಾರದು ಎಂಬರ್ಥದಲ್ಲಿ ಮಗನಿಗೆ ತಿಳಿಹೇಳಿದರು. ತಂದೆತಾಯಿಯರ ಈ ಮಾತುಗಳು ವೀರಣ್ಣಗೌಡರ ಜೀವನದಲ್ಲಿ ಎಚ್ಚರಿಕೆಯ ಗಂಟೆಗಳಾಗಿ ಸನ್ಮಾರ್ಗದಲ್ಲಿ ನಡೆಯಲು ಸಹಕರಿಸಿದವೆಂದು ಹೇಳಬಹುದು.

ವೀರಣ್ಣಗೌಡರ ತಂದೆ ಕೆಂಚೇಗೌಡರು ಸುತ್ತಮುತ್ತಲಿನ ನಾಲ್ಕಾರು ಹಳ್ಳಿಗಳಿಗೆ ಪಟೇಲರಾಗಿದ್ದರಿಂದ ಎಲ್ಲರಿಗೂ ಬೇಕಾದ ವ್ಯಕ್ತಿಯಾಗಿದ್ದರು. ಹೀಗಾಗಿ ಒಮ್ಮೆ ಊರಿನವರಿಗೆ ಮಾಡಿದ ಉಪಕಾರಕ್ಕಾಗಿ ಜನರು ನೀಡಿದ ಕಾಣಿಕೆಯನ್ನು ಲಂಚವೆಂದು ಭಾವಿಸಿ, ಸ್ವೀಕರಿಸದೆ ಅದನ್ನು ಊರಿನ ದೇವಾಲಯ ದುರಸ್ಥಿಗಾಗಿ ಉಪಯೋಗಿಸಿದರು. ಇದು ಅವರ ಪ್ರಾಮಾಣಿಕತೆ ಮತ್ತು ಜನಪರಕಾಳಜಿಗೆ ಒಂದು ಸಾಕ್ಷಿಯಾಗಿತ್ತು. ಹೀಗೆಯೇ ವೀರಣ್ಣಗೌಡರ ವಂಶಸ್ಥರುಗಳಲ್ಲಿ ಒಬ್ಬರು ಶೇಕದಾರಿಕೆ ನಡೆಸಿ ಜನಸೇವೆ ಮಾಡಿದ್ದು, ಮತ್ತೊಬ್ಬರು ತಮ್ಮ ಆತ್ಮ ಸ್ವಾಭಿಮಾನಕ್ಕೆ ಧಕ್ಕೆ ತಂದ ತೋಟವನ್ನೇ ಬೆಂಕಿಗೆ ಆಹುತಿ ಕೊಟ್ಟ ಪ್ರಕರಣಗಳಿಂದ ಅವರುಗಳ ಹಿರಿಮೆ ಗರಿಮೆಗಳ ಬಗ್ಗೆ ಅರಿವಿದ್ದ ಬಾಲಕ ವೀರಣ್ಣಗೌಡರಿಗೆ ಕಣ್ಣೆದುರಿನ ತಂದೆಯ ಕೋಪ, ಗತ್ತು, ಗಾಂಭೀರ್ಯ, ಉದಾರಗುಣ, ಪ್ರಾಮಾಣಿಕತೆ, ಹೆಚ್ಚಿನ ಪ್ರಭಾವ ಬೀರಿದ್ದವು. ಹಾಗಾಗಿಯೇ ವೀರಣ್ಣಗೌಡರ ಪ್ರತಿಯೊಂದು ಕಾರ್ಯದಲ್ಲೂ ಗತ್ತು, ಗಾಂಭೀರ್ಯ, ಯಜಮಾನಿಕೆ ಎದ್ದು ಕಾಣುತ್ತಿದ್ದವು. ಜೊತೆಗೆ ಇತರ ಹುಡುಗರಂತೆ ಆಟಪಾಠಗಳಲ್ಲಿ ಆಸಕ್ತಿಯಿಂದಿದ್ದ ಬಾಲಕ ವೀರಣ್ಣ ಒಮ್ಮೆ ಶಾಲೆಗೆ ಹೋಗುವ ರಸ್ತೆಯಲ್ಲಿ ಒಂಟಿಯಾಗಿ ಬರುತ್ತಿದ್ದ ಸಂದರ್ಭದಲ್ಲಿ ದೆವ್ವದ ಭ್ರಮೆಗೆ ಬಿದ್ದು, ಜ್ವರ ಬರಿಸಿಕೊಂಡ ಪ್ರಸಂಗವು ಅವರ ಚಿಕ್ಕಂದಿನ ಸಹಜ ಸ್ವಭಾವವನ್ನು ಅನಾವರಣಗೊಳಿಸುತ್ತದೆ.

ವ್ಯಕ್ತಿಯ ಅಂತರಂಗದ ವಿಕಾಸಕ್ಕೆ ಸಂಸ್ಕಾರ, ಸಹವಾಸ, ಪರಿಸರ ಹಾಗೂ ಗುರುಗಳ ಮಾರ್ಗದರ್ಶನ ಅವಶ್ಯಕ. ಈ ನಿಟ್ಟಿನಲ್ಲಿ ಆಲೋಚಿಸಿದಾಗ ವೀರಣ್ಣಗೌಡರ ಬದುಕು ಒಂದು ರೀತಿ

ವಿಶಿಷ್ಟವಾದುದೇನೂ ಅಲ್ಲ, ಅವರೂ ಸಹ ಸಾಮಾನ್ಯರಂತೆಯೇ ಬೆಳೆದು ಬಂದವರೆಂದು ಹೇಳಬಹುದು. ಆದರೂ ಕೆಲವು ಸೂಕ್ಷ್ಮ ಸನ್ನಿವೇಶಗಳು ಗೌಡರನ್ನು ವಿಶೇಷವಾಗಿ ರೂಪಿಸಿದವೆಂದು ಗುರುತಿಸಬಹುದು. ಸಾಧಕರೆಲ್ಲರ ಬಾಲ್ಯದ ಕಡೆ ಕಣ್ಣು ಹಾಯಿಸಿದರೆ ಅಲ್ಲಿ ಯಾವುದೇ ವಿಶೇಷತೆ ಕಂಡುಬರುವುದಿಲ್ಲ. ಬದಲಾಗಿ ಸಾಮಾನ್ಯರಂತೆಯೇ ಅವರೂ ಸಹ ಬಾಲ್ಯಸಹಜವಾದ ತಪ್ಪುಗಳನ್ನು ಮಾಡುತ್ತಲೇ ಬೆಳೆದುಬಂದಿರುವುದನ್ನು ಕಾಣಬಹುದು. ಆದರೆ ಯಾರು ಆ ತಪ್ಪುಗಳನ್ನು ಸರಿಯಾದ ಸಮಯದಲ್ಲಿ ತಿದ್ದುಕೊಳ್ಳುತ್ತಾ ಸದ್ಗುಣಗಳನ್ನು ಬೆಳೆಸಿಕೊಂಡು ಬೆಳೆಯುತ್ತಾರೋ ಅವರು ಸಾಧಕರಾಗಿ ರೂಪುಗೊಳ್ಳುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ. ಉದಾಹರಣೆಗೆ ವಿವೇಕಾನಂದರು ಚಿಕ್ಕಂದಿನಲ್ಲಿ ಸಾಮಾನ್ಯ ಹುಡುಗನಂತೆ ಹೆಚ್ಚು ತುಂಟಾಟ ಮಾಡುತ್ತಿದ್ದವರು ಭವಿಷ್ಯದಲ್ಲಿ ಒಬ್ಬ ಸಾಧಕರಾಗಿ ರೂಪುಗೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು. ಹಾಗೆಯೇ ಉತ್ತಮ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಶ್ರೇಷ್ಠತೆ ಪ್ರಾಪ್ತವಾಗುವುದಿಲ್ಲ, ಬದಲಾಗಿ ತಪ್ಪುಗಳಿಂದ ಪಾಠ ಕಲಿತು ತಮ್ಮ ಸ್ವಭಾವದಲ್ಲಿ ಬದಲಾವಣೆ ಹೊಂದುವ ಮುಖಾಂತರ ಶ್ರೇಷ್ಠತೆಯನ್ನು ಹೊಂದಬಹುದು. ಈ ಹಿನ್ನೆಲೆಯಲ್ಲಿ ವೀರಣ್ಣಗೌಡರು ಪಟೇಲರ ಕುಟುಂಬದಲ್ಲಿ ಹುಟ್ಟಿದ ಮಾತ್ರಕ್ಕೆ ಅವರಲ್ಲಿ ವಂಶಪಾರಂಪರ್ಯವಾಗಿ ಬಂದ ಗುಣಗಳು ತಾವಾಗಿಯೇ ವೃದ್ಧಿಗೊಂಡಿರಲಿಲ್ಲ. ಬದಲಾಗಿ ಅವರ ತಾಯಿ, ತಂದೆ, ಅಜ್ಜ, ಗುರು ಹಿರಿಯರ ಮಾರ್ಗದರ್ಶನಗಳಿಂದ ಹೆಚ್ಚು ಮೈಗೂಡಿಕೊಂಡು ಗೌಡರು ಸರಿಯಾದ ಹಾದಿಯಲ್ಲಿ ಬೆಳೆದು ಬರಲು ಕಾರಣವಾಯಿತೆನ್ನಬಹುದು.

ಹೆಚ್.ಕೆ.ವೀರಣ್ಣಗೌಡರು ಬಾಲ್ಯದಲ್ಲಿ ನಾಯಿಕೆಮ್ಮು ರೋಗಕ್ಕೆ ಸಿಲುಕಿ ಮೂರು ವರ್ಷ ಆರೋಗದಿಂದ ನರಳಿದ್ದರಿಂದ ಬಹಳ ಕೃಶವಾಗಿದ್ದರು. ಹೀಗಾಗಿ ಅವರ ವಿದ್ಯಾಭ್ಯಾಸವನ್ನು ಏಳನೇ ವಯಸ್ಸಿನಲ್ಲಿ ಅವರ ತಂದೆ ತಮ್ಮ ಮನೆಯ ಜಗಲಿಯ ಮೇಲೆ 'ಮಠ'ದಲ್ಲಿ ಪ್ರಾರಂಭಿಸಿಲು ಅನುವು ಮಾಡಿಕೊಟ್ಟರು. ಊರಿನ ಇತರ ಮಕ್ಕಳು ಆಲ್ಲಿ ಓದಲು ಪ್ರಾರಂಭಿಸಿದರು. ಆ ಮಠದಲ್ಲಿ ಒಬ್ಬ ಉಪಾಧ್ಯಾಯರು ಅಲ್ಲಿಗೆ ಬರುವ ಮಕ್ಕಳಿಗೆ ಅಕ್ಷರಾಭ್ಯಾಸ, ಮಗ್ಗಿಲೆಕ್ಕ, ಬಾಯಿಲೆಕ್ಕ, ಪದ್ಯ ಮುಂತಾದವನ್ನು ಬಾಯಿ ಪಾಠ ಮಾಡಿಸುತ್ತಿದ್ದರು. ಉಪಾಧ್ಯಾಯರು ಬಾರದಿದ್ದ ದಿನಗಳಲ್ಲಿ ಗೌಡರು ತಂದೆಯವರ ಸಲಹೆಯಂತೆ ಮನೆಗೆ ತರಿಸುತ್ತಿದ್ದ ಒಕ್ಕಲಿಗರ ಪತ್ರಿಕೆ, ಮೈಸೂರು ಸ್ಟಾರ್, ಸಾಧ್ವಿ, ವೃತ್ತಾಂತ ಪತ್ರಿಕೆ, ಕಾಗೆ, ಕೋಗಿಲೆ, ಮಹಿಳಾ ಸಖಿ, ಇನ್ನು ಮುಂತಾದ ದಿನಪತ್ರಿಕೆ, ವಾರ ಪತ್ರಿಕೆಗಳಲ್ಲಿನ ಒಳ್ಳೆಯ ಲೇಖನಗಳನ್ನು ಪ್ರತಿ(ಕಾಪಿ) ಮಾಡುವ ಮೂಲಕ ಓದು ಸಾಗಿಸಿದರು. ವಾಸ್ತವವಾಗಿ ಇದರಿಂದ ಹೆಚ್.ಕೆ.ವೀರಣ್ಣಗೌಡರ ಬರವಣಿಗೆ ಕುದುರಿದ್ದು ಮಾತ್ರವಲ್ಲದೆ ಶಬ್ದ ಸಂಪತ್ತು, ಭಾಷಾ ಪ್ರೌಢಿಮೆ, ಲೋಕಜ್ಞಾನ ಹೆಚ್ಚಲು ಕಾರಣವಾಯಿತು. ಹಾಗೆಯೇ ದೇಶದ ಸ್ಥಿತಿಗತಿಗಳ ವಿಚಾರ ತಿಳಿಯುತ್ತಿದ್ದರಿಂದ ಸಾಮಾನ್ಯ ಜ್ಞಾನ ವೃದ್ಧಿಸಿತು. ಮಠಕ್ಕೆ ಉಪಾಧ್ಯಾಯರು ಬರುವುದು ನಿಂತ ಮೇಲೆ ಒಂದು ದಿನ ಬಾಲಕ ವೀರಣ್ಣಗೌಡ ತನ್ನ ತಂದೆ ಬೆಂಗಳೂರಿಗೆ ಹೋಗಿದ್ದ ಸಮಯದಲ್ಲಿ ಅವ್ವೇರಹಳ್ಳಿಗೆ ಒಂದು ಮೈಲಿ ದೂರದಲ್ಲಿದ್ದ ಅಕ್ಕೂರು ವಿಲೇಜ್ ಎಲಿಮೆಂಟರಿ ಸ್ಕೂಲಿಗೆ ಹೋಗಿ ಸೇರಿಕೊಂಡ. ಅಕ್ಕೂರು ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಓದಿದ ನಂತರ ಲೋಯರ್ ಸೆಕೆಂಡರಿ ತರಗತಿಗೆ ಬೇರೆ ಶಾಲೆ ಸೇರಬೇಕಾಗಿತ್ತು.

ಆದರೆ ಶಾಲೆಯಲ್ಲಿ ಬುದ್ಧಿವಂತ ವಿದ್ಯಾರ್ಥಿಯೆಂದು ಗುರುತಿಸಿಕೊಂಡ ವೀರಣ್ಣಗೌಡರನ್ನು ಉಪಾಧ್ಯಾಯರು ಇನ್ನು ಒಂದು ವರ್ಷ ಅಲ್ಲಿಯೇ ಇರಿಸಿಕೊಂಡು ಪಾಠ ಹೇಳಿಕೊಟ್ಟು ತಾವೇ ಖಾಸಗಿಯಾಗಿ ಲೋಯರ್ ಸೆಕೆಂಡರಿ ಪರೀಕ್ಷೆ ಕಟ್ಟಿಸುವುದಾಗಿ ಹೇಳಿದರು. ಇದರಿಂದ ವೀರಣ್ಣಗೌಡರು ತಮ್ಮ ಪಾಠಗಳನ್ನು ಹೇಳಿಸಿಕೊಂಡು ಉಳಿದ ಸಮಯದಲ್ಲಿ ಮೊದಲ ತರಗತಿ ಹುಡುಗರಿಗೆ ಪಾಠ ಹೇಳಿಕೊಡುವುದಕ್ಕೆ ಉಪಾಧ್ಯಯರಿಂದ ನೇಮಿಸಲ್ಪಟ್ಟಿದ್ದರು. ಆದ್ದರಿಂದ ಕೆಲವು ಹುಡುಗರು ವೀರಣ್ಣಗೌಡರನ್ನು 'ಚಿಕ್ಕಮೇಷ್ಟ್ರು' ಎಂದು ಕರೆಯುತ್ತಿದ್ದರು. ಹೆಚ್.ಕೆ.ವೀರಣ್ಣಗೌಡರಲ್ಲಿ ಅನ್ಯಾಯವನ್ನು ಧಿಕ್ಕರಿಸುವ ಗುಣ ಚಿಕ್ಕಂದಿನಲ್ಲಿಯೇ ಕಂಡುಬರುತ್ತದೆ. ಒಮ್ಮೆ ಉಪಾಧ್ಯಾಯರು ತರಗತಿಯಲ್ಲಿ ಪ್ರಶ್ನೆಯೊಂದಕ್ಕೆ ಸರಿಯಾಗಿ ಉತ್ತರಿಸಿದ್ದರೂ ಬಾಲಕ ವೀರಣ್ಣಗೌಡರಿಗೆ ಹೊಡೆದದ್ದನ್ನು ಪ್ರತಿಭಟಿಸಿ ತಾವೇ ಸ್ವತಃ ಖಾಸಗಿಯಾಗಿ ಓದಿ ಪರೀಕ್ಷೆ ಕಟ್ಟುವುದಾಗಿ ಶಾಲೆ ಬಿಟ್ಟು ಬಂದ ಪ್ರಕರಣ ಸಾಕ್ಷಿಯಾಗಿದೆ.  ಆ ಶಾಲೆ ಬಿಟ್ಟು ೧೯೧೩ರಲ್ಲಿ ಚನ್ನಪಟ್ಟಣದ ಹೈಸ್ಕೂಲಿಗೆ ಸೇರಿದರು. ೧೯೧೪ರ ಸಂದರ್ಭದಲ್ಲಿ ಮೈಸೂರಿಗೆ ಬ್ರಿಟಿಷ್ ವೈಸರಾಯ್ ಲಾರ್ಡ ಹರ್ಡಿಂಜರ್ ಭೇಟಿ ನೀಡಿದ ಸಂದರ್ಭದಲ್ಲಿ ಶಾಲೆಯ ಉಪಾಧ್ಯಾಯರ ಅನುಮತಿ ಪಡೆಯದೆ ಗೌಡರು ಮೈಸೂರಿಗೆ ಭಾರತದ ಬ್ರಿಟಿಷ್ ಚಕ್ರವರ್ತಿಯನ್ನು ನೋಡಲು ಹೋಗಿದ್ದರು. ಇದರಿಂದ ವೀರಣ್ಣಗೌಡರಿಗೆ ರಾಜಪ್ರಭುತ್ವದ ಬಗ್ಗೆ ಗೌರವ ಮತ್ತು ಒಲವು ಇದ್ದಿರಬಹುದೆಂದು ಗಮನಿಸಬಹುದು. ಅನುಮತಿ ಪಡೆಯದೆ ಹೋಗಿದ್ದ ವೀರಣ್ಣಗೌಡರ ಹೆಸರನ್ನು ಮುಖ್ಯೋಪಾಧ್ಯಾಯರು ಶಾಲೆಯ ಪುಸ್ತಕದಿಂದ ತೆಗೆದಿದ್ದರು.  ಇದರಿಂದ ಶಾಲೆಯ ಹೆಡ್‌ಮಾಸ್ಟರ್ ಆರ್.ವಿ.ಕೃಷ್ಣಸ್ವಾಮಿ ಅಯ್ಯರ್ (ವಿಖ್ಯಾತರಾದ ಕಾದಂಬರಿಗಾರ ಆರ್.ಕೆ.ನಾರಾಯಣ್ ಮತ್ತು ಪ್ರಸಿದ್ಧ ಚಿತ್ರಗಾರ ಆರ್.ಕೆ.ಲಕ್ಷ್ಮಣ್ ಅವರ ತಂದೆ) ಇವರ ಬಳಿ ಹೆಚ್.ಕೆ.ವೀರಣ್ಣಗೌಡರು ತಪ್ಪಾಯಿತೆಂದು ಕ್ಷಮೆ ಕೇಳಿ ತರಗತಿಗೆ ಮರಳಿದರು. ೧೯೧೮ರಲ್ಲಿ ಇಂಗ್ಲೀಷ್ –ಕನ್ನಡ ಲೋವರ್ ಸೆಕೆಂಡರಿ ಪರೀಕ್ಷೆಗೆ ಕುಳಿತಾಗ ಹೆಚ್.ಕೆ.ವೀರಣ್ಣಗೌಡರ ಬಲಗಾಲಿನಲ್ಲಿ  ಕಲ್ಲೋತ್ತಾಗಿ ಬಹಳ ಸಂಕಟಪಟ್ಟರು. ಆ ಸಂದರ್ಭದಲ್ಲಿ ಕಠಿಣವಾಗಿ ಕಂಡರೂ ಮೃದು ಹೃದಯಿಯಾದ ಆರ್.ವಿ.ಕೃಷ್ಣಸ್ವಾಮಿಯವರು ವೀರಣ್ಣಗೌಡರನ್ನು ಬುದ್ಧಿವಂತ ವಿದ್ಯಾರ್ಥಿಯೆಂದು ಗುರುತಿಸಿದ್ದರಿಂದ ಅವರಿಗೆ ಪರೀಕ್ಷೆ ಬರೆಯಲು ಬೇಕಾದ ಅನುಕೂಲಗಳನ್ನು ಮಾಡಿಕೊಟ್ಟರು. ಇದರಿಂದ ವೀರಣ್ಣಗೌಡರು ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಮೈಸೂರು ಸಂಸ್ಥಾನಕ್ಕೆ ೮ನೇ ರ್‍ಯಾಂಕ್ ಗಳಿಸಿದರು. ಇದು ಇವರ ಪರಿಶ್ರಮಕ್ಕೆ ಸಂದ ಮನ್ನಣೆಯಾಗಿತ್ತು. ಈ ಸನ್ನಿವೇಶಗಳು ವಿದ್ಯಾರ್ಥಿಗಳ ಭವಿಷ್ಯಕ್ಕೆ ಭಾಷ್ಯ ಬರೆಯುವಲ್ಲಿ ಉಪಾಧ್ಯಾಯರುಗಳ ಪಾತ್ರ, ಸ್ಥಾನ ಎಷ್ಟರ ಮಟ್ಟಿನದಾಗಿರುತ್ತದೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತವೆ.  ಅಲ್ಲದೆ ಯಾರೂ ಕದಿಯಲಾರದ ಕೊಟ್ಟಷ್ಟು ವೃದ್ಧಿಯಾಗುವ ಸಂಪತ್ತು ವಿದ್ಯೆ, ಅಂಥಹ ಮಹತ್ತರವಾದುದನ್ನು ಸಿದ್ಧಿಸಿಕೊಳ್ಳಲು ಎಂಥಹ ಕಷ್ಟವನ್ನಾದರೂ ಸಹಿಸುವ ತಾಳ್ಮೆ, ಛಲ ಇರಬೇಕು ಎಂಬುದು ಗಮನಿಸುವಂತಹದ್ದು.  ಚನ್ನಪಟ್ಟಣ ಹೈಸ್ಕೂಲಿಗೆ ಸೇರುವುದಕ್ಕೆ ಮೊದಲೇ ಅಂಚೆಯಲ್ಲಿ 'ದಿ ಸೆಲ್ಫ್ ಇಂಗ್ಲಿಷ್ ಸ್ಟಡಿ' ಎಂಬ ಪುಸ್ತಕವನ್ನು  ತರಿಸಿಕೊಂಡು ಇಂಗ್ಲಿಷ್ ಅಕ್ಷರಗಳನ್ನು ಬರೆಯುವುದನ್ನೂ ವೀರಣ್ಣಗೌಡರು ತಿಳಿದುಕೊಂಡಿದ್ದರು. ಹೀಗೆ ವಾರ್ಷಿಕ ಪರೀಕ್ಷೆಯಲ್ಲಿ ಇಂಗ್ಲಿಷ್ ಹೊರತುಪಡಿಸಿ ಉಳಿದೆಲ್ಲ ವಿಷಯಗಳಲ್ಲಿ ನೂರಕ್ಕೆ ಎಪ್ಪತ್ತು–ಎಂಬತ್ತು ಅಂಕಗಳಿಸಿದ್ದರು.

ಕಲಿಕೆಯುದ್ದಕ್ಕೂ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗುತ್ತಿದ್ದ ವೀರಣ್ಣಗೌಡರ ವಿದ್ಯಾಭಿರುಚಿ ಆಸಕ್ತಿಯುತವಾಗಿತ್ತು. ಆದ್ದರಿಂದ ಬಾಲಕನ ಚುರುಕು ಬುದ್ಧಿ ಕಂಡು ಅಧ್ಯಾಪಕರು ಡಬಲ್ ಪ್ರಮೋಷನ್ ಕೊಡುತ್ತೇವೆಂದರೂ ಒಪ್ಪದೆ ವೀರಣ್ಣಗೌಡರು ಹಂತ ಹಂತವಾಗಿ ಕಲಿಯಲು ಇಚ್ಛೆ ಪಟ್ಟರು.

ಡಾ.ಅಂಬೇಡ್ಕರರು ತಮ್ಮ ಶಾಲಾ ಜೀವನದಲ್ಲಿ ಅನುಭವಿಸಿದ ಅವಮಾನದ ರೀತಿಯಲ್ಲಿಯೇ ವೀರಣ್ಣಗೌಡರೂ ಸಹ ಚನ್ನಪಟ್ಟಣ ಹೈಸ್ಕೂಲಿನಲ್ಲಿದ್ದಾಗ ಹಿಂದುಳಿದ ವರ್ಗಕ್ಕೆ ಸೇರಿದವರೆಂಬ ಕಾರಣಕ್ಕಾಗಿ ಅವಮಾನವನ್ನು ಅನುಭವಿಸಬೇಕಾಗಿ ಬಂದಿತು. ಚನ್ನಪಟ್ಟಣ ಹೈಸ್ಕೂಲಿನ ೩ನೇ ತರಗತಿಯಲ್ಲಿ ಕನ್ನಡ, ಉರ್ದು, ಸಂಸ್ಕೃತ ಭಾಷೆಗಳಲ್ಲಿ ಯಾವುದಾದರೂ ಒಂದು ಭಾಷೆಯನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿತ್ತು. ಹಾಗಾಗಿ ವೀರಣ್ಣಗೌಡರು ಸಂಸ್ಕೃತದ ತರಗತಿಗೆ ಹೋಗಿ ಕುಳಿತುಕೊಂಡಾಗ "ಏನಯ್ಯ ನೀನು ಸಂಸ್ಕೃತ ಕಲಿಯಬೇಕೆ? ಚೆನ್ನಾಗಿ ಕನ್ನಡ ಕಲಿತುಕೊಂಡರೆ ಸಾಲದೆ? ನಿನಗೇಕೆ ಸಂಸ್ಕೃತ?" ಎಂಬ ಸಂಸ್ಕೃತ ಪಂಡಿತರ ಹೀಯಾಳಿಕೆಯ ಮಾತು ವೀರಣ್ಣಗೌಡರ ಮನಸ್ಸನ್ನು ಹೆಚ್ಚು ಘಾಸಿಗೊಳಿಸಿತು. ನೊಂದ ಮನಸ್ಸಿನಿಂದ ಕನ್ನಡ ತರಗತಿಗೆ ಹೋಗಿ ಕುಳಿತರು. ಕನ್ನಡ ಪಂಡಿತರ ಮಾರ್ಗದರ್ಶನ ವೀರಣ್ಣಗೌಡರಿಗೆ ಬೆಂಗಳೂರು ಒಕ್ಕಲಿಗರ ಸಂಘದ ವಿದ್ಯಾರ್ಥಿ ನಿಲಯದವರು ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಗಳಿಸಿಕೊಡುವುದರ ಜೊತೆಗೆ ಕುವೆಂಪು ಅವರ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರ ಪ್ರಶಂಸೆಗೆ ಪಾತ್ರವಾಗುವಂತೆ ಮಾಡಿತ್ತು.

ಹೈಸ್ಕೂಲಿನಲ್ಲಿದ್ದಾಗ ವೀರಣ್ಣಗೌಡರು ತಮ್ಮ ಸ್ನೇಹಿತ ತಿಟ್ಟಮಾರನಹಳ್ಳಿ ವಿ.ವೆಂಕಟಪ್ಪನವರ ಸಹಕಾರದಿಂದ ಶೈಕ್ಷಣಿಕೇತರ ಚಟುವಟಿಕೆಗಳಲ್ಲಿ ಹೆಚ್ಚು ಹೆಚ್ಚು ತೊಡಗಿಕೊಂಡರು. ೧೯೯೧ರ ಗಳರಲ್ಲಿ ಒಕ್ಕಲಿಗರವಿದ್ಯಾರ್ಥಿಸಂಘವನ್ನು ಸ್ಥಾಪಿಸಿದರು. ಹೀಗೆ ಥಿಯೋಸಫಿಸ್ಟರಾಗಿದ್ದ ಕೆ.ಸೂರ್ಯನಾರಾಯಣಪ್ಪ ಗುರುಗಳ ಗಮನ ಸೆಳೆದರು. ಅವರ ಸಂಪರ್ಕದಿಂದ ಥಿಯೋಸಾಫಿಕಲ್ ಸೊಸೈಟಿಯ ಸದಸ್ಯರಾಗಿ ಮದ್ರಾಸಿನ ಅಡ್ಯಾರ್ ನಲ್ಲಿ ನಡೆಯುತ್ತಿದ್ದ ಕನ್ವೆನ್‌ಕ್ಷನ್‌ಗಳಿಗೆ ಹೋಗಿ ಭಾಗವಹಿಸುತ್ತಿದ್ದರು. ಇದರಿಂದ ಆ ಕನ್ವೆನ್‌ಕ್ಷನ್‌ಗಳಲ್ಲಿ ಭಾಗವಹಿಸುತ್ತಿದ್ದ ಅಂದಿನ ಗಣ್ಯರಾದ ಸಹಕಾರ ಸಂಘಗಳ ರಿಜಿಸ್ಟ್ರಾರ್ ಕೆ.ಎಚ್.ರಾಮಯ್ಯ, ಪ್ರಮುಖ ಅಡ್ವೋಕೇಟ್ ಕೆ.ಶಂಕರನಾರಾಯಣರಾಯರು,ಮೈಸೂರು ಚೀಫ್‌ಕೋರ್ಟ್ ಮುಖ್ಯ ನ್ಯಾಯಾಧೀಶರಾಗಿದ್ದ ಕೆ.ಎಸ್.ಚಂದ್ರಶೇಖರ ಅಯ್ಯರ್, ಹರಿಜನ ಸೇವಾ ತತ್ಪರರಾಗಿದ್ದ ಗೋಪಾಲಸ್ವಾಮಿ ಅಯ್ಯರ್, ಶ್ರೀಮತಿ ಪಾರ್ವತಮ್ಮ ಚಂದ್ರಶೇಖರ ಅಯ್ಯರ್ ಮುಂತಾದವರ ಪರಿಚಯ, ಪ್ರಭಾವ ಉಂಟಾಯಿತು. ನಂತರದ ಬೆಳವಣಿಗೆಯಲ್ಲಿ ಥಿಯೋಸಾಫಿಕಲ್ ಸಂಸ್ಥೆಯಲ್ಲಿ ತಮ್ಮ ಅಭಿಪ್ರಾಯಗಳಿಗೆ ಮನ್ನಣೆಯಿಲ್ಲದ್ದನ್ನು ಕಂಡು. ಆ ವೇಳೆಗಾಗಲೇ ಅನಿಬೆಸೆಂಟರ ಪ್ರಭಾವ ಕುಗ್ಗುತ್ತಾ ಹೋಗಿ ಗಾಂಧೀಜಿಯವರ ಪ್ರಭಾವ ಹೆಚ್ಚುತ್ತಿದ್ದುದರಿಂದ ವೀರಣ್ಣಗೌಡರು ಆ ಸಂಸ್ಥೆಯಿಂದ ದೂರ ಸರಿದರು. ಶಾಲೆಯಲ್ಲಿ ತಾವು ಸ್ಥಾಪಿಸಿದ್ದ ಒಕ್ಕಲಿಗರ ವಿದ್ಯಾರ್ಥಿ ಸಂಘದ ಆಡಿಯಲ್ಲಿಯೇ ವಿದ್ಯಾರ್ಥಿನಿಲಯವನ್ನು , ಒಕ್ಕಲಿಗರ ಪತ್ರಿಕೆಯನ್ನು ಪ್ರಾರಂಭಿಸಿದರು. ಒಕ್ಕಲಿಗರ ಪತ್ರಿಕೆಯ ಮೊದಲ ಸಂಚಿಕೆಗೆ ಸಂದೇಶ ಕೇಳಲು ಕೆ.ಎಚ್.ರಾಮಯ್ಯನವರನ್ನು ಭೇಟಿ ಮಾಡಿದರು. ಉದಾತ್ತ, ಜನಪರ ಕಾಳಜಿಯುಳ್ಳ ನಾಯಕರಾಗಿದ್ದ ಕೆ.ಎಚ್.ರಾಮಯ್ಯನವರು ಒಕ್ಕಲಿಗರ ಪತ್ರಿಕೆ

ಪ್ರಾರಂಭಿಸುವ ವಿಚಾರದಲ್ಲಿ 'ಉದಾರಭಾವನೆ ನಮ್ಮಲ್ಲಿ ಬೆಳೆಯಬೇಕಾದರೆ ಜಾತಿಮತ ಸ್ಥಳ ಭಾವನೆ ಹೋಗಬೇಕು' ಎಂದರು. ಒಕ್ಕಲಿಗ ವಿದ್ಯಾರ್ಥಿ ಸಂಘ, ಒಕ್ಕಲಿಗ ವಿದ್ಯಾರ್ಥಿನಿಲಯ, ಒಕ್ಕಲಿಗರ ಪತ್ರಿಕೆಯನ್ನು ಪ್ರಾರಂಭಿಸಿದ ವೀರಣ್ಣಗೌಡರಲ್ಲಿ ಜಾತೀಯತೆಯ ಭಾವನೆ ಇದ್ದಿರಬಹುದಾದರೂ ಕೆ.ಎಚ್.ರಾಮಯ್ಯನವರ ಈ ಮಾತುಗಳು ಅವರಲ್ಲಿ ಜಾತ್ಯಾತೀತ ಮನೋಭಾವನೆಯನ್ನು ಬೆಳೆಸಿತು ಎನ್ನಬಹುದು. ಹಾಗಾಗಿ ಪತ್ರಿಕೆಯ ಹೆಸರನ್ನು ಬದಲಿಸಿ 'ಕರ್ನಾಟಕ ವಿದ್ಯಾರ್ಥಿ' ಎಂಬ ಹೆಸರಿನಲ್ಲಿ ಮುನ್ನಡೆಸಿದರು. ಈ ಪತ್ರಿಕೆ ಒಂದು ಕೈಬರಹದ ಪತ್ರಿಕೆಯಾಗಿ ವಿದ್ಯಾರ್ಥಿಗಳ ಅಭಿವ್ಯಕ್ತಿ ಮಾದ್ಯಮವಾಗಿ ಹೊರಹೊಮ್ಮಿದ್ದಲ್ಲದೆ ಅವರ ಲೇಖನ ಕಲೆ ವೃದ್ಧಿಗೊಳ್ಳಲು ಸಹಕಾರಿಯಾಯಿತು.

ಒಮ್ಮೆ ವೀರಣ್ಣಗೌಡರು ಕನ್ನಡ ಉಪಾಧ್ಯಾಯರೊಂದಿಗೆ ಗಟ್ಟಿಯಾಗಿ ಯಾವುದೋ ವಿಷಯಕ್ಕೆ ವಾದಸಿದ್ದನ್ನು ಕೇಳಿಸಿಕೊಂಡ ವಿಜ್ಞಾನ ಉಪಾಧ್ಯಾಯರಾದ ಟಿ.ಕೃಷ್ಣಮೂರ್ತಿಯವರು ವೀರಣ್ಣಗೌಡರನ್ನು ತರಗತಿಯ ನಂತರ ತಮ್ಮೊಂದಿಗೆ ಕರೆದುಕೊಂಡು 'ಏನೇ ಆದರೂ ಅವರು ಗುರುಗಳು; ನೀನು ವಿದ್ಯಾರ್ಥಿ, ಹಾಗಿದ್ದೂ ಗುರುಗಳನ್ನು ಗದರಿಸಿ ಮಾತಾಡುವುದು ವಿದ್ಯಾರ್ಥಿಯಾದವನಿಗೆ ತಕ್ಕುದಲ್ಲ' ಎಂದು ಬುದ್ದಿವಾದ ಹೇಳಿದರು. ಈ ಸಂದರ್ಭದಿಂದ ವೀರಣ್ಣಗೌಡರು ವಾದಿಸುವ ಗುಣ ಹೊಂದಿದವರಾಗಿ ಕಂಡು ಬಂದರೂ ಉಪಾಧ್ಯಾಯರ ಈ ರೀತಿಯ ಮಾರ್ಗದರ್ಶನವು ವೀರಣ್ಣಗೌಡರಲ್ಲಿ ಗುರುಹಿರಿಯರ ಬಗ್ಗೆ ಮತ್ತಷ್ಟು ವಿನಯವಂತಿಕೆಯನ್ನು ಬೆಳೆಸಿತು ಎನ್ನಬಹುದು. ಒಕ್ಕಲಿಗ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿಕೊಂಡಿದ್ದ ವೀರಣ್ಣಗೌಡರು ವಾರಕ್ಕೊಮ್ಮೆ ಒಬ್ಬೊಬ್ಬ ಉಪಾಧ್ಯಾಯರುಗಳ ಅಧ್ಯಕ್ಷತೆಯಲ್ಲಿ ಚರ್ಚಾಕೂಟಗಳನ್ನೇರ್ಪಡಿಸಿ ವಿದ್ಯಾರ್ಥಿಗಳು ಭಾಷಣ ಮಾಡುವ ಶಕ್ತಿ ರೂಢಿಸಿಕೊಳ್ಳುವುದಕ್ಕೆ ಮತ್ತು ಅವರ ತಿಳುವಳಿಕೆ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾದ ವಾತಾವರಣವನ್ನು ಸೃಷ್ಟಿಸಿದರು. ಈ ರೀತಿಯಾಗಿ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ವೀರಣ್ಣಗೌಡರಲ್ಲಿ ಸಂಘಟನಾ ಶಕ್ತಿ ಹಂತ ಹಂತವಾಗಿ ಅಗಾಧ ಪ್ರಮಾಣದಲ್ಲಿ ರೂಪು ತಳೆಯುತ್ತಿತ್ತು. ಇವರಲ್ಲಿದ್ದ ಈ ಸಾಮರ್ಥ್ಯವನ್ನು ಗುರುತಿಸಿದ ಬೆಂಗಳೂರಿನಲ್ಲಿ ಅಡ್ವೋಕೇಟ್ ಆಗಿದ್ದ ಬ್ರಾಹ್ಮಣೇತರ ಪಂಗಡಗಳ ನಾಯಕರಲ್ಲೊಬ್ಬರಾಗಿದ್ದ ಶ್ರೀಯುತ ಜೀ.ಪರಮಶಿವಯ್ಯನವರು ವೀರಣ್ಣಗೌಡರು ಚನ್ನಪಟ್ಟಣದಲ್ಲಿ ಅನೇಕ ಸಮಾರಂಭಗಳನ್ನು ಯಶಸ್ವಿಯಾಗಿ ನಡೆಸುತ್ತಿದ್ದನ್ನು ಗಮನಿಸಿ ಒಮ್ಮೆ "ನೀವು ಮೈಸೂರು ಸಂಸ್ಥಾನದ ಪಟೇಲರ ಸಭೆಯನ್ನು ಏಕೆ ನಡೆಸಬಾರದು?" ಎಂದು ಕೇಳಿದರು. ಅವರ ಸಲಹೆ ಸೂಚನೆಯ ಮೇರೆಗೆ ಹೆಚ್.ಕೆ.ವೀರಣ್ಣಗೌಡರು ತಮ್ಮ ಸ್ನೇಹಿತರೊಂದಿಗೆ ಸೇರಿ ಚನ್ನಪಟ್ಟಣದಲ್ಲಿ ಮೊದಲಿಗೆ ಪಟೇಲರ ಸಭೆಯನ್ನು ಯಶಸ್ವಿಯಾಗಿ ನಡೆಸಿದರು. ಇದರಿಂದ ಉತ್ತೇಜಿತರಾಗಿ ನಂತರ ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನಲ್ಲೂ ಸಭೆಗಳನ್ನು ನಡೆಸಿದರು. ಈಗ ಕರ್ನಾಟಕ ಸರ್ಕಾರ ಪ್ರತಿ ಗ್ರಾಮದಲ್ಲೂ ಗ್ರಾಮಸಭೆಯನ್ನು ನಡೆಸುವ ವ್ಯವಸ್ಥೆಯನ್ನು ಜಾರಿಗೊಳಿಸಿದೆ. ಗ್ರಾಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಆ ಸಭೆಯಲ್ಲಿಯೇ ಸಾಧ್ಯವಾದಷ್ಟು ಇತ್ಯರ್ಥಗೊಳಿಸಿಕೊಳ್ಳಬೇಕು ಎಂಬುದೇ ಗ್ರಾಮ ಸಭೆಯ ಮೂಲ ಉದ್ದೇಶ. ಇಂತಹ ಸಭೆಯನ್ನು ಸಂಘಟಿಸುವುದು ಆಯೋಜಕರಿಗೆ ಒಂದು ದೊಡ್ಡ ಸಮಸ್ಯೆಯೇ ಸರಿ. ಬಹಳ ಹಿಂದೆಯೇ ಇದೇ ಗ್ರಾಮೋದ್ಧಾರದ ಉದ್ದೇಶವನ್ನಿಟ್ಟುಕೊಂಡು ಪಟೇಲರ ಸಭೆಯನ್ನು

ನಡೆಸಬೇಕೆಂಬ ಸೂಚನೆ ಕೊಟ್ಟ ಪರಮಶಿವಯ್ಯನವರ ಸಲಹೆಯಂತೆ ಅದನ್ನು ಕಾರ್ಯರೂಪಕ್ಕೆ ತಂದ ವೀರಣ್ಣಗೌಡರ ಆಸಕ್ತಿಯನ್ನು ಇಲ್ಲಿ ನಾವು ಸ್ಮರಿಸಬೇಕಾಗುತ್ತದೆ. ಹಳ್ಳಿಗಾಡಿನಲ್ಲಿ ಬೆಳೆದು ರೂಪುಗೊಂಡ ವ್ಯಕ್ತಿತ್ವ ವೀರಣ್ಣಗೌಡರದು. ಅಂತಹ ಹಳ್ಳಿಯ ಮುಖ್ಯಸ್ಥರಾದ ಪಟೇಲರ ಮನೆತನದಲ್ಲಿ ಜನಿಸಿದ ಇವರಲ್ಲಿ ಪಟೇಲರ ಜವಾಬ್ದಾರಿ, ಗ್ರಾಮೋದ್ಧಾರದಲ್ಲಿ ಅವರ ಪಾತ್ರ ಇವುಗಳ ಬಗ್ಗೆ ತಿಳುವಳಿಕೆ ಇದ್ದಿತು. ಪಟೇಲರೆಂದರೆ ಜಮೀನ್ದಾರಿ ಪದ್ದತಿಯ ಒಂದು ಮುಖ, ಪಟೇಲರೆಂದರೆ ಕೇವಲ ಹಕ್ಕುಗಳನ್ನು ಚಲಾಯಿಸಲು ಅರ್ಹತೆ ಪಡೆದವರು ಎಂಬ ನಂಬಿಕೆ ಜನರಲ್ಲಿತ್ತು. ಅಂತಹ ಸಂದರ್ಭದಲ್ಲಿ ವೀರಣ್ಣಗೌಡರು ತಾವು ಸಂಘಟಿಸಿದ್ದ ಪಟೇಲರ ಸಭೆಯಲ್ಲಿ ಪಟೇಲರ ಹಕ್ಕು ಬಾಧ್ಯತೆಗಳು ಅಷ್ಟೆ ಅಲ್ಲ. ಅವರ ಕರ್ತವ್ಯಗಳು ; ಮುಖ್ಯವಾಗಿ ಸರ್ಕಾರಿ ಆಡಳಿತದಲ್ಲಿ ಪಟೇಲರ ಪಾತ್ರ ಎಷ್ಟು ಮುಖ್ಯವಾದುದ್ದು ಎಂಬ ವಿಚಾರಗಳನ್ನು ಸಭೆಯಲ್ಲಿ ಭಾಷಣದ ಮೂಲಕ ಚರ್ಚಿಸಲು ಅವಕಾಶ ಮಾಡಿಕೊಟ್ಟಿದ್ದರು. ಹೀಗೆ ಪಟೇಲರ ಕರ್ತವ್ಯಗಳನ್ನು ನೆನಪಿಸಿ ಆ ಮೂಲಕ ಗ್ರಾಮದ ಅಭ್ಯುದಯವನ್ನು ತಮ್ಮ ಕನಸನ್ನಾಗಿಸಿಕೊಂಡಿದ್ದ ಮನೆತನ ಈ ವೀರಣ್ಣಗೌಡರದು. ಬಹುಶಃ ಈ ಹಿನ್ನೆಲೆಯೇ ವೀರಣ್ಣಗೌಡರಿಗೆ ಜಿ.ಪರಮಶಿವಯ್ಯನವರ ಮಾತಿಗೆ ಸಮ್ಮತಿಸಿ ಇಂತಹ ಒಂದು ವಿಶೇಷವಾದ ಕಾರ್ಯಕ್ರಮ ನಡೆಸಲು ಸಾಮರ್ಥ್ಯವನ್ನು ತಂದುಕೊಟ್ಟಿರಬಹುದು.

ಹೆಚ್.ಕೆ.ವೀರಣ್ಣಗೌಡರು ತಮ್ಮ ಅಧ್ಯಯನದ ಜೊತೆಗೆ ಕುಟುಂಬದ ವೃತ್ತಿಯಾದ ವ್ಯವಸಾಯದ ಬಗ್ಗೆ ಹೆಚ್ಚು ಗಮನ ನೀಡುತ್ತಿದ್ದರು. ಅಂದರೆ ಶಾಲೆಯ ರಜಾ ದಿನಗಳಲ್ಲಿ ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಈ ವ್ಯವಸಾಯದ ಕೆಲಸದೊಂದಿಗೆ ವಿರಾಮ ಕಾಲದಲ್ಲಿ ತಂದೆಯವರು ಸಂಗ್ರಹಿಸಿದ್ದ ಪುಸ್ತಕಗಳನ್ನು ಓದುವುದರ ಮೂಲಕ ಜ್ಞಾನಾಭಿವೃದ್ಧಿ ಮಾಡಿಕೊಂಡರು. ಪತ್ರಿಕೆಗಳಿಗೆ ಲೇಖನವನ್ನು ಬರೆಯುತ್ತಿದ್ದರು. ಲೋಕ ವಿಖ್ಯಾತ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ದಿವಾನರಾಗಿದ್ದಾಗ ೧೯೧೧ರಲ್ಲಿ 'ಎಕನಾಮಿಕ್ಸ್ ಕಾನ್ಫರೆನ್ಸ್"ಗಳನ್ನು ಜಿಲ್ಲಾ ಮತ್ತು ತಲ್ಲೂಕು ಮಟ್ಟಗಳಲ್ಲಿ ಏರ್ಪಡಿಸುತ್ತಿದ್ದರು. ಈ ವೇಳೆಗಾಗಲೇ ಮಾಧ್ಯಮಿಕ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ವೀರಣ್ಣಗೌಡರು ತಾಲ್ಲೂಕು ಕಾನ್ಫರೆನ್ಸ್‌ನಲ್ಲಿ 'ವ್ಯವಸಾಯಗಾರನಿಗೆ ವಿದ್ಯೆ ಅವಶ್ಯಕ' ಎಂಬ ವಿಷಯದಲ್ಲಿ ಭಾಷಣ ಮಾಡಿದ್ದರು. ಹೀಗೆ ರೈತನಿಗೆ ಅವಶ್ಯಕವಾಗಿ ಬೇಕಾಗಿರುವ ಅಕ್ಷರಜ್ಞಾನ ಹಾಗು ವಿದ್ಯಾವಂತನೊಬ್ಬ ಸ್ವಲ್ಪ ಮಟ್ಟಿಗಾದರೂ ಹೊಂದಿರಬೇಕಾದ ತನ್ನ ಕುಟುಂಬದ ವೃತ್ತಿಯ ಜ್ಞಾನ ಶಿಸ್ತು, ಇವೆರಡೂ ವ್ಯಕ್ತಿತ್ವದ ವಿಕಸನಕ್ಕೆ ಅವಶ್ಯಕ ಎಂಬುದನ್ನು ಇವರು ಮನಗಂಡಿದ್ದರು. ಅಂತೆಯೇ ದೇಶಭಕ್ತಿ, ಜನಸೇವೆ, ಸ್ವಾವಲಂಬನೆ, ಶಿಸ್ತನ್ನು ಕಲಿಸುವ ಸ್ಕೌಟ್‌ನಂತಹ ಶಿಕ್ಷಣ ವೀರಣ್ಣಗೌಡರಿಗೆ ದೊರತಿದ್ದು, ಗೌಡರು ಶಿಸ್ತುಬದ್ಧ ಜೀವನ ನಡೆಸಲು ಮತ್ತು ದೇಶಸೇವೆಗೆ ಪಣತೊಟ್ಟು ನಿಲ್ಲುವಂತೆ ಮಾಡಿತು. ಸ್ಕೌಟ್‌ನಲ್ಲಿ ತನ್ನ ಕೆಲಸ ತಾನು ಮಾಡುವುದು ಅವಮಾನಕರವಲ್ಲವೆಂಬ ಶಿಕ್ಷಣವನ್ನು ಗೌಡರು ಪಡೆದಿದ್ದರು. ಈ ಹಿನ್ನೆಲೆಯಲ್ಲಿ ಶಿಸ್ತುಬದ್ಧ ಜೀವನಕ್ಕೆ, ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲು ಪ್ರತಿಯೊಬ್ಬ ವಿದ್ಯಾರ್ಥಿಗಳಿಗೆ ಸ್ಕೌಟ್ ತರಬೇತಿ ಉಪಯುಕ್ತವಾದುದೆನಿಸುತ್ತದೆ. ಸ್ಕೌಟಿನ ಬಗ್ಗೆ ಹೆಚ್ಚಿನ ಆಸಕ್ತಿಯಿದ್ದ ಗೌಡರು ಚಿಕ್ಕ ವಯಸ್ಸಿನಲ್ಲಿಯೇ ಸ್ಕೌಟ್ ಮಾಸ್ಟರ್ ತರಬೇತಿಯನ್ನು ಪಡೆದಿದ್ದರು.

ಮುಂದೆ ಕಾಲೇಜು ಶಿಕ್ಷಣಕ್ಕೆಂದು ಮೈಸೂರಿನ ವೆಸ್ಲಿಯನ್ ಮಿಷನ್ ಕೊಲಜಿಯೇಟ್ ಹೈಸ್ಕೂಲಿನಲ್ಲಿ ಯೂನಿವರ್ಸಿಟಿ ಎಂಟ್ರೆನ್ಸ್ ತರಗತಿಗೆ ಸೇರಿದರು. ಆದರೆ ವೀರಣ್ಣಗೌಡರ ಶೈಕ್ಷಣಿಕೇತರ ಕಾರ್ಯ ಚಟುವಟಿಕೆಗಳು ಅಲ್ಲಿಯೂ ಮುಂದುವರಿದುವು. ಸ್ಕೌಟ್ ಚಳುವಳಿಯ ಬಗ್ಗೆ ಇದ್ದ ವಿಶೇಷ ಆಸಕ್ತಿಯಿಂದ ಸ್ಕೌಟ್ ಟ್ರೂಪ್‌ಗಳನ್ನು ಸಂಘಟಿಸಿ ಸ್ಕೌಟ್ ಮಾಸ್ಟರ್ ಆಗಿ ಕೆಲಸ ಮಾಡುತ್ತಿದ್ದರು. ಅಲ್ಲದೆ ಮೈಸೂರು ಸಂಸ್ಥಾನದ ಒಕ್ಕಲಿಗರ ವಿದ್ಯಾರ್ಥಿಗಳ ಮಹಾಸಭೆಯನ್ನು ಯಶಸ್ವಿಯಾಗಿ ನಡೆಸಿದರು. ಈ ಮಹಾಸಭೆಗೆ ಅಂದಿನ ಮೈಸೂರು ಸಂಸ್ಥಾನದ ಬ್ಯಾರಿಸ್ಟರ್ ಬಿ.ನಾಗಪ್ಪನವರು ಅಧ್ಯಕ್ಷರಾಗಿದ್ದರು. ಈ ಸಭೆಯಲ್ಲಿ ನೇಮಕವಾದ 'ಮೈಸೂರು ಸಂಸ್ಥಾನದ ಒಕ್ಕಲಿಗ ವಿದ್ಯಾರ್ಥಿಗಳ ಸ್ಥಾಯಿಸಮಿತಿ'ಯ ಸೆಕ್ರೆಟರಿಯಾಗಿ ಹೆಚ್.ಕೆ.ವೀರಣ್ಣಗೌಡರು ಆಯ್ಕೆಯಾದರು. ಇದರಿಂದ ಹಾಸನ, ನೆಲಮಂಗಲ, ತುಮಕೂರು ಮುಂತಾದ ಸ್ಥಳಗಳಲ್ಲಿ ಒಕ್ಕಲಿಗ ವಿದ್ಯಾರ್ಥಿ ನಿಯಲಗಳನ್ನು ಸ್ಥಾಪಿಸಲು ಓಡಾಡಿದರು. ಹಾಸನದಲ್ಲಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸುವ ಕಾರ್ಯದಲ್ಲಿ ಅಲ್ಲಿನ ಹಿರಿಯ ವಿದ್ಯಾರ್ಥಿಗಳು ಸಹಕರಿಸದಿದ್ದರೂ ಕಾರ್ಯೋನ್ಮುಖರಾದ ವೀರಣ್ಣಗೌಡರ ಪ್ರಯತ್ನವನ್ನು ವಿದ್ಯಾರ್ಥಿನಿಲಯದ ಉದ್ಘಾಟನಾ ಸಮಾರಂಭಕ್ಕೆ ಆಗಮಿಸಿದ್ದ ಅಲ್ಲಿನ ವಕೀಲರಾಗಿದ್ದ ಮುದ್ದಪ್ಪನವರು ತಮ್ಮ ಭಾಷಣದಲ್ಲಿ "ನೀವಿನ್ನೂ ತರುಣರಾದರೂ, ನಮ್ಮ ಮುಂದಿನ ಪೀಳಿಗೆಯಾದರೂ ವಿದ್ಯಾವಂತರಾಗಿ ಮುಂದೆ ಬರಲಿ ಎಂಬ ಮಹದಾಶೆಯಿಂದ ಬಡ ಒಕ್ಕಲಿಗ ಹುಡುಗರ ಸಹಾಯಾರ್ಥ ಇಂತಹ ಒಂದು ಕಾರ್ಯ ಮಾಡುತ್ತಿರುವುದು ಸಂತೋಷ'' ಎಂದು ಹೇಳಿದರು. ಅವರ ಈ ಪ್ರೋತ್ಸಾಹದಾಯಕ ನುಡಿಗಳು ಹೆಚ್.ಕೆ.ವೀರಣ್ಣಗೌಡರಿಗೆ ಸಾರ್ವಜನಿಕ ಕೆಲಸಗಳಲ್ಲಿ ತಮ್ಮ ಚಟುವಟಿಕೆ ಮುಂದುವರಿಸಲು ಮತ್ತಷ್ಟು ಸ್ಫೂರ್ತಿ ನೀಡಿದವೆಂದು ಹೇಳಬಹುದು. ಈ ರೀತಿಯ ಕೆಲಸಗಳ ಫಲವಾಗಿ ವೀರಣ್ಣಗೌಡರಿಗೆ ತರಗತಿಯ ಪಠ್ಯಕ್ರಮಗಳ ಬಗ್ಗೆ ಗಮನ ನೀಡಲು ಸಾಧ್ಯವಾಗಲಿಲ್ಲ. ಇದರಿಂದ ಆ ವರ್ಷ ಅನುತ್ತೀರ್ಣರಾಗಿ ಮನೆ ಸೇರ ಬೇಕಾಯಿತು. ಹೀಗೆ ವಿದ್ಯಾರ್ಥಿ ದೆಸೆಯಲ್ಲಿಯೇ ಅವರಲ್ಲೊಬ್ಬ ಸಂಘಟಕ, ಹೋರಾಟಗಾರ ಅವರಿಗೆ ತಿಳಿಯದಂತೆಯೇ ರೂಪುಗೊಳ್ಳುತ್ತಿದ್ದ. ಈ ಪ್ರತಿ ಕೆಲಸದಲ್ಲಿಯೂ ಹೊಣೆಗಾರಿಕೆ ಅವರ ಜೊತೆಯಾಗಿತ್ತು. ಹೆಸರಿಗಾಗಿ ಇಂದು ಮುಖಂಡರಾಗಿ ಮಿಂಚುವ ಜನರಿಗೆ ಹೋಲಿಸಿದಾಗ ಪ್ರತಿಫಲಾಪೇಕ್ಷೆ ಇಲ್ಲದ ಇವರ ನಿಸ್ವಾರ್ಥ ಸೇವೆ ವಿಶಿಷ್ಟವೆನಿಸುತ್ತದೆ.

ಯೂನಿವರ್ಸಿಟಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಅನುತ್ತೀರ್ಣರಾಗಿ ಪುನಃ ಪರೀಕ್ಷೆ ಕಟ್ಟಲು ಬೆಂಗಳೂರಿಗೆ ವೆಸ್ಲಿಯನ್ ಮಿಷನ್ ಕೊಲಿಜಿಯೇಟ್ ಹೈಸ್ಕೂಲಿಗೆ ಸೇರಿದರು. ಅಲ್ಲಿ ವೀರಣ್ಣಗೌಡರು ಒಕ್ಕಲಿಗ ವಿದ್ಯಾರ್ಥಿ ನಿಲಯಕ್ಕೆ ಸೇರಿರದಿದ್ದರೆ ಒಬ್ಬ ಪದವಿಧರರಾಗುತ್ತಿದ್ದರೋ ಏನೋ? ಆದರೆ ಬೆಂಗಳೂರಿನ ಒಕ್ಕಲಿಗ ವಿದ್ಯಾರ್ಥಿಗಳ ಹಾಸ್ಟೆಲಿಗೆ ಸೇರಿ ಅಲ್ಲಿಯೂ ಹಾಸ್ಟೆಲಿನ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸಿದ್ದರಿಂದ ಆ ವರ್ಷವೂ ಉತ್ತೀರ್ಣರಾಗದೆ ವಿದ್ಯಾಭ್ಯಾಸದಲ್ಲಿ ನಿರಾಸಕ್ತಿ ಉಂಟಾಯಿತು. ಆ ವೇಳೆಗಾಗಲೇ ೧೯೨೧ರಲ್ಲಿ ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳುವಳಿ ಪ್ರಾರಂಭವಾಗಿತ್ತು. ಹಾಗಾಗಿ ಮತ್ತೊಮ್ಮೆ ಪರೀಕ್ಷೆ ಕಟ್ಟಲು ವೀರಣ್ಣಗೌಡರಿಗೆ ಸಾಧ್ಯವಾಗದೇ ಹೋಯಿತು. ಇಂತಹ ಸಂದರ್ಭದಲ್ಲಿ ಮೈಸೂರು ಸಂಸ್ಥಾನ ಬ್ರಿಟೀಷರ ನೇರ ಆಳ್ವಿಕೆಗೆ ಒಳಪಟ್ಟಿರದ ಕಾರಣ ಅಸಹಕಾರ

ಚಳುವಳಿಯ ಕಾವು ಮೈಸೂರು ಸಂಸ್ಥಾನದಲ್ಲಿ ಅಷ್ಟಾಗಿ ಕಂಡು ಬಂದಿರಲಿಲ್ಲ. ಇದರಿಂದ ಊರು ಸೇರಿದ ವೀರಣ್ಣಗೌಡರು ವ್ಯವಸಾಯದ ಕಡೆ ಗಮನಹರಿಸಿದರು. ತದನಂತರ ಶಿಕ್ಷಕ ವೃತ್ತಿಯನ್ನು ಕೈಗೊಂಡರು. ಅಲ್ಪಕಾಲದಲ್ಲಿಯೇ ಅದನ್ನು ಬಿಟ್ಟು ಪತ್ರಿಕಾ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ಈ ವೇಳೆಗಾಗಲೇ ೩೨ ವರ್ಷ ತುಂಬಿದ ವೀರಣ್ಣಗೌಡರಿಗೆ ಮನೆಯಲ್ಲಿ ವಿವಾಹದ ಪ್ರಸ್ತಾಪ ತೀವ್ರಗೊಂಡಿತು.

ಥಿಯೋಸಾಫಿಕಲ್ ಸೊಸೈಟಿಯಂತಹ ಸಾಮಾಜಿಕ ಸುಧಾರಣೆಯ ಧ್ಯೇಯ ಹೊಂದಿದ್ದ ಸಂಸ್ಥೆಯ ಸಂಪರ್ಕ ವೀರಣ್ಣಗೌಡರನ್ನು ಹಲವಾರು ಸಮಾಜ ಚಿಂತಕರ ಪ್ರಭಾವಕ್ಕೆ ಒಳಗು ಮಾಡಿತ್ತು. ಹೀಗಾಗಿ ರಾಜಾರಾಮ್ ಮೋಹನ್‌ರಾಯ್ ಮತ್ತು ಜ್ಯೋತಿಬಾ ಪುಲೆ, ಅನಿಬೆಸೆಂಟ್, ಗೋಪಾಲಕೃಷ್ಣ ಗೋಖಲೆಯವರಂತಹ ಸಮಾಜಸುಧಾರಕರ ವಿಚಾರಧಾರೆಗಳ ಬಗ್ಗೆ ಪ್ರಭಾವಿತರಾಗಿದ್ದ ಗೌಡರು ಬಾಲವಿಧವೆ ತಾಯಮ್ಮನನ್ನು ವಿವಾಹವಾದರು. ಇವರ ವಿವಾಹ ೧೯೩೦ರ ದಶಕದ ಅಂದಿನ ಜನಸಮುದಾಯದಲ್ಲಿ ಚರ್ಚೆಗೆ ಗ್ರಾಸವಾಗಿತ್ತು. ಹೀಗೆ ವಿಧವೆಯನ್ನು ಮದುವೆಯಾಗುವುದರ ಮೂಲಕ ಸ್ತ್ರೀ ಶೋಷಣೆಯ ನಿವಾರಣೆಗೆ ತಾವೇ ಮುಂದಾದರು. ವೈವಾಹಿಕ ಜೀವನಕ್ಕೆ ಅಡಿಯಿಡುವ ಮೊದಲು ಹಲವಾರು ರೀತಿಯ ಶ್ರೀಮಂತ ಸಂಬಂಧಗಳು ಕೂಡಿ ಬಂದರೂ ತಮ್ಮ ಆದರ್ಶಕ್ಕೆ ಬದ್ಧರಾಗಿ ನಿಂತ ಹೆಚ್.ಕೆ.ವೀರಣ್ಣಗೌಡರ ನಿಲುವು ಶ್ಲಾಘನೀಯವಾದುದು. ಹಾಗೆಯೇ ಸಮಾಜದ ರೀತಿನೀತಿಗಳ ವಿರುದ್ಧ ಸರಳವಾಗಿ ಶಾಸ್ತ್ರೋಕ್ತವಾಗಿ ವಿವಾಹವಾಗುವ ಮೂಲಕ ಸ್ತ್ರೀಸ್ಥಾನಮಾನಕ್ಕೆ ಹೆಚ್ಚಿನ ಮಹತ್ವವನ್ನು ಕಲ್ಪಿಸಿಕೊಡುವ ಹಾದಿಯಲ್ಲಿ ಮುನ್ನಡೆದರು. ಸ್ತ್ರೀಪರ ಕಾಳಜಿಯುಳ್ಳವರಾಗಿದ್ದ ವೀರಣ್ಣಗೌಡರು ತಮಗೆ ಮಕ್ಕಳಿಲ್ಲದಿದ್ದರೂ ಸಂಬಂಧಿಕರ ಹೆಣ್ಣು ಮಕ್ಕಳನ್ನು ತಂದು ಪ್ರೀತಿಯಿಂದ ಸಾಕಿ ಸಲುಹಿ ವಿವಾಹ ಮಾಡಿಕೊಟ್ಟಿರುವ ಸಂದರ್ಭಗಳಿವೆ. ಲಿಂಗಸಮಾನತೆಯ ದೃಷ್ಟಿಯಿಂದ ಪತ್ನಿಯ ಎಲ್ಲಾ ಕೆಲಸಗಳಲ್ಲಿ ಸಹಕರಿಸುತ್ತಿದ್ದರು. ತಮ್ಮ ಸಾರ್ವಜನಿಕ ಚಟುವಟಿಕೆಗಳ ಬಗ್ಗೆ ಪತ್ನಿಯೊಂದಿಗೆ ಚರ್ಚಿಸಿ ಅವರ ಸಲಹೆ ಸೂಚನೆಗಳಿಗೆ ಆದ್ಯತೆ ನೀಡುತ್ತಿದ್ದುದ್ದನ್ನು ಗಮನಿಸಿದರೆ ಅವರ ಸ್ತ್ರೀಪರ ಕಾಳಜಿ ಗೋಚರವಾಗುತ್ತದೆ. ಇಂತಹ ಮನಃಸ್ಥಿತಿಯ ವೀರಣ್ಣಗೌಡರಿಗೆ ರಷ್ಯಾ ದೇಶದ ಒಬ್ಬ ಸುಂದರ ಸುಸಂಪನ್ನ ಮಹಿಳೆಯ ಜೀವನದ ಏಳುಬೀಳುಗಳ ಸುತ್ತ ಎಣೆದ ಕಥೆಯನ್ನೊಳಗೊಂಡ ಟಾಲ್‌ಸ್ಟಾಯ್‌ರವರ 'ಅನ್ನಕರೇನಿನಾ' ಕೃತಿ ಮನಸೆಳೆದಿದ್ದು ಸಹಜವಾಗಿತ್ತು. ಹೀಗಾಗಿ ಆ ಕೃತಿಯನ್ನು ಗೌಡರು ಹಲವಾರು ಬಾರಿ ಓದಿಕೊಂಡಿದ್ದರು.

ಮಹಾತ್ಮಗಾಂಧೀಜಿಯವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಮರಳುವವರೆಗೆ ಗೋಖಲೆಯವರ ನೇತೃತ್ವದಲ್ಲಿ ಮುನ್ನಡೆದಿದ್ದ ಸ್ವಾತಂತ್ರ್ಯ ಹೋರಾಟ ಅಂದಿನ ಯುವ ಮನಸ್ಸುಗಳಲ್ಲಿ ಗೋಖಲೆಯವರ ಬಗ್ಗೆ ಒಂದು ರೀತಿಯ ಪೂಜ್ಯ ಭಾವನೆ ಮೂಡಿಸಿತ್ತು. ಯುವಜನಾಂಗದ ಮೇಲೆ ಗೋಖಲೆಯವರಿಗಿದ್ದ ಅಪಾರ ನಂಬಿಕೆಯೇ ಯುವ ಮನಸ್ಸುಗಳಲ್ಲಿ ಗೋಖಲೆಯವರು ಬೇರೂರಲು ಕಾರಣವೆಂದು ಹೇಳಬಹುದು. ಹೀಗಾಗಿ ಚಿಕ್ಕಂದಿನಲ್ಲಿಯೇ ಗೋಖಲೆಯವರ ವಿಚಾರಗಳಿಂದ ಪ್ರಭಾವಿತರಾಗಿದ್ದ ವೀರಣ್ಣಗೌಡರು ತಮ್ಮ ಪುಸ್ತಕಗಳ ಪೆಟ್ಟಿಗೆಯ ಮೇಲೆ ಗೋಖಲೆಯವರ ಫೋಟೋವನ್ನು ಅಂಟಿಸಿಕೊಂಡಿದ್ದರ ಮೂಲಕ ಗೋಖಲೆಯವರ ಆರಾಧಕರಾಗಿದ್ದರು ಎಂಬುದು ತಿಳಿದು ಬರುತ್ತದೆ.

ಗಾಂಧೀಜಿಯವರ ಅಹಿಂಸಾತ್ಮಕ ತತ್ವ ಹೆಚ್.ಕೆ.ವೀರಣ್ಣಗೌಡರ ಮೇಲೆ ಅಪಾರ ಪ್ರಭಾವ ಬೀರಿತ್ತು. ಹೀಗಾಗಿ ಅವರ ಜೀವನದ ಹೋರಾಟಗಳೆಲ್ಲಾ ಅಂದರೆ ಇರ್ವಿನ್ ನಾಲಾ ರೈತರ ಚಳುವಳಿ, ಶಿವಪುರ ಧ್ವಜ ಸತ್ಯಾಗ್ರಹ ಇವೆಲ್ಲವು ಅಹಿಂಸಾತ್ಮಕ ಹೋರಾಟಗಳಾಗಿದ್ದವು. ಹಾಗೆಯೇ 'ಸ್ವರಾಜ್ಯ ನನ್ನ ಜನ್ಮಸಿದ್ದ ಹಕ್ಕು' ಎಂದು ಗುಡುಗಿದ ಬಾಲಗಂಗಾಧರ ತಿಲಕರ ಕ್ರಾಂತಿಕಾರಕ ಮನೋಭಾವ ಯುವಕರ ಮೇಲೆ ಬೀರಿದ ಪ್ರಭಾವ ಅಪಾರ. ಅಂತೆಯೇ ತಿಲಕರ ವಿಚಾರಧಾರೆಗೆ ಹೆಚ್.ಕೆ.ವೀರಣ್ಣಗೌಡರು ಮಾರುಹೋಗಿದ್ದ ಗೌಡರು ತಿಲಕ ಜೈಲು ಶಿಕ್ಷೆಗೆ ಸಂಬಧಿಸಿದಂತೆ ಪ್ರಕಟವಾಗಿದ್ದ 'ತಿಲಕ ಕಟ್ಟಳೆ' ಎಂಬ ಕನ್ನಡಾನುವಾದದ ಪುಸ್ತಕದಿಂದ ಸಾಕಷ್ಟು ಸ್ಪೂರ್ತಿ ಪಡೆದ್ದಿದ್ದರು. ಮೈಸೂರು ಸಂಸ್ಥಾನದ ಗಣ್ಯವ್ಯಕ್ತಿಯಾಗಿದ್ದ ಕೆ.ಹೆಚ್.ರಾಮಯ್ಯನವರ ಜಾತ್ಯತೀತ ಮನೋಭಾವ ಮತ್ತು ರೈತಾಪಿ ವರ್ಗದ ಬಗೆಗಿನ ಒಲವು ವೀರಣ್ಣಗೌಡರಲ್ಲಿಯೂ ಕರಗತವಾಗಿದ್ದವು.

ಹೀಗೆ ಸಮಕಾಲೀನ ರಾಜ್ಯ ನಾಯಕರುಗಳಾದ ಹೆಚ್.ಸಿ.ದಾಸಪ್ಪ, ಟಿ.ಸಿದ್ದಲಿಂಗಯ್ಯ, ಎಸ್.ನಿಜಲಿಂಗಪ್ಪ, ಕೆ.ಟಿ.ಭಾಷ್ಯಂ, ವಿ.ವೆಂಕಟಪ್ಪ, ಎಸ್.ಚನ್ನಯ್ಯ, ಕೆ.ಸಿ.ರೆಡ್ಡಿ ಮುಂತಾದವರ ಗುಣಸ್ವಭಾವ, ವರ್ಚಸ್ಸು, ವಿಚಾರಧಾರೆಗಳು ಒಂದೊಂದು ರೀತಿಯಲ್ಲಿ ಹೆಚ್.ಕೆ.ವೀರಣ್ಣಗೌಡರ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು. ಹಾಗೆಯೇ ರಾಷ್ಟ್ರನಾಯಕರುಗಳಾದ ಜವಹರಲಾಲ ನೆಹರು, ಸರ್ದಾರ್ ವಲ್ಲಭಾಯ್ ಪಟೇಲ್, ಲಾಲ್ ಬಹದ್ದೂರ್ ಶಾಸ್ತ್ರಿ, ನೀಲಂ ಸಂಜೀವರೆಡ್ಡಿ, ಸುಭಾಷ್‌ಚಂದ್ರ ಭೋಸ್ ಮುಂತಾದವರು ವೀರಣ್ಣಗೌಡರ ರಾಜಕೀಯದ ಆದರ್ಶಗಳಾಗಿದ್ದರು.

ವೀರಣ್ಣಗೌಡರ ಮೇಲೆ ರಾಜಕೀಯ ಚಿಂತಕರು ಮಾತ್ರವಲ್ಲದೆ ಸಾಹಿತ್ಯಿಕ ಅಂಶಗಳು ಪ್ರಭಾವ ಬೀರಿರುವುದನ್ನು ಕಾಣಬಹುದು. ಟಾಲ್‌ಸ್ಟಾಯ್‌ರವರ ಕೃತಿ 'ಅನ್ನಕರೇನಿನಾ', ಹಾಗು ಕಾರ್ಲ್‌ಮಾರ್ಕ್ಸ್‌ರವರ ಸಮಾಜವಾದದ ಕೃತಿಗಳು ಸ್ತ್ರೀಪರ ಕಾಳಜಿ ಮತ್ತು ಶ್ರಮಿಕ ವರ್ಗದ ಬಗ್ಗೆ ಹೆಚ್ಚಿನ ಕಾಳಜಿಯಿದ್ದ ವೀರಣ್ಣಗೌಡರ ಮನಗೆದ್ದಿದ್ದವು. ಹಾಗಾಗಿ ವೀರಣ್ಣಗೌಡರು ೧೯೪೨ರಲ್ಲಿ ಶಿವಮೊಗ್ಗ ಜೈಲಿನಲ್ಲಿ ಶಿಕ್ಷೆ ಅನುಭವಿಸುವಾಗ ರಷ್ಯಾ ದೇಶದ ಸಮಾಜವಾದಕ್ಕೆ ಸಂಬಂಧಿಸಿದ ಕಾರ್ಲ್‌ಮಾರ್ಕ್ಸ್‌ರವರ ಕೃತಿಗಳನ್ನು ತರಿಸಿಕೊಂಡು ಓದುತ್ತಿದ್ದರು. ಸಮಾಜದ ಎಲ್ಲಾ ವರ್ಗವನ್ನು ಸಮಾನ ರೀತಿಯಲ್ಲಿ ಕಾಣುವ 'ಕಮ್ಯೂನಿಸಂ' ಬಗ್ಗೆ ಗೌಡರಿಗೆ ಹೆಚ್ಚು ಒಲವಿತ್ತು. ಮಾರ್ಕ್ಸ್‌ನ ಸಿದ್ದಾಂತ ಕುರಿತು ಸೊಗಸಾಗಿ ಮಾತನಾಡಬಲ್ಲವರಾಗಿದ್ದರು. ಜೊತೆಗೆ ವೆಂಕಣ್ಣಯ್ಯ, ಕುವೆಂಪು, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಡಿ.ವಿ.ಜಿ. ಮುಂತಾದವರ ಸಾಹಿತ್ಯ ಬರಹಗಳು ಮತ್ತು ಪ್ರೋತ್ಸಾಹ ಗೌಡರ ಮನದಲ್ಲಿ ಹುದುಗಿದ್ದ ಸಾಹಿತ್ಯಾಸಕ್ತಿಯನ್ನು ಮತ್ತಷ್ಟು ವೃದ್ಧಿಸಿದವೆಂದು ಹೇಳಬಹುದು.

ಒಟ್ಟಾರೆ ಒಂದು ಶಿಲ್ಪವು ರೂಪುಗೊಳ್ಳಲು ಶಿಲ್ಪಿಯ ಒಂದೊಂದು ಉಳಿಯ ಏಟು ಪ್ರಮುಖ ಪಾತ್ರವಹಿಸುವಂತೆ, ಹೆಚ್.ಕೆ.ವೀರಣ್ಣಗೌಡರ ವ್ಯಕ್ತಿತ್ವ ರೂಪುಗೊಳ್ಳಲು ಗುರು ಹಿರಿಯರ, ತಂದೆ ತಾಯಿಗಳ ಮಾರ್ಗದರ್ಶನದೊಂದಿಗೆ ಹಲವಾರು ಮಹನೀಯರುಗಳ ವಿಚಾರಧಾರೆಗಳು, ಸಾಹಿತ್ಯ, ಕಲೆ ಇವುಗಳೆಲ್ಲವೂ ಪ್ರಮುಖ ಪಾತ್ರವಹಿಸಿವೆ. ಹಾಗಾಗಿ ಅವರೊಬ್ಬ ವೈಚಾರಿಕ ಮನೋಭಾವನೆಯ ಉದಾತ್ತ

ಧ್ಯೇಯಗಳುಳ್ಳ ಮಾನವತಾವಾದಿಯಾಗಿ, ರೈತನಾಯಕನಾಗಿ, ರಾಜಕೀಯ ಧುರೀಣನಾಗಿ ಬೆಳೆಯಲು ಸಹಾಯಕವಾಯಿತು.

ಈ ರೀತಿ ಚಿಕ್ಕಂದಿನಲ್ಲಿ ದೊರೆತ ಪುಸ್ತಕಗಳ ಸಹವಾಸ ಮತ್ತು ಗಣ್ಯರುಗಳ ಪ್ರಭಾವಕ್ಕೆ ಒಳಪಟ್ಟು ತಮ್ಮ ವ್ಯಕ್ತಿತ್ವದಲ್ಲಿ ಒಂದು ಮೆರುಗನ್ನು ಕಂಡುಕೊಂಡಿದ್ದ ವೀರಣ್ಣಗೌಡರು ಸಮಾಜ ಸುಧಾರಣೆಯ ಬಗ್ಗೆ ತಮ್ಮ ಬಾಲ್ಯದಿಂದಲೂ ಯೋಚಿಸುತ್ತಿದ್ದರು. ಹಾಗಾಗಿ ತಮ್ಮ ವಿದ್ಯಾಭ್ಯಾಸವನ್ನು ಅಪೂರ್ಣಗೊಳಿಸಿ ಮನೆ ಸೇರಿದ ವೀರಣ್ಣಗೌಡರು ಪತ್ರಿಕೆಗಳ ಮೂಲಕ ದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟದ ವಿದ್ಯಾಮಾನಗಳನ್ನು ತಿಳಿದುಕೊಳ್ಳುತ್ತಿದ್ದರು. ಇದಕ್ಕೆ ಅನುಗುಣವಾಗಿ ಇತರ ಪತ್ರಿಕೆಗಳಿಗೆ ಕ್ರಾಂತಿಕಾರಕ ನಿಲುವಿನ ತಮ್ಮ ವಿಚಾರಧಾರೆಗಳನ್ನು ಲೇಖನಗಳ ರೂಪದಲ್ಲಿ ಕಳುಹಿಸುವ ಮೂಲಕ ತಾವು ಸಹ ಸ್ವಾತಂತ್ರ್ಯ ಹೋರಾಟದಲ್ಲಿ ಪರೋಕ್ಷವಾಗಿ ಪಾಲ್ಗೊಂಡಿದ್ದರು. ತಮ್ಮ ತಂದೆಯವರ ಸಂಗ್ರಹದಲ್ಲಿದ್ದ ತಿಲಕರ ಕಟ್ಟಳೆಯಂತಹ ಉತ್ತಮ ಪುಸ್ತಕಗಳ ಸಹವಾಸ ಗೌಡರಿಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳಲು ಪರೋಕ್ಷವಾಗಿ ಸ್ಫೂರ್ತಿ ನೀಡುತ್ತಿದ್ದವು.

ಮೈಸೂರು ಸಂಸ್ಥಾನವು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಡದ ಕಾರಣ ೧೯೨೦ರ ದಶಕದಲ್ಲಿ ರಾಷ್ಟ್ರೀಯ ಹೋರಾಟದ ಚಟುವಟಿಕೆಗಳು ಮೈಸೂರಿನಲ್ಲಿ ಅಷ್ಟಾಗಿ ಕಂಡು ಬಂದಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವೀರಣ್ಣಗೌಡರು ತಮ್ಮ ಲೇಖನಗಳನ್ನು ಬರೆಯುವ ಜೊತೆಗೆ ವ್ಯವಸಾಯದ ಕಡೆ ಗಮನ ಹರಿಸಿದರು. ನಂತರ ಸರ್ಕಾರದ ಪ್ರಕಟಣೆಗಳನ್ನು ಗಮನಿಸಿ ಶೇಖದಾರ ಹುದ್ದೆ ಮತ್ತು ಉಪಾಧ್ಯಾಯ ಹುದ್ದೆ ಎರಡಕ್ಕೂ ಅರ್ಜಿ ಹಾಕಿಕೊಂಡರು. ಎರಡೂ ಕೆಲಸಗಳಿಗೆ ತಾವು ಆಯ್ಕೆಯಾದಾಗ ಈಗಾಗಲೇ ತಮ್ಮ ಪೂರ್ವಿಕರು ನಿಭಾಯಿಸಿದ್ದ ಶೇಖದಾರ ಹುದ್ದೆಯನ್ನು ತ್ಯಜಿಸಿ ಉಪಾಧ್ಯಾಯ ಹುದ್ದೆಯನ್ನು ಆರಿಸಿಕೊಂಡರು. ಜಾಲಮಂಗಲದಲ್ಲಿ ಉಪಾಧ್ಯಾಯರಾಗಿ ವೃತ್ತಿ ಜೀವನ ಆರಂಭಿಸಿದರು. ಈ ಅವಧಿಯಲ್ಲಿ ನಡೆದ ಕೆಲವು ಘಟನೆಗಳು ವೀರಣ್ಣಗೌಡರ ಸಾಮಾಜಿಕ ಕಾಳಜಿಯನ್ನು ಮತ್ತು ವಿದ್ಯೆಯ ಬಗೆಗಿನ ಗೌರವವನ್ನು ವ್ಯಕ್ತಿಪಡಿಸುತ್ತವೆ. ಒಮ್ಮೆ ಆಡು ಮೇಯಿಸುವ ಹುಡುಗನ ವಿದ್ಯಾಸಕ್ತಿಯನ್ನು ಗುರುತಿಸಿದ ಗೌಡರು ಆತನ ಜೀವನಕ್ಕೊಂದು ಬೆಳಕು ತೋರಿದರು. ಆ ಆಡು ಮೇಯಿಸುವ ಹುಡುಗನೇ ಇಂದಿನ ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳಾದ ದೇ.ಜ.ಗೌ. ಹೀಗೆ ಗೌಡರ ಉದಾರ ಹೃದಯ ಕನ್ನಡನಾಡಿಗೆ ಡಾ.ದೇ.ಜವರೇಗೌಡರಂತಹ ಸಾಹಿತ್ಯ ರತ್ನವನ್ನು ಕಾಣಿಕೆಯಾಗಿ ನೀಡಿತೆಂದರೆ ಅತಿಶಯೋಕ್ತಿಯಲ್ಲ. ಹಾಗೆಯೇ ದೇಶಸೇವೆಗೆ ಸನ್ನದ್ಧವಾಗಿದ್ದ ಗೌಡರ ಮನಸ್ಸು ನಿಂತ ನೆಲೆಯಲ್ಲಿಯೇ ತನ್ನದೇ ಆದ ರೀತಿಯಲ್ಲಿ ಆ ನಿಟ್ಟಿನಲ್ಲಿ ಮುನ್ನಡೆಯಿತೆಂದು ಹೇಳಬಹುದು. ದೇಶದ ಅಭಿವೃದ್ಧಿಗೆ ವಿದ್ಯೆ ಮೂಲಾಧಾರವೆಂದು ತಿಳಿದಿದ್ದ ಗೌಡರು ಕಡ್ಡಾಯ ಶಿಕ್ಷಣಾಧಿಕಾರಿಯಾಗಿಯೂ ಕಾರ್ಯ ನಿರ್ವಹಿಸುತ್ತ ತನ್ನ ಸುತ್ತಲಿನ ಗ್ರಾಮಸ್ಥರಿಗೆ ವಿದ್ಯೆಯ ಮಹತ್ವದ ಅರಿವನ್ನುಂಟು ಮಾಡುತ್ತಿದ್ದರು. ವಿದ್ಯಾರ್ಥಿಗಳಿಗೆ ದೇಶಾಭಿಮಾನದ ಬಗ್ಗೆ ತಿಳಿಸಿಕೊಡುವಲ್ಲಿ ಖಾದಿಧಾರಿಗಳಾಗಿ ಸ್ವತಃ ಮಾದರಿಯಾಗಿದ್ದರು. ಜೊತೆಗೆ ದೇಶೀಯತೆಯ ಬಗ್ಗೆಯೂ ಹುಡುಗರಿಗೆ ಅರಿವು ಮೂಡಿಸುವ ನಿಟ್ಟಿನಲ್ಲಿ ದೇಶೀಯ ಆಟ ಪಾಠಗಳ ಅಭ್ಯಾಸ ಮಾಡಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗಳು ದೃಢಕಾಯರಾಗಿ, ಬುದ್ಧಿವಂತರಾಗಿ ಬೆಳೆಯಲು

ಕಾರಣಕರ್ತರಾದರು. ಶಿಸ್ತಿನ ಸಿಪಾಯಿಯಂತಿದ್ದ ಗೌಡರು ಒಬ್ಬ ಉತ್ತಮ ಗುರುವಿನ ಆದ್ಯ ಕರ್ತವ್ಯಗಳ ಬಗ್ಗೆ ಅರಿವನ್ನೊಂದಿದ್ದರು. ಹಾಗಾಗಿ ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಮತ್ತು ಸಮಾಜದ ಪ್ರಗತಿಗೆ ಪೂರಕವಾದ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರು. ಈ ಮಧ್ಯೆ ಗೌಡರು ಜಾಲಮಂಗಲದಿಂದ ಚಕ್ಕೆರೆಗೆ ವರ್ಗಾವಣೆಯಾದ ಸುದ್ದಿ ಜಾಲಮಂಗಲದ ತುಂಬ ಕಾಳ್ಗಿಚ್ಚಿನಂತೆ ಹಬ್ಬಿತು. ಇದರಿಂದ ವಿಚಲಿತರಾದ ಊರಿನ ಜನ ವೀರಣ್ಣಗೌಡ ಮೇಸ್ಟ್ರನ್ನು ತಮ್ಮ ಊರಿನಲ್ಲೇ ಉಳಿಸಿಕೊಳ್ಳಲು ಶತಾಯಗತಾಯ ಪ್ರಯತ್ನಿಸಿದರಂತೆ. ಇದರಿಂದ ವೀರಣ್ಣಗೌಡರು ಒಬ್ಬ ಜನಾನುರಾಗಿ ಉತ್ತಮ ಶಿಕ್ಷಕಮಾತ್ರವಲ್ಲದೆ, ಸಾಮಾಜಿಕ ಕಳಕಳಿ ಹೊತ್ತ ಮತ್ತು ಹೊಸ ಸಮಾಜ ಪರಿವರ್ತನೆಯ ಕನಸು ಕಂಡ ವ್ಯಕ್ತಿತ್ವವಾಗಿಯೂ ಕಂಡು ಬರುತ್ತಾರೆ. ಆಗಿನ ನಿಯಮದಂತೆ ವೀರಣ್ಣಗೌಡರನ್ನು ಚಕ್ಕೆರೆಯಿಂದ ಅಂಡರ್‌ಗ್ರ್ಯಾಜುಯೇಟ್ಸ್ ಟ್ರೈನಿಂಗ್‌ಗಾಗಿ ಮೈಸೂರು ಟ್ರೈನಿಂಗ್ ಕಾಲೇಜಿಗೆ ವರ್ಗಮಾಡಿದರು. ಸ್ವಲ್ಪ ಕಾಲ ಅಲ್ಲಿದ್ದು ಶಿಕ್ಷಣ ಪದ್ಧತಿಯ ವಿಷಯಗಳನ್ನು ಮನನ ಮಾಡಿದರು. ಅಲ್ಲಿ ಪ್ರಿನ್ಸಿಪಾಲರಾಗಿದ್ದ ಕಳಲೆ ಕೃಷ್ಣರಾಯರ ಅಪೇಕ್ಷೆಯಂತೆ 'ವಿರಾಮ ಕಾಲದಲ್ಲಿ ಉಪಾಧ್ಯಾಯರು ಹೇಗೆ ಕಾಲ ಕಳೆಯುತ್ತಾರೆ' ಎಂಬ ವಿಷಯದ ಬಗೆಗೆ ವೀರಣ್ಣಗೌಡರು ಉತ್ತಮ ಪ್ರಬಂಧ ಬರೆದು ಮೆಚ್ಚಿಕೆ ಗಳಿಸಿದರು. ಅಷ್ಟರಲ್ಲಿ ಬೆಂಗಳೂರು ಒಕ್ಕಲಿಗರ ಸಂಘದ ಪದಾಧಿಕಾರಿಗಳು ವೀರಣ್ಣಗೌಡರನ್ನು ಒಕ್ಕಲಿಗರ ಪತ್ರಿಕೆಯ ಸಂಪಾದಕನನ್ನಾಗಿ ಆಯ್ಕೆ ಮಾಡಿದ ವಿಷಯ ಹೊರಬಿತ್ತು. ಪತ್ರಿಕೋದ್ಯಮಿಯಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು ತೀವ್ರತರವಾಗಿ ತುಂಬಿಕೊಂಡಿದ್ದ ವೀರಣ್ಣಗೌಡರು ಶಿಕ್ಷಣ ತರಬೇತಿಯನ್ನು ಪೂರ್ಣಗೊಳಿಸದೆ ಬೆಂಗಳೂರಿಗೆ ಬಂದು ಒಕ್ಕಲಿಗರ ಪತ್ರಿಕೆಯ ಸಂಪಾದಕ ವೃತ್ತಿಯನ್ನು ಪ್ರಾರಂಭಿಸಿದರು.

ಉಪಾಧ್ಯಾಯ ವೃತ್ತಿಯಿಂದ ಒಕ್ಕಲಿಗರ ಪತ್ರಿಕೆಯ ಸಂಪಾದಕರಾಗಿ ಪತ್ರಿಕಾರಂಗ ಪ್ರವೇಶಿಸಿದ ಹೆಚ್.ಕೆ.ವೀರಣ್ಣಗೌಡರು ಮೊದಲಿಗೆ ಸೀಮಿತ ಸಂಖ್ಯೆಯಲ್ಲಿ ಕೆಲವೇ ವ್ಯಕ್ತಿಗಳಿಗೆ ತಲುಪುತ್ತಿದ್ದ ಒಕ್ಕಲಿಗರ ಪತ್ರಿಕೆಯನ್ನು ಜನಸಾಮಾನ್ಯರ ಕೈಗೆ ತಲುಪುವಂತೆ ಮಾಡುವುದಕ್ಕೆ ಆದ್ಯತೆ ನೀಡಿದರು. ಈ ಹಿನ್ನೆಲೆಯಲ್ಲಿ ಪತ್ರಿಕೆಯಲ್ಲಿ ಅರ್ಥಪೂರ್ಣ ಲೇಖನಗಳ ಪ್ರಕಟಣೆ ಕಡೆಗೆ ಗಮನಹರಿಸುತ್ತಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ಸರ್ಕಾರದ ಆಳ್ವಿಕೆಯಲ್ಲಿ ಧೈರ್ಯದಿಂದ ಮುಕ್ತವಾಗಿ ಪತ್ರಿಕೆ ನಡೆಸುವುದು ಸವಾಲಿನ ಪ್ರಶ್ನೆಯಾಗಿತ್ತು. ಅಂತಹ ಸಂದರ್ಭದಲ್ಲಿ ಪತ್ರಿಕಾರಂಗಕ್ಕೆ ಪ್ರವೇಶಿಸಿದ ಗೌಡರು ನಿರ್ಬೀಡೆಯಿಂದ ಕೆಲಸ ಪ್ರಾರಂಭಿಸಿದರು.

ಹೆಚ್ಚಿನ ವಿದ್ಯಾಭ್ಯಾಸ ಹೊಂದಿರದ ಹೆಚ್.ಕೆ.ವೀರಣ್ಣಗೌಡರು ಒಕ್ಕಲಿಗರ ಪತ್ರಿಕೆಯ ಸಂಪಾದಕ ಹುದ್ದೆಗೆ ಅರ್ಜಿಸಲ್ಲಿಸಿದಾಗ ಉನ್ನತ ಶಿಕ್ಷಣ ಪಡೆದಿದ್ದ ಅಭ್ಯರ್ಥಿಗಳಿಂದ ಸ್ಪರ್ಧೆಯನ್ನು ಎದುರಿಸಬೇಕಾಗಿತ್ತು. ಆದರೂ ಸಂಪಾದಕ ಹುದ್ದೆ ಗೌಡರಿಗೇ ದೊರೆಯಿತು. ಕಾರಣ ಅವರಿಗಿದ್ದ ಅನುಭವ, ಪತ್ರಿಕಾ ಸಂವೇದನೆ, ಮತ್ತು ಪತ್ರಿಕೆಗೆ ಮೊದಲಿನಿಂದಲೂ ಲೇಖನಗಳ ಮೂಲಕ ಸಲ್ಲಿಸಿದ ಸೇವೆ ಪರಿಗಣಿಸಲ್ಪಟ್ಟಿದ್ದವು.

ಚಿಕ್ಕಂದಿನಲ್ಲಿಯೇ 'ಕರ್ನಾಟಕ ವಿದ್ಯಾರ್ಥಿ' ಎಂಬ ಪತ್ರಿಕೆಯೊಂದನ್ನು ಪ್ರಾರಂಭಿಸಿ ನಿರ್ವಹಿಸಿದ ಅನುಭವ ಹೆಚ್.ಕೆ.ವೀರಣ್ಣಗೌಡರಿಗೆ ಪತ್ರಿಕಾರಂಗದಲ್ಲಿ ತಮ್ಮದೇ ಆದ ಛಾಪು ಮೂಡಿಸಲು ಅನುವು ಮಾಡಿಕೊಟ್ಟಿತು ಎಂದರೆ ತಪ್ಪಾಗಲಾರದು. ಆ ಪತ್ರಿಕೆಗೆ ಅಂದಿನ ಪ್ರಸಿದ್ಧ ಸಾಹಿತಿಗಳು, ಲೇಖಕರಾದ ಸಾಲಿ ರಾಮಚಂದ್ರರಾವ್, ಕಡೆಂಗೋಡ್ಲು ಶಂಕರಭಟ್ಟರು ತಮ್ಮ ಲೇಖನಗಳನ್ನು ನೀಡಿ ಸಹಕರಿಸುತ್ತಿದ್ದರು. ಇದರಿಂದ ಆ ಪತ್ರಿಕೆಯ ಗುಣಮಟ್ಟದ ಬಗ್ಗೆ ಅರಿಯಬಹುದಾಗಿದೆ. ಇದೇ ಸಮಯದಲ್ಲಿ ಅಂದರೆ 'ಕರ್ನಾಟಕ ವಿದ್ಯಾರ್ಥಿ' ಪತ್ರಿಕೆ ತನ್ನ ಮೊದಲ ವರ್ಷ ಪೂರೈಸಿದ ಸಂದರ್ಭದಲ್ಲಿ ವೀರಣ್ಣಗೌಡರು ಬರೆದಿದ್ದ 'ಆಶಾ' ನೀಳ್ಗತೆಯ ಪುಸ್ತಕವನ್ನು ಎಲ್ಲಾ ಚಂದಾದಾರರಿಗೂ ಉಚಿತವಾಗಿ ವಿತರಿಸಲಾಯಿತು. 'ಕರ್ನಾಟಕ ವಿದ್ಯಾರ್ಥಿ' ಪತ್ರಿಕೆಯು ವೀರಣ್ಣಗೌಡರ ವಿದ್ಯಾಭ್ಯಾಸದ ನಂತರ ಅಂದರೆ ಮೂರು ವರ್ಷಗಳು ನಡೆದು ನಿಂತು ಹೋಯಿತು. ಕಾರಣ ವೀರಣ್ಣಗೌಡರಂತಹ ಸಾಮಾಜಿಕ ಕಾಳಜಿಯನ್ನು ಹೊತ್ತ ಯೊವೊಬ್ಬ ವಿದ್ಯಾರ್ಥಿಯು ಪತ್ರಿಕೆಯ ನಿರ್ವಹಣೆಗೆ ಮುಂದೆ ಬರದೆ ಹೋದದ್ದು. ವಿದ್ಯಾಭ್ಯಾಸದ ನಂತರ ಒಕ್ಕಲಿಗರ ಪತ್ರಿಕೆಯ ಸಂಪಾದಕರಾದ ಹೆಚ್.ಕೆ.ವೀರಣ್ಣಗೌಡರು ಕನ್ನಡ ಪತ್ರಿಕಾ ಕ್ಷೇತ್ರಕ್ಕೆ ನೀಡಿದ ಕೊಡುಗೆ ಎಂದರೆ ೧೯೨೮ರ ವಾರ್ಷಿಕ ವಿಶೇಷ ಸಂಚಿಕೆಯನ್ನು ತಂದಿದ್ದು. ಈ ಸಂಚಿಕೆಯಲ್ಲಿ ನಾಡು ನುಡಿಗೆ ಸಂಬಂಧಿಸಿದಂತೆ, ರೈತರಿಗೆ ಅನುಕೂಲಕರವಾದ ಲೇಖನಗಳು, ಬಡತನ, ಮನೆಬೇಸಾಯ ಹೀಗೆ ಜಾನಪದ ಚಿಂತನೆಗಳನ್ನು ಒಳಗೊಂಡ ಮತ್ತು ಸ್ಕೌಟ್, ನಗರೀಕರಣದಂತಹ ವರ್ತಮಾನದ ವಿಶೇಷ ಸಂಗತಿಗಳ ಬಗ್ಗೆ ಪ್ರಬುದ್ಧ ಲೇಖನಗಳು, ಅಲ್ಲದೆ ಗೌಡರು ರಚಿಸಿದ್ದ ಬುದ್ಧ ದೇವ, ಶಿವಾಜಿ ವಿಜಯ ನಾಟಕಗಳು ಪ್ರಕಟವಾಗಿದ್ದವು. ಮಹಿಳೆಯರು ಪತ್ರಿಕೆಗಳಲ್ಲಿ ಬರೆಯುವುದೇ ಅಸಂಭವೆನ್ನುವ ಕಾಲದಲ್ಲಿ ಶ್ರೀಮತಿಬಿ.ಇಂದಿರಮ್ಮ, ಶ್ರೀಮತಿ.ಆರ್.ಕಲ್ಯಾಣಮ್ಮನವರಿಂದ ಸ್ತ್ರೀವಿದ್ಯಾಭ್ಯಾಸ, ಸ್ತ್ರೀಯರಿಗೆ ಅನುಕೂಲವಾದ ಸಮಾಜಸೇವೆಯಂತಹ ಸಂಗತಿಗಳ ಬಗ್ಗೆ ಲೇಖನ ಬರೆಸಿ ಪ್ರಕಟ್ಟಿಸಿದ್ದು ಶ್ಲಾಘನಾರ್ಹವಾದುದು. ಈ ನೂರು ವರ್ಷಗಳಲ್ಲಿ ಪತ್ರಿಕೋದ್ಯಮ ಮತ್ತು ಮುದ್ರಣ ಕಲೆಯಲ್ಲಿ ಸಾಕಷ್ಟು ಕ್ರಾಂತಿಕಾರಕ ಬದಲಾವಣೆಗಳಾಗಿವೆ. ಆದರೆ ಹೆಚ್.ಕೆ.ವೀರಣ್ಣಗೌಡರು ಹಾಕಿಕೊಟ್ಟ ಪರಂಪರೆ ಇಂದಿನ ಯುಗಾದಿ, ದೀಪಾವಳಿ ವಿಶೇಷ ಸಂಚಿಕೆಗಳ ಮುಂದುವರಿಕೆಗೆ ನಾಂದಿಯಾಗಿದೆ.

೧೯೨೦ರ ದಶಕದ ಸುಮಾರಿಗೆ ಕನ್ನಡದ ಯಾವುದೇ ಪತ್ರಿಕೆಗಳು ವಿಶೇಷ ಸಂಚಿಕೆಗಳನ್ನು ಪ್ರಕಟಿಸಿರುವುದು ಕಂಡುಬರುವುದಿಲ್ಲ ಎಂಬುದು ಹಿರಿಯ ಪತ್ರಿಕೋಧ್ಯಮಿಗಳ ಅನುಭವ. ಹಾಗಾಗಿ ಒಕ್ಕಲಿಗರ ಪತ್ರಿಕೆಯ ಮೂಲಕ ವಿಶೇಷ ಸಂಚಿಕೆಗಳ ಆರಂಭಕ್ಕೆ ಮುನ್ನುಡಿ ಹಾಡಿದವರಲ್ಲಿ ಹೆಚ್.ಕೆ.ವೀರಣ್ಣಗೌಡರೇ ಮೊದಲಿಗರೆನ್ನಬಹುದು. ಮೌಡ್ಯತೆಯಿಂದ ಕೂಡಿದ ಸಂಪ್ರದಾಯಗಳ ಪರಿಣಾಮವನ್ನು ವಿಡಂಬನಾತ್ಮಕವಾಗಿ ಬರೆಯುವ ಮೂಲಕ ಸಮಾಜದಲ್ಲಿ ಬದಲಾವಣೆಯ ಸಂಚಾರವನ್ನುಂಟು ಮಾಡಿದ್ದರು. ಉದಾಹರಣೆಗೆ ಶೃಂಗೇರಿ ಸ್ವಾಮೀಜಿಗಳ ಮೆರವಣಿಗೆಯಲ್ಲಿ ವೈಶ್ಯೆಯರನ್ನು ಅಲಂಕಾರಿಕವಾಗಿ ಬಳಸಿಕೊಂಡಿದ್ದರ ಬಗ್ಗೆ ಟೀಕಿಸಿ ಬರೆದ ಲೇಖನ ಜನರಲ್ಲಿ ಪರ ವಿರೋಧದ ಗದ್ದಲವೇ ಉಂಟುಮಾಡಿತ್ತು. ಇಂತಹ ವಿಡಂಬನ ಅಂಕಣ ಪರಂಪರೆಯನ್ನು ಇತರ

ಪತ್ರಿಕೆಗಳು ಅನುಸರಿಸಿದವು ಎಂಬುದು ಗಮನಾರ್ಹವಾದುದು. ಇಂದಿಗೂ ಇಂತಹ ವಿಡಂಬನ ಲೇಖನಗಳ ಅಂಕಣವನ್ನು ಬಹಳಷ್ಟು ಪತ್ರಿಕೆಗಳಲ್ಲಿ ಕಾಣಬಹುದಾಗಿದೆ.

ಗೌಡರು ಪತ್ರಿಕೆಯಲ್ಲಿ ಪ್ರಚಲಿತ ವಿದ್ಯಾಮಾನಗಳೊಂದಿಗೆ ಅಂದಿನ ಸರ್ಕಾರದ ಲೋಪದೋಷಗಳನ್ನು ನಿರ್ಭಯವಾಗಿ ಟೀಕಿಸುತ್ತಿದ್ದರು. ಇದರಿಂದಾಗಿ ಒಕ್ಕಲಿಗರ ಸಂಘದ ಅಧ್ಯಕ್ಷರ ಮೇಲೆ ದಿವಾನರು ಒತ್ತಡ ತಂದರು. ಸರ್ಕಾರವನ್ನು ಆಶ್ರಯಿಸಿಕೊಂಡು ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದ ಅಧ್ಯಕ್ಷರು ಹೆಚ್.ಕೆ.ವೀರಣ್ಣಗೌಡರ ಮೇಲೆ ನಿರ್ಬಂಧಗಳನ್ನೇರಲು ಪ್ರಯತ್ನಿಸಿದರು. ಪತ್ರಿಕಾ ಸ್ವಾತಂತ್ರ್ಯ ಮತ್ತು ಸಂಪಾದಕನ ಜವಾಬ್ದಾರಿಯ ಬಗ್ಗೆ ಸ್ಪಷ್ಟವಾದ ಅರಿವು ಹೊಂದಿದ್ದ ಸ್ವಾಭಿಮಾನಿಯಾದ ಹೆಚ್.ಕೆ.ವೀರಣ್ಣಗೌಡರು ಅದನ್ನು ಬಲಿಕೊಡಲು ಇಚ್ಛಿಸದೆ ತಮ್ಮ ಸಂಪಾದಕ ವೃತ್ತಿಯನ್ನು ತ್ಯಜಿಸಿ ಹೊರ ನಡೆದರು. ತದನಂತರದ ವರ್ಷಗಳಲ್ಲಿ ವೀರಣ್ಣಗೌಡರಂತಹ ಸಮರ್ಥ, ವೃತ್ತಿಪರ ಶ್ರದ್ದೆಯುಳ್ಳ,ಬದ್ಧತೆಯಿಂದ ಕಾರ್ಯ ನಿರ್ವಹಿಸುವ ಸಂಪಾದಕರ್ಯಾರೊಬ್ಬರು ಒಕ್ಕಲಿಗರ ಪತ್ರಿಕೆಗೆ ದೊರೆಯದೇ ಹೋದರು. ಬಂದ ಸಂಪಾದಕರು ಪತ್ರಿಕೆಯಲ್ಲಿ ಯಾವುದೇ ರೀತಿಯ ವಿಶೇಷತೆಗಳ ಕಡೆ ಗಮನ ಹರಿಸದೇ ಯಾಂತ್ರಿಕ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಾ ಸಾಗಿದರು. ಹೀಗಾಗಿ ಹೆಚ್.ಕೆ.ವೀರಣ್ಣಗೌಡರು ಸಂಪಾದಕರಾಗಿದ್ದ ಅವಧಿಯಲ್ಲಿ ತನ್ನ ಉತ್ಕರ್ಷವನ್ನು ಕಂಡಿದ್ದ ಒಕ್ಕಲಿಗರ ಪತ್ರಿಕೆಯು ೧೯೭೦ರ ದಶಕದಲ್ಲಿ ತನ್ನ ಅಂತ್ಯವನ್ನು ಕಂಡಿದ್ದು ವಿಷಾಧನೀಯ.

ಒಕ್ಕಲಿಗರ ಪತ್ರಿಕೆಯಿಂದ ಹೊರಬಂದ ವೀರಣ್ಣಗೌಡರು ಗ್ರಾಮಸೇವಾ ಮುದ್ರಣಾಲಯವನ್ನು ಆರಂಭಿಸಿ ಕೆಲಸ ಮಾಡುತ್ತಿದ್ದರು. ನಂತರ ೧೯೨೯ರ ಸುಮಾರಿಗೆ ತಮ್ಮದೇ ಆದ ಚಿತ್ರಗುಪ್ತ ಪತ್ರಿಕೆಯನ್ನು ಪ್ರಾರಂಭಿಸಿದರು. ಯಮಕಿಂಕರನಾದ ಚಿತ್ರಗುಪ್ತ ಪ್ರತಿಯೊಬ್ಬನ ಆಯುಶ್ ನಿರ್ಧರಿಸುವಲ್ಲಿ ತೋರುವ ನಿರ್ದಾಕ್ಷಿಣ್ಯತೆಯಂತೆ ತಮ್ಮ ಪತ್ರಿಕೆಯು ನಿರ್ದಾಕ್ಷಿಣ್ಯ, ನಿರ್ಭಯದಿಂದ ಸತ್ಯಸಂಧತೆಯಿಂದ ಕೂಡಿರಬೇಕೆಂಬ ವಿವೇಚನೆಯಿಂದ ಹೆಚ್.ಕೆ.ವೀರಣ್ಣಗೌಡರು ತಮ್ಮ ಪತ್ರಿಕೆಗೆ 'ಚಿತ್ರಗುಪ್ತ' ಎಂಬ ಹೆಸರಿಟ್ಟಿರಬಹುದೆನಿಸುತ್ತದೆ. ತಮ್ಮ ಸಂಕಲ್ಪಿತ ಆಲೋಚನೆಯಂತೆ ಸಾಹಸಮಯವಾಗಿ ಪತ್ರಿಕೆ ನಡೆಸಿದ್ದರಿಂದ ಅತ್ಯಲ್ಪಕಾಲದಲ್ಲಿಯೇ ಪತ್ರಿಕೆ ಜನಾದರಣೀಯವಾಯಿತು. ೧೯೨೯ರ ಗಣಪತಿ ಪೂಜೆಯ ವಿಚಾರವಾಗಿ ಹಿಂದೂ ಮುಸ್ಲಿಮ್ ನಡುವೆ ಗಲಭೆಯುಂಟಾಗಿ ಉಗ್ರರೂಪತಾಳಿತು. ಗಲಭೆಯ ವಿಚಾರವಾಗಿ ಸರ್ಕಾರವು ಸರ್.ಎಂ.ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿತು. ಈ ಸಮಿತಿಯು ಸಲ್ಲಿಸಿದ ವರದಿಯು ಜನಪರವಾಗಿದ್ದರಿಂದ ಸರ್ಕಾರವು ಪ್ರಕಟಿಸದೆ ಮುಚ್ಚಿಟ್ಟಿತು. ಈ ವರದಿಯನ್ನು ಹೇಗಾದರೂ ಮಾಡಿ ಜನರಿಗೆ ತಲುಪಿಸಬೇಕೆಂಬ ಬಯಕೆಯಿಂದ ಗೌಡರು ಸಾಹಸಮಯವಾಗಿ ಆ ವರದಿಯನ್ನು ಪತ್ತೆ ಮಾಡಿ ಪತ್ರಿಕೆಯಲ್ಲಿ ಪ್ರಕಟಿಸುವ ಮೂಲಕ ಯಶಸ್ವಿಯಾದರು. ಅಂದಿನ ಸಂದರ್ಭದಲ್ಲಿ ಯಾವ ಪತ್ರಿಕೆಗಳೂ ಸರ್ಕಾರವನ್ನು ಎದುರಿಸಿ ಇಂತಹ ಸಾಹಸಕ್ಕೆ ಮುಂದಾಗುತ್ತಿರಲಿಲ್ಲ. ಆಳುವ ಸರ್ಕಾರದ ವಿರುದ್ಧವಾದವರ ಉಳಿವು ಕಷ್ಟವಾಗಿದ್ದ ಸಮಯ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಹೆಚ್.ಕೆ.ವೀರಣ್ಣಗೌಡರ ಈ ತನಿಖಾ ಕಾರ್ಯ ಪತ್ರಿಕಾ ಇತಿಹಾಸದಲ್ಲಿ ತನಿಖಾ ವರದಿಗಳ ಪರಂಪರೆಯ ಆರಂಭಕ್ಕೆ ಕಾರಣಕರ್ತರನ್ನಾಗಿ ಮಾಡಿತು. ಹೆಚ್.ಕೆ.ವೀರಣ್ಣಗೌಡರಿಗೆ

ಅಂದಿನ ಪ್ರಭುತ್ವದ ವ್ಯವಸ್ಥೆಯಲ್ಲಿನ ಕುಂದುಕೊರತೆಗಳ ಬಗ್ಗೆ ಆಕ್ರೋಶವಿತ್ತೇ ಹೊರತು ವ್ಯವಸ್ಥೆಯ ಬಗ್ಗೆ ಒಲವು ಮತ್ತು ಗೌರವವಿತ್ತು. ಸರ್ಕಾರದ ಟೀಕೆ ಟಿಪ್ಪಣಿಗಳ ಮಾಡುತ್ತಿದ್ದ ಪತ್ರಿಕೆಯ ವಿರುದ್ಧ ಉಗ್ರರಾಗಿದ್ದ ದಿವಾನರು ಹೇಗಾದರೂ ಮಾಡಿ ವೀರಣ್ಣಗೌಡರನ್ನು ತಮ್ಮ ಕಡೆ ಒಲಿಸಿಕೊಳ್ಳಲು ನಾನಾ ಪ್ರಯತ್ನಗಳನ್ನು ಮಾಡಿದರು. ತಮ್ಮನ್ನು ಬಂದು ಕಾಣುವಂತೆ ಹೇಳಿದರು. ಆದರೆ ತಮ್ಮ ಆತ್ಮಸ್ವಾಭಿಮಾನಕ್ಕೆ ಮತ್ತು ತನ್ನ ಧ್ಯೇಯೋದ್ದೇಶಗಳಿಗೆ ಧಕ್ಕೆಯುಂಟಾಗಬಹುದೆಂಬ ಕಾರಣದಿಂದ ವೀರಣ್ಣಗೌಡರು ದಿವಾನರ ಕಡೆ ತಿರುಗಿ ಸಹ ನೋಡದೆ ಹೋದರು. ಇದರಿಂದ ದಿವಾನರ ಕಿರುಕೂಳ ಮತ್ತಷ್ಟು ಹೆಚ್ಚುತ್ತಲೇ ಹೋಯಿತು.

ನಿಷ್ಠಾವಂತ ದೇಶಾಭಿಮಾನಿಗಳಾದ ಹೋರಾಟಗಾರರೆಲ್ಲರಿಗೆ ವೀರಣ್ಣಗೌಡರು ತಮ್ಮ ಪತ್ರಿಕೆಯ ಮೂಲಕ ಪ್ರೋತ್ಸಾಹ ನೀಡುತ್ತಿದ್ದಂತೆ ಹೊಸಕೊಪ್ಪ ಕೃಷ್ಣರಾಯರ ಭಾಷಣವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಇದರಿಂದ ಚಿತ್ರಗುಪ್ತ ಪತ್ರಿಕೆಯ ಹಣಕಾಸು ವ್ಯವಸ್ಥೆಗೆ ಸಹಾಯಹಸ್ತ ನೀಡುತ್ತಿದ್ದ ಬ್ರಾಹ್ಮಣೇತರ ಪಕ್ಷದವರಾದ ನೀಲಗಿರಿ ಸಂಜೀವಯ್ಯನವರು ಕೃಷ್ಣರಾಯರು ಬ್ರಾಹ್ಮಣರೆಂಬ ಕಾರಣಕ್ಕಾಗಿ ಗೌಡರು ಅವರ ಭಾಷಣವನ್ನು ಪ್ರಕಟಿಸಿದ್ದು ಸರಿಯಲ್ಲವೆಂದು ಭಾವಿಸಿ ಪತ್ರಿಕೆಗೆ ನೀಡುತ್ತಿದ್ದ ಸಹಾಯವನ್ನು ನಿಲ್ಲಿಸಿದರು. ಹೀಗೆ ಚಿತ್ರಗುಪ್ತ ಪತ್ರಿಕೆಯ ಮೇಲಿನ ಸರ್ಕಾರದ ವಕ್ರದೃಷ್ಟಿ ಮತ್ತು ಸ್ನೇಹಿತರ ಅಸಹಕಾರದಿಂದ ಗೌಡರು ಆರ್ಥಿಕ ಮುಗ್ಗಟ್ಟಿಗೆ ಸಿಲುಕಿ ತಮ್ಮ ಪತ್ರಿಕೆಯನ್ನು ನಿಲ್ಲಿಸಬೇಕಾದ ಸಂದರ್ಭ ಎದುರಾಯಿತು. ಇಂತಹ ಸಂದರ್ಭದಲ್ಲೂ ವೀರಣ್ಣಗೌಡರು ಯಾವುದೇ ಕಾರಣಕ್ಕೂ ತಮ್ಮ ಸ್ವಾಭಿಮಾನ ಬಿಟ್ಟುಕೊಡದೆ ಸರ್ಕಾರಕ್ಕೆ ಮಣಿಯದೇ ತಮ್ಮ ಎದೆಗಾರಿಕೆಯನ್ನು ತೋರಿದ್ದು ಗಮನಾರ್ಹವಾದುದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂದು ಇಂತಹ ಅನೇಕ ನಿರ್ಭೀತ ಪತ್ರಿಕೆಗಳು ನಮ್ಮ ಮಧ್ಯೆ ಇರಬಹುದು. ಆದರೆ ಪರಕೀಯರ ಆಳ್ವಿಕೆ ಇದ್ದಂತಹ ಸಂದರ್ಭದಲ್ಲಿ ಯಾವ ರಾಜಕೀಯ ವಶೀಲಿಯೂ ಇಲ್ಲದೆ ನಿರ್ಭೀತ, ನಿರ್ದಾಕ್ಷಿಣ್ಯವಾಗಿ ಪತ್ರಿಕೆ ನಡೆಸಿದ್ದು ವೀರಣ್ಣಗೌಡರ ಎದೆಗಾರಿಕೆಯನ್ನು ತೋರ್ಪಡಿಸುತ್ತದೆ.

ಎಚ್.ಕೆ.ವೀರಣ್ಣಗೌಡರಿಗೂ ಪತ್ರಿಕಾರಂಗಕ್ಕೂ ಬಿಡಿಸಲಾಗದ ಸಂಬಂಧ. ವಿಶಿಷ್ಟ ಶೈಲಿಯ ವೀರ ಅಭಿವ್ಯಕ್ತಿಯ ಜನಪ್ರಿಯ ದಿನ ಪತ್ರಿಕೆಯಾಗಿದ್ದ ಚಿತ್ರಗುಪ್ತವನ್ನು ಸಾಲ ಸೋಲಗಳಿಂದ ನಿಲ್ಲಿಸಿದರೂ ಪತ್ರಿಕಾ ಸಂಬಂಧ ಕಡಿದು ಹೋಗಲಿಲ್ಲ. ೧೯೪೪ರಲ್ಲಿ 'ವಾರ್ತಾ' ಎಂಬ ಸಂಜೆ ದಿನಪತ್ರಿಕೆಗೆ ಸಂಪಾದಕರಾಗಿ ಸುಮಾರು ೨ ವರ್ಷ ನಡೆಸಿದರು. ಅದು ಕಂಪನಿಯೊಂದರ ಪತ್ರಿಕೆ. ಜವಾಬ್ದಾರಿ ಸರ್ಕಾರ ಸ್ಥಾಪಿಸುವ ನಿಟ್ಟಿನಲ್ಲಿ ತನ್ಮೂಲಕ ಜನಜಾಗೃತಿ ಮೂಡಿಸಲು ಕಾಂಗ್ರೆಸ್‌ನ ಧ್ಯೇಯ ಧೋರಣೆಗಳನ್ನು ಪ್ರಚಾರ ಪಡಿಸುವುದು, ರಾಷ್ಟ್ರೀಯ ಭಾವನೆಗಳನ್ನು ಬಿತ್ತುವುದು, ಜವಾಬ್ದಾರಿ ಸರ್ಕಾರ ಲಭ್ಯವಾಗುವವರೆಗೆ ನಿರಂತರವಾಗಿ ಹೋರಾಡುವುದು ವಾರ್ತಾ ಪತ್ರಿಕೆಯ ಉದ್ದೇಶವಾಗಿತ್ತು. ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ಜೋರಾದಂತೆ 'ವಾರ್ತಾ' ಪತ್ರಿಕೆಯ ಮೇಲೆ ಸರ್ಕಾರದ ಕ್ರೂರ ದೃಷ್ಟಿ ಬಿತ್ತು. ಸಂಪಾದಕರಾದ ವೀರಣ್ಣಗೌಡರನ್ನು ದಸ್ತಗಿರಿ ಮಾಡಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇಟ್ಟರು. ಆದರೆ ಸರ್ಕಾರದ ದಮನಕಾರಿ ನೀತಿಗೆ ಬೆದರದ ವೀರಣ್ಣಗೌಡರು ಆರ್ಥಿಕ ಮುಗ್ಗಟ್ಟಿನಲ್ಲಿಯೂ ಪತ್ರಿಕೆಯನ್ನು

ನಡೆಸಿದರು. ಕೊನೆಗೆ ಮುದ್ರಣದ ಪೇಪರ್ ಕೊಳ್ಳಲೂ ಆಗದೇ ಹೋದಾಗ ಪತ್ರಿಕೆಯನ್ನು ನಿಲ್ಲಿಸಿದರು. ಹೀಗೆ ಸಮಾಜ ಸೇವೆಯ ಸ್ಪಷ್ಟವಾದ ಗುರಿಯನ್ನಿಟ್ಟುಕೊಂಡು ವೀರಣ್ಣಗೌಡರು ಪತ್ರಿಕಾರಂಗದಲ್ಲಿ ಕೆಲಸ ಮಾಡಿದರು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸತ್ಯಾಗ್ರಹಿಗಳು ಎಷ್ಟು ಮುಖ್ಯವೋ ಪತ್ರಿಕೆಗಳೂ ಅಷ್ಟೇ ಮುಖ್ಯ ಎನ್ನುವುದನ್ನು ವೀರಣ್ಣಗೌಡರು ತೋರಿಸಿ ಕೊಟ್ಟರು. ಹಾಗಾಗಿ ವೀರಣ್ಣಗೌಡರು ತಮ್ಮ ಪತ್ರಿಕಾ ಸಂಪಾದಕೀಯಗಳಿಗೆ ಹೆಚ್ಚು ಗಮನಕೊಡುತ್ತಿದ್ದರು. ತನ್ಮಯತೆಯಿಂದ ಬರೆಯುತ್ತಿದ್ದರು. ಅವುಗಳಲ್ಲಿ ಆತ್ಮವಿಶ್ವಾಸ, ನಿರ್ಭಯ, ವಿಷಯ ಬಾಹುಳ್ಯ, ವಿವೇಚನಾ ತೀಕ್ಷ್ಣತೆ, ಬಹುಜನ ಮನದ ಇಂಗಿತ, ಸಮಾಜದ ಸ್ವಾಸ್ಥ್ಯ, ಜನರ ಏಳಿಗೆ ಪ್ರಧಾನವಾಗಿರುತ್ತಿದ್ದವು. ಬರೆಯುವುದನ್ನು ಸ್ಫುಟವಾಗಿ, ಅಸ್ಖಲಿತವಾಗಿ ಬರೆಯುತ್ತಿದ್ದರು. ಬರೆದ ಮೇಲೆ ತಿದ್ದುವುದು, ಬದಲಾಯಿಸಿ ಬರೆಯುವುದೂ ಮಾಡದೆ ಅತ್ಯಂತ ಏಕಾಗ್ರವಾಗಿ, ಪ್ರಜ್ಞಾಪೂರ್ವಕವಾಗಿ ಬರೆಯುತ್ತಿದ್ದರು. ಅವರ ಮನದಾಳದಿಂದ ಮೂಡಿಬಂದ ಸಂಪಾದಕೀಯಗಳು ನೇರವಾಗಿ, ಸರಳವಾಗಿ, ಸ್ಪಷ್ಟವಾಗಿ ಅಭಿವ್ಯಕ್ತಿಗೊಂಡು ಓದುಗರನ್ನು ತಲುಪುತ್ತಿದ್ದವು. ಆಗ ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಕನ್ನಡ ಪತ್ರಿಕೆಗಳಲ್ಲಿ ಗಮನಿಸಲೇಬೇಕಾದಂತಹ ಸಂಪಾದಕೀಯಗಳಲ್ಲಿ ವೀರಣ್ಣಗೌಡರ ಸಂಪಾದಕೀಯಗಳು ಆದರ್ಶಪ್ರಾಯವಾಗಿದ್ದವು ಎಂಬುದರಲ್ಲಿ ಉತ್ಪ್ರೇಕ್ಷೆ ಇಲ್ಲ.

ಪತ್ರಿಕೋದ್ಯಮದ ಭೀಷ್ಮರೆಂದು ಪ್ರಸಿದ್ಧರಾಗಿದ್ದ ತಿ.ತಾ.ಶರ್ಮರಂತೆ ವೀರಣ್ಣಗೌಡರು ಪತ್ರಿಕಾರಂಗದಲ್ಲಿ ಕೆಲವು ಪ್ರಥಮಗಳನ್ನು ಸಾಧಿಸಿದ್ದಾರೆ. ಪತ್ರಿಕಾ ಕ್ಷೇತ್ರ ನಡೆದು ಬಂದ ದಾರಿಗೆ ಸ್ಪಷ್ಟವಾದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ. ಪ್ರೌಢಶಾಲೆಯ ಹಂತದಲ್ಲಿ ಇದ್ದಾಗಲೇ ಪತ್ರಿಕಾರಂಗವನ್ನು ಪ್ರವೇಶಿಸಿ ತಮ್ಮ ಜೀವನದ ಬಹುಮುಖ್ಯ ಕಾಲಾವಧಿಯನ್ನು ಈ ಕ್ಷೇತ್ರಕ್ಕೆ ಬಳಸಿಕೊಂಡ ಕೀರ್ತಿ ಹೆಚ್.ಕೆ.ವೀರಣ್ಣಗೌಡರದು. ಹಾಗೆಯೇ ಈ ಮಾಧ್ಯಮವನ್ನೇ ತಮ್ಮ ಹೋರಾಟದ ಕಣವನ್ನಾಗಿಸಿಕೊಂಡು ತಮ್ಮ ಬರಹಗಳ ಮೂಲಕ ಜನಶಕ್ತಿಯನ್ನು ಸಂಘಟಿಸಿ ದೇಶಪರ ಚಿಂತನೆಗಳನ್ನು ಅವರಲ್ಲಿ ತುಂಬಿ ಅವರು ಸಮಾಜ ಮುಖಿಯಾಗುವಂತೆ ಹಾಗೆಯೇ ರಾಜಕೀಯ ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳುವಂತಹ ಸಾರ್ಥಕ ಕೆಲಸವನ್ನು ಮಾಡಿದವರು ಶ್ರೀಯುತ ವೀರಣ್ಣಗೌಡರು. ಅವಕಾಶ ಒದಗಿದರೆ, ಅಕ್ಷರ ಲೋಕದ ಅರಿವು ಪ್ರಾಪ್ತವಾದರೆ ನೇಗಿಲಯೋಗಿಗಳಾದ ರೈತರ ಮಕ್ಕಳೂ ಸಹ ಎಂತಹ ಧೈತ್ಯ ಪ್ರತಿಭೆಯನ್ನೂ ಮೆರೆಯಬಲ್ಲರು ಎಂಬುದಕ್ಕೆ ವೀರಣ್ಣಗೌಡರ ಪತ್ರಿಕಾ ವ್ಯವಸಾಯ ಉದಾಹರಣೆಯಾಗಿತ್ತು.

ಶಿಕ್ಷಕರಾಗಿ, ಪತ್ರಿಕೋದ್ಯಮಿಯಾಗಿ ಹೆಚ್.ಕೆ.ವೀರಣ್ಣಗೌಡರು ಸಾಮಾಜಿಕ ಸೇವೆಯನ್ನು ನಿರ್ವಂಚನೆಯಿಂದ ಮಾಡಿದಂತೆ ಅವರೊಬ್ಬ ಸಾಹಿತಿಯಾಗಿಯೂ ತಮ್ಮ ಬರಹಗಳಲ್ಲಿ ದೇಶಭಕ್ತಿ, ಸಾಮಾಜಿಕ ಕಾಳಜಿಗಳನ್ನು, ಪ್ರಗತಿಗಾಮಿಯ ಅಂಶಗಳಿಗೆ ಹೆಚ್ಚು ಆದ್ಯತೆ ನೀಡಿರುವುದು ಕಂಡು ಬರುತ್ತದೆ. ತನ್ನ ಸುತ್ತಣ ಜಗತ್ತಿನ ವ್ಯವಹಾರಗಳನ್ನು ಸೂಕ್ಷ್ಮವಾಗಿ ಗ್ರಹಿಸಬಲ್ಲ, ಸಂವೇದನಶೀಲನಾಗಿ ಯೋಚಿಸಬಲ್ಲ ವ್ಯಕ್ತಿ ಮಾತ್ರ ಹೊಸದಾಗಿ ಅದನ್ನು ಮರು ನಿರ್ಮಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ. ತಮ್ಮ ಓದಿನ ಮತ್ತು ಸುತ್ತಣ ಪರಿಸರದ ಸೂಕ್ಷ್ಮವಾದ ಅವಲೋಕನದ ಮೂಲಕ ಪಡೆಯುತ್ತಿದ್ದ ಜ್ಞಾನ ವೀರಣ್ಣಗೌಡರನ್ನು ಪ್ರತಿಭಾಶಾಲಿ ಬರಹಗಾರನನ್ನಾಗಿ ರೂಪಿಸಿದವು. ಹಾಗೆಯೇ ಅವರ ಚಿಂತನೆಗಳಿಗೆ

ಒಂದು ಅಭಿವ್ಯಕ್ತಿ ರೂಪವನ್ನು ಕೊಡುವಷ್ಟು ಎತ್ತರಕ್ಕೆ ಇವರನ್ನು ಬೆಳೆಸಿದವು. ಚಿಕ್ಕಂದಿನಲ್ಲಿಯೇ ಪುಸ್ತಕ, ಪತ್ರಿಕೆಗಳನ್ನು ಓದುವ ಹವ್ಯಾಸದಿಂದ ಹೆಚ್.ಕೆ.ವೀರಣ್ಣಗೌಡರ ಭಾಷಾ ಪ್ರೌಢಿಮೆ ವೃದ್ಧಿಗೊಂಡಿತ್ತು. ಶಾಲೆಯಲ್ಲಿ ಕನ್ನಡ ಉಪಾಧ್ಯಾಯರ ತರಬೇತಿಯ ಫಲವಾಗಿ ಒಕ್ಕಲಿಗರ ಸಂಘ ಏರ್ಪಡಿಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ 'ಬೂಕರ್-ಟಿ ವಾಷಿಂಗ್‌ಟನ್' ಎಂಬ ಮಹನೀಯರ ಜೀವನ ಚರಿತ್ರೆಯನ್ನು ಆರಿಸಿಕೊಂಡು ಪ್ರಬಂಧ ರಚಿಸಿ ಮೊದಲ ಬಹುಮಾನ ಗಳಿಸಿದ್ದರು. ಕುವೆಂಪುರವರ ಗುರುಗಳಾದ ವೆಂಕಣ್ಣಯ್ಯನವರ ಪ್ರಶಂಸೆಗೂ ಪಾತ್ರವಾದರು. ಇದಲ್ಲದೆ 'ಆಶಾ'ಎಂಬ ನೀಳ್ಗತೆ ಬರೆದು ಪ್ರಕಟಿಸಿ ತಾವು ಈಗಾಗಲೇ ಸಂಪಾದಿಸುತ್ತಿದ್ದ 'ಕರ್ನಾಟಕ ವಿದ್ಯಾರ್ಥಿ' ಎಂಬ ದ್ವೈಮಾಸಿಕ ಪತ್ರಿಕೆಯ ಚಂದಾದಾರರಿಗೆ ಉಚಿತವಾಗಿ ವಿತರಿಸಿದ್ದರು. ಮುಂದೆ 'ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಶಿಕ್ಷೆಗೆ ಒಳಗಾಗಿ ಶಿವಮೊಗ್ಗ ಜೈಲಿನಲ್ಲಿದ್ದಾಗ ಸತ್ಯಾಗ್ರಹಿಗಳಿಗೆ ಜವಾಬ್ದಾರಿ ಸರ್ಕಾರದ ಬಗ್ಗೆ ಭಾಷಣಗಳನ್ನು ಮಾಡುವುದರ ಜೊತೆಗೆ ಅಚ್ಯುತ ಪಟವರ್ಧನರ 'Communal Triangle' ಎಂಬ ಇಂಗ್ಲೀಷ್ ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿದ್ದರು.

ಗೌಡರ ಭಾಷೆಯ ಪ್ರೌಢಿಮೆ, ಪದಪ್ರಯೋಗ, ಇಂಗ್ಲೀಷಿನ ಕೃತಿಗಳ ಆಳವಾದ ಅರಿವು ಎದ್ದು ಕಾಣುತ್ತವೆ. ಶೈಲಿ ಸ್ವಲ್ಪ ಪೆಡಸು, ವಾಕ್ಯ ರಚನೆ ಗಡಸು ಎಂದು ತೋರುವುದಾದರೂ ವಿಷಯ ಪ್ರತಿಪಾದನೆಯ ದೃಷ್ಟಿಯಿಂದ ಅಸಹಜವೆನಿಸುವುದಿಲ್ಲ, ಅವರ ಬರಹಗಳಲ್ಲಿ ವಿಷಯ ಸ್ಪಷ್ಟತೆ ಇರುತ್ತಿತ್ತು, ತಾವು ಬರೆದದ್ದು ಪಾಂಡಿತ್ಯ ಪ್ರದರ್ಶನಕ್ಕಾಗಿಯೇನೂ ಅಲ್ಲ, ವಿಷಯ ಪ್ರತಿಪಾದನೆ ಮಾತ್ರ ಅವರ ಗುರಿ, ಅದಕ್ಕೆ ಯಾವ ಶೈಲಿ ಸೂಕ್ತ ಎಂದು ಅವರಿಗೆ ತೋರಿದೆಯೊ ಅದನ್ನೆ ಸಹಜವಾಗಿ ಬಳಸಿಕೊಂಡಿದ್ದಾರೆ.

ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಇವರ ಲೇಖನಗಳಲ್ಲಿ ಸಾಹಿತ್ಯಾಂಶ ಇರುತ್ತಿತ್ತಾದರೂ ವೈಚಾರಿಕ ಚಿಂತನೆಗೆ ಹೆಚ್ಚು ಇವರು ಆದ್ಯತೆ ಕೊಡುತ್ತಿದ್ದರು. ಈ ಕಾರಣದಿಂದಾಗಿ ಇವರ ಸಾಹಿತ್ಯದ ಕೆಲವು ಭಾಗಗಳನ್ನು ವಿಚಾರ ಸಾಹಿತ್ಯದ ಪಟ್ಟಿಗೆ ಸೇರಿಸಬಹುದೆನಿಸುತ್ತದೆ. ವಿವಿಧ ವಸ್ತು ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಇವರು ಸಾಕಷ್ಟು ಓದುತ್ತಿದ್ದ ಕಾರಣ ಲೋಕಜ್ಞಾನ ಚೆನ್ನಾಗಿತ್ತು. ಈ ಲೋಕಜ್ಞಾನದೊಂದಿಗೆ ತಮ್ಮ ಸೃಜನಶೀಲತೆಯನ್ನು ಮೇಳೈಸಿಕೊಂಡು ನಾಟಕ, ಕತೆ, ಪ್ರಬಂಧಗಳನ್ನು ಬರೆಯುವ ಪ್ರವೃತ್ತಿಯನ್ನು ಬಳಸಿಕೊಂಡದ್ದು ಸಹಜವಾಗಿತ್ತು.

ಗೌಡರು ಮಾಸ್ತಿ, ಡಿ.ವಿ.ಜಿ., ಕುವೆಂಪು ಮುಂತಾದ ಸಾಹಿತಿಗಳ ಬಗ್ಗೆ ಅಭಿಮಾನ ಮತ್ತುಮೆಚ್ಚುಗೆ ಹೊಂದಿದ್ದರು. ಈ ಸಾಹಿತಿಗಳ ಸಾಹಿತ್ಯದ ಬಗ್ಗೆ ಹೆಚ್ಚು ಆಕರ್ಷಿತರಾಗಿದ್ದರು. ಹೀಗೆ ಸಾಹಿತಿಗಳ ಒಡನಾಟದಿಂದ ಮದ್ದೂರಿನ ಸಾಹಿತ್ಯ ಸಮ್ಮೇಳನದಲ್ಲಿ ಬಿಡುಗಡೆಯಾದ 'ಇಕ್ಷುಗಂಗ' ಹೊತ್ತಿಗೆಗೆ 'ಪ್ರಗತಿಶೀಲ ಮಂಡ್ಯಜಿಲ್ಲೆ' ಎಂಬ ವಿಶೇಷ ಲೇಖನವನ್ನು ಬರೆದುಕೊಟ್ಟಿದ್ದರು. ಹಾಗೆಯೇ ಒಕ್ಕಲಿಗರ ಪತ್ರಿಕೆಯ ವಿಶೇಷ ವಾರ್ಷಿಕ ಸಂಚಿಕೆಯಲ್ಲಿ ಇವರು ಪ್ರಕಟಿಸಿದ ಕೆಲವು ಲೇಖನಗಳು, ಕವನ, ನಾಟಕ, ಕತೆ ಇತ್ಯಾದಿ ಇವರ ಸಾಹಿತ್ಯಾಸಕ್ತಿಯನ್ನು ಪರಿಚಯಿಸುತ್ತವೆ. ಕೇವಲ ಪತ್ರಕರ್ತನ ಆಲೋಚನೆ, ಆಯ್ಕೆಯ ವಿಧಾನವೇ ಬೇರೆ. ಆ ಪತ್ರಕರ್ತನಲ್ಲಿ ಸಾಹಿತಿಯೂ ಅಡಗಿದ್ದರೆ ಆಗ ಆತ ಮಾಡುವ ಆಯ್ಕೆಯೇ

ವಿಭಿನ್ನವಾಗಿರುತ್ತದೆ. ಈ ಮನೋಸ್ಥಿತಿಯ ಹಿನ್ನೆಲೆಯಲ್ಲಿ ವೀರಣ್ಣಗೌಡರು ಒಕ್ಕಲಿಗರಪತ್ರಿಕೆಯಲ್ಲಿ ಭಾರತೀಸುತರ 'ತಾಯ್ನಾಡು', ಕುವೆಂಪುರವರ 'ದುಃಖದಾನಂದ', 'ಗೊಮಟೇಶ್ವರ', 'ಹಾಳೂರು', ಸಾಲಿರಾಮಚಂದ್ರರಾಯರ'ಪೊಸಮಳೆ', 'ನೇಗಿಲಯೋಗಿ', ಕೃಷ್ಣಬೆಟಗೇರಿಯವರ 'ರಾಮರಾಜನ ರಣದುಂಬಿ', ಇಂತಹ ಅತ್ಯುತ್ತಮ ಕವನಗಳನ್ನು ಆಯ್ಕೆ ಮಾಡಿ ಪ್ರಕಟಿಸಿದ್ದರು. ಇದೇ ಪತ್ರಿಕೆಯಲ್ಲಿ ಇವರೇ ಬರೆದು ಪ್ರಕಟಿಸಿದ್ದ 'ಭೂತದ ಭಯ' ಎಂಬ ಕತೆ, 'ಶಿವಾಜಿ ವಿಜಯ' ಮತ್ತು 'ಬುದ್ದದೇವ' ಎಂಬ ನಾಟಕಗಳು ಶುದ್ದ ಸಾಹಿತ್ಯಿಕ ಅಂಶದಿಂದ ಕೂಡಿದ್ದವು. ಇವರ ಸ್ವರಚಿತ ಬರಹ, ಕತೆ, ನಾಟಕದಲ್ಲಾಗಲೀ ಎದ್ದು ಕಾಣುವ ಅಂಶವೆಂದರೆ ಶುದ್ಧ ವೈಚಾರಿಕತೆ. ಸಾಹಿತ್ಯದ ಯಾವುದೇ ರೂಪವಾಗಿರಲಿ ತಮ್ಮ ಬರವಣಿಗೆಯ ಶೈಲಿಯ ಮೂಲಕ ಓದುಗನನ್ನು ವಿಚಾರಶೀಲತೆಯ ಕಡೆ ಕೊಂಡೊಯ್ಯಬೇಕೆಂಬುದೇ ಇವರ ಉದ್ದೇಶವಾಗಿತ್ತು ಎಂಬುದನ್ನು ಈ ಆಯ್ಕೆಗಳ ಮೂಲಕ ಗ್ರಹಿಸಬಹುದು. ಇವೆಲ್ಲವನ್ನು ಗಮನಿಸಿದಾಗ ಇವರ ಪ್ರಕಾರ ಸಾಹಿತ್ಯವೆಂಬುದು ಕೇವಲ ಮನರಂಜನೆಗೆ ಅಲ್ಲ, ಸೌಂದರ್ಯದ ಅನಾವರಣಕ್ಕಾಗಿಯೂ ಅಲ್ಲ, ಅದು ಒಂದು ಉದ್ದೇಶಕ್ಕಾಗಿ ಎಂಬ ತತ್ವವನ್ನು ಅರಿತವರಂತೆ ಹೆಚ್.ಕೆ.ವೀರಣ್ಣಗೌಡರ ಬರಹಗಳು ಚಿಂತನಶೀಲ ಸಾಹಿತ್ಯವೆನಿಸುವಂತಹವು. ಸಾಹಿತಿಗಿರಬೇಕಾದ ಸಾಮಾಜಿಕ ಜವಾಬ್ದಾರಿ ಇವರಿಗಿತ್ತು. ಇವರ ಸಾಹಿತ್ಯದಲ್ಲಿ ಒಂದು ಸೂಕ್ಷ್ಮವಾದ ಒಳನೋಟ ಸದಾ ಇರುತ್ತಿತ್ತು.

ಸಾಹಿತ್ಯವೆಂದರೆ ಸಮಸ್ತ ಸಂಗತಿಗಳನ್ನು ಒಳಗೊಳ್ಳುವಂತಹದು ಎಂದಾಗುತ್ತದೆ. ಸಾಹಿತಿಯಾದವ ತನ್ನ ಅನುಭವಕ್ಕೆ ನಿಲುಕದ ಸಂಗತಿಯನ್ನು ಹೇಳುವ ವಿಧಾನ ವಿಶಿಷ್ಟವಾದುದಾಗಿರುತ್ತದೆ. ಇಲ್ಲಿ ಭಾಷೆಯ ಕಲಾತ್ಮಕವಾದ ಬಳಕೆ ರಸಾನುಭೂತಿಗೆ ಕಾರಣವಾಗುತ್ತದೆ. ಪ್ರತಿಭೆಯಿದ್ದವ ಮಾತ್ರ ಇಂತಹವುದನ್ನು ರಚಿಸಬಲ್ಲ. ಹಾಗೇ ಹೊಸ ವಿಚಾರ ಶಕ್ತಿ ಓದುಗನಲ್ಲಿ ಸಂಚಯಿಸುವಂತೆ ಮಾಡಬಲ್ಲ. ಇವೆಲ್ಲವು ಸಾಹಿತ್ಯಕ್ಕಿರುವ ಸಾಧ್ಯತೆಗಳು. ಹಾಗಾಗಿ ವೀರಣ್ಣಗೌಡರು ರಚಿಸಿರುವ ನಾಟಕಗಳಲ್ಲಿ 'ಶಿವಾಜಿ ವಿಜಯ' ಒಂದು. ಶಿವಾಜಿ ಒಬ್ಬ ಅಪ್ರತಿಮ ದೇಶ ಭಕ್ತ, ಪರಕೀಯರ ಅದಿಪತ್ಯಕ್ಕೆ ನಾಡನ್ನು ಒಪ್ಪಿಸಬಾರದೆಂದು ಅಹರ್ನಿಶಿ ಹೆಣಗಿದ ವ್ಯಕ್ತಿ. ದೇಸೀಯ ಪ್ರಜ್ಞೆ ಇತನಲ್ಲಿ ಸದಾ ಜಾಗೃತವಾಗಿರುತ್ತಿತ್ತು. ದೇಸೀಯವಾದ ರೈತ ಚಳುವಳಿಗಳನ್ನು ಹುಟ್ಟಿ ಹಾಕಿ ಸರ್ಕಾರದ ಅನ್ಯಾಯಗಳನ್ನು ವಿರೋಧಿಸಿ ಧೈರ್ಯದಿಂದ ಪ್ರತಿಭಟಿಸಿ ನ್ಯಾಯಕ್ಕಾಗಿ ಹೋರಾಟ ಮಾಡಿದವರು. ಈ ಕಾರಣದಿಂದಾಗಿಯೇ ಶಿವಾಜಿಯಂತಹ ಅಪ್ರತಿಮ ದೇಶಭಕ್ತ ವೀರಣ್ಣಗೌಡರಿಗೆ ಇಷ್ಟವಾಗಿ ಆತನ ಮೌಲ್ಯ, ಆತನ ಆಲೋಚನಾ ವಿಧಾನ, ಕಾರ್ಯತಂತ್ರಗಳನ್ನು ವಿವರಿಸಲು ಸಾಧ್ಯವಾಗುವಂತೆ ನಾಟಕದಲ್ಲಿ ಅದನ್ನು ನಿರ್ವಹಿಸಿದ್ದಾರೆ. ನಾಟಕ ಪ್ರಕಾರದಲ್ಲಿ ಬಳಕೆಗೊಳ್ಳುವ ಶೈಲಿ ಸಂಭಾಷಣಾಯುಕ್ತವಾದುದು. ಎಲ್ಲಿಯೂ ನೀರಸ ಎನಿಸದಂತೆ ಕೃತಕವಾಗದಂತೆ ಸಹಜವೆನಿಸುವಂತೆ ಓದುಗನ ಮುಂದೆ ದೃಶ್ಯವನ್ನು ಕಟ್ಟಿಕೊಡುವುದರಲ್ಲಿ ಗೌಡರ ಪ್ರಯತ್ನ ವಿಶಿಷ್ಟವಾದುದು. ನಾಟಕದ ಆವರಣದೊಳಗೆ ಓದುಗ/ಪ್ರೇಕ್ಷಕನನ್ನೇ ಪ್ರೇರೇಪಿಸುವಂತೆ ಮಾಡಿ ಅಲ್ಲಿಯೇ ಹಿಡಿದಿಡುವುದರಲ್ಲಿ ನಾಟಕಕಾರನ ಸಾಮರ್ಥ್ಯ ಅಡಗಿರುತ್ತದೆ. ಪ್ರತಿಭೆ ಇರುವ ನಾಟಕಕಾರ ಮಾತ್ರ

ಇದನ್ನು ಸಾಧ್ಯವಾಗಿಸಬಲ್ಲ. ಹೆಚ್.ಕೆ.ವೀರಣ್ಣಗೌಡರು ಇಂತಹ ಪ್ರತಿಭೆಯನ್ನು ಪಡೆದಿದ್ದರೆಂಬುದೊಂದು ವಿಶೇಷವಾದ ಸಂಗತಿ.

ಹಾಗೆಯೇ ಸ್ವತಃ ಮೌಲ್ಯಯುತ ಜೀವನವನ್ನಪ್ಪಿಕೊಂಡಿದ್ದ, ಮೌಲ್ಯಾಧಾರಿತ ರಾಜಕಾರಣ ಮಾಡುತ್ತಿದ್ದ ಜನಪರ ಕಾಳಜಿ ಇದ್ದ ಹೆಚ್.ಕೆ.ವೀರಣ್ಣಗೌಡರು ಬುದ್ಧನ ತತ್ವಗಳಿಂದ ಪ್ರಭಾವಿತರಾದದ್ದರಲ್ಲಿ ಆಶ್ಚರ್ಯವಿಲ್ಲ. ಹಾಗಾಗಿ ಬುದ್ಧದೇವ ನಾಟಕವನ್ನು ರಚಿಸಿದರು. ಜಗತ್ತು ಕಂಡ ಒಬ್ಬ ಶ್ರೇಷ್ಠ ಮಾನವತಾವಾದಿ ಬುದ್ಧ. ಜನರ ತಲ್ಲಣ, ನೋವುಗಳಿಗೆ ಮರುಗಿದ, ಕಷ್ಟ ಕಾರ್ಪಣ್ಯಗಳನ್ನು ನಿವಾರಿಸಲು ಪ್ರಯತ್ನಿಸಿದ ಸಹೃದಯಿ. ಆತನ ವಿಚಾರಧಾರೆ ಜನಮನವನ್ನು ತಲುಪಲಿ ಎಂಬ ಉದ್ದೇಶ ಕಾರಣವಾಗಿಯೇ ಗೌಡರು ಬುದ್ಧನನ್ನು ಕುರಿತಾದ ನಾಟಕ ಬರೆದಿರಬಹುದೆನಿಸುತ್ತದೆ. ಇನ್ನು ಗೌಡರು ರಚಿಸಿದ 'ಭೂತದ ಭಯ' ಒಂದು ಶುದ್ಧ ವೈಚಾರಿಕ ಮನಸ್ಸಿನ ಆಲೋಚನೆಯಿಂದ ಕಟ್ಟಿದ ಕತೆಯಾಗಿದೆ. ಭೂತ ಪ್ರೇತದ ಹೆಸರಿನಲ್ಲಿ ಮುಗ್ಧ ಜನರಲ್ಲಿ ಭಯವನ್ನೇ ಭಿತ್ತಿ ಅವರ ಅಜ್ಞಾನ ಮೌಢ್ಯದ ದುರ್ಬಳಕೆ ಮಾಡಿಕೊಂಡು ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುವ ದುರುಳರ ಚಿತ್ರಣವನ್ನೇ ಈ ಕತೆಯಲ್ಲಿ ಹೆಚ್.ಕೆ.ವೀರಣ್ಣಗೌಡರು ಕಟ್ಟಿಕೊಡುತ್ತಾರೆ. ಮಾಯಮಂತ್ರ, ತಂತ್ರ–ಮಾಟಗಳ ಹೆಸರಿನಿಂದ ಜನರಲ್ಲಿ ಭಯ ಭಿತ್ತಿ ತಮ್ಮ ಕಾರ್ಯಸಾಧನೆ ಮಾಡುವುದು ಗ್ರಾಮೀಣ ಪರಿಸರದಲ್ಲಿ ಸಾಮಾನ್ಯ. ಬಹುಶಃ ಹೀಗೆ ತಾವು ಕಂಡ ಘಟನೆಗಳೇ ಅವರಿಗೆ ಈ ಬಗೆಯ ಕತೆ ರಚಿಸಲು ಪ್ರೇರಣೆ ಒದಗಿಸಿರಬಹುದು. ಈ ಮೂಲಕ ಜನರ ಅಜ್ಞಾನ ನಿವಾರಿಸಿ ಅಲ್ಲಿ ಆರೋಗ್ಯಕರವಾದ ಚಿಂತನೆಗಳನ್ನು ಬೆಳೆಸಲು ಈ ಕತೆಯನ್ನು ಹೆಚ್.ಕೆ.ವೀರಣ್ಣಗೌಡರು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಸೃಜನಶೀಲ ಸಾಹಿತಿಯೊಬ್ಬ ತನ್ನ ಸುತ್ತಣ ಜಗತ್ತಿನಲ್ಲಿ ತಾನು ಪಡೆಯುವ ಅನುಭವಗಳನ್ನೇ ಬಳಸಿಕೊಂಡು ಮತ್ತೆ ಆ ಜಗತ್ತಿಗೆ ವೈಚಾರಿಕವಾಗಿ ಆಲೋಚಿಸಬಲ್ಲಂತಹ ತಿಳುವಳಿಕೆಯನ್ನು ತನ್ನ ಬರಹದ ಮೂಲಕ ನೀಡಬಲ್ಲನೆಂಬುದಕ್ಕೆ ಈ ಕತೆ ಉದಾಹರಣೆಯಾಗುತ್ತದೆ. ನಾಟಕ ರಚನಾಕಾರರಾಗಿ ಮೂಡಿಬಂದಿರುವ ಗೌಡರು ನಾಟಕ ಪ್ರದರ್ಶನದ ಸಾಧ್ಯತೆಗಳ ಬಗ್ಗೆಯೂ ಆಲೋಚಿಸಿರುವುದನ್ನು ಕಾಣಬಹುದು. ನಾಟಕದಲ್ಲಿ ಸಂಗೀತ ಅಗತ್ಯವೇ? ಎಂಬ ಲೇಖನದಲ್ಲಿ ವೀರಣ್ಣಗೌಡರು ಒಬ್ಬ ಉತ್ತಮ ನಾಟಕಕಾರರಾಗಿ ಮಾತ್ರವಲ್ಲ, ಅದಕ್ಕಿರುವ ಪ್ರದರ್ಶನ ಸಾಧ್ಯತೆಗಳು, ಬೇಕಾದ ಆಯಾಮ ಅಥವ ಪರಿಕರಗಳ ಬಗ್ಗೆಯೂ ಸಹ ಚರ್ಚೆ ಮಾಡಿದ್ದಾರೆ. ನಾಟಕ ಪ್ರದರ್ಶನ ಕಾಲಕ್ಕೆ ತಕ್ಕಂತೆ ರೂಪಾಂತರ ಹೊಂದಬೇಕಾದ ಅಗತ್ಯವಿದೆ. ಮತ್ತು ಉಚಿತವಲ್ಲದ ಸಂದರ್ಭದಲ್ಲಿ ಸಂಗೀತ ಸೇರಿಸುವುದು ಅನುಚಿತವಾಗಬಲ್ಲುದು. ತಮ್ಮ ಈ ಕುರಿತ ಲೇಖನದಲ್ಲಿ ಹೆಚ್.ಕೆ.ವೀರಣ್ಣಗೌಡರು ನಾಟಕವೊಂದು ಪ್ರದರ್ಶನಕ್ಕೊಳಗಾಗಿ ಯಶಸ್ಸನ್ನು ಕಾಣಬೇಕೆಂದಿದ್ದರೆ ನಾಟಕದ ಗ್ರಂಥ ರಚನಾ ಶಕ್ತಿ, ಅಭಿನಯಕಾರರ ವಾಕ್‌ಪಟುತ್ವ ಮತ್ತು ಭಾವಪ್ರದರ್ಶನ ಕೌಶಲ್ಯ ಇವು ಅತ್ಯಂತ ಅಗತ್ಯ, ಅಸ್ವಾಭಾವಿಕವಾದ ಸಂಗೀತ ಮುಖ್ಯವಲ್ಲ ಎಂದು ಹೇಳುತ್ತಾರೆ. ಸಂಗೀತಕ್ಕೂ ಸ್ಥಳ, ಕಾಲ, ತಕ್ಕ ಸಂದರ್ಭ ಅವಶ್ಯಕ. ಕೇವಲ ಸ್ವಭಾವಗುಣವೆಂದು ನಾಟಕದಲ್ಲಿ ಸಂಗೀತ ಕಡ್ಡಾಯಗೊಳಿಸಿದರೆ 'ಎತ್ತು ಈಯಿತೆಂದರೆ ಕೊಟ್ಟಿಗೆಯಲ್ಲಿ ಕಟ್ಟು' ಎಂದಂತಾಗುತ್ತದೆ ಎಂಬುದು ಹೆಚ್.ಕೆ.ವೀರಣ್ಣಗೌಡರು ಈ ಲೇಖನದಲ್ಲಿ ಮಾಡಿದ ವಾದವಾಗಿತ್ತು.

ಹೆಚ್.ಕೆ.ವೀರಣ್ಣಗೌಡರ ಈ ಎಲ್ಲಾ ವಿಚಾರವನ್ನು ಗಮನಿಸಿದಾಗ ಇವರು ಕೇವಲ ನಾಟಕಕಾರರಷ್ಟೆ ಅಲ್ಲ, ನಾಟಕಕ್ಕಿರುವ ಪ್ರದರ್ಶನ ಸಾಧ್ಯತೆ, ರಂಗಭೂಮಿಯ ಇತಿಮಿತಿಗಳನ್ನು ಕುರಿತು ಪ್ರಬುದ್ಧವಾಗಿ ವಿಚಾರಮಾಡಿ ತಮ್ಮ ನಿಲುವನ್ನು ಸ್ಪಷ್ಟ ಪಡಿಸಬಲ್ಲವರಾಗಿದ್ದರು ಎಂಬ ಸಂಗತಿ ಸ್ಪಷ್ಟವಾಗುತ್ತದೆ. ಇವರಿಗಿದ್ದ ಬಹುಮುಖ ಚಿಂತನೆ, ಪ್ರತಿಭೆಯ ಪರಿಚಯವೂ ಆಗುತ್ತದೆ. ಹಾಗೆಯೇ ರಾಜಕೀಯ, ಸಾಮಾಜಿಕ ಮೌಲ್ಯಗಳ ಕಡೆ ಗಮನ ಹರಿಸಿದ್ದ ಹೆಚ್.ಕೆ.ವೀರಣ್ಣಗೌಡರು ಹಿಂದೆ ಇಂತಹ ಮೌಲ್ಯಗಳಿಗೆ ಬದ್ಧರಾಗಿ ಬದುಕಿದ ವ್ಯಕ್ತಿಗಳ ಬಗ್ಗೆ ಆಕರ್ಷಿತರಾಗಿದುದ್ದರಿಂದ, ತಮ್ಮ ಅಂದಿನ ಹೋರಾಟದ ಯಶೋಗಾಥೆಗಳನ್ನು ಬದುಕು ಮೆಲುಕು ಎಂಬ ಹೆಸರಿನಲ್ಲಿ ಕೃತಿಗಿಳಿಸಿದ್ದು ಸಹಜವೇ ಆಗಿದೆ.

ಹೆಚ್.ಕೆ.ವೀರಣ್ಣಗೌಡರು ಸ್ವಾತಂತ್ರ್ಯ ಪೂರ್ವದಲ್ಲಿ ತೊಡಗಿಕೊಂಡ ಚಳುವಳಿಗಳು ಮತ್ತು ಸ್ವಾತಂತ್ರ್ಯ ನಂತರದ ಚಳುವಳಿಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ಹೆಚ್ಚು ಗಮನಹರಿಸಲಾಗಿದೆ. ೧೯೨೦-೩೦ರ ದಶಕದಲ್ಲಿ ತಮ್ಮ ಪತ್ರಿಕಾ ರಂಗದ ಮೂಲಕ ಜನತೆಯಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬಿತ್ತುವ, ಸ್ವಾತಂತ್ರ್ಯ ಹೋರಾಟದ ಕಡೆ ಜನರನ್ನು ಸಂಘಟಿಸುವಂತಹ ಲೇಖನಗಳನ್ನು ಪ್ರಕಟಿಸುತ್ತಾ ಪರೋಕ್ಷವಾಗಿ ತಾವು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದರು. ಒಕ್ಕಲಿಗರ ಪತ್ರಿಕೆಯಿಂದ ಹೊರಬಂದು, ತಮ್ಮದೇ ಆದ ಚಿತ್ರಗುಪ್ತ ಎಂಬ ಪತ್ರಿಕೆಯನ್ನು ಆರಂಭಿಸಿದರು. ನಂತರದಲ್ಲಿ ಆರ್ಥಿಕ ಮುಗ್ಗಟ್ಟಿನ ಕಾರಣ ಪತ್ರಿಕೆಯನ್ನು ಸ್ಥಗಿತಗೊಳಿಸಿದರು. ವಿವಾಹದ ನಂತರ ಮದ್ದೂರಿನ ತಮ್ಮ ಮಾವನವರ ಮನೆಯಲ್ಲಿ ಕೆಲವು ಕಾಲ ಇದ್ದ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ನಡೆದ ವಿದ್ಯಾಮಾನಗಳು ಗೌಡರಿಗೆ ಮದ್ದೂರು ತಮ್ಮ ಭವಿಷ್ಯದ ಕಾರ್ಯಕ್ಷೇತ್ರವಾಗಿ ಮಾರ್ಪಡಲು ಕಾರಣವಾಯಿತೆನ್ನಬಹುದು. ಕ್ರಾಂತಿಕಾರಕ ಮನೋಭಾವನೆಯಿಂದ ಪತ್ರಿಕೆಯ ಮೂಲಕ ಆಳುವ ವರ್ಗದ ಶೋಷಣೆಯ ವಿರುದ್ಧ ಶ್ರಮಿಕ ವರ್ಗದ ಪರವಾಗಿ ಹೋರಾಟ ಮಾಡುತ್ತಿದ್ದ ವೀರಣ್ಣಗೌಡರನ್ನು ಮದ್ದೂರು ರೈತ ಮಿತ್ರರು ಗುರುತಿಸಿದರು. ಈ ವೇಳೆಗಾಗಲೇ ಕೃಷ್ಣರಾಜ ಸಾಗರ ಅಣೆಕಟ್ಟೆಯಿಂದ ರೈತರ ಅಭಿವೃದ್ಧಿಗಾಗಿ ನೀರಾವರಿ ಸೌಲಭ್ಯ ಒದಗಿಸಲು ಸರ್ಕಾರ ನಿರ್ಮಿಸಿದ ಮೂರು ನಾಲೆಗಳಲ್ಲಿ ಇರ್ವಿನ್ ನಾಲೆ ಪ್ರಮುಖವಾದುದು. ಈ ಪ್ರದೇಶದ ರೈತರಿಗೆ ಸರ್ಕಾರ ಕಂದಾಯದ ಜೊತೆಗೆ ಕಾಂಟ್ರಬ್ಯೂಷನ್ ಶುಲ್ಕವನ್ನು ಹಾಕಿದ್ದರು. ಅಲ್ಲದೆ ಬ್ಲಾಕ್ ಸಿಸ್ಟಂ ವ್ಯವಸ್ಥೆಯನ್ನು ಜಾರಿಗೆ ತಂದಿದ್ದರು. ಇದು ರೈತರಿಗೆ ಹೆಚ್ಚಿನ ಹೊರೆಯಾಗಿ ಮತ್ತು ತೊಂದರೆಯಾಗಿ ಪರಿಣಮಿಸಿತ್ತು. ರೈತರಿಗೆ ಒದಗಿದ ಈ ಕಷ್ಟವನ್ನು ನಿವಾರಣೆ ಮಾಡುವ ಸಲುವಾಗಿ ರೈತ ಮುಖಂಡರಾದ ಹೆಚ್.ಹೊನ್ನಯ್ಯ ಮತ್ತು ಕೆ.ಪುಟ್ಟಣ್ಣನವರು ಹೆಚ್.ಕೆ.ವೀರಣ್ಣಗೌಡರನ್ನು ಸಂಪರ್ಕಿಸಿದರು. ನೇಗಿಲಯೋಗಿಯ ನಿಸ್ಪೃಹವಾದ ಸೇವೆಯಿಂದ ದೇಶ ಅನ್ನವನ್ನು ಪಡೆದರೂ ಅವನನ್ನು ಸರ್ಕಾರ ಕಡೆಗಣಿಸುತ್ತಿರುವ ಬಗ್ಗೆ ಗೌಡರಿಗೆ ವಿಷಾದವಿತ್ತು, ನೋವಿತ್ತು. ತಮ್ಮ ಪತ್ರಿಕಾ ಚಟುವಟಿಕೆಯಿಂದ ಸರ್ಕಾರದ ವಕ್ರದೃಷ್ಟಿಗೆ ಬಿದ್ದಿದ್ದ ಗೌಡರು ತನ್ನ ನಿಮಿತ್ತವಾಗಿ ರೈತರಿಗೆ ಅನ್ಯಾಯ ಆಗಬಹುದೆಂದು ಪರಿಗಣಿಸಿ ಮೊದಲಿಗೆ ರೈತರ ಮುಖಂಡತ್ವ ವಹಿಸಲು ನಿರಾಕರಿಸಿದರು. ಆದರೆ ಮಿತ್ರರ ವಿಷಯದ ಗಂಭೀರತೆಯನ್ನು ಅರಿತ ವೀರಣ್ಣಗೌಡರು ತಾನು

ಒಬ್ಬ ರೈತ ಕುಟುಂಬದಿಂದ ಬಂದವನೇ ಎಂದು, ತಾನು ಸ್ಥಳೀಯನಲ್ಲದಿದ್ದರೂ ರೈತ ಎಲ್ಲಿದ್ದರೂ ರೈತನೇ ಆದಕಾರಣ ಅವರ ಹಿತರಕ್ಷಣೆಗೆ ಮುಂದಾಗುವುದು ತನ್ನ ಕರ್ತವ್ಯವೆಂದು ಮುನ್ನಡಿಯಿಟ್ಟರು. ಶಿಸ್ತಿನ ಸಿಪಾಯಿಯಾದ ವೀರಣ್ಣಗೌಡರು ಚಳುವಳಿ ರೂಪಿಸುವುದಕ್ಕೆ ಪೂರ್ವಭಾವಿಯಾಗಿ ಹಲವಾರು ಕರಾರುವಕ್ಕಾದ ವಿಷಯ ಸಂಗ್ರಹಣೆಗೆ ಮುಂದಾದರು. ನಂತರ ಇದರ ಬಗ್ಗೆ ರೈತರಲ್ಲಿ ಜಾಗೃತಿ ಮೂಡಿಸಿ ಅವರ ಬೆಂಬಲವನ್ನು ಪಡೆದುಕೊಂಡು ನಂತರದಲ್ಲಿ ಜಾಥಾವನ್ನು ಸಂಘಟಿಸಿದರು. ಇಲ್ಲಿ ವಿರೋಧಿಗಳ ಯಾವುದೇ ಆಪಾದನೆಗಳಿಗೆ ಎಡೆಕೊಡದಂತೆ ಮುನ್ನೆಚ್ಚರಿಕೆಯನ್ನು ವಹಿಸಿದರು. ಸರ್ಕಾರ ವೀರಣ್ಣಗೌಡರನ್ನು ಚಳುವಳಿಗಾರನೆಂದು ಮೊದಲೇ ಅವರ ಪತ್ರಿಕಾ ಕಾರ್ಯದಿಂದ ನಿರ್ಧರಿಸಿದ್ದರಿಂದ ಅವರು ಸಂಘಟಿಸುವ ಜಾಥಾವನ್ನು ಹೇಗಾದರೂ ಮಾಡಿ ಚದುರಿಸಬೇಕೆಂದು ನಿರ್ಧರಿಸಿತ್ತು. ಹಾಗಾಗಿ ಪೋಲೀಸರಿಂದ ಬೆದರಿಸುವ ಹುನ್ನಾರ ಮಾಡಿತ್ತು. ಆದರೆ ಸಫಲವಾಗಲಿಲ್ಲ. ವೀರಣ್ಣಗೌಡರು ಶಿಸ್ತು ಅರಿಯದ ಮಣ್ಣಿನ ಮಕ್ಕಳನ್ನು ಶಿಸ್ತುಬದ್ದವಾಗಿ ಒಂದೆಡೆ ಸೇರಿಸಲು ಬಹಳ ಪ್ರಯಾಸ ಪಡಬೇಕಾಯಿತು. ದಾರಿಯಲ್ಲಿ ಯಾವುದೇ ರೀತಿಯ ತೊಂದರೆಗಳು ತಲೆದೋರದಿರಲೆಂದು ಸುವ್ಯವಸ್ಥಿತವಾಗಿ ಅವಶ್ಯಕ ಸಾಮಗ್ರಿಗಳನ್ನು ಕೊಂಡೊಯ್ಯುವುದು ಸೂಕ್ತವೆಂದು ಮನಗಂಡರು. ಈ ರೀತಿಯಾಗಿ ನಾಲ್ಕು ಸಾವಿರ ರೈತರನ್ನು ಮದ್ದೂರಿನಿಂದ ಬೆಂಗಳೂರಿನೆಡೆಗೆ ಅಹಿಂಸಾತ್ಮಕವಾಗಿ ಶಾಚಿತ ರೀತಿಯಲ್ಲಿ ಕರೆತರುತ್ತಿದ್ದನ್ನು ಕೇಳಿದ ದಿವಾನರು ದಾರಿಯಲ್ಲಿ ಯಾವುದೇ ತೊಂದರೆಯಾಗದಂತೆ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ವ್ಯವಸ್ಥೆ ಮಾಡಬೇಕೆಂದು ಅಧಿಕಾರಿಗಳಿಗೆ ಸೂಚಿಸಿದ್ದರು. ಮಹಾತ್ಮ ಗಾಂಧೀಜಿಯವರಿಂದ ಪ್ರಭಾವಿತರಾಗಿದ್ದ ವೀರಣ್ಣಗೌಡರು ಈ ಜಾಥಾವನ್ನು ಅಹಿಂಸಾ ತತ್ವಗಳ ಆಧಾರದ ಮೇಲೆ ಸುವ್ಯವಸ್ಥಿತವಾಗಿ ರೂಪಿಸಿ ನಿಭಾಯಿಸಿದರು. ದಿವಾನರ ಬಳಿ ಬಂದ ರೈತರ ದಂಡು ಶಾಂತ ರೀತಿಯಲ್ಲಿ ಅಠಾರ ಕಛೇರಿಯ ಮುಂದೆ ಸೇರಿತು. ರೈತ ಮುಖಂಡರನ್ನು ದಿವಾನರು ಬರ ಹೇಳಿದರು. ಆದರೆ ಹೆಚ್.ಕೆ.ವೀರಣ್ಣಗೌಡರು ಇಲ್ಲಿ ಯಾರೂ ರೈತ ಮುಖಂಡರಿಲ್ಲ, ನಾವೆಲ್ಲರೂ ರೈತರು 'ತಾವು ರೈತರ ಬಳಿಗೆ ಬನ್ನಿ' ಎಂದರು. ಈ ಸನ್ನಿವೇಶವನ್ನು ಗೌಡರು ತಮ್ಮ ಲಾಭಕ್ಕಾಗಿ ಬಳಸಿಕೊಂಡು ರಾಜಕೀಯ ದೂರದೃಷ್ಟಿತನದಿಂದ ಮುಖಂಡರಾಗಿ ಬಿಂಬಿಸಲ್ಪಡಬಹುದಿತ್ತು. ಆದರೆ ಜನಸೇವೆಯನ್ನೇ ಮನಸ್ಸಿನಲ್ಲಿಟ್ಟುಕೊಂಡವರಿಗೆ ಯಾವ ಸನ್ನಿವೇಶವಾದರು ಸೇವೆಯ ವಿನಃ ಬೇರೆ ಯೋಚನೆಗಳಿಗೆ ಆಸ್ಪದ ನೀಡಲಾರರು ಎಂಬುದಕ್ಕೆ ಹೆಚ್.ಕೆ.ವೀರಣ್ಣಗೌಡರೇ ಉದಾಹರಣೆಯಾಗಿದ್ದಾರೆ. ಇದು ಅವರ ನಿಸ್ವಾರ್ಥತೆಗೆ ಒಂದು ನಿದರ್ಶನ. ಪ್ರತ್ಯಕ್ಷವಾಗಿ ರೈತರ ಅಹವಾಲುಗಳನ್ನು ಕೇಳಿದ ದಿವಾನರು ಕೆಲವು ರಿಯಾಯಿತಿಗಳನ್ನು ರೈತರಿಗೆ ಒದಗಿಸಿದರು. ಇದರೊಂದಿಗೆ ಹೆಚ್.ಕೆ.ವೀರಣ್ಣಗೌಡರ ಜಾಥಾದ ಉದ್ದೇಶ ಯಶಸ್ವಿಯಾಗಿ ಪೂರ್ಣಗೊಂಡಿತು. ಆದರೆ ಆಳುವ ವರ್ಗ ತನ್ನ ನಿರಂಕುಶತೆಗೆ ಅಡ್ಡಿ ಪಡಿಸುವ ಯಾವ ವಿಚಾರವನ್ನು ಮಟ್ಟಹಾಕುವವರೆಗೆ ಪ್ರಯತ್ನಿಸುತ್ತಲೇ ಇರುತ್ತದೆ. ಹಾಗಾಗಿ ಹೆಚ್.ಕೆ.ವೀರಣ್ಣಗೌಡರಿಗೆ ಸರ್ಕಾರ ತದನಂತರದಲ್ಲಿ ಕಿರುಕೂಳ ಕೊಡುವುದನ್ನು ಬಿಡಲಿಲ್ಲ. ಸಂಚು ರೂಪಿಸಿ ಗೌಡರನ್ನು ದಾರಿ ತಪ್ಪಿಸುವ ಪ್ರಯತ್ನ ಮಾಡಿದರು. ಆದರೆ ರೈತ ಹಿತಾಸಕ್ತಿಯನ್ನೆ ತನ್ನ ಜೀವನದ ಗುರಿಯಾಗಿ ಹೊಂದಿದ್ದ ಗೌಡರು ಯಾವ ಕಷ್ಟಗಳಿಗೂ ಹೆದರದೆ ತಮ್ಮ ನಿಲುವಿಗೆ ಬದ್ಧರಾಗಿ ಉಳಿದರು. ದಿವಾನರು ಜನರ

ಮುಂದೆ ಕಣ್ಣೊರಸುವ ಭರವಸೆ ನೀಡಿದರೂ ಒಳಗೊಳಗೆ ಜನವಿರೋಧಿ ಕಾನೂನಿನ ಅನುಷ್ಠಾನಕ್ಕೆ ಸಾಕಷ್ಟು ಪ್ರಯತ್ನ ಮಾಡಿದರು. ಈ ನಿಟ್ಟಿನಲ್ಲಿ ದಿವಾನರು ಜನರಿಗೆ ತಿಳಿಸದಂತೆ ಮದ್ದೂರಿಗೆ ಆಗಮಿಸಿದಾಗ ಇದನ್ನರಿತ ಹೆಚ್.ಕೆ.ವೀರಣ್ಣಗೌಡರು ಹತ್ತು ಸಾವಿರಕ್ಕೂ ಹೆಚ್ಚು ರೈತರನ್ನು ಮಂಡ್ಯದಲ್ಲಿ ಸೇರಿಸಿ ದಿವಾನರಿಗೆ ದಿಗ್ಭ್ರಮೆಯನ್ನುಂಟು ಮಾಡಿ, ಅವರ ಪ್ರಯತ್ನವನ್ನು ವಿಫಲಗೊಳಿಸಿದರು. ಇಂತಹ ಸಾಹಸವನ್ನು ಮಾಡಲು ಅಪಾರ ಧೈರ್ಯ, ಚಾಣಾಕ್ಷತೆ, ದೂರದೃಷ್ಟಿತ್ವ ಇರಬೇಕು. ಅವು ವೀರಣ್ಣಗೌಡರಲ್ಲಿ ಇದ್ದುದರಿಂದಲೇ ಅವರ ಪ್ರಯತ್ನ ಫಲ ನೀಡಿತು. ಇದು ವೀರಣ್ಣಗೌಡರ ವ್ಯವಸ್ಥಾಪಕ ಶಕ್ತಿಗೆ ಒಂದು ನಿದರ್ಶನ. ಇರ್ವಿನ್ ನಾಲಾ ಚಳುವಳಿ ರೈತರಲ್ಲಿ ನಿರಂಕುಶ ಪ್ರಭುತ್ವದ ವಿರುದ್ಧ ಧ್ವನಿ ಎತ್ತುವ ಶಕ್ತಿ ನೀಡಿತು. ರಾಜಕೀಯ ಪ್ರಜ್ಞೆಯನ್ನು ಬೆಳೆಸಿತು ಎನ್ನಬಹುದು. ಇದು ಹೆಚ್.ಕೆ.ವೀರಣ್ಣಗೌಡರ ಸಂಘಟನಾ ಸಾಮರ್ಥ್ಯವನ್ನು ಮತ್ತು ಅವರಿಗಿದ್ದ ರೈತಪರ ಕಾಳಜಿಯನ್ನು ಅನಾವರಣಗೊಳಿಸಿತು. ಇದರಿಂದ ಹೆಚ್.ಕೆ.ವೀರಣ್ಣಗೌಡರು ಮುಂದೆ ಭವಿಷ್ಯದಲ್ಲಿ ರೈತಮುಖಂಡರಾಗಿ, ಜನಪ್ರತಿನಿಧಿಯಾಗಿ ಬೆಳೆಯಲು ಒಂದು ವೇದಿಕೆಯಾಯಿತು. ಇಷ್ಟೆಲ್ಲಾ ಕಷ್ಟಗಳನ್ನು ಅನುಭವಿಸಿ ರೈತರಿಗೆ ಸ್ವಲ್ಪ ಮಟ್ಟಿಗಾದರೂ ನ್ಯಾಯ ದೊರಕಿಸಿಕೊಟ್ಟ ವೀರಣ್ಣಗೌಡರನ್ನು ಮದ್ದೂರಿನ ಜನರು ೧೯೩೭ ರಲ್ಲಿ ನಡೆದ ಚುನಾವಣೆಯಲ್ಲಿ ಸ್ಥಳೀಯರಲ್ಲ ಎಂಬ ಒಂದೇ ಕಾರಣಕ್ಕೆ ಕೈಬಿಟ್ಟದ್ದು ಒಂದು ವಿಪರ್ಯಾಸವೆಂದೇ ಹೇಳಬೇಕು.

ಮಹಾತ್ಮ ಗಾಂಧೀಜಿಯವರ ನೇತೃತ್ವದಲ್ಲಿ ದೇಶದಲ್ಲೆಲ್ಲಾ ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಂತೆ ಮೈಸೂರು ಸಂಸ್ಥಾನದಲ್ಲೂ ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಪಡೆಯಲು ಕಾಂಗ್ರೆಸ್ ನಿರ್ಧರಿಸಿತು. ಈ ಹಿನ್ನೆಲೆಯಲ್ಲಿ ಜನಸಾಮಾನ್ಯರಲ್ಲಿ ಸ್ವಾತಂತ್ರ್ಯದ ಅಗತ್ಯವನ್ನು ಮನಗಾಣಿಸಲು, ಸತ್ಯಾಗ್ರಹಿಗಳ ಪಡೆಯನ್ನು ಸಂಘಟಿಸಲು ಬೃಹತ್ ಅಧಿವೇಶನದ ಅಗತ್ಯವಿತ್ತು. ಅಧಿವೇಶನ ನಡೆಸಲು ಶಿವಪುರ ಸೂಕ್ತ ಸ್ಥಳವೆಂದು ನಿರ್ಧರಿಸಿದ ನಂತರ ಹೆಚ್.ಕೆ.ವೀರಣ್ಣಗೌಡರು ಕಾಂಗ್ರೆಸ್ಸಿನ ಕಟ್ಟಾ ಅಭಿಮಾನಿಯಾಗಿದ್ದರಿಂದ ೧೯೩೮ರ ಕಾಂಗ್ರೆಸ್ ಅಧಿವೇಷನ ನಡೆಸಲು ಇತರ ನಾಯಕರು ಮುಂದಾಗದ ಕಾರಣ ತಾವೇ ಅಧಿವೇಶನದ ಹೊಣೆಯನ್ನು ಮುಂದೆ ಬಂದು ವಹಿಸಿಕೊಂಡರು. ಇದರಿಂದ ಮುಂದಿನ ಕಾಂಗ್ರೆಸ್ ಅಧಿವೇಶನಗಳಿಗೆಲ್ಲ ಒಂದು ಮೇಲುಪಂಕ್ತಿಯನ್ನೆ ಹಾಕಿದರು. ಒಂದು ಅಧಿವೇಶನವೆಂದರೆ ಎಷ್ಟು ವ್ಯವಸ್ಥೆ ಆಗಬೇಕೆಂದು ರಾಷ್ಟ್ರೀಯ ಮಹಾಧಿವೇಶನವನ್ನು ನೋಡಿ ಬಂದವರಿಗೇ ಗೊತ್ತು. ಸಾವಿರಾರು ಜನರಿಗೆ ತಾತ್ಕಾಲಿಕವಾಗಿ ಆಧುನಿಕ ನಗರವೇ ನಿರ್ಮಾಣವಾಗಬೇಕಾಗುತ್ತದೆ. ಆಹಾರ, ಮತ್ತು ವಸತಿ ಸೇರಿದಂತೆ ಎಲ್ಲದರಲ್ಲೂ ಕೊರತೆಯಾಗದಂತೆ ಎಚ್ಚರಿಕೆ ವಹಿಸಬೇಕು. ಅಧಿವೇಶನಕ್ಕೆ ಬರುವ ಜನರನ್ನು ಅತಿಥಿಗಳಂತೆ ಸತ್ಕರಿಸಬೇಕು. ಖರ್ಚುವೆಚ್ಚದ ಬಾಬ್ತನ್ನು ಅಪಾರ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಇಂತಹ ಜವಾಬ್ದಾರಿಯನ್ನು ಹೊರಲು ಜಾಣ್ಮೆ, ಕುಶಲತೆ, ಸಾಮರ್ಥ್ಯ ಅತಿಮುಖ್ಯ. ಈ ಎಲ್ಲ ಲಕ್ಷಣಗಳು ವೀರಣ್ಣಗೌಡರಲ್ಲಿ ಇದ್ದುದರಿಂದಲೇ ಈ ಕಾರ್ಯವನ್ನು ಯಶಸ್ವಿಯಾಗಿ ನಿಭಾಯಿಸಲು ಸಾಧ್ಯವಾಯಿತು ಎನ್ನಬಹುದು. ಯಾವುದೇ ಒಂದು ಸಭೆ ಯಶಸ್ವಿಯಾಗಬೇಕೆಂದರೆ ಅದರ ಹಿಂದೆ ಸಾಕಷ್ಟು ತಯಾರಿ ಇರಬೇಕಾಗುತ್ತದೆ. ಅನೇಕ ಮಂದಿ ಇಲ್ಲಿ ಈ

ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಾಗುತ್ತದೆ. ಆದರೆ ಈ ಅನೇಕ ಮಂದಿಯನ್ನು ಕಾರ್ಯತತ್ಪರರನ್ನಾಗಿಸಲು ಒಬ್ಬ ಸಮರ್ಥ ಮಾರ್ಗದರ್ಶಕನ ಅವಶ್ಯಕತೆ ಇರುತ್ತದೆ. ಇಂತಹ ಮಾರ್ಗದರ್ಶಕನ ಸ್ಥಾನವನ್ನು ತುಂಬಿದವರು ಹೆಚ್.ಕೆ.ವೀರಣ್ಣಗೌಡರು. ತಮ್ಮ ಈ ಕೆಲಸಕ್ಕೆ ಎಂತಹವರ ಸಹಕಾರ ಪಡೆದರೆ ತಮ್ಮ ಹಾದಿ ಸುಗಮವಾಗುತ್ತದೆ ಎಂಬ ಅರಿವು ಹೊಂದಿದ್ದ ವೀರಣ್ಣಗೌಡರು ಆಗರ್ಭ ಶ್ರೀಮಂತರಾಗಿದ್ದ ಮತ್ತು ಪರೋಕ್ಷವಾಗಿ ರಾಜಕೀಯದಲ್ಲಿ ತೊಡಗಿದ್ದ ವರ್ತಕರಾದ ಸಾಹುಕಾರ್ ಚನ್ನಯ್ಯನವರನ್ನು ಶಿವಪುರ ಕಾಂಗ್ರೆಸ್ ಅಧಿವೇಶನದ ಸ್ವಾಗತ ಸಮಿತಿಯ ಅಧ್ಯಕ್ಷರನ್ನಾಗಿ ಮಾಡುವಲ್ಲಿ ಹೆಚ್.ಕೆ.ವೀರಣ್ಣಗೌಡರು ಯಶಸ್ವಿಯಾದರು. ಹೀಗೆ ಹೆಚ್.ಕೆ.ವೀರಣ್ಣಗೌಡರಿಂದ ಗುರುತಿಸಲ್ಪಟ್ಟು ಶಿವಪುರ ಅಧಿವೇಶನದಲ್ಲಿ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಸಾಹುಕಾರ ಚನ್ನಯ್ಯನವರು ಮುಂದೆ ಕರ್ನಾಟಕ ರಾಜಕಾರಣದಲ್ಲಿ ಪ್ರಭಾವಿ ರಾಜಕಾರಣಿಯಾಗಿ ಬೆಳೆದರು. ಸಾಹುಕಾರ ಚನ್ನಯ್ಯನವರನ್ನು ಕೂಡಿಕೊಂಡು ಮದರಾಸು, ಬೊಂಬಾಯಿ, ಮೈಸೂರುಗಳನ್ನು ತಿರುಗಿ ಚಂದಾ ಹಣವನ್ನು ಸಂಗ್ರಹಣೆ ಮಾಡಿದರು. ಆದರೆ ಎಲ್ಲವೂ ಹಣದಿಂದಲೇ ಸಾಗುವುದಿಲ್ಲ. ಹೀಗಾಗಿ ಹೆಚ್.ಕೆ.ವೀರಣ್ಣಗೌಡರು ಮನೆ ಮನೆಗೂ ಬಿಡುವಿಲ್ಲದೆ ಸುತ್ತಾಡಿ ಹಣದ ಜೊತೆಗೆ ದವಸಧಾನ್ಯಗಳನ್ನು ಸಂಗ್ರಹಣೆ ಮಾಡಿದರು. ಅಧಿವೇಶನಕ್ಕಾಗಿ ಹೆಚ್.ಕೆ.ವೀರಣ್ಣಗೌಡರ ಸಿದ್ಧತೆಗಳನ್ನು ಗಮನಿಸುತ್ತಿದ್ದ ಸರ್ಕಾರ ಹೇಗಾದರೂ ಮಾಡಿ ಅಧಿವೇಶನವನ್ನು ತಡೆಗಟ್ಟಬೇಕೆಂದು ಹವಣಿಸಿ ವೀರಣ್ಣಗೌಡರೊಂದಿಗೆ ಲೇವಾದೇವಿ ಮಾಡುತ್ತಿದ್ದವರನ್ನು ಎತ್ತಿಕಟ್ಟಿ ಗೌಡರಿಗೆ ಸಿವಿಲ್ ವಾರೆಂಟ್ ಕೊಡಿಸಲು ಪ್ರಯತ್ನ ಮಾಡಿದರು. ಆದರೆ ದಕ್ಷರೆಂದು ಪ್ರಸಿದ್ಧರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಚಾಣಾಕ್ಷರಾಗಿದ್ದುದರಿಂದ ಹಳ್ಳಿಯ ರೈತರನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದುದರಿಂದ ಅವರನ್ನು ಕಾರ್ಯ ವಿಮುಖರನ್ನಾಗಿ ಮಾಡಲು ಆಗಲಿಲ್ಲ. ಅಧಿವೇಶನದ ತಯಾರಿಯಲ್ಲಿ ಸಮಯಕ್ಕೆ ಸರಿಯಾಗಿ ಎಲ್ಲಾ ತಯಾರಿಗಳು ನಡೆಯುವಂತೆ ಸಮಯ ಸ್ಫೂರ್ತಿಯಿಂದ ಅಗತ್ಯಕ್ರಮಗಳನ್ನು ಕೈಗೊಂಡು ನಿಭಾಯಿಸಿದರು. ಇದಕ್ಕೊಂದು ಉದಾ; ಕುಟೀರಗಳ ಮತ್ತು ಚಪ್ಪರದ ನಿರ್ಮಾಣಕ್ಕೆ ಹೆಣೆದ ಗರಿಗಳು ಸಮಯಕ್ಕೆ ಸರಿಯಾಗಿ ಬಾರದೇ ಹೋದಾಗ ಸಮಯ ಸ್ಫೂರ್ತಿಯಿಂದ ತಮ್ಮ ಮಿತ್ರರನ್ನು ಬೆಂಗಳೂರಿಗೆ ಕಳುಹಿಸಿ ರೈಲ್ವೆ ವ್ಯಾಗಿನ್‌ನಲ್ಲಿ ಬಿದಿರಿನ ತಟ್ಟೆಗಳನ್ನು ತರಿಸಿದ್ದನ್ನು ಕಾಣಬಹುದು. ಐವತ್ತು ಸಾವಿರಕ್ಕೂ ಹೆಚ್ಚಿನ ಜನರಿಂದ ಕೂಡಿದ್ದ ಈ ಅಧಿವೇಶನವನ್ನು ನಿಭಾಯಿಸಲು ಕಷ್ಟಸಾಧ್ಯವೇ ಆಯಿತು. ಮೂರು ದಿನಗಳಿಗೆಂದು ಸಿದ್ಧಪಡಿಸಿದ ಅಧಿವೇಶನ ಸರ್ಕಾರದ ನಿರ್ಬಂಧಕ ಧೋರಣೆಯಿಂದ ಒಂದು ತಿಂಗಳ ಕಾಲ ಧ್ವಜ ಸತ್ಯಾಗ್ರಹ ನಡೆಸಬೇಕೆಂದು ಮುಂದುವರಿಯಿತು. ಈ ಸಂದರ್ಭದಲ್ಲಿ ಊಟದ ವ್ಯವಸ್ಥೆಗೆ ಮತ್ತೆ ಹೆಚ್.ಕೆ.ವೀರಣ್ಣಗೌಡರು ಗ್ರಾಮಗಳಲ್ಲಿ ದವಸಧಾನ್ಯ ಸಂಗ್ರಹಣೆ ಮಾಡಬೇಕಾದ ಪ್ರಸಂಗ ಎದುರಾಯಿತು. ಅಲ್ಲದೆ ಪ್ರತಿದಿನ ಮುಖಂಡರು ಒಬ್ಬೊಬ್ಬರಾಗಿ ದಸ್ತಗಿರಿಯಾಗುತ್ತಿದ್ದರೂ ಸತ್ಯಾಗ್ರಹದಲ್ಲಿ ವೀರಣ್ಣಗೌಡರು ಕೈ ಭಾಗವಹಿಸುವಂತಿರಲಿಲ್ಲ. ಕಾರಣ ಎಲ್ಲಾ ರೀತಿಯ ವ್ಯವಹಾರಗಳನ್ನು ನಿಭಾಯಿಸಬೇಕಾದ ಹೊಣೆ ಇವರ ಮೇಲೆಯೇ ಇದಿದ್ದರಿಂದ ಪರೋಕ್ಷವಾಗಿ ಈ ಸತ್ಯಗ್ರಹ ಯಶಸ್ವಿಯಾಗಲು ನೇಪಥ್ಯದಲ್ಲೇ ನಿಂತು ಶ್ರಮಿಸಬೇಕಾಯಿತು. ಇಲ್ಲಿ ಹೆಚ್.ಕೆ.ವೀರಣ್ಣಗೌಡರಿಗಿಂತಲೂ ಸಮರ್ಥರೂ, ಚಾಣಾಕ್ಷ ಮುಖಂಡರಿದ್ದರೂ

ಅವರ್‍ಯಾರು ತಮ್ಮ ಸ್ವಂತ ವ್ಯವಹಾರಗಳನ್ನು ಬಿಟ್ಟು ಸಂಪೂರ್ಣವಾಗಿ ಕಾಂಗ್ರೆಸ್ ಕಾರ್ಯಕ್ಕೆ ನಿಲ್ಲುವ ಮನಸ್ಸು ಮಾಡದೆ ಹೋದುದರಿಂದ ಈ ಕಾರ್ಯ ಇವರ ಹೆಗಲ ಮೇಲೆ ಬಿತ್ತು. ಇಂತಹ ಸಂದರ್ಭದಲ್ಲಿ ತಿಂಗಳಾನುಗಟ್ಟಲೆ ಮನೆಯಿಂದ ದೂರವಿದ್ದ ತಮ್ಮೆಲ್ಲ ಕೆಲಸಕಾರ್ಯಗಳನ್ನು ಬಿಟ್ಟು ಸಂಪೂರ್ಣವಾಗಿ ಕಾಂಗ್ರೆಸ್ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಹೆಚ್.ಕೆ.ವೀರಣ್ಣಗೌಡರ ಬಗ್ಗೆ ಅಂದಿನ ಅಧಿವೇಶನದಲ್ಲಿ ಭಾಗವಹಿಸಿದ್ದ ಎಲ್ಲರಿಗೂ ಅಭಿಮಾನ, ಗೌರವ ಮೂಡಿ ಅವರ ಕಾರ್ಯದ ಬಗ್ಗೆ ಶ್ಲಾಘನೆ ಮಾಡಿರುವುದು ಕಂಡುಬರುತ್ತದೆ. ಶಿವಪುರದಲ್ಲಿ ನಡೆದ ಕಾಂಗ್ರೆಸ್‌ನ ಅಧಿವೇಶನ ಒಂದು ಚಾರಿತ್ರಿಕ ದಾಖಲೆಯಾಗಿ ಮತ್ತು ಘಟನೆಯಾಗಿ ಉಳಿಯುವಂತೆ ಮಾಡುವಲ್ಲಿ ಹೆಚ್.ಕೆ.ವೀರಣ್ಣಗೌಡರ ಸತತ ಕಠಿಣ ಪರಿಶ್ರಮವೇ ಕಾರಣವೆನ್ನಬಹುದು. ಈ ಅಧಿವೇಶನದ ನಂತರ ಕೋಲಾರದ ವಿದುರಾಶ್ವತ್ಥದಲ್ಲಿ ಅಧಿವೇಶ ನಡೆಸಲು ಮುಂದಾದರು. ಇದಕ್ಕಾಗಿ ಪ್ರಚಾರ ಕಾರ್ಯದಲ್ಲಿ ತೊಡಗಿದ್ದವರನ್ನು ಕೋಲಾರಕ್ಕೆ ಪ್ರವೇಶಿಸದಂತೆ ತಡೆಗಟ್ಟುವ ನಿಷೇದಾಜ್ಞೆಯನ್ನು ಸರ್ಕಾರ ಹೊರಡಿಸಿತು. ಹೆಚ್.ಕೆ.ವೀರಣ್ಣಗೌಡರು ಸೇರಿದಂತೆ ಇದನ್ನು ಉಲ್ಲಂಘಿಸಿದ ಮುಖಂಡರನ್ನು ದಸ್ತಗಿರಿ ಮಾಡಲಾಯಿತು. ನಂತರ ವಿದುರಾಶ್ವತ್ಥದ ದುರಂತದ ಬಗ್ಗೆ ವಿಚಾರಣೆ ನಡೆಸಲು ನೇಮಿಸಿದ ಸಮಿತಿಯಲ್ಲಿ ಹೆಚ್.ಕೆ.ವೀರಣ್ಣಗೌಡರು ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದರು. ವಸ್ತುನಿಷ್ಠವಾಗಿ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದರು.

ಸ್ವಾತಂತ್ರ್ಯ ಹೋರಾಟದ ಪರ್ವಕಾಲದಲ್ಲಿ ಹೆಚ್.ಕೆ.ವೀರಣ್ಣಗೌಡರು ತುರಂಗವಾಸವನ್ನು ಅನುಭವಿಸಬೇಕಾಗಿ ಬಂತು. ಗುಪ್ತಗಾಮಿನಿಯಾಗಿ ಸಭೆಗಳಲ್ಲಿ ಭಾಷಣ ಮಾಡುವ ಮೂಲಕ ಜನರಲ್ಲಿ ರಾಷ್ಟ್ರೀಯತೆಯ ಬಗ್ಗೆ ಅರಿವು ಮೂಡಿಸುವ ಮೂಲಕ ಜನರು ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತಿದ್ದರು. ಕೋಲಾರದಲ್ಲಿ ನಿಷೈದಾಜ್ಞೆ ಉಲ್ಲಂಘಿಸಿ ದಸ್ತಗಿರಿಗೊಳಗಾದ ಹೆಚ್.ಕೆ.ವೀರಣ್ಣಗೌಡರು ಮೂರು ತಿಂಗಳ ಕಠಿಣ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಜೈಲಿನ ಅವ್ಯವಸ್ಥೆಯ ವಾತಾವರಣದಲ್ಲಿ ಇದ್ದು ರಾಗಿಬೀಸುವುದು, ಬಟ್ಟೆಹೊಲೆಯುವುದು ಮುಂತಾದ ಕೆಲಸಗಳನ್ನು ಮಾಡಬೇಕಾಗಿ ಬಂತು. ಈ ಅವ್ಯವಸ್ಥೆಯ ವಾತಾವರಣದಿಂದಾಗಿ ಜ್ವರಕ್ಕೆ ತುತ್ತಾಗಿ ನರಳಿದರು. ದೇಶಸೇವೆಗಾಗಿ ಅಂದಿನ ಎಷ್ಟೋ ಮಂದಿ ದೇಶಭಕ್ತರು ತಮ್ಮ ಪ್ರಾಣವನ್ನು ಲೆಕ್ಕಿಸದೆ ಹೋರಾಟ ಮಾಡಿದರು. ಅವರುಗಳಲ್ಲಿ ಹೆಚ್.ಕೆ.ವೀರಣ್ಣಗೌಡರು ಸಹ ಒಬ್ಬರಾಗಿದ್ದರು. ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಗೆ ಜವಾಬ್ದಾರಿ ಸರ್ಕಾರದ ಬಗ್ಗೆಯೂ ಹೋರಾಟವನ್ನು ಮುಂದುವರೆಸಿದ್ದ ಮುಖಂಡರುಗಳಲ್ಲಿ ಒಬ್ಬರಾಗಿ ಹೆಚ್.ಕೆ.ವೀರಣ್ಣಗೌಡರು ತಮ್ಮ ಊರು ಮನೆಮಠ ಬಿಟ್ಟು ಅಂದಿನ ಹೋರಾಟಕ್ಕಿಳಿದಿದ್ದರು. ಕ್ವಿಟ್ ಇಂಡಿಯಾ ಸಂದರ್ಭದಲ್ಲಿ ಜೈಲು ಶಿಕ್ಷೆಗೆ ಒಳಗಾದ ಹೆಚ್.ಕೆ.ವೀರಣ್ಣಗೌಡರು ಜೈಲಿನಲ್ಲಿಯೂ ತಮ್ಮ ಜಾಗೃತಿಯನ್ನುಂಟುಮಾಡುವ ಕಾರ್ಯವನ್ನು ಮುಂದುವರಿಸಿದರು. ಜೈಲಿನಲ್ಲಿ ಇತರ ಯುವಕರನ್ನು ಸಂಘಟಿಸಿ ಒಂದೆಡೆ ಸೇರಿಸಿ ಅವರಲ್ಲಿ ಜವಾಬ್ದಾರಿ ಸರ್ಕಾರವೆಂದರೇನು? ಅದರ ರೂಪುರೇಖೆಯೇನು? ಎಂಬ ವಿಚಾರ ಕುರಿತು ದಿನವೂ `Liberty in the Modern State' ಎಂಬ ಇಂಗ್ಲಿಷ್ ಪುಸ್ತಕವನ್ನು ಓದಿ ಅನುವಾದ ಮಾಡಿ ಹೇಳುತ್ತಿದ್ದರು. ಹೀಗೆ

ಜವಾಬ್ದಾರಿ ಸರ್ಕಾರವೆಂದರೇನು? ಎಂಬ ವಿಚಾರ ಕುರಿತು ಜವಾಬ್ದಾರಿಯ ಭಾಷಣ ಮಾಡಬಲ್ಲ ಯುವಕರ ತಂಡವನ್ನು ನಿರ್ಮಾಣ ಮಾಡಿದರು. ಇದರಿಂದ ಹೆಚ್.ಕೆ.ವೀರಣ್ಣಗೌಡರು ಎಲ್ಲೆ ಇದ್ದರೂ ದೇಶ ಸೇವೆಯ ಬಗ್ಗೆಯೇ ಚಿಂತಿಸುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಹಾಗೆಯೇ ಜೈಲಿನಲ್ಲಿಯೇ ನಿತ್ಯವೂ ಜೈಲರು ವಹಿಸಿದ ಕೆಲಸಗಳನ್ನು ಶಿಸ್ತಿನಿಂದ ನಿರ್ವಹಿಸಿ ಉಳಿದ ಸಮಯದಲ್ಲಿ ಚರಕದಿಂದ ನೂಲುವ ಕೆಲಸವನ್ನು ಮಾಡುತ್ತಿದ್ದರು.

ಜವಾಬ್ದಾರಿ ಸರ್ಕಾರ ಸ್ಥಾಪನೆ ಚಳುವಳಿಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಪ್ರಚಾರ ಸಭೆಗಳನ್ನು ಕೈಗೊಳ್ಳಲಾಗಿತ್ತು. ಹಾಗೆ ನಡೆಸಲಾದ ಸಭೆಗಳಲ್ಲಿ ಚನ್ನಪಟ್ಟಣದ ಅಧಿವೇಶನದ ಸಭೆಯ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು. ಕಾಂಗ್ರೆಸ್ ಅಧ್ಯಕ್ಷರ ಮೆರವಣಿಗೆಯ ಸಂದರ್ಭದಲ್ಲಿ ಕೆಲವು ಕಿಡಿಗೇಡಿಗಳು ಮಾಡಿದ ಕುತಂತ್ರದಿಂದ ಗಲಭೆಯುಂಟಾಗಿ ಹೆಚ್.ಕೆ.ವೀರಣ್ಣಗೌಡರು ಹಲ್ಲೆಗೊಳಗಾಗಬೇಕಾಯಿತು. ಇಷ್ಟೇಲ್ಲ ಕಷ್ಟಗಳನ್ನು ಸಹಿಸಿದರೂ ಹೋರಾಟದ ಹುರುಪು ಮಾತ್ರ ಅವರಿಂದ ದೂರವಾಗಲಿಲ್ಲ. ಜವಾಬ್ದಾರಿ ಸರ್ಕಾರದ ಬಗ್ಗೆ ಮಹಾರಾಜರು ಒಲವು ತೋರದೆ ಹೋದಾಗ ಕೊನೆಯ ಅಸ್ತ್ರವಾಗಿ ಮೈಸೂರು ಚಲೋ ಚಳುವಳಿಯ ಸತ್ಯಾಗ್ರಹಕ್ಕೆ ಕಾಂಗ್ರೆಸ್ ಅಧ್ಯಕ್ಷ ಕೆ.ಸಿ.ರೆಡ್ಡಿಯವರು ಮುಂದಾದರು. ಈ ಸಂದರ್ಭದಲ್ಲಿ ಕೆ.ಸಿ.ರೆಡ್ಡಿ, ಕೆ.ಟಿ.ಭಾಷ್ಯಮ್, ಟಿ.ಸಿದ್ದಲಿಂಗಯ್ಯನವರಂತಹ ಮುಖಂಡರುಗಳಂತೆಯೇ ವೀರಣ್ಣಗೌಡರೂ ಮೈಸೂರು ಚಲೋ ಚಳುವಳಿಗೆ ಸನ್ನದ್ಧರಾಗಿ ನಿಂತರು. ಕಾಂಗ್ರೆಸ್‌ನ ಪ್ರಕಟಣಾ ಕಾರ್ಯದರ್ಶಿಯಾದ ಗೌಡರು ಈ ಸತ್ಯಾಗ್ರಹವನ್ನು ಜನತೆ ಅಹಿಂಸಾತ್ಮಕವಾಗಿ ನಡೆಸಬೇಕೆಂದು ಮತ್ತು ಸತ್ಯಾಗ್ರಹ ಕೈ ಬಿಡುವ ಅಧಿಕಾರ ಮೊದಲ ಸತ್ಯಾಗ್ರಹಿಯಾದ ಅಧ್ಯಕ್ಷರಿಗೆ ಮಾತ್ರ ಇದೆ ಎಂದು ಪ್ರಕಟಣೆ ಹೊರಡಿಸಿದರು. ಹೋರಾಟಕ್ಕೆ ವೀರಣ್ಣಗೌಡರು ಸೇರಿದಂತೆ ಅಂದಿನ ಎಲ್ಲಾ ಮುಖಂಡರು ಅಹಿಂಸಾ ತತ್ವಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರು. ಹೆಚ್.ಕೆ.ವೀರಣ್ಣಗೌಡರು ಆಲೋಚನೆಯಲ್ಲಿ ಕ್ರಾಂತಿಕಾರಕರಾದರೂ ಆಚರಣೆಯಲ್ಲಿ ಮಾತ್ರ ಅಹಿಂಸಾ ತತ್ವಕ್ಕೆ ಬದ್ಧರಾಗಿದ್ದರು ಎಂಬುದು ಅವರ ಎಲ್ಲ ಚಳುವಳಿಗಳಲ್ಲಿ ಕಂಡು ಬರುತ್ತದೆ. ಅವರಿಗೆ 'ಬದಲಾವಣೆ ಬಲವಂತದಿಂದ ಆಗುವ ಬದಲಾಗಿ ಮನ ಪರಿವರ್ತನೆಯಿಂದಾಗಬೇಕೆಂಬುದರ ಮೇಲೆ ಹೆಚ್ಚಿನ ವಿಶ್ವಾಸವಿತ್ತು. ೧೯೪೭ರಲ್ಲಿ ಕಾಂಗ್ರೆಸ್ ನಾಯಕರು ಭಾಷಣಗಳನ್ನು ಮಾಡದಂತೆ ಸರ್ಕಾರ ನಿಷೇಧಾಜ್ಞೆ ಹೊರಡಿಸಿದ್ದ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಮೈಸೂರಿನಲ್ಲಿ ಭಾಷಣ ಮಾಡಿ ದಸ್ತಗಿರಿಯಾದರು. ಹೀಗೆ ಅನೇಕ ಕಾಂಗ್ರೆಸ್ ನಾಯಕರು ಬಂಧನಕ್ಕೆ ಒಳಗಾದರು. ಮೈಸೂರು ಚಲೋ ಚಳುವಳಿಯ ಕಾವು ತೀವ್ರಗೊಂಡಂತೆ ನಾಡಿನ ಎಲ್ಲಾ ವರ್ಗದ ಜನತೆ ಚಳುವಳಿಯಲ್ಲಿ ಪಾಲ್ಗೊಂಡು ಅರಮನೆಗೆ ಮುತ್ತಿಗೆ ಹಾಕಿದರು. ಜನಶಕ್ತಿಯ ಮುಂದೆ ಅಧೀರರಾದ ಮಹಾರಾಜರು ಜವಾಬ್ದಾರಿ ಸರ್ಕಾರವನ್ನು ೧೯೪೭ರ ಅಕ್ಟೋಬರ್ ೨೪ ರಂದು ಘೋಷಣೆ ಮಾಡಿದರು. ಇಂಥಹ ಜನಶಕ್ತಿಯನ್ನು ರೂಪಿಸುವಲ್ಲಿ ಆ ವೇಳೆಗೆ ಹೆಚ್.ಕೆ.ವೀರಣ್ಣಗೌಡರು ಎರಡು ರೀತಿಯಾಗಿ ಶ್ರಮಿಸಿದರು. ಒಂದು 'ವಾರ್ತಾ'ಎಂಬ ಸಂಜೆ ಪತ್ರಿಕೆಯನ್ನು ಪ್ರಾರಂಭಿಸಿ ಜವಾಬ್ದಾರಿ ಸರ್ಕಾರದ ಬಗ್ಗೆ ಜನ ಜಾಗೃತಿ ಮೂಡಿಸುವ, ರಾಷ್ಟ್ರೀಯ ಭಾವನೆಗಳನ್ನು ಮೂಡಿಸುವ, ಕಾಂಗ್ರೆಸ್ ಧ್ಯೇಯಧೋರಣೆಗಳನ್ನು ಪ್ರಚಾರ ಮಾಡುವ ಲೇಖನಗಳನ್ನು ಪ್ರಕಟಿಸುತ್ತಿದ್ದರು.

ಜವಾಬ್ದಾರಿ ಸರ್ಕಾರ ಲಭ್ಯವಾಗುವವರೆಗೆ ನಿರಂತರ ಹೋರಾಟಕ್ಕೆ ವಾರ್ತಾ ಪತ್ರಿಕೆ ಸನ್ನದ್ಧವಾಗಿತ್ತು. ಮತ್ತೊಂದು ತಾವೇ ಖುದ್ದು ಚಳುವಳಿಯಲ್ಲಿ ಭಾಗವಹಿಸುವ ಮೂಲಕ ತಮ್ಮ ಭಾಷಣಗಳಿಂದ ಜವಾಬ್ದಾರಿ ಸರ್ಕಾರದ ಬಗ್ಗೆ ಜನರಿಗೆ ತಮ್ಮ ಸರಳ ಆಡು ಭಾಷೆಯಲ್ಲಿ ಹಳ್ಳಿಗರಿಗೂ ಅರ್ಥವಾಗುವ ರೀತಿಯಲ್ಲಿ ತಿಳಿಸುತ್ತಿದ್ದರು. ಜವಾಬ್ದಾರಿ ಸರ್ಕಾರದ ಚಳುವಳಿಯ ಸಂದರ್ಭದಲ್ಲಿ ಸರ್ಕಾರದ ಲೋಪದೋಷಗಳನ್ನು ಎತ್ತಿ ಹಿಡಿದು ಜನಜಾಗೃತಿ ಮೂಡಿಸುತ್ತಿದ್ದ ಮೈಸೂರು ಸಂಸ್ಥಾನದ ಪತ್ರಿಕೆಗಳಲ್ಲಿ ವಾರ್ತಾ ಪತ್ರಿಕೆ ಪ್ರಮುಖವಾದುದಾಗಿತ್ತು.

ಮಹಾರಾಜರಿಂದ ಜವಾಬ್ದಾರಿ ಸರ್ಕಾರದ ಘೋಷಣೆಯಾದ ನಂತರ ಕೆ.ಸಿ.ರೆಡ್ಡಿಯವರ ನೇತೃತ್ವದಲ್ಲಿ ೯ ಜನ ಮಂತ್ರಿಗಳ ಒಂದು ಸರ್ಕಾರ ಅಸ್ಥಿತ್ವಕ್ಕೆ ಬಂದಿತು. ಇದೇ ಸಂದರ್ಭದಲ್ಲಿ ಸಂವಿಧಾನ ರಚನಾ ಸಭೆಗೆ ಆಯ್ಕೆಗೊಂಡಿದ್ದ ಹೆಚ್.ಕೆ.ವೀರಣ್ಣಗೌಡರು ಆ ಸಂವಿಧಾನಸಭೆ ಶಾಸನ ಸಭೆಯಾಗಿ ಪರಿವರ್ತಿತವಾದಾಗ ಜನಪ್ರತಿನಿಧಿಯಾಗಿ ಶಾಸಕಾಂಗದಲ್ಲಿ ಕಾರ್ಯನಿರ್ವಹಿಸಿದರು. ಇದೇ ಸಮಯದಲ್ಲಿ ಭಾಷಾವಾರು ಪ್ರಾಂತ್ಯ ರಚನೆಗಾಗಿ ಆಂಧ್ರಪ್ರದೇಶ ಮತ್ತು ಕರ್ನಾಟಕದಲ್ಲಿ ಒತ್ತಾಯ ಹೆಚ್ಚುತ್ತಾ ಹೋಯಿತು. ಆಗ ಕರ್ನಾಟಕದ ಏಕೀಕರಣವನ್ನು ಬೆಂಬಲಿಸಿ ಒಂದು ಗೊತ್ತುವಳಿಯನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು. ಆದರೆ ಹೆಚ್.ಕೆ.ವೀರಣ್ಣಗೌಡರು ಕರ್ನಾಟಕ ಏಕೀಕರಣದ ಕೂಗು ಆರಂಭಗೊಂಡಿನಂದಿನಿಂದ ಅದಕ್ಕೆ ಪರವಾಗಿಯೇ ಇದ್ದರು. ಆದರೆ ಕರ್ನಾಟಕದ ಏಕೀಕರಣ ಕೂಗು ಏರುತ್ತಿದ್ದಂತೆ ಕೂಲಂಕುಷವಾಗಿ ಆಲೋಚಿಸಿದ ನಂತರ ಮೈಸೂರು ಸಂಸ್ಥಾನಕ್ಕೂ ಇತರ ಉತ್ತರ ಕರ್ನಾಟಕದ ಭಾಗಗಳಿಗೂ ಬಹಳಷ್ಟು ವ್ಯತ್ಯಾಸಗಳು ಕಂಡುಬರುವುದರಿಂದ ಒಟ್ಟಾರೆ ಪ್ರದೇಶಕ್ಕೆ ಒಂದೇ ರೀತಿಯ ಆಡಳಿತ, ಕಾನೂನು ಅನ್ವಯಿಸುವುದು ಕಷ್ಟವಾಗಬಹುದು ಮತ್ತು ವಿಸ್ತಾರವಾದ ಭೂಪ್ರದೇಶ ಉತ್ತಮ ಆಡಳಿತಕ್ಕೆ ಧಕ್ಕೆಯಾಗಬಹುದು ಎಂಬುದಾಗಿ ತಿಳಿದುಕೊಂಡು ಇದೇ ಕಾರಣಗಳನ್ನೇ ಮುಂದಿಟ್ಟುಕೊಂಡು ವಿರೋಧ ವ್ಯಕ್ತಪಡಿಸುತ್ತಿದ್ದರು. ಇದೇ ಅಭಿಪ್ರಾಯವನ್ನು ಬಹುತೇಕ ಸಾಹಿತಿಗಳು, ನಾಯಕರು ವ್ಯಕ್ತಪಡಿಸುತ್ತಿದ್ದರು. ಆದರೆ ಕೆಲವು ಒತ್ತಡಗಳಿಂದಾಗಿ ಈ ನಾಯಕರು ಮತ್ತು ಸಾಹಿತಿಗಳು ತದನಂತರದಲ್ಲಿ ಏಕೀಕರಣಕ್ಕೆ ಬೆಂಬಲ ಸೂಚಿಸಿದ್ದರು. ಆದರೆ ಹೆಚ್.ಕೆ.ವೀರಣ್ಣಗೌಡರು ಸತ್ಯವೆಂದು ಕಂಡಿದ್ದರ ಪರ ನಿಷ್ಠೂರವಾದರೂ ಸರಿ ಅದಕ್ಕೆ ಬದ್ಧರಾಗಿ ನಿಲ್ಲುವವರಾಗಿದ್ದುದರಿಂದ ತಮ್ಮ ನಿಲುವಿನಿಂದ ದೂರ ಸರಿಯಲಿಲ್ಲ. ಇದು ಅವರ ನಿಷ್ಠೆಗೆ ಮತ್ತು ಮೈಸೂರಿನ ಮೇಲಿನ ಅಭಿಮಾನಕ್ಕೆ ಸಾಕ್ಷಿಯಾದುದು. ರಾಜಕೀಯವಾಗಿ ಬಲಪಡೆಯಲು ಉತ್ತರ ಕರ್ನಾಟಕದಲ್ಲಿ ಬ್ರಾಹ್ಮಣೇತರ ಪರಿಷತ್ತು ಆರಂಭವಾದ ಸಂದರ್ಭದಲ್ಲೇ ದಕ್ಷಿಣದಲ್ಲಿ ಒಕ್ಕಲಿಗರ ಪ್ರಾಬಲ್ಯ ಹೆಚ್ಚಿತ್ತು. ಹೆಚ್ಚು ಅಧಿಕಾರಗಳನ್ನು ಒಕ್ಕಲಿಗರು ಪಡೆದ ಸಂದರ್ಭದಲ್ಲಿ ರಾಜಕೀಯವಾಗಿ ಕರ್ನಾಟಕದ ಏಕೀಕರಣ ಪ್ರಸ್ತಾಪವಾಯಿತು. ಅಧಿಕಾರ ಕೈತಪ್ಪಿ ಹೋಗುವ ಭಯದಿಂದ ಮೈಸೂರು ಸಂಸ್ಥಾನದ ಕೆಲವು ಮುಖಂಡರು ಏಕೀಕರಣದ ಬಗೆಗೆ ವಿರೋಧ ವ್ಯಕ್ತಪಡಿಸಿದರು. ಇದು ಸತ್ಯಕ್ಕೆ ದೂರವಾದ ಮಾತಾಗಿರಲಿಲ್ಲ. ಈ ನಿಟ್ಟಿನಲ್ಲಿ ಆಲೋಚಿಸಿದರೆ ಹೆಚ್.ಕೆ.ವೀರಣ್ಣಗೌಡರು ಏಕೀಕರಣಕ್ಕೆ ವಿರೋಧ ವ್ಯಕ್ತಪಡಿಸಿದರಲ್ಲಿ ಈ ಅಂಶವೂ ಒಂದಾಗಿತ್ತು ಎಂಬುದು ಕಂಡು ಬರುತ್ತದೆ. ಆದರೂ ಏಕೀಕರಣಗೊಂಡ ಮೈಸೂರು ರಾಜ್ಯದ ಮಂತ್ರಿಗಳಾಗಿ ಕಾರ್ಯ

ನಿರ್ವಹಿಸುವಾಗ ಯಾವುದೇ ಬೇಧವನ್ನು ಮಾಡದೆ ಕಾರ್ಯನಿರ್ವಹಿಸಿರುವುದು ಕಂಡು ಬರುತ್ತದೆ. ಇದು ಗೌಡರ ನಿಷ್ಪಕ್ಷಪಾತತೆಗೆ ಸಾಕ್ಷಿಯಾಗಿದೆ. ಏಕೀಕರಣಕ್ಕೆ ವಿರೋಧ ವ್ಯಕ್ತಪಡಿಸುವ ನಾಯಕರಿಗೆ ಬುದ್ಧಿವಾದದಂತೆ ಮಾಸ್ತಿಯವರು ತಮ್ಮ 'ಜೀವನ್' ಪತ್ರಿಕೆಯಲ್ಲಿ ಲೇಖನವೊಂದನ್ನು ಪ್ರಕಟಿಸ್ಸಿದ್ದರು. ತಮ್ಮ ಲೇಖನದಲ್ಲಿ ಹೆಚ್.ಕೆ.ವೀರಣ್ಣಗೌಡರನ್ನೇ ನಿರ್ದಿಷ್ಟವಾಗಿ ಉಲ್ಲೇಖಿಸಿದ್ದರಿಂದ ವೀರಣ್ಣಗೌಡರು ಮಾಸ್ತಿಯವರಿಗೆ ಬರೆದ ಪತ್ರವನ್ನು ಬರೆದು ತಮ್ಮ ಅಭಿಪ್ರಾಯದ ನಿಲುವನ್ನು ವ್ಯಕ್ತಪಡಿಸಿದರು. ಹಾಗೇ ಅದರಲ್ಲಿ ವೀರಣ್ಣಗೌಡರು ಏಕೀಕರಣದ ವಿರೋಧಕ್ಕೆ ನೀಡಿರುವ ಕಾರಣಗಳಲ್ಲಿ ಸ್ಪಷ್ಟವಾದ ವೈಜ್ಞಾನಿಕ ನಿಲುವು ಕಂಡು ಬರುತ್ತದೆ. ಹನುಮಂತಯ್ಯನವರು ನೇಮಿಸಿದ ಶೇಷಾದ್ರಿಯವರ ನೇತೃತ್ವದ ಪರಿಶೀಲನಾ ಸಮಿತಿಯ ಸಮೀಕ್ಷೆಯಿಂದ ಕೂಡಿದ ವರದಿಯೂ ಸಹ ವೀರಣ್ಣಗೌಡರ ಅಭಿಪ್ರಾಯವನ್ನೇ ಹೋಲುವ ಅಂಶಗಳನ್ನು ಹೊರಹಾಕಿತು. ಅಂದರೆ ಹೊಸ ಮೈಸೂರು ಭಾಗಗಳು ಮೈಸೂರಿಗೆ ಸೇರುವುದರಿಂದ ಮೈಸೂರಿನ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಳ್ಳಬಹುದು ಹಾಗು ಹೊಸ ಭಾಗಗಳು ಬಹಳ ಹಿಂದುಳಿದಿರುವುದರಿಂದ ಅವುಗಳ ಅಭಿವೃದ್ಧಿಗೆ ಅಪಾರ ಹಣದ ಅವಶ್ಯಕತೆ ಇರುತ್ತದೆ. ಇವುಗಳ ಅಭಿವೃದ್ಧಿಗೆ ಬಹಳಷ್ಟು ವರುಷಗಳು ಹಿಡಿಯುತ್ತವೆ. ಅಲ್ಲದೆ ಕಾನೂನುಗಳ ದೃಷ್ಟಿಯಿಂದ ಮೈಸೂರಿನ ಜನತೆ ಕೆಲವು ಕಷ್ಟಗಳನ್ನು ಎದುರಿಸಬೇಕಾಗುತ್ತದೆ ಎಂಬ ಅಂಶಗಳು ಹೊರಬಿದ್ದವು. ಆದರೆ ಕೇಂದ್ರ ಸರ್ಕಾರ ರಾಜ್ಯ ಸರ್ಕಾರಗಳ ಅಭಿಪ್ರಾಯದಂತೆ ಭಾಷಾವಾರು ಪ್ರಾಂತ್ಯ ರಚನೆಗೆ ಮುಂದಾಗಿ ಕರ್ನಾಟಕ ಏಕೀಕರಣಕ್ಕೆ ಅಂಗೀಕಾರ ನೀಡಿತು. ಆದರೆ ಹೆಚ್.ಕೆ.ವೀರಣ್ಣಗೌಡರು ಅಭಿಪ್ರಾಯಪಟ್ಟಂತೆ ಸಹಸ್ರಾರು ಜನರು ಮೈಸೂರಿನ ಮೇಲಿನ ಕಾಳಜಿಯಿಂದ ಮತ್ತು ತಮ್ಮ ಅಭಿವೃದ್ಧಿ ಕಾರ್ಯಗಳು ಕುಂಠಿತಗೊಳ್ಳಬಹುದೆಂಬ ಶಂಕೆಯ ದೃಷ್ಟಿಯಿಂದ ಏಕೀಕರಣವನ್ನು ವಿರೋಧಿಸುತ್ತಿದ್ದರು ಎಂಬುದಕ್ಕೆ ಮಂಡ್ಯದಲ್ಲಿ ಸೇರಿದ್ದ ಸಹಸ್ರಾರು ಜನರ ಏಕೀಕರಣ ವಿರೋಧಿ ಸಭೆಯೇ ಸಾಕ್ಷಿಯಾಗಿದೆ.

ಏಕೀಕರಣ ವಿರೋಧದ ನಿಲುವಿನಲ್ಲಿ ಅಧಿಕಾರದಲ್ಲಿ ಪ್ರಾಬಲ್ಯವನ್ನು ಕಾಯ್ದುಕೊಳ್ಳಬೇಕೆಂಬ ಸ್ವಾರ್ಥಪರ ನಿಲುವು ಒಂದು ನಿಜವಾದರೂ ಉಳಿದ ಇತರ ಅಂಶಗಳಾದ ಸುಗಮ ಆಡಳಿತಕ್ಕೆ ಧಕ್ಕೆಯಾಗುತ್ತದೆ ಎಂಬುದು, ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ಮುಂದುವರೆದ ಪ್ರದೇಶಗಳ ಜನರ ಮೇಲೆ ಹೆಚ್ಚಿನ ಹೊರೆ ಬೀಳುತ್ತದೆ ಎಂಬ ಅಂಶಗಳು ಅಕ್ಷರಶಃ ಸತ್ಯವಾಗಿ ಕಂಡುಬರುತ್ತವೆ. ಇಷ್ಟೆಲ್ಲಾ ಸಮಸ್ಯೆಗಳನ್ನು ಗರ್ಭದಲ್ಲಿ ಹೂತಿಟ್ಟು ೧೯೫೬ರಲ್ಲಿ ಕರ್ನಾಟಕ ಏಕೀಕರಣ ಸಾಧಿತವಾಯಿತು. ಆ ಕ್ಷಣಕ್ಕೆ ಹೂತಿಟ್ಟ ಸಮಸ್ಯೆಗಳು ಇಂದು ಬೃಹದಾಕಾರವಾಗಿ ತಲೆ ಎತ್ತಿರುವುದನ್ನು ನಾವು ಇಂದು ಕಾಣುತ್ತಿದ್ದೇವೆ. ಆ ಸಮಸ್ಯೆಗಳ ಜೊತೆಗೆ ಮತ್ತಷ್ಟು ಸಮಸ್ಯೆಗಳು ಪೂರಕವೆಂಬಂತೆ ಇಂದು ವಿಜೃಂಭಿಸುತ್ತಿವೆ. ಅದರಲ್ಲಿ ನಕ್ಸಲ್ ಸಮಸ್ಯೆ ಗಂಭೀರವಾದುದಾಗಿದೆ. ಇಂದಿನ ಜನಪ್ರತಿನಿಧಿಗಳ ಬೇಜವಾಬ್ದಾರಿತನ, ಮತದಾರರ ಅಜ್ಞಾನ ಇವೆರಡೂ ಸೇರಿ ರಾಜ್ಯದ ಹಲವು ಪ್ರದೇಶಗಳು ಆರ್ಥಿಕ ಅಸಮಾನತೆಯಿಂದ ನರಳುತ್ತಿರುವುದಕ್ಕೆ, ಅವುಗಳ ಅಭಿವೃದ್ಧಿ ಕುಂಠಿತಗೊಳ್ಳಲು ಕಾರಣವಾಗಿದೆ. ಅಲ್ಲದೆ ಸಾಮಾಜಿಕವಾಗಿ ಮತ್ತು ರಾಜಕೀಯವಾಗಿಯೂ ಸಮಾನ ಹಂಚಿಕೆಯಾಗದ ಕಾರಣ ಪ್ರತ್ಯೇಕತೆಯ ಕೂಗು ಮತ್ತೆ ಬುಗಿಲೆದ್ದಿದೆ. ಇಂದು ಕೊಡಗುಪ್ರದೇಶ ತಾವು ಪ್ರತ್ಯೇಕವಾಗಿ ಉಳಿಯಲು ಬಯಸುತ್ತಿದೆ. ಇಂತಹ

ಸಮಸ್ಯೆಗಳು ಎದುರಾಗಬಹುದೆಂದು ದೂರ ದೃಷ್ಟಿಯುಳ್ಳವರಾಗಿದ್ದ ಗೌಡರು ಅಂದೇ ಎರಡು ಕನ್ನಡ ನಾಡು ಆಗಬೇಕೆಂದು ಬಯಸಿದರು. ಇದರಿಂದ ಆಡಳಿತ ಸುಗಮ ನಿರ್ವಹಣೆ ಮತ್ತು ಆಯಾಯ ಪ್ರದೇಶಗಳಿಗೆ ತಕ್ಕಂತೆ ಕಾನೂನುಗಳ ಸ್ವರೂಪ ರಚನೆ ಹಾಗು ಎಲ್ಲಾ ಪ್ರದೇಶಗಳ ಅಭಿವೃದ್ಧಿಗೆ ಗಮನ ನೀಡಬಹುದಾದ ಅವಕಾಶ ಇವುಗಳೆಲ್ಲದೆ ಹಿಂದಿ ರಾಜ್ಯಗಳಂತೆ ಕನ್ನಡ ರಾಜ್ಯಗಳು ಕೇಂದ್ರದಲ್ಲಿ ತಮ್ಮ ಪ್ರಭಾವವನ್ನು ಬೀರಬಹುದೆಂದು ಗೌಡರು ಶಾಸನ ಸಭೆಯಲ್ಲಿ ಏಕೀಕರಣ ವಿರೋಧದದ ಮೇಲೆ ಮಾಡಿದ ಭಾಷಣದಲ್ಲಿ ನಮೂದಿಸಿದ್ದರು. ಇವುಗಳು ಇಂದು ಬಹಳಷ್ಟು ಮಟ್ಟಿಗೆ ಸತ್ಯವಾಗಿ ಗೋಚರಿಸುತ್ತಿವೆ. ಇನ್ನು ಮುಂದಾದರೂ ಎರಡು ಕನ್ನಡ ರಾಜ್ಯಗಳಾಗಬಾರದೆಂದು ಏಕ ಕರ್ನಾಟಕವೇ ಅಸ್ಥಿತ್ವದಲ್ಲಿ ಇರಬೇಕೆಂದು ಬಯಸುವುದಾದರೆ ರಾಜಕೀಯ ವಲಯದಲ್ಲಿ ಬಹಳಷ್ಟು ಸುಧಾರಣೆಗಳು ಆಗಬೇಕಾಗಿರುವುದು ಸೂಕ್ತವಾಗಿದೆ. ಎಲ್ಲಾ ಪ್ರದೇಶಗಳಿಗೂ ಸಮನಾದ ಆದ್ಯತೆ ನೀಡಿ ಜನಪ್ರತಿನಿಧಿಗಳು, ನೌಕರಶಾಹಿ ಜವಾಬ್ದಾರಿಯಿಂದ ಕಾರ್ಯನಿರ್ವಹಿಸಿದ್ದಲ್ಲಿ ಏಕೀಕರಣ ಕರ್ನಾಟಕಕ್ಕೆ ದುಡಿದ ಮಹನೀಯರ ಶ್ರಮ ಸಾರ್ಥಕವಾಗುತ್ತದೆ ಎಂದೇಳಬಹುದು.

ಈ ಮೇಲಿನ ಎಲ್ಲಾ ಚಳುವಳಿಗಳಲ್ಲಿ ಹೆಚ್.ಕೆ.ವೀರಣ್ಣಗೌಡರು ತಮ್ಮನ್ನು ತೊಡಗಿಸಿಕೊಂಡಿದ್ದರ ಹಿನ್ನೆಲೆಯಲ್ಲಿ ಅವರೊಬ್ಬ ನಿಷ್ಠಾವಂತ ಕಾಂಗ್ರೆಸ್ ಕಟ್ಟಾಳುವಾಗಿದ್ದರೆಂಬುದನ್ನು ಮತ್ತು ದೇಶಭಕ್ತರಾಗಿದ್ದರು ಎಂಬುದನ್ನು ಗುರುತಿಸಬಹುದು. ಅವರು ಕಾಂಗ್ರೆಸ್ ಕಾಯಕ್ಕಾಗಿ ತಮ್ಮನ್ನೇ ಅರ್ಪಿಸಿಕೊಂಡಿದ್ದನ್ನು ಮತ್ತು ಮೈಸೂರು ಸಂಸ್ಥಾನದಲ್ಲಿ ಅದು ಬೆಳೆಯಲು ಶ್ರಮಿಸಿದ್ದನ್ನು, ರಾಜ್ಯ ರಾಜಕಾರಣದಲ್ಲಿ ತಮ್ಮದೇ ಆದ ಪಾತ್ರ ವಹಿಸಿರುವುದನ್ನು ಐದನೇ ಅಧ್ಯಾಯದಲ್ಲಿ ವಿಶ್ಲೇಷಿಸಿದ್ದೇನೆ. ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷವನ್ನು ಕಟ್ಟಿದ ಮೊದಲ ನಾಯಕರ ಸಾಲಿನಲ್ಲಿ ಒಬ್ಬರಾಗಿ ದುಡಿದವರು ಹೆಚ್.ಕೆ.ವೀರಣ್ಣಗೌಡರು ಎಂದು ನಿಸ್ಸಂಶಯವಾಗಿ ಹೇಳಬಹುದು. ೧೯೨೦ರ ದಶಕದಲ್ಲಿ ನಾಲ್ಕನೆಯ ಕಾಂಗ್ರೆಸ್ ಸದಸ್ಯರಾದ ವೀರಣ್ಣಗೌಡರು ತಮ್ಮ ಬದುಕಿನ ಸಂಧ್ಯಾಕಾಲದವರೆಗೂ ಕಾಂಗ್ರೆಸ್ಸಿಗರಾಗಿಯೇ ಉಳಿದಿದ್ದು ಅವರ ನಿಷ್ಠೆಗೆ ಸಾಕ್ಷಿಯಾಗಿದೆ. ಪಕ್ಷಾಂತರ ಹೆಚ್ಚಾಗಿರುವ ಈ ದಿನಗಳಲ್ಲಿ ಹೆಚ್.ಕೆ.ವೀರಣ್ಣಗೌಡರಂತಹ ನಾಯಕರ ಬದುಕು ಒಂದು ಮಾದರಿಯಾಗಿದೆ.

ಸ್ವಾತಂತ್ರ್ಯ ಹೋರಾಟಕ್ಕಾಗಿ ಕಾಂಗ್ರೆಸ್ ಪಕ್ಷವನ್ನು ಬಲಪಡಿಸುವ ನಿಟ್ಟಿನಲ್ಲಿ ಪ್ರಜಾಪಕ್ಷವನ್ನು ಕಾಂಗ್ರೆಸ್ಸಿನಲ್ಲಿ ವಿಲೀನಗೊಳಿಸಲು ಹೆಚ್.ಕೆ.ವೀರಣ್ಣಗೌಡರು ಸಾಕಷ್ಟು ಶ್ರಮಿಸಿದರು. ತಾವು ಚಿತ್ರಗುಪ್ತ ಪತ್ರಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಕಾಂಗ್ರೆಸ್ ಮತ್ತು ಪ್ರಜಾಪಕ್ಷದವರನ್ನು ಕರೆದು ಟೀ ಕೂಟವನ್ನೇರ್ಪಡಿಸಿದ್ದರು. ಇದರ ಹಿಂದೆ ಇವೆರಡು ಪಕ್ಷಗಳು ಒಂದಾಗಬೇಕೆಂಬ ಸದುದ್ದೇಶ ಗೌಡರದಾಗಿತ್ತು. ಜವಾಬ್ದಾರಿ ಸರ್ಕಾರದ ಬಗ್ಗೆ ಮತ್ತು ಕಾಂಗ್ರೆಸ್ ಧ್ಯೇಯ ಧೋರಣೆಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಶಿವಪುರ ಅಧಿವೇಶನದ ಜವಾಬ್ದಾರಿಯನ್ನು ಹೊತ್ತು ಯಶಸ್ವಿಯಾಗಿ ನಿಭಾಯಿಸಿದರು. ಇವರ ಕಾರ್ಯ ಕೌಶಲ್ಯತೆಯಿಂದ ಕಾಂಗ್ರೆಸ್ಸಿನಲ್ಲಿ ಕಾರ್ಯದರ್ಶಿಯ ಸ್ಥಾನವನ್ನು ಪಡೆದಿದ್ದರು. ಹಲವಾರು ಬಾರಿ ಕಾರ್ಯದರ್ಶಿಗಳಾಗಿ ಕಾಂಗ್ರೆಸ್ ಪಕ್ಷವನ್ನು ಸದೃಢಗೊಳಿಸಲು ಶ್ರಮಿಸಿದವರು. ಎಸ್.ನಿಜಲಿಂಗಪ್ಪನವರು ಕಾಂಗ್ರೆಸ್ ಅಧ್ಯಕ್ಷರಾದ ಸಂದರ್ಭದಲ್ಲಿ

ಹೆಚ್.ಕೆ.ವೀರಣ್ಣಗೌಡರನ್ನು ಕಾರ್ಯದರ್ಶಿಯಾಗಿ ನೇಮಕ ಮಾಡಿ ಪ್ರಕಟಣೆ ನೀಡಿದ್ದರು. ಈ ವಿಚಾರ ಪ್ರವಾಸದಲ್ಲಿದ್ದ ಹೆಚ್.ಕೆ.ವೀರಣ್ಣಗೌಡರಿಗೆ ಆಶ್ಚರ್ಯವನ್ನುಂಟು ಮಾಡಿತು. ಆದರೆ ಎಸ್.ನಿಜಲಿಂಗಪ್ಪನವರಿಗೆ ವೀರಣ್ಣಗೌಡರ ಕಾರ್ಯ ದಕ್ಷತೆಯ ಮೇಲೆ ಪೂರ್ಣ ನಂಬಿಕೆಯಿತ್ತು. ಆದಕಾರಣ ಆರ್ಥಿಕ ದುಸ್ಥಿತಿಯಲ್ಲಿದ್ದ ಕಾಂಗ್ರೆಸ್‌ನ ಸಬಲತೆಗೆ ಹೆಚ್.ಕೆ.ವೀರಣ್ಣಗೌಡರಂತಹ ನಿಷ್ಠಾವಂತ ಕಾಂಗ್ರೆಸ್ಸಿಗರ ಅಗತ್ಯವನ್ನು ಅರಿತು ಎಸ್.ನಿಜಲಿಂಗಪ್ಪನವರು ಈ ತೀರ್ಮಾನ ಕೈಗೊಂಡಿದ್ದರು. ಕಾರ್ಯದರ್ಶಿಯಾದ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರು ಅವ್ಯವಸ್ಥೆಯ ಆಗರವಾಗಿದ್ದ ಕಾಂಗ್ರೆಸ್ ಕಚೇರಿಯನ್ನು ಒಂದು ಹಂತಕ್ಕೆ ತರಲು ಜಿ.ನಾರಾಯಣರ (ಬೆಂಗಳೂರಿನ ಮಾಜಿ ಮೇಯರ್) ಸಹಾಯವನ್ನು ಪಡೆದುಕೊಂಡರು. ಆರ್ಥಿಕ ಮುಗ್ಗಟ್ಟಿನಿಂದ ಎಷ್ಟೋ ವೇಳೆ ಅಧ್ಯಕ್ಷರು, ಕಾರ್ಯದರ್ಶಿ ಮತ್ತು ಕಾರ್ಯಕರ್ತನಿಗೆ ಸೇರಿ ಎರಡು ಪ್ಲೇಟ್ ಮೊಸರನ್ನವನ್ನು ತಂದು ಹಂಚಿಕೊಂಡು ತಿಂದ ಸನ್ನಿವೇಶಗಳು ಉಂಟು. ಇಂತಹ ಸಂಕಷ್ಟದ ಪರಿಸ್ಥಿತಿಯಿಂದ ಕಾಂಗ್ರೆಸ್ಸನ್ನು ಮೇಲೆತ್ತಲು ಹೆಚ್.ಕೆ.ವೀರಣ್ಣಗೌಡರು ಊರು ಊರುಗಳಲ್ಲಿ ಚಂದಾಹಣವನ್ನು ಸಂಗ್ರಹಿಸಿದರ ಜೊತೆಗೆ ಸದಸ್ಯತ್ವದ ಶುಲ್ಕದಿಂದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದರು. ಕಾಂಗ್ರೆಸ್ಸಿನಲ್ಲಿ ದೇಶಭಕ್ತಿಯಿಂದ ಪ್ರೇರಿತರಾಗಿ ಸ್ವಾರ್ಥತ್ಯಾಗಿಗಳು ಇದ್ದಂತೆ ಸ್ವಾರ್ಥಿಗಳು ಅಲ್ಲಲ್ಲಿ ಕಂಡು ಬರುತ್ತಿದ್ದರು. ಇಂತಹ ಸ್ವಾರ್ಥಿಗಳ ಸ್ವಾರ್ಥ ಕೆಲಸಗಳನ್ನು ಕಂಡಾಗ ದೇಶಸೇವೆಗಾಗಿ ಕಾಂಗ್ರೆಸ್ ಕಾರ್ಯಕ್ಕೆ ತಮ್ಮನ್ನೇ ಅರ್ಪಿಸಿಕೊಂಡಿದ್ದ ಹೆಚ್.ಕೆ.ವೀರಣ್ಣಗೌಡರ ಮನಸ್ಸು ಬಹಳ ನೋವನ್ನನುಭವಿಸುತ್ತಿತ್ತು. ತಾವು ಜೈಲು ಶಿಕ್ಷೆ ಅನುಭವಿಸಿ ಬಂದ ಸಮಯದಲ್ಲಿ ಕಾಂಗ್ರೆಸ್‌ನ ಹೆಸರೇಳಿಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಮೈಗಳ್ಳರ ಗುಂಪು ಕಾಂಗ್ರೆಸ್ ಕಚೇರಿಯನ್ನು ಆಕ್ರಮಿಸಿಕೊಂಡಿದ್ದಾಗ ಹೆಚ್.ಕೆ.ವೀರಣ್ಣಗೌಡರು ತಮ್ಮ ಧೈರ್ಯ ಜಾಣ್ಮೆಯಿಂದ ಅವರನ್ನು ಅಲ್ಲಿಂದ ಹೊರಹಾಕಿ ಕಾಂಗ್ರೆಸ್ಸಿನ ಹೆಸರಿಗೆ ತಗಲಬಹುದಾಗಿದ್ದ ಕಳಂಕವನ್ನು ದೂರಮಾಡಿದರೆಂದು ಹೇಳಬಹುದು. ತಾವು ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾದಾಗಲೂ ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಒಡಕುಗಳುಂಟಾಗದಂತೆ ಎಚ್ಚರ ವಹಿಸಿ ಕೆಲಸ ಮಾಡಿಸುತ್ತಿದ್ದದ್ದು ಅವರ ಕೌಶಲ್ಯತೆಗೆ ನಿದರ್ಶನವಾಗಿದೆ. ಹಾಗೆಯೇ ಕಾಂಗ್ರೆಸ್ ಪ್ರಚಾರಕ್ಕಾಗಿ ತಮ್ಮ ಪತ್ನಿಯ ಸಮೇತ ತಿಂಗಳು ಗಟ್ಟಲೆ ರಾಜ್ಯವನ್ನು ಸುತ್ತಿ ಸಭೆಗಳನ್ನು ನಡೆಸಿ ಕಾಂಗ್ರೆಸ್ ಬಗ್ಗೆ ಜನರಲ್ಲಿ ವಿಶ್ವಾಸ ಮೂಡಿಸಿದರು. ಇವರ ಸಮಕಾಲೀನರಲ್ಲಿ ಇವರಂತೆ ಕಾಂಗ್ರೆಸ್ಸಿಗೆ ತಮ್ಮನ್ನೇ ಅರ್ಪಿಸಿಕೊಂಡವರು ಮತ್ತೊಬ್ಬರಿಲ್ಲವೆಂಬ ಮಾತು ಕೇಳಿ ಬರುತ್ತದೆ. ಕಾಂಗ್ರೆಸ್ ಪಕ್ಷದಿಂದಲೇ ಜನಪ್ರತಿನಿಧಿಯಾಗಿ ಆಯ್ಕೆಗೊಂಡ ಹೆಚ್.ಕೆ.ವೀರಣ್ಣಗೌಡರು ಶಾಸನ ಸಭೆಯಲ್ಲಿ ಜವಾಬ್ದಾರಿಯುತವಾಗಿ ಪ್ರಮುಖ ವಿಷಯಗಳ ಮೇಲೆ ಪ್ರತಿಭಾನ್ವಿತವಾಗಿ ಭಾಷಣ ಮೂಲಕ ಸರ್ಕಾರದ ಗಮನ ಸೆಳೆಯುತ್ತಿದ್ದರು. ಅಲ್ಲದೆ ಅವರ ವಿಷಯ ಮಂಡನೆಯ ವೈಖರಿ ವಿಶಿಷ್ಟವಾದುದು. ಸಾಧ್ಯವಿದ್ದಷ್ಟು ಮಟ್ಟಿಗೆ ತಮ್ಮ ಕ್ಷೇತ್ರದ ಬಗ್ಗೆಯಾಗಲಿ, ತಮ್ಮ ಖಾತೆಯ ಬಗ್ಗೆಯಾಗಲಿ ಮಾಹಿತಿಯನ್ನು ತಿಳಿದುಕೊಂಡು ಪ್ರಬುದ್ಧವಾದ ವಿಚಾರ ಮಂಡಿಸುತ್ತಿದ್ದರು. ವಿರೋಧ ಪಕ್ಷಗಳ ಟೀಕೆ ಟಿಪ್ಪಣಿಗಳಿಗೆ ಕೃತಜ್ಞತೆಯನ್ನು ಸಲ್ಲಿಸುವ ಮೂಲಕ ಅವುಗಳಲ್ಲಿನ ಸಲಹೆ

ಸೂಚನೆಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತಿದ್ದರು. ಇದು ಅವರ ವಿನೀತಭಾವವನ್ನು ವ್ಯಕ್ತಗೊಳಿಸುತ್ತದೆ. ಇವರೊಬ್ಬ ಉತ್ತಮ ಸಂಸದೀಯ ಪಟುವಾಗಿದ್ದರೆಂದು ಹೇಳಬಹುದು.

ರಾಜ್ಯ ರಾಜಕಾರಣದಲ್ಲಿ ೧೯೩೦ ರಿಂದ ೬೦ರ ದಶಕದವರೆಗೂ ಪ್ರಭಾವಿ ಮುಖಂಡರಾಗಿದ್ದ ಹೆಚ್.ಕೆ.ವೀರಣ್ಣಗೌಡರು ನ್ಯಾಯಪರ, ನಿಷ್ಠಾವಂತ ತನ್ನ ಸಮಕಾಲೀನ ನಾಯಕರ ಬಗ್ಗೆ ಗೌರವ ಹೊಂದಿದ್ದರು. ಸ್ವಾತಂತ್ರ್ಯ ನಂತರದಲ್ಲಿ ಕೆ.ಸಿ.ರೆಡ್ಡಿಯವರ ಸರ್ಕಾರವನ್ನು ಅಧಿಕಾರದಿಂದ ಕೆಳಗಿಳಿಸಲು ಮಾಡಿದ ಹುನ್ನಾರದ ಹಿನ್ನೆಲೆಯಲ್ಲಿ ಕೆ.ಹನುಮಂತಯ್ಯನವರ ಮೇಲೆ ವೀರಣ್ಣಗೌಡರು ಅಸಮಾಧಾನವನ್ನು ಹೊಂದಿದ್ದರು. ಪರಸ್ಪರರಲ್ಲಿ ಗೌರವವಿದ್ದರೂ ತಮ್ಮ ರಾಜಕೀಯ ಸಂಬಂಧ ನಡವಳಿಕೆಗಳಲ್ಲಿ ವಿರುದ್ಧವಾಗಿದ್ದರು. ಹಾಗಾಗಿ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿ ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ಹೆಚ.ಕೆ.ವೀರಣ್ಣಗೌಡರು ಅವರ ಸರ್ಕಾರದ ಆಡಳಿತ ವೈಖರಿಯನ್ನು ಗಮನಿಸುತ್ತಾ ಸಣ್ಣಪುಟ್ಟ ತಪ್ಪುಗಳನ್ನು ಎತ್ತಿ ತೋರುತ್ತಿದ್ದರು. ಹೀಗೆ ಕಂಡು ಬಂದ ತಪ್ಪುಗಳಲ್ಲಿ ಮುಖ್ಯವಾದವು ತಾಮ್ರತಂತಿ ಪ್ರಕರಣ ಮತ್ತು ಮೊಟ್ಟೆದೊಡ್ಡಿ ಜಮೀನು ಪ್ರಕರಣಗಳು ಹನುಮಂತಯ್ಯನವರ ಸಂಬಂಧಿಗಳಿಂದ ಉಂಟಾಗಿದ್ದು, ಅವುಗಳನ್ನು ಸರಿಪಡಿಸುವಲ್ಲಿ ಹನುಮಂತಯ್ಯನವರು ಪ್ರಯತ್ನಪಡದೇ ಹೋದದ್ದು ಅವರನ್ನು ಅಧಿಕಾರದಿಂದ ಕೆಳಗಿಳಿಸಲು ಹೆಚ್.ಕೆ.ವೀರಣ್ಣಗೌಡರಿಗೆ ನೆರವಾದವು. ವೈಯಕ್ತಿಕವಾಗಿ ಹನುಮಂತಯ್ಯನವರ ಬಗ್ಗೆ ದ್ವೇಷವಿರದ ಹೆಚ್.ಕೆ.ವೀರಣ್ಣಗೌಡರು ಕೆ.ಸಿ.ರೆಡ್ಡಿಯವರ ಮೇಲಿನ ಅಭಿಮಾನ ಮತ್ತು ಕಾಂಗ್ರೆಸ್ ಪಕ್ಷಕ್ಕೆ ಯಾವುದೇ ರೀತಿಯ ಕಳಂಕ ಬರಬಾರದೆಂದು ಹನುಮಂತಯ್ಯನವರ ಆಡಳಿತದಲ್ಲಿನ ಪ್ರತಿಯೊಂದು ಕೆಲಸಗಳಲ್ಲಿ ತಪ್ಪುಗಳನ್ನು ಕಂಡು ಹಿಡಿದು ಟೀಕೆ ಟಿಪ್ಪಣಿ ಮಾಡುತ್ತಿದ್ದರು. ಈ ಬಗ್ಗೆ ಕೇಂದ್ರ ನಾಯಕರಿಗೆ ಪತ್ರ ಬರೆದು ಕಾಂಗ್ರೆಸ್ಸಿನ ಹೆಸರು ಕೆಡದಂತೆ ಮತ್ತು ರಾಜ್ಯದಲ್ಲಿ ಉತ್ತಮ ಆಡಳಿತ ವ್ಯವಸ್ಥೆ ರೂಪುಗೊಳ್ಳಬೇಕೆಂಬ ಉದ್ದೇಶವನ್ನು ವ್ಯಕ್ತಗೊಳಿಸಿದ್ದರು. ಹನುಮಂತಯ್ಯನವರ ನಂತರ ೧೯೫೬ರಲ್ಲಿ ಎಸ್.ನಿಜಲಿಂಗಪ್ಪನವರ ಸರ್ಕಾರ ಅಸ್ಥಿತ್ವಕ್ಕೆ ಬಂದಿತು. ಆ ಸರ್ಕಾರದಲ್ಲಿ ಹೆಚ್.ಕೆ.ವೀರಣ್ಣಗೌಡರು ಲೋಕೋಪಯೋಗಿ ಮಂತ್ರಿಗಳಾಗಿ ಆಯ್ಕೆಯಾದರು. ಅಲ್ಲದೆ ಬಿ.ಡಿ.ಜತ್ತಿಯವರ ಸಚಿವ ಸಂಪುಟದಲ್ಲೂ ಸಚಿವ ಸ್ಥಾನ ಪಡೆದ ಗೌಡರು ಇದೇ ಖಾತೆಯನ್ನು ನಿರ್ವಹಿಸಿದರು. ಈ ಎರಡು ಅವಧಿಯಲ್ಲಿ ಆದಷ್ಟು ಜನೋಪಯೋಗಿ ಕಾರ್ಯಗಳಿಗೆ ಆದ್ಯತೆ ನೀಡಿದರು. ನೀರಾವರಿ ಕಾಮಗಾರಿಗಳಿಗೆ , ರಸ್ತೆ ನಿರ್ಮಾಣ, ಹಳ್ಳಿಗಳಲ್ಲಿ ಮೂಲಭೂತ ಸೌಲಭ್ಯಗಳಿಗೆ ಹೆಚ್ಚಿನ ಗಮನ ಹರಿಸಿ ಉತ್ತಮ ರೀತಿಯ ಕಾರ್ಯಗಳನ್ನು ಮಾಡಿಸಿದರು. ಏಕೀಕರಣ ವಿರೋಧದ ಹಿನ್ನೆಲೆಯಲ್ಲಿ ಗೌಡರು ಸಚಿವರಾದಾಗ ಯಾವುದೇ ತಾರತಮ್ಯವನ್ನು ಮಾಡದೆ ಎಲ್ಲಾ ಪ್ರದೇಶದಲ್ಲಿ ಸಮಾನ ರೀತಿಯ ಕೆಲಸ ಕಾರ್ಯಗಳು ಜರುಗುವಂತೆ ನೋಡಿಕೊಂಡಿದ್ದು ಅವರಲ್ಲಿನ ಕರ್ತವ್ಯನಿಷ್ಠೆಗೆ, ನಿಸ್ಪಕ್ಷಪಾತತೆಗೆ ಸಾಕ್ಷಿಯಾಗಿದೆ. ಅಲ್ಲದೆ ೧೯೬೦ರ ದಶಕದಲ್ಲಿ ಅವರು ಕೈಗೊಂಡ ಅಭಿವೃದ್ಧಿ ಕಾರ್ಯಗಳು ೮೦ರ ದಶಕದಲ್ಲಿಯೂ ಬಹುತೇಕ ಭಾರತದ ಭಾಗಗಳಲ್ಲಿ ಕಂಡುಬರದಿರುವುದನ್ನು ಗಮನಿಸಿದವರು ಗೌಡರ ಕಾರ್ಯತತ್ಪರತೆಯ ಬಗ್ಗೆ, ಜನಸೇವೆಯ ಬಗ್ಗೆ ಅವರಿಗಿದ್ದ ನಿಷ್ಠೆಯನ್ನು ಶ್ಲಾಘಿಸಿದ್ದಾರೆ. ನಿಷ್ಠೂರವಾದಿಯಾದ ಗೌಡರು ತಪ್ಪೆಂದು ಕಂಡ ಯಾವುದನ್ನೇ ಆಗಲಿ, ಯಾರನ್ನೇ ಆಗಲಿ ಖಂಡಿಸುವ

ಎದಿಗಾರಿಕೆಯನ್ನು ಹೊಂದಿದ್ದರು. ಈ ರೀತಿಯ ಸ್ವಭಾವದಿಂದಲೇ ತಮ್ಮ ಆತ್ಮೀಯರೆಂದು ಕೊಂಡವರಿಂದ ದೂರವಾಗುತ್ತ ಹೋದರು. ಪೊಳ್ಳುತನ, ವಂಚಕತನ, ಭ್ರಷ್ಟತೆ, ಪಕ್ಷಪಾತತೆಯ ಲಕ್ಷಣಗಳು ಕಂಡು ಬಂದ ಕಡೆ ನಿಷ್ಠೂರವಾಗಿ ನಡೆದುಕೊಳ್ಳುತ್ತಿದ್ದರು. ಹಾಗಾಗಿ ಬದಲಾದ ರಾಜಕೀಯ ವಾತಾವರಣಕ್ಕೆ ಅವರು ಅಪ್ರಸ್ತುತವಾಗುತ್ತ ಸಾಗಿದರು. ಆದರೆ ಎಷ್ಟೋ ನಾಯಕರು ಬದಲಾದ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುತ್ತಾ ಹೋದಂತೆ ಅಧಿಕಾರದ ಗದ್ದುಗೆಗಳನ್ನು ಏರಿ ಕುಳಿತರು. ಆದರೆ ಪರಿಣಾಮಕಾರಿ ಜನಸೇವೆಗೆ ಅಧಿಕಾರದ ಅಗತ್ಯವನ್ನು ಮನಗಂಡಿದ್ದ ಹೆಚ್.ಕೆ.ವೀರಣ್ಣಗೌಡರು ಅಧಿಕಾರದಾಸೆಯಿದ್ದರೂ ತಮ್ಮ ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದ ಮನಃಸ್ಥಿತಿಯಿಂದಾಗಿ ದೂರ ಸರಿಯುತ್ತಾ ಹೋದರು. ಅಲ್ಲದೆ ೧೯೬೭ರ ಚುನಾವಣೆಯಲ್ಲಿ ಗುಂಪುಗುಳಿತನದಿಂದ ಕಾಂಗ್ರೆಸ್ ಪಕ್ಷದಿಂದ ಟಿಕೇಟ್ ದೊರೆಯದೆ ಹೋದಾಗ ಸ್ವಾಭಿಮಾನ ಬಿಟ್ಟುಕೊಡಲಾಗದೆ ಸ್ನೇಹಿತರ ಸಲಹೆಯ ಮೇರೆಗೆ ಕಿರುಗಾವಲು ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಿದರು. ಮೊದಲಿನಿಂದಲೂ ಉದಾತ್ತವಾಗಿ, ತತ್ವಬದ್ಧವಾಗಿ ಚುನಾವಣೆಗಳಲ್ಲಿ ಸ್ಪರ್ಧಿಸಿದ್ದ ವೀರಣ್ಣಗೌಡರು ಈ ಚುನಾವಣೆಯಲ್ಲಿ ಹಠಕ್ಕೆ ಬಿದ್ದು ಇದ್ದುಬದ್ದ ಹಣವನ್ನು ವ್ಯಯಿಸಿ ಹೀನಾಯ ಸೋಲನ್ನು ಕಂಡರು. ಇತರರ ಮಾತಿಗೆ ಬಲಿಬಿದ್ದು ತಮ್ಮ ಆದರ್ಶಗಳಲ್ಲಿ ಆ ಮಟ್ಟಿಗೆ ಬದಲಾವಣೆ ಕಂಡುಕೊಂಡಿದ್ದು ವಿಷಾಧಕರ ಸಂಗತಿ.

ಹೆಚ್.ಕೆ.ವೀರಣ್ಣಗೌಡರು ತಮ್ಮ ತಂದೆಯವರಂತೆ ಕೋಪಿಷ್ಟರಾಗಿದ್ದರೂ, ಶಿಸ್ತಿನ ಸಿಪಾಯಿಯಂತೆ ನಡೆದುಕೊಳ್ಳುತ್ತಿದ್ದರು. ಇವರ ಕೋಪ ಮತ್ತು ನಿಷ್ಠೂರ ಗುಣಗಳೇ ಇವರು ಎಷ್ಟೇ ದೇಶಸೇವೆ, ಜನಸೇವೆಗೆ ದುಡಿದಿದ್ದರೂ ಹೆಚ್ಚಿನ ಜನಪ್ರಿಯತೆಯನ್ನು ತಂದುಕೊಡಲಿಲ್ಲವೆನ್ನಬಹುದು. ಹಾಗೆಯೇ ನಾಯಕರುಗಳೊಂದಿಗೆ ಹೊಂದಾಣಿಕೆಯ ಸ್ವಭಾವವಿಲ್ಲದೆ ಹೋದದ್ದು, ಇವರಿಗೆ ದೊರೆಯಬಹುದಾಗಿದ್ದ ಮುಖ್ಯಮಂತ್ರಿ ಸ್ಥಾನವನ್ನು ದೂರ ಮಾಡಿತೆನ್ನಬಹುದು. ಆ ವೇಳೆಗೆ ಒಕ್ಕಲಿಗರ ವ್ಯಕ್ತಿಗತ ಪ್ರತಿಷ್ಠೆ, ಸಂಕುಚಿತ ಮನೋಭಾವನೆ, ದ್ವೇಷಾಸೂಯೆಯ ರಾಜಕಾರಣದಿಂದಾಗಿ ಲಿಂಗಾಯಿತರ ಜಾತಿ ರಾಜಕಾರಣ ಬಲಿಯಿತು. ಆಡಳಿತ ವ್ಯವಸ್ಥೆಯಲ್ಲಿ ಒಕ್ಕಲಿಗರ ಪ್ರಾಬಲ್ಯ ಕ್ಷೀಣಿಸುತ್ತಾ ಬಂತು. ಕರ್ನಾಟಕದ ಏಳಿಗೆಗಾಗಿ ಅಪಾರವಾಗಿ ಶ್ರಮಿಸಿದ್ದ ಹಲವರು ನಿಸ್ಸಾಹಾಯಕರಾಗಿ ಕೈ ಕಟ್ಟಿಕುಳಿತರು. ಅಧಿಕಾರ ದಾಹದ ಎರಡನೆಯ ಹಂತದ ನಾಯಕರು ತಮ್ಮ ರಾಜಭೋಗದ ಐಷಾರಾಮ ಜೀವನದಲ್ಲಿ ಹಿರಿಯರನ್ನು ಮೂಲೆ ಗುಂಪು ಮಾಡಿದರು. ಹೀಗಾಗಿ ಯೋಗ್ಯತೆ, ದಕ್ಷತೆ, ಪ್ರತಿಭೆ ಪ್ರಚಂಡಾ ಕ್ರಿಯಾಶೀಲತೆಯ ಸಮರ್ಥ ನಾಯಕರು ಈ ಜನಾಂಗದಲ್ಲಿದ್ದರೂ ಒಬ್ಬರನ್ನೊಬ್ಬರು ಕಾಲು ಹಿಡಿದೆಳೆಯುವ ಹೀನ ಕೆಲಸ ಯಾರನ್ನು ಮುಂದೆ ಬರಲು ಬಿಡದೆ ಹೋಯಿತು. ದ್ವೇಷಾಸೂಯೆಗಳಿಂದ ಮೂಲೆ ಸೇರಿದ ಹಲವರನ್ನು ಒಗ್ಗೂಡಿಸಲು ಕೆಲವರು ಮುಂದಾದರು. ಒಕ್ಕೂಟದ ಪ್ರಮುಖರ ಭಾವನೆಗೆ ಎಲ್ಲರೂ ಒಪ್ಪಿದರು. ಹಿರಿಯರಾದ ಸಾಹುಕಾರ್ ಚೆನ್ನಯ್ಯ, ಕೆ.ಸಿ.ರೆಡ್ಡಿಯವರು ತುಂಬ ಉದಾತ್ತವಾಗಿ ನಡೆದುಕೊಂಡರು. ಅನೇಕ ಮಿತ್ರರ ಒತ್ತಾಯಕ್ಕೆ ಮಣಿದ ಕೆಂಗಲರು ಹೆಚ್.ಕೆ.ವೀರಣ್ಣಗೌಡರನ್ನು ತಮ್ಮ ಮನೆಯ ಭೋಜನಕ್ಕೆ ಆಹ್ವಾನಿಸಿದರು. ಈ ಇಬ್ಬರು ನಾಯಕರ ಭೇಟಿಯಿಂದಲೂ ಜನಾಂಗದಲ್ಲಿ ಒಗ್ಗಟ್ಟು ಮೂಡುವ ಸೂಚನೆಯೇನೂ ಕಂಡು ಬರಲಿಲ್ಲ. ಒಗ್ಗಟ್ಟು ವ್ಯಕ್ತಿಗತ ಪ್ರತಿಷ್ಠೆಯಲ್ಲಿ ಕರಗಿ ಹೋಯಿತು. ಇಂಥ

ಘಟನೆಗಳು ವ್ಯಕ್ತಿ ರಾಷ್ಟ್ರೀಯ ಮನೋಭಾವದವನಾಗಿಯೂ ಒಳ್ಳೆಯ ಆಡಳಿತಗಾರನಾಗಿಯೂ ಮಾನವ ಸಹಜ ದೌರ್ಬಲ್ಯಗಳಿಗೆ ಸಿಲುಕಬಹುದೆಂಬುದನ್ನೇ ಎತ್ತಿ ತೋರಿಸುತ್ತವೆ.

ಪತ್ರಿಕಾ ಮಾಧ್ಯಮದ ಮೂಲಕ ದೇಶಸೇವೆಯನ್ನು ಕೈಗೊಂಡಂತೆ ಹೆಚ್.ಕೆ.ವೀರಣ್ಣಗೌಡರು ಸಮುದಾಯ ಸಂಘಟನೆಯಲ್ಲೂ ತಮ್ಮ ಸಮಾಜ ಸೇವೆಯನ್ನು ಮುಂದುವರೆಸಿದ್ದರು. ಹಾಗಾಗಿ ಅವರು ಒಕ್ಕಲಿಗರ ಸಂಘದ ಅಧ್ಯಕ್ಷರಾಗಿ ನಿರ್ವಂಚನೆಯಿಂದ ಶ್ರಮಿಕ ವರ್ಗದವರನ್ನು ಗಮನದಲ್ಲಿಟ್ಟುಕೊಂಡು ದುಡಿದಿರುವುದು ಕಂಡು ಬರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೆ ತನ್ನ ಸಮುದಾಯದ ಬಗ್ಗೆ ಅಭಿಮಾನವಿರುವಂತೆ ಹೆಚ್.ಕೆ.ವೀರಣ್ಣಗೌಡರು ಇದಕ್ಕೆ ಹೊರತಾದವರಲ್ಲ. ಆದರೆ ವೀರಣ್ಣಗೌಡರು ಒಕ್ಕಲಿಗ ಎಂಬ ಪದವನ್ನು ಜಾತಿವಾಚಕವಾಗಿ ನೋಡದೆ ಒಂದು ವೃತ್ತಿವಾಚಕವಾಗಿ ನೋಡುತ್ತಿದ್ದುದರಿಂದ ಒಟ್ಟಾರೆ ರೈತಾಪಿ ವರ್ಗದ ಪರವಾಗಿ ಕೆಲಸ ಮಾಡಿರುವುದನ್ನು ಗಮನಿಸಬಹುದು. ಹೆಚ್.ಕೆ.ವೀರಣ್ಣಗೌಡರಿಗೆ ಚಿಕ್ಕಂದಿನಿಂದಲೂ ಸಮುದಾಯ ಸಂಘಟನೆಯ ಕೆಲಸಗಳಲ್ಲಿ ಆಸಕ್ತಿ ಹೆಚ್ಚು. ಹೀಗಾಗಿ ಮೈಸೂರು ಒಕ್ಕಲಿಗ ವಿದ್ಯಾರ್ಥಿಗಳ ಮಹಾಸಮ್ಮೇಳವನ್ನು, ಪಟೇಲರ ಸಭೆಗಳನ್ನು ಸಂಘಟಿಸಿ ಅನುಭವ ಗಳಿಸಿದ್ದರು. ಅಲ್ಲದೆ ಇರ್ವಿನ್ ನಾಲಾ, ಶಿವಪುರ ಧ್ವಜ ಸತ್ಯಾಗ್ರಹ, ಸ್ವಾತಂತ್ರ್ಯ ಹೋರಾಟ, ಜವಾಬ್ದಾರಿ ಸರ್ಕಾರದ ಹೋರಾಟ ಇವುಗಳಲೆಲ್ಲ ಪ್ರಮುಖ ಪಾತ್ರವಹಿಸಿ ಸಮರ್ಥವಾಗಿ ಕಾರ್ಯನಿರ್ವಹಿಸಿದ್ದರು. ಈ ರೀತಿಯ ಶಕ್ತಿ ಸಾಮರ್ಥ್ಯ ಮತ್ತು ಅನುಭವವನ್ನು ಪರಿಗಣಿಸಿ ಒಕ್ಕಲಿಗರ ಸಂಘದವರು ವೀರಣ್ಣಗೌಡರನ್ನು ೧೯೬೧ರಲ್ಲಿ ದಕ್ಷಿಣ ಭಾರತದ ಒಕ್ಕಲಿಗರ ಮಹಾಧಿವೇಶನ ನಡೆಸುವ ಜವಾಬ್ದಾರಿಯ ಹೊಣೆ ಹೊರಬೇಕಾಗಿ ಕೇಳಿಕೊಂಡಿದ್ದರು. ಈ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದ ವೀರಣ್ಣಗೌಡರನ್ನು ಆರ್ಥಿಕ ಮುಗ್ಗಟ್ಟಿನ, ಗುಂಪುಗುಳಿತನ, ಸ್ವಾರ್ಥಸಾಧಕರ ದುರಾಸೆಯಿಂದ ಸೊರಗುತ್ತಿರುವ ಒಕ್ಕಲಿಗರ ಸಂಘವನ್ನು ಉಳಿಸಿ ಬೆಳೆಸಲು ತಾವು ಅಧ್ಯಕ್ಷರಾಗಬೇಕೆಂದು ಕೇಳಿಕೊಂಡರು. ಸಂಘದ ಬಗ್ಗೆ ಮೊದಲಿನಿಂದಲೂ ಇದ್ದ ಅಭಿಮಾನದಿಂದ ಹೆಚ್.ಕೆ.ವೀರಣ್ಣಗೌಡರು ೧೯೬೨ರಲ್ಲಿ ಒಕ್ಕಲಿಗರ ಅಧ್ಯಕ್ಷರಾಗಿ ಆಯ್ಕೆಯಾದರು. ಮೊದಲಿಗೆ ಸಂಘದ ಆರ್ಥಿಕ ಸುಭದ್ರತೆಗೆ ಮುಂದಾದರು. ಅವ್ಯವಸ್ಥೆಯ ಆಗರವಾಗಿದ್ದ ಕಚೇರಿಯ ಲೆಕ್ಕಪತ್ರಗಳನ್ನು ಒಂದು ಸುವ್ಯವಸ್ಥೆಗೆ ತರಲು ಚಿನ್ನಸ್ವಾಮಿ ಎಂಬ ಪ್ರಾಮಾಣಿಕ ವ್ಯಕ್ತಿಯನ್ನು ಕಾರ್ಯದರ್ಶಿಯನ್ನಾಗಿ ಮಾಡಿದರು. ಗುಂಪುಗುಳಿತನ ಮಾಡಿಕೊಂಡು ಸಂಘದ ಅಭಿವೃದ್ಧಿ ಕೆಲಸ ಕಾರ್ಯಗಳಿಗೆ ಅಡ್ಡಿಯನ್ನುಂಟುಮಾಡಬೇಕೆಂದೇ ಇದ್ದಂತಹ ಸದಸ್ಯರೊಂದಿಗೆ ವಿರುದ್ಧ ಗೌಡರು ವೈಮನಸ್ಯವನ್ನು ಕಟ್ಟಿಕೊಳ್ಳದೆ ಎಲ್ಲರೊಂದಿಗೆ ಒಗ್ಗಟ್ಟಿನಿಂದ ಕೆಲಸ ಮಾಡುವ ಪ್ರಯತ್ನವನ್ನು ನಡೆಸಿದರು. ಆದರೆ ಸಫಲವಾಗಲಿಲ್ಲ. ಆದರೂ ಧೈರ್ಯಗುಂದದೆ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವೀರಣ್ಣಗೌಡರು ನಿಷ್ಪಕ್ಷಪಾತವಾಗಿ, ನಿರ್ದಾಕ್ಷಿಣ್ಯವಾಗಿ ಕೆಲಸ ನಿರ್ವಹಿಸಿದರು. ಸಂಘದ ಸ್ವತ್ತುಗಳನ್ನು ಕಬಳಿಸಲು ಕಾಯುತ್ತಿದ್ದವರಿಗೆ ಅವಕಾಶ ಮಾಡಿಕೊಡದೆ ಸಂಘದ ಸ್ವತ್ತುಗಳನ್ನು ಉಳಿಸಿ ಬೆಳೆಸಿದರು. ಇದಕ್ಕೆ ಒಂದು ನಿದರ್ಶನ ಮಾಗಡಿ ರಸ್ತೆಯ ಕೊಟ್ಟಿಗೆಪಾಳ್ಯದ ಮುಖ್ಯರಸ್ತೆಯ ಪಕ್ಕದಲ್ಲಿರುವ ಶ್ರೀಗಂಧ ಕಾವಲು ಒಕ್ಕಲಿಗರ ಕಾಲೇಜು ಇರುವ ಜಾಗವನ್ನು ಅಂದು ವೀರಣ್ಣಗೌಡರು ಸರ್ಕಾರದಿಂದ ಖರೀದಿಸಿ ಇನ್ನಷ್ಟು

ವಿಸ್ತರಿಸಿದ ಸಂದರ್ಭದಲ್ಲಿ ಆ ಜಾಗವನ್ನು ಕಬಳಿಸಲು ಹವಣಿಸಿದವರಿಗೆ ಅವಕಾಶ ನೀಡದೆ ನಿರ್ದಾಕ್ಷಿಣ್ಯವಾಗಿ ನಡೆದುಕೊಂಡರು.

ಒಂದು ಸಮುದಾಯದ ಶೈಕ್ಷಣಿಕ ಬೆಳವಣಿಗೆ ಆ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮ ಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇದನ್ನರಿತಿದ್ದ ಹೆಚ್.ಕೆ.ವೀರಣ್ಣಗೌಡರು ಸಂಘವನ್ನು ಶೈಕ್ಷಣಿಕ ಕ್ಷೇತ್ರದ ಅಭಿವೃದ್ಧಿಯ ಕಡೆಗೆ ಕೊಂಡೊಯ್ದರು. ಈ ಪ್ರಯತ್ನದ ಫಲವಾಗಿ ಮೊದಲ ಬಾರಿಗೆ ೧೯೬೭ರಲ್ಲಿ ವಿ.ವಿ.ಪುರಂ ವಿಜ್ಞಾನ ಕಾಲೇಜು ಅಸ್ತಿತ್ವಕ್ಕೆ ಬಂದಿತು. ನಂತರದಲ್ಲಿ ಕಲೆ, ವಾಣಿಜ್ಯ ಕಾಲೇಜು ಪ್ರಾರಂಭಿಸಲ್ಪಟ್ಟವು. ಇಂದು ಇನ್ನು ಹಲವಾರು ವಿಷಯಗಳಿಗೆ ಸಂಬಂಧಿಸಿದ ವೈದ್ಯಕೀಯ, ದಂತವೈದ್ಯಕೀಯ, ಇಂಜಿನಿಯರಿಂಗ್, ಕಾನೂನು ಮುಂತಾದ ಕಾಲೇಜುಗಳು ತಲೆಯೆತ್ತಿವೆ. ಇವುಗಳೆಲ್ಲದರ ಹಿಂದೆ ಹೆಚ್.ಕೆ.ವೀರಣ್ಣಗೌಡರ ಪ್ರಾಮಾಣಿಕ ದುಡಿಮೆ ಇದೆ. ಕಾಂಗ್ರೆಸ್‌ನಂತಹ ರಾಷ್ಟ್ರೀಯ ಸಂಸ್ಥೆಯಲ್ಲಿ ಜವಾಬ್ದಾರಿ ಸ್ಥಾನ ಹೊಂದಿದ್ದು ಜಾತೀಯ ಸಂಘಗಳಲ್ಲೂ ಹೊಣೆಗಾರಿಕೆಯ ಕೆಲಸ ವಹಿಸಿಕೊಂಡಿರುವುದು ತಾತ್ವಿಕವಾಗಿ ತಪ್ಪಲ್ಲವೇ? ಎಂಬ ಪ್ರಶ್ನೆಯೇಳಬಹುದು. ಬ್ರಾಹ್ಮಣೇತರರ ಸಂಘದ ಅನೇಕ ಸದಸ್ಯರಿಗೆ ಬ್ರಾಹ್ಮಣರನ್ನು ನಿಂದಿಸುವುದೇ ಒಂದು ಗುರಿಯಾಗಿದ್ದ ಸಂದರ್ಭದಲ್ಲಿ ವೀರಣ್ಣಗೌಡರು ಈ ಗುಂಪಿಗೆ ಸೇರಿದವರಾಗಿರಲಿಲ್ಲ. ತಾವು ಒಕ್ಕಲಿಗರ ಅಧ್ಯಕ್ಷರಾದ ಸಂದರ್ಭದಲ್ಲಿ ಸ್ನೇಹಿತರು ವಿಧಾನ ಸೌಧದ ಬ್ಯಾಂಕ್ವೆಟ್ ಹಾಲಿನಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮಾತನಾಡುತ್ತಾ ಗೌಡರು 'ನಾನು ಒಕ್ಕಲಿಗರ ಅಧ್ಯಕ್ಷನಾದ ಮಾತ್ರಕ್ಕೆ ನನ್ನಲ್ಲಿ ಜಾತೀಯತೆ ಸುಳಿದಿದೆ ಎಂದು ಯಾರೂ ಭಾವಿಸಬಾರದು. ಒಕ್ಕಲಿಗರು ಎಂದರೆ ರೈತರು ಹಾಗಾಗಿ ಅವರ ಉದ್ಧಾರವಾದರೆ ದೇಶದ ಉದ್ಧಾರವಾದಂತೆ. ರೈತರಿಗೆ ಅನುಕೂಲವಾಗುವ ಕೆಲಸಗಳನ್ನು ಮಾಡುವ ಸಲುವಾಗಿ ತಾನು ಅಧ್ಯಕ್ಷನಾಗಿದ್ದೇನೆ' ಎಂದು ಹೇಳಿಕೊಂಡಿದ್ದಾರೆ.

ಸಂಘದ ವತಿಯಿಂದ ಶಿಕ್ಷಣ ಪ್ರಸಾರಕ್ಕೆ ದುಡಿದಂತೆ ವೈಯಕ್ತಿಕವಾಗಿಯೂ ತಮ್ಮ ಸ್ವಂತ ನೆಲೆಗಳು ಚನ್ನಪಟ್ಟಣದ ಅವ್ವೇರಹಳ್ಳಿ, ಅಕ್ಕೂರು, ಹೊಸಹಳ್ಳಿ ಮತ್ತು ಮದ್ದೂರಿನಲ್ಲಿ ಹಲವಾರು ಶಾಲಾ ಕಾಲೇಜುಗಳನ್ನು, ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ನಿರ್ಮಿಸಿ ಗ್ರಾಮೀಣ ಜನರ ಜ್ಞಾನಾಭಿವೃದ್ಧಿಗೆ ನೆರವಾಗಿದ್ದಾರೆ. ಹೆಚ್.ಕೆ.ವೀರಣ್ಣಗೌಡರ ಈ ರೀತಿಯ ಶೈಕ್ಷಣಿಕ ಸೇವೆಯನ್ನು ಇಂದು ಅವರ ಸಂಬಂಧಿಗಳು ವೀರಮಲ್ಲೇಶ್ ಮತ್ತು ಡಾ.ಹೆಚ್.ಕೆ.ಮರಿಯಪ್ಪನವರು(ಅನಿವಾಸಿ ಭಾರತೀಯರು) ಇನ್ನಷ್ಟು ಬೆಳೆಸಿ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಹೆಚ್.ಕೆ.ವೀರಣ್ಣಗೌಡರು ರೈತಪರವಾದ ಸಂಸ್ಥೆಗಳಲ್ಲಿ ತಮ್ಮ ಸೇವೆ ಸಲ್ಲಿಸಿದ್ದಾರೆ. ಮದ್ದೂರಿನ ರೈತ ಸಂಘದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಮಂಡ್ಯದಲ್ಲಿರುವ ಸಕ್ಕರೆ ಕಾರ್ಖಾನೆಗೆ ಬರುವ ಕಬ್ಬಿನ ಮೇಲೆ ತೆರಿಗೆಯನ್ನು ವಿಧಿಸಿ ಆ ಹಣವನ್ನು ಆ ಪ್ರಾಂತ್ಯದ ಏಳಿಗೆಗಾಗಿ ಉಪಯೋಗಿಸುವಂತೆ ಯೋಜಿಸಿದ ಸರ್ಕಾರ ಇದನ್ನು ನಿಭಾಯಿಸಲು ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿಗೆ ವೀರಣ್ಣಗೌಡರನ್ನು ಅಧ್ಯಕ್ಯರನ್ನಾಗಿ ಮಾಡಿತು. ಆ ಅವಧಿಯಲ್ಲಿ ಮಂಡ್ಯದ ಸಕ್ಕರೆ ಕಾರ್ಖಾನೆಯ ಬಳಿ

ಮತ್ತು ಮಂಡ್ಯಜಿಲ್ಲೆಯ ಬಹುತೇಕ ಗ್ರಾಮಗಳಿಗೆ ರಸ್ತೆಗಳ ನಿರ್ಮಾಣ ಮಾಡಿದರು. ಅಲ್ಲದೆ ಭೂ ಸುಧಾರಣಾ ಕಾನೂನಿನ ವಿಷಯದಲ್ಲಿ ಸಾರ್ವಜನಿಕರ ಅಭಿಪ್ರಾಯವನ್ನು ಕ್ರೋಢಿಕರಿಸಲು ರೈತ ಕಾರ್ಮಿಕ ಸಂಘವನ್ನು ಸ್ಥಾಪಿಸಿದರು. ವೀರಣ್ಣಗೌಡರು ಅದರ ಅಧ್ಯಕ್ಷರು. ಅದರ ಕೆಲಸಕ್ಕಾಗಿ ಬೆಂಗಳೂರಿನಲ್ಲಿ ಸುತ್ತಾಡುತ್ತಿದ್ದಾಗ ಅವರಿಗೆ ಎದೆನೋವು ಕಾಣಿಸಿಕೊಂಡು ತಕ್ಷಣ ಆಸ್ಪತ್ರೆಗೆ ಸೇರಿಸಲ್ಪಟ್ಟರು. ಖಾಯಿಲೆಯು ಉಲ್ಬಣವಾಗಿಯೇ ಇತ್ತು. ಈ ಮಧ್ಯೆ ಗೊತ್ತು ಮಾಡಿದ್ದ ದಿವಸ ಸಭೆ ನಡೆಯಲೇ ಬೇಕಾಗಿತ್ತು. ಆ ದಿನ ಸಭೆಗೆ ಹೋಗಲೇ ಬೇಕೆಂದು ವೈದ್ಯರೆಷ್ಟು ಹೇಳಿದರೂ ಕೇಳದೆ, ಡಾಕ್ಟರುಗಳ ಸಹಾಯದಿಂದ ಸಭೆಗೆ ಹೋಗಿ ಭಾಷಣವನ್ನು ಓದಿಸಿ ಆಸ್ಪತ್ರೆಗೆ ಹಿಂದಿರುಗಿದರು. ಇದು ಅವರ ಕರ್ತವ್ಯನಿಷ್ಠೆಗೆ ಸಾಕ್ಷಿಯಾಗಿದೆ.

ವೀರಣ್ಣಗೌಡರದು ಹೋರಾಟದ ಬದುಕು. ಯಾರಿಗೂ ಎಂದೂ ತಲೆಬಾಗದೆ ಬದುಕಿದ್ದರು. ಅವರು ತಲೆಬಾಗಿದ್ದು ಮಹಾವ್ಯಕ್ತಿಗಳಿಗೆ, ಮಹಾತ್ಮರಿಗೆ. ವ್ಯಕ್ತಿಗತ ಪ್ರತಿಷ್ಠೆ ಕೊನೆಯಲ್ಲಿ ಅವರ ಅಭಿವೃದ್ಧಿಯನ್ನು ಕುಂಠಿತಗೊಳಿಸಿತು. ಗೌಡರು ಜನಾನುರಾಗಿಯಾಗಿದ್ದರೂ ಬಹುಜನಪ್ರಿಯ ವ್ಯಕ್ತಿಯಲ್ಲ. ಅವರನ್ನು ಕಂಡರೆ ಜನರಿಗೆ ಭಯಮಿಶ್ರಿತ ಭಕ್ತಿ ಗೌರವ. ಅದಕ್ಕೆ ಕಾರಣ ಅವರಿಗೆ ಮುಂಗೋಪ ಹೆಚ್ಚು. ಬೇಗನೆ ಕಿರಿಕಿರಿಗೊಳಗಾಗುತ್ತಿದ್ದರು. ಹೆಚ್ಚು ಮಾತು, ಕಡಿಮೆ ಕೆಲಸ, ಅತಿ ನಿಧಾನ ಅಪ್ರಾಮಾಣಿಕತೆಗಳನ್ನು ಕಂಡರೆ ಬೆಂಕಿ ಕಾರುತ್ತಿದ್ದರು. ಖಂಡಿತವಾದಿಯಾಗಿದ್ದರು, ಎಲ್ಲವೂ ಕ್ರಮಬದ್ಧವಾಗಿರಬೇಕು ಎಂದು ಶ್ರಮಿಸುತ್ತಿದ್ದರು. ತಮಗಿಂತಲೂ ಹೆಚ್ಚಿನ ಗುಣ ಸಾಧಿಸಿದರೆ ಮೆಚ್ಚುವ ಔದಾರ್ಯವಿತ್ತು. ಸುಳ್ಳು, ಲಂಚ ಇತ್ಯಾದಿ ಆಗದು. ರಾಜಿಯಾಗುವ ಸ್ವಭಾವದವರಲ್ಲ. ಈ ರೀತಿಯ ಹಲವಾರು ನಿಯಮಗಳಿಗೆ ಬದ್ಧರಾದುದರಿಂದಲೂ ಅವರಿಗೆ ಆತ್ಮೀಯರ ಸಂಖ್ಯೆ ಹೆಚ್ಚುವುದಿರಲಿ, ವಿರೋಧಿಗಳ ಸಂಖ್ಯೆ ಏರುತ್ತಲೇ ಇತ್ತು. ಸಾಮಾಜಿಕ ಮಾರ್ಪಾಟುಗಳ ಬಗೆಗೆ ಅವರಿಗೆ ಪೂರ್ಣವಾದ ಅರಿವಿತ್ತು. ಇನ್ನೊಂದು ಮಾರ್ಗದಲ್ಲಿ ಒಳ್ಳೆಯದು ಕಂಡರೆ ಅದನ್ನು ತಮ್ಮಲ್ಲಿ ಅಳವಡಿಸಿಕೊಳ್ಳುವ ಆಸೆಯೂ ಔದಾರ್ಯವೂ ಇತ್ತು. ಅವರಿಗೆ ಸಮಾಜದ ಪರಿಷ್ಕರಣದಲ್ಲಿ ಆಸಕ್ತಿ, ಡೊಂಕನ್ನು ಹೇಳುವಾಗಲೂ ಸಹಾನುಭೂತಿ ಇರುತ್ತಿತ್ತು. ಇನ್ನೊಬ್ಬರ ತಪ್ಪನ್ನು ಟೀಕಿಸುವಾಗಲೂ ಬೈದು ತಿದ್ದುವಾಗಲೂ ಹೀಗಾಯಿತಲ್ಲಾ ಎಂಬ ಸಂಕಟವೂ ಪರಿತಾಪವೂ ಇರುತ್ತಿತ್ತು. ಹೆಚ್.ಕೆ.ವೀರಣ್ಣಗೌಡರ ವ್ಯಕ್ತಿತ್ವ ಅವರ ಕಾರ್ಯಗಳಲ್ಲಿ ಕಂಡು ಬರುತ್ತದೆ. ಸ್ನೇಹಪರರಾದರೂ ಖಂಡಿತವಾದಿಗಳಾಗಿದ್ದರು ಎಂಬುದಕ್ಕೆ ಗೌಡರ ಮತ್ತು ಎಸ್.ನಿಜಲಿಂಗಪ್ಪನವರ ಸಂಬಂಧವೇ ಸಾಕ್ಷಿಯಾಗಿದೆ. ಪತ್ರಿಕೆಯ ಕೆಲಸವಾಗಲಿ, ಸಂಘಟನೆಯ ಕೆಲಸವಾಗಲಿ, ರಾಜಕೀಯ ಓಡಾಟವಾಗಲಿ ಮನಪೂರ್ತಿಯಾಗಿ ಶ್ರದ್ಧೆಯಿಂದ ಸಾಮರ್ಥ್ಯದಿಂದ ನಿರ್ವಹಿಸುವುದೇ ಅವರ ಜೀವನದ ಪರಮ ಗುರಿಯಾಗಿತ್ತು. ಹೀಗೆ ೭೭ ವರ್ಷಗಳ ತಮ್ಮ ಪೂರ್ಣ ಜೀವನವನ್ನು ಸಾರ್ವಜನಿಕ ಜೀವನದಲ್ಲಿಯೇ ಕ್ರಿಯಾಶೀಲರಾಗಿ ಕಳೆದರು. ನಿರಂತರ ಓಡಾಟ, ಚಿಂತನೆ, ಕೆಲಸ, ಸಂಘಟನೆ, ಬರಹ ಇವುಗಳ ನಡುವೆಯೂ ಅಚ್ಚಳಿಯದ ಜೀವನ, ಕಲೆ, ನಾಟಕ, ಗೆಳೆತನ, ಹಾಸ್ಯಗಳನ್ನು ಸವಿದು ಆನಂದಿಸಿ ನಲಿದರು. ನಲಿವನ್ನು ಹಂಚುವ ಉದಾರ ಸಹೃದಯತೆಯನ್ನು ಹೊಂದಿದ್ದ

ವೀರಣ್ಣಗೌಡರು ತಮ್ಮ ವರಟುತನದಿಂದ ಶತೃಗಳನ್ನು ಹೆಚ್ಚಿಸಿಕೊಂಡರು. ನಿರಾಳವಾದ ನೇರ ನಡೆ ಅವರದಾಗಿತ್ತು.

ಹೀಗೆ ವೀರಣ್ಣಗೌಡರು ಶಿಕ್ಷಣ, ಸಾಹಿತ್ಯ, ರಾಜಕೀಯ ಕ್ಷೇತ್ರಗಳಲ್ಲಿ ತಮ್ಮದೇ ಆದ ಕೊಡುಗೆ ನೀಡಿರುವುದರ ಮೂಲಕ ಕರ್ನಾಟಕದ ಜನಮನದಲ್ಲಿ ನೆಲೆಯೂರಿದ್ದಾರೆ.

ಪ್ರಸ್ತುತ ಜನಮನದಲ್ಲಿ ವೀರಣ್ಣಗೌಡರು: ವೀರಣ್ಣಗೌಡರು ತಮ್ಮ ಜೀವಿತದ ಅಂತ್ಯ ಕಾಲದಲ್ಲಿ ರಾಜಕೀಯದಿಂದ ದೂರವಾಗಿ ರೈತ ಸಂಘದಲ್ಲಿ ಸಕ್ರಿಯರಾಗಿದ್ದ ಸಂದರ್ಭದಲ್ಲಿ ಹೃದಯಾಘಾತಕ್ಕೆ ತುತ್ತಾಗಿ ಆಸ್ಪತ್ರೆ ಸೇರಿದರು. ತಮ್ಮ ರಾಜಕೀಯ ಜೀವನದ ಅಂತ್ಯದ ವೇಳೆಗೆ ವಿಶ್ವಾಸಘಾತುಕರನ್ನು ಕಂಡಂತೆ ವೀರಣ್ಣಗೌಡರಿಗೆ ತಮ್ಮ ಖಾಸಗಿ ಜೀವನದಲ್ಲಿಯೂ ತಾವೇ ಆಶ್ರಯ ನೀಡಿದವರ ದ್ರೋಹಕ್ಕೆ ತುತ್ತಾಗಬೇಕಾಯಿತು. ಅವರು ನೆರವು ನೀಡಿ ಬೆಳೆಸಿದ ಸಂಬಂಧಿಕರಲ್ಲಿ ಕೆಲವರು ಇಂದು ವೀರಣ್ಣಗೌಡರಿಗೆ ಹೆಚ್ಚು ಆಸ್ಥೆಯಿದ್ದ ಕ್ಷೇತ್ರವಾದ ಶಿಕ್ಷಣ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಮೇರಿಕಾದ ವಾಸಿಗಳಾಗಿರುವ ವೀರಣ್ಣಗೌಡರ ಕಿರಿಯ ಸಹೋದರ ಡಾ.ಹೆಚ್.ಕೆ.ಮರಿಯಪ್ಪನವರು ತಮ್ಮ ಅಣ್ಣನವರ ಬಗ್ಗೆ ಅಪಾರ ಅಭಿಮಾನ ಗೌರವ ಹೊಂದಿದ್ದಾರೆ. ಹಾಗಾಗಿ ಗೌಡರ ನಿರ್ವಂಚನೆಯ ನೆರವಿನ ನೆರಳಲ್ಲಿ ಬೆಳೆದ ಡಾ.ಮರಿಯಪ್ಪನವರು 'ಹೆಚ್.ಕೆ.ವೀರಣ್ಣಗೌಡ ಪ್ರತಿಷ್ಠಾನ' ಸ್ಥಾಪಿಸಿ, ಅದರ ಆಶ್ರಯದಲ್ಲಿ ಹಳ್ಳಿಗರಿಗೆ ಅದರಲ್ಲೂ ಮಹಿಳೆಯರು ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸುವ ಸಾಮಾಜಿಕ ಕಾರ್ಯವನ್ನು ಮಾಡುತ್ತಿರುವ ಜೊತೆಗೆ ಶಿಕ್ಷಣ ಕ್ಷೇತ್ರಕ್ಕಾಗಿ ತಮ್ಮ ಸಹಾಯ ಹಸ್ತವನ್ನು ನೀಡುತ್ತಿದ್ದಾರೆ. ಚನ್ನಪಟ್ಟಣದಲ್ಲಿ ಪ್ರೈಮರಿ, ಶಿಶುವಿಹಾರಗಳನ್ನು ಪ್ರಾರಂಭಿಸಲು ತಮ್ಮ ಜಮೀನನ್ನು ನೀಡಿರುವುದರ ಜೊತೆಗೆ ಕಟ್ಟಡದ ನಿರ್ಮಾಣಕ್ಕೂ ಆರ್ಥಿಕ ಸಹಾಯವನ್ನು ನೀಡಿದ್ದಾರೆ. ಅಲ್ಲದೆ ಮದ್ದೂರಿನಲ್ಲಿ ಹೆಚ್.ಕೆ.ವೀರಣ್ಣಗೌಡ ಕಾಲೇಜು ಪದವಿ ಕಾಲೇಜಿನ ಕಟ್ಟಡ ನಿರ್ಮಾಣಕ್ಕೂ ಆರ್ಥಿಕ ನೆರವು ನೀಡಿದ್ದಾರೆ. ಹಾಗೆಯೇ ಚನ್ನಪಟ್ಟಣ ತಾಲ್ಲೂಕಿನಲ್ಲಿ ಏಳು ಸರ್ಕಾರಿ ಶಾಲೆಗಳನ್ನು ಮತ್ತು ಕನಕಪುರ ತಾಲ್ಲೂಕಿನಲ್ಲಿ ಒಂದು ಸರ್ಕಾರಿ ಶಾಲೆಯನ್ನು ದತ್ತು ಸ್ವೀಕರಿಸಿ ಪೀಠೋಪಕರಣ, ಪುಸ್ತಕ ಭಂಡಾರ, ಕ್ರೀಡಾ ಪರಿಕರಗಳು, ಮಕ್ಕಳಿಗೆ ಪುಸ್ತಕಗಳು, ಕಟ್ಟಡ, ಪೇಂಟಿಂಗ್ ಇತ್ಯಾದಿ ಅನುಕೂಲಮಾಡಿ, ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿದ್ದಾರೆ. ಇನ್ನೊಬ್ಬ ಸಂಬಂಧಿ ಕೆ.ಟಿ.ಚಂದು ಅವರು ಸಹ ಮದ್ದೂರಿನಲ್ಲಿ ಹೆಚ್.ಕೆ.ವೀರಣ್ಣಗೌಡ ಕಾಲೇಜಿನ ವ್ಯವಸ್ಥಾಪಕ ನಿರ್ದೇಶಕರಾಗಿ ಶಿಕ್ಷಣ ಕ್ಷೇತ್ರದಲ್ಲಿ ಮತ್ತಷ್ಟು ಕಾರ್ಯವನ್ನು ಮಾಡುತ್ತಿದ್ದಾರೆ. ಚನ್ನಪಟ್ಟಣದಲ್ಲೂ ಪ್ರೈಮರಿ, ಮಾಧ್ಯಮಿಕ ಶಾಲೆಗಳ ಜೊತೆಗೆ ಪದವಿಪೂರ್ವ ಕಾಲೇಜನ್ನು ಪ್ರಾರಂಭಿಸಿ ಗ್ರಾಮೀಣ ವಿದ್ಯಾರ್ಥಿಗಳ ನೆರವಿಗೆ ನಿಂತಿರುವ ವೀರಮಲ್ಲೇಶ್ ಎಂಬುವವರು ಹೆಚ್.ಕೆ.ವೀರಣ್ಣಗೌಡರ ತಮ್ಮನ ಮಗ. ಒಟ್ಟಾರೆ ವೀರಣ್ಣಗೌಡರ ನೆರವಿನಿಂದ ಜೀವನ ರೂಪಿಸಿಕೊಂಡಿರುವ ಈ ಕೆಲವರಾದರೂ ಗೌಡರ ಹೆಸರಿನಲ್ಲಿ ಕೈಗೊಂಡಿರುವ ಈ ಸಾಮಾಜಿಕ ಸೇವೆಗಳು ಗೌಡರ ವ್ಯಕ್ತಿತ್ವದ ಬಗ್ಗೆ ಇತರರಿಗೆ ಮಾರ್ಗದರ್ಶಕವಾಗಿವೆ.

ಸಂಬಂಧಿಕರಲ್ಲದೆ ವೀರಣ್ಣಗೌಡರ ಸೇವೆಯನ್ನು ಪರಿಗಣಿಸಿ ಅವರ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸಲು ಸರ್ಕಾರವೂ ಸಹ ಮುಂದಾಗಿದೆ. ೧೯೯೯ರಲ್ಲಿ ವೀರಣ್ಣಗೌಡರ ಶತಮಾನೋತ್ಸವ

ಸಂದರ್ಭದಲ್ಲಿ ಮದ್ದೂರು ಪುರಸಭೆ ವ್ಯಾಪ್ತಿಯ ವಾರ್ಡ್ ನಂ-೧ರ ಅಂದರೆ ಚನ್ನೇಗೌಡನ ದೊಡ್ಡಿಯಿಂದ ಟಿ.ಬಿ.ಸರ್ಕಲ್‌ವರೆಗಿನ ಪ್ರದೇಶವನ್ನು 'ಹೆಚ್.ಕೆ.ವೀರಣ್ಣಗೌಡರ ನಗರ'ವೆಂದು ನಾಮಕರಣ ಮಾಡಿ ಗೌರವ ಸೂಚಿಸಿದೆ. ಅಲ್ಲದೆ ಮಂಡ್ಯದ ಎಸ್ಪಿ ಕಛೇರಿ ರಸ್ತೆಗೆ ಹೆಚ್.ಕೆ.ವೀರಣ್ಣಗೌಡರ ಹೆಸರಿಡಲಾಗಿದೆ.

ವ್ಯಕ್ತಿಗಿಂತ ವ್ಯಕ್ತಿತ್ವ ಮುಖ್ಯ ಎಂಬುದಾದರೆ ಹಾಗು ಆ ವ್ಯಕ್ತಿತ್ವಗಳ ಮಾರ್ಗದರ್ಶನ ಸದಾ ಕಾಲಕ್ಕೂ ಆದರ್ಶಪ್ರಾಯವಾದುದಾದರೆ ಅದನ್ನು ಜನಮನದಲ್ಲಿ ಹಸಿರಾಗಿಸಿ ಮುಂದಿನ ಪೀಳಿಗೆಗೆ ಕೊಡುಗೆಯಾಗಿ ನೀಡಬೇಕಾಗಿರುವುದೇ ಈ ಅಧ್ಯಯನದ ಉದ್ದೇಶವಾಗಿದೆ.



ಶ್ರೀ ಹೆಚ್. ಕೆ. ವೀರಣ್ಣಗೌಡರು
ತಮ್ಮ ಪತ್ನಿ ಶ್ರೀಮತಿ ತಾಯಮ್ಮನವರೊಂದಿಗೆ



ತಾಯಿ ಶ್ರೀಮತಿ ಕೆಂಪಮ್ಮ
ಕಿರಿಯ ತಮ್ಮ ಡಾ. ಹೆಚ್.ಕೆ. ಮರಿಯಪ್ಪ



ತಂದೆ ಶ್ರೀ ಕೆಂಚೇಗೌಡರು



ಶ್ರೀ ಹೆಚ್.ಕೆ. ವೀರಣ್ಣಗೌಡರು ಮತ್ತು ಜಿ. ನಾರಾಯಣರೊಂದಿಗೆ
(೧೯೪೭)



ಶಿವಪುರ ಧ್ವಜ ಸತ್ಯಾಗ್ರಹ ೧೯೩೮ :
ಶ್ರೀ ಹೆಚ್.ಕೆ. ವೀರಣ್ಣಗೌಡರು ಮತ್ತು ಇತರರು
ಹಿಂದೆ ಬ್ಯಾನರ್ ಸತ್ಯಾಗ್ರಹಾಶ್ರಮ, ಶಿವಪುರ



ಶ್ರೀ ಜಯಚಾಮರಾಜೇಂದ್ರ ಒಡೆಯರ್
ಶ್ರೀ ಜವಹರ್‌ಲಾಲ್ ನೆಹರು
ಶ್ರೀಮತಿ ಇಂದಿರಾಗಾಂಧಿಯವರೊಡನೆ
ಶ್ರೀ ಹೆಚ್.ಕೆ. ವೀರಣ್ಣಗೌಡರು
ಮಾತನಾಡುತ್ತಿರುವುದು



ಸದಾಶಿವನಗರ ಕಾರ್ಯಾಲಯ
ಕಾಂಗ್ರೆಸ್ ಅಧಿವೇಶನ
ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದ
ಶ್ರೀ ಹೆಚ್.ಕೆ. ವೀರಣ್ಣಗೌಡರು



ಶ್ರೀ ಹೆಚ್.ಕೆ. ವೀರಣ್ಣಗೌಡ
ಶ್ರೀ ಹಳ್ಳಿಕೇರಿ ಗುದ್ಲಪ್ಪ
ಶ್ರೀ ರಾಮಕೃಷ್ಣ ಹೆಗಡೆ
ಶ್ರೀಮತಿ ಇಂದಿರಾಗಾಂಧಿ
ಶ್ರೀ ಜವಹರಲಾಲ್ ನೆಹರು ಅವರು



ಶ್ರೀ ಕೊಲ್ಲೂರು ಮಲ್ಲಪ್ಪ
ಶ್ರೀ ಎಸ್. ನಿಜಲಿಂಗಪ್ಪ
ಶ್ರೀ ಹೆಚ್.ಕೆ. ವೀರಣ್ಣಗೌಡ ಮತ್ತು
ಶ್ರೀ ಕಾಮರಾಜ ನಾಡಾರ್ ಅವರು



ಬೆಂಗಳೂರು ಸದಾಶಿವನಗರದಲ್ಲಿ
ನಡೆದ ಕಾಂಗ್ರೆಸ್ ಅಧಿವೇಶನ
ಸಂದರ್ಭ (೧೯೬೦)
ಸೇವಾದಳದ ಅಧಿಕಾರಿ
ಶ್ರೀಮತಿ ಇಂದಿರಾಗಾಂಧಿ
ಶ್ರೀ ನೀಲಂ ಸಂಜೀವರೆಡ್ಡಿ
ಶ್ರೀ ಜವಹರಲಾಲ್ ನೆಹರು
ಶ್ರೀ ಭೀಮಪ್ಪ ನಾಯಕ್ ಮತ್ತು
ಶ್ರೀ ಹೆಚ್.ಕೆ. ವೀರಣ್ಣಗೌಡರು



ಸದಾಶಿವನಗರ, ಕಾಂಗ್ರೆಸ್
ಅಧಿವೇಶನದ ವೇದಿಕೆ ಹಿನ್ನೆಲೆ
ಪುಷ್ಪದಲ್ಲಿ ವಿಧಾನಸೌಧ
ದೃಶ್ಯಾಲಂಕಾರ
ನೀಲಂ ಸಂಜೀವ ರೆಡ್ಡಿ
ಹೆಚ್.ಕೆ. ವೀರಣ್ಣಗೌಡರು



ಶ್ರೀ ವೈಕುಂಠ ಬಾಳಿಗ, ಡಾ. ಅಡಕೆ
ಶ್ರೀ ಹೆಚ್.ಕೆ. ವೀರಣ್ಣಗೌಡರು
(ಹ್ಯಾಟ್ ಧರಿಸಿರುವವರು,
ಪಿ.ಡಬ್ಲ್ಯೂಡಿ. ಮಂತ್ರಿಯಾಗಿದ್ದಾಗ)
ಮುಖ್ಯ ಎಂಜಿನಿಯರ್
ಶ್ರೀ ಗಣೇಶನ್



ಶ್ರೀ ಬಿ.ಡಿ. ಜತ್ತಿ
ಶ್ರೀ ಹೆಚ್.ಕೆ. ವೀರಣ್ಣಗೌಡ
ಮತ್ತು ಶ್ರೀ ನೀಲಂ ಸಂಜೀವರೆಡ್ಡಿ
ಅವರೊಂದಿಗಿನ ಮಾತುಕತೆಯಲ್ಲಿ



೧೯೭೩–ಪ್ರಥಮ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ
ಮದ್ದೂರು
ಶ್ರೀ ಜಿ. ಮಾದೇಗೌಡ, ಶ್ರೀ ಹೆಚ್.ಕೆ. ವೀರಣ್ಣಗೌಡ
ಶ್ರೀ ತಿ.ತಾ. ಶರ್ಮ, ಶ್ರೀ ಕೆ.ವಿ. ಶಂಕರಗೌಡ
ಶ್ರೀ ಜಿ. ನಾರಾಯಣ, ಶ್ರೀ ಎಸ್.ಎಂ. ಕೃಷ್ಣ
ಶ್ರೀ ಎಂ. ಮಂಚೇಗೌಡ



ಡಾ. ರಾಜಕುಮಾರ್ ಅವರಿಗೆ
ಶ್ರೀ ಹೆಚ್.ಕೆ. ವೀರಣ್ಣಗೌಡರಿಂದ
ಸನ್ಮಾನ



ಅರ್ಜುನಪುರಿ ಕಾಲೇಜು ಆವರಣದಲ್ಲಿ
ನಾಟಕ ಪ್ರದರ್ಶನ ಸಂದರ್ಭದಲ್ಲಿ
ಶ್ರೀ ಹೆಚ್.ಕೆ. ವೀರಣ್ಣಗೌಡರು
ನ್ಯಾಯಾಧೀಶನ ಪಾತ್ರ ವಹಿಸಿದ್ದರು



ಸಹೋದರರೊಡನೆ
ಶ್ರೀ ಹೆಚ್.ಕೆ. ಕೃಷ್ಣಪ್ಪ
ಶ್ರೀ ಹೆಚ್.ಕೆ. ಪುಟ್ಟಯ್ಯಗೌಡ
ಶ್ರೀ ಹೆಚ್.ಕೆ. ವೀರಣ್ಣಗೌಡ
ಶ್ರೀ ಹೆಚ್.ಕೆ. ಪುಟ್ಟಸ್ವಾಮಿಗೌಡ



ಶ್ರೀ ಹೆಚ್.ಕೆ. ವೀರಣ್ಣಗೌಡರು
ಮದ್ದೂರಿನಲ್ಲಿ ಪ್ರಾರಂಭಿಸಿದ
ಕಮಲಾನೆಹರು ಪ್ರೌಢಶಾಲೆ




ಮದ್ದೂರು :
ಹೆಚ್.ಕೆ. ವೀರಣ್ಣಗೌಡ
ಕಾಲೇಜು



ಅಕ್ಕೂರು ಹೊಸಹಳ್ಳಿ
ಪ್ರಾಥಮಿಕ ಆರೋಗ್ಯ ಕೇಂ
ಉದ್ಘಾಟನೆ :
ಶ್ರೀ ಜಯಚಾಮರಾಜೇಂದ್ರ
ಒಡೆಯರ್ ೨೭-೧-೧೯೬



ಡಾ॥ ಹೆಚ್.ಕೆ. ಮರಿಯಪ್ಪನವರು
ಕಟ್ಟಿಸಿದ ಕಸ್ತೂರಿ ಬಾ ಹಿರಿಯ
ಪ್ರಾಥಮಿಕ ಶಾಲೆಯ ಒಂದು ನೋಟ




ಶ್ರೀ ಹೆಚ್.ಕೆ. ವೀರಣ್ಣಗೌಡರ
ಶತಮಾನೋತ್ಸವದ ಸಂದರ್ಭ ೧
ಮಂಡ್ಯದಲ್ಲಿ ಎಸ್.ಪಿ. ಕಛೇರಿ ರಸ್
ಶ್ರೀ ಹೆಚ್.ಕೆ. ವೀರಣ್ಣಗೌಡರ
ಹೆಸರಿನ ನಾಮಕರಣ
ಶ್ರೀ ಜಿ. ಮಾದೇಗೌಡರು
ಶ್ರೀ ಪಿ.ಎನ್. ಜವರಪ್ಪಗೌಡರು
ಶ್ರೀ ಎಚ್.ಡಿ. ಚೌಡಯ್ಯನವರು
ಶ್ರೀ ಎ.ಸಿ. ಮಾದೇಗೌಡರು ಮತ್ತಿ

ಶ್ರೀ ಹೆಚ್.ಕೆ. ವೀರಣ್ಣಗೌಡ ಪ್ರತಿಷ್ಠಾನದ ಅಧ್ಯಕ್ಷರು ಮತ್ತು ಸದಸ್ಯರು : ಶ್ರೀ ಕೆ.ಎಲ್. ಶಿವಲಿಂಗೇಗೌಡ
ಶ್ರೀ ಪಿ.ಎನ್. ಜವರಪ್ಪಗೌಡ, ಶ್ರೀ ಎಚ್.ಪಿ. ರಾಮಕೃಷ್ಣ, ಡಾ. ದೇ. ಜವರೇಗೌಡ
ಡಾ. ಹೆಚ್.ಕೆ. ಮರಿಯಪ್ಪ (ಅಧ್ಯಕ್ಷರು), ಶ್ರೀ ಜೆ. ನಾರಾಯಣ (ಕಾರ್ಯಾಧ್ಯಕ್ಷರು)
ಶ್ರೀ ಬಿ.ಎಲ್. ಲಕ್ಕೇಗೌಡ (ಬಲದಿಂದ ಮೂರನೆಯವರು), ಶ್ರೀ ಕೆ.ಟಿ. ಚಂದು, ಶ್ರೀ ಬಿ.ಟಿ. ಪುಟ್ಟಪ್ಪ

ಶ್ರೀ ಹೆಚ್.ಕೆ. ವೀರಣ್ಣಗೌಡರ ಮದ್ದೂರ ತೋಟದ ಮನೆ

ಮೈಸೂರು ವಿಲೀನ ವಿರೋಧ ಸಮ್ಮೇಳನ ಸ್ವಾಗತ ಸಮಿತಿ, ಮಂಡ್ಯ.

ಕೆ. ವಿ. ಶಂಕರಗೌಡ, ಬಿ.ಎಸ್‌ಸಿ., ಎಲ್‌ಎಲ್.ಬಿ.,
ಅಧ್ಯಕ್ಷರು
ಎಂ. ಮಲ್ಲಯ್ಯ, ಎಂ.ಎ., ಬಿ.ಎಲ್.,
ಎಸ್. ಎ. ಚನ್ನೇಗೌಡ, ಎಂ.ಎ.,
ಎಂ. ಬಸವಯ್ಯ,
ಎಂ. ವಿ. ರಾಮಚಂದ್ರಶೆಟ್ಟಿ,
ಉಪಾಧ್ಯಕ್ಷರು.

ಕೆ. ರಾಮೇಗೌಡ, ಬಿ.ಎಸ್‌ಸಿ., ಎಲ್
ಪಿ. ಶ್ರೀನಿವಾಸಯ್ಯ, ಬಿ.ಎ.
ಕಾರ್ಯದರ್ಶಿಗಳು.

ತಾ|| 6th Jan......

Dear Sir,

You have been selected by the President to be the member
the Standing Committee of the "Anti Merger of Mysore" with "Ka
as decided on 1st January 1956 at Mandya Conference. The comm
meets on 10th January 1956 at the Ryots' Multipurpose Co-opera
Society, Ltd., Mandya at 2-00 P.M. You are requested to be p
on that day to discuss future course of action.

Thanking you,

Yours Sincerely,

K. Rama Gowda.
CONVENER. 6/1/5

To
Sri. H. K. Veeranna Gowda
MLA
Maddur

೧೯೫೬ರ ಮೈಸೂರು ವಿಲೀನ ವಿರೋಧ ಸಮ್ಮೇಳನ ಸ್ವಾಗತ ಸಮಿತಿಯವರು
ಹೆಚ್.ಕೆ. ವೀರಣ್ಣಗೌಡರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ ಬಗ್ಗೆ ಬರೆದ ಪತ್ರ

ವಿಶಾಲ ಮೈಸೂರಿನ ಸಾರ್ವಜನಿಕ ನಿರ್ಮಾಣ ಮತ್ತು ವಿದ್ಯುಚ್ಛಕ್ತಿ ಶಾಖೆಯ
ಮಾನ್ಯ ಸಚಿವರಾದ

# ಶ್ರೀಮಾನ್ ಹೆಚ್. ಕೆ. ವೀರಣ್ಣಗೌಡ

ಅವರ ಸನ್ನಿಧಿಯಲ್ಲಿ

**ಮದ್ದೂರು ಪುರಸಭೆಯ ಅಧ್ಯಕ್ಷರು ಮತ್ತು ಸದಸ್ಯರುಗಳು ಕೃತಜ್ಞತಾಪೂರ್ವಕವಾಗಿ**

## ಅರ್ಪಿಸಿದ ಬಿನ್ನವತ್ತಳೆ

ಮಾನ್ಯ ಮಂತ್ರಿವರ್ಯರೇ,

ಈ ಕ್ಷೇತ್ರದ ಪ್ರಜಾಕೋಟಿಯ ಪೂರ್ಣ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ ಅಧಿಕ ಅಭಿಮತವನ್ನು ಗಳಿಸಿ ಆರಿಸಿ ಬಂದು ನಮ್ಮ ರಾಜ್ಯದ ಸಚಿವ ಮಂಡಲಿಯಲ್ಲಿ ಶಿಲ್ಪ ಶಾಖಾ ಮಂತ್ರಿಗಳಾಗಿ ಅಧಿಕಾರವನ್ನು ಸ್ವೀಕರಿಸಿದ ನಂತರ ಅಧಿಕೃತರೀತಿಯಿಂದ ಪ್ರಪ್ರಥಮವಾಗಿ ಸಾರ್ವಜನಿಕ ಸಮಾರಂಭವೊಂದರಲ್ಲಿ ಭಾಗವಹಿಸಲು ತಮ್ಮ ಪ್ರೀತಿಪಾತ್ರವಾದ ಈ ಪಟ್ಟಣಕ್ಕೆ ದಯಮಾಡಿಸಿರುವ ತಮ್ಮನ್ನು ಸ್ವಾಗತಿಸುವಂತಹ ಸುಯೋಗವು ಲಭಿಸಿದುದರಿಂದ ನಮಗೆ ಆಗಿರುವ ಆನಂದಾತಿಶಯಗಳನ್ನು ವರ್ಣಿಸಲಾರೆವು. ಇಂದು ತಾವು ವಹಿಸಿರುವ ಉನ್ನತವಾದ ಪದವಿಯು ತಮ್ಮಲ್ಲಿರುವ ಅಸಂಖ್ಯಾತವಾದ ಗುಣಗಳಿಗೆ ನಾಡು ಮನಸೋತು ತಮಗೆ ಸಂತೋಷದಿಂದ ಸಮರ್ಪಿಸಿರುವ ಕೃತಜ್ಞತೆಯ ಸಾಕಾರರೂಪವೆಂದು ಎಣಿಸುತ್ತೇವೆ.

ಉತ್ತಮ ಸಂಸ್ಕಾರ ಸಂಪನ್ನರಾದ ತಾವು ಕನ್ನಡ, ಇಂಗ್ಲೀಷ್ ಮುಂತಾದ ಭಾಷೆಗಳಲ್ಲಿ ಮೇಲ್ಮಟ್ಟದ ನೈಪುಣ್ಯವನ್ನು ಗಳಿಸಿ ವಿದ್ಯಾರ್ಜನೆಯ ಸಮಯದಲ್ಲಿಯೇ ಚನ್ನಪಟ್ಟಣದಲ್ಲಿನ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಮುಂದಾಳುಗಳಾಗಿ ನಿಂತು ಜೊತೆಗಾರರ ಆಶೋತ್ತರಗಳನ್ನು ಪ್ರತಿಬಿಂಬಿಸಿ ಹೋರಾಡಿ ಆ ವಿದ್ಯಾರ್ಥಿ ನಿಲಯಕ್ಕೆ ಕೀರ್ತಿಯನ್ನು ತಂದುದಲ್ಲದೆ ಬಾಲಚಮೂದಳದ ಚಳುವಳಿಯಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸಿ ಆ ದಳದ ಮುಖ್ಯಾಧಿಕಾರಿಗಳಿಂದ ಉತ್ತಮವಾದ ಪ್ರಶಸ್ತಿಯನ್ನೂ ಪಡೆದಿರಿ. ಅನಂತರ ಕೇವಲ ಸೇವಾದೃಷ್ಟಿಯಿಂದ ಕೆಲವು ಕಾಲ ಅಧ್ಯಾಪಕವೃತ್ತಿಯನ್ನು ಕೈಗೊಂಡು ನಾಡಿನ ಮುಂದಿನ 'ಆಧಾರ ಸ್ತಂಭ'ಗಳೆನಿಸಿರುವ ಬಾಲಕರಿಗೆ ಉತ್ತಮ ಶಿಕ್ಷಣ ವನ್ನಿತ್ತು ಮಾರ್ಗದರ್ಶನಮಾಡಿ ತರುವಾಯ ಇನ್ನೂ ವಿಶಾಲವಾದ ಸೇವಾರಂಗವನ್ನು ಪ್ರವೇಶಿಸಿ "ಒಕ್ಕಲಿಗರ ಪತ್ರಿಕೆ", "ಚಿತ್ರಗುಪ್ತ" ಮುಂತಾದ ಪತ್ರಿಕೆಗಳ ಮುಖಾಂತರ ಜನಸಾಮಾನ್ಯರಲ್ಲಿ ಜಾಗ್ರತಿಯನ್ನುಂಟುಮಾಡಿದುದಲ್ಲದೆ, ವಿಶ್ವೇಶ್ವರಯ್ಯ ನಾಲಾ ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದ ಮಹತ್ತಾದ ಆಂದೋಳನದ ಸಂದರ್ಭದಲ್ಲಿ ನಾಲ್ಕು ಸಹಸ್ರಕ್ಕೂ ಮೇಲ್ಪಟ್ಟ ಕೃಷಿಕ ಬಂಧುಗಳ ಅಗ್ರನಾಯಕತ್ವವನ್ನು ವಹಿಸಿ ಇಂದಿನ ಪ್ರಖ್ಯಾತರಾದ ಆಚಾರ್ಯ ವಿನೋಬಾ ಅವರ ಭೂದಾನದ ಯಾತ್ರೆಗೆ ಪೂರ್ವ ಸೂಚನೆಯೋ ಎಂಬಂತೆ ಪಾದಯಾತ್ರೆಯಲ್ಲಿಯೇ ಬೆಂಗಳೂರಿಗೆ ಪ್ರಯಾಣ ಬೆಳೆಸಿ ಆಗ್ಗೆ ದಿವಾನರಾಗಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರಿಂದ ಮೇಲ್ಕಂಡ ನಾಲಾ ಪ್ರದೇಶದ ರೈತರಿಗೆ ತೆರಿಗೆಯ ಮೇಲಣ ಬಡ್ಡಿಯ ಹೊರೆಯಿಂದ ಬಿಡುಗಡೆ ದೊರಕಿಸಿಕೊಟ್ಟಿರಿ. ಅಷ್ಟೇ ಅಲ್ಲದೆ ಪುರಸಭೆ, ಜಿಲ್ಲಾ ಸಮಿತಿ, ಪ್ರಜಾಪ್ರತಿನಿಧಿ ಸಭೆ ಮುಂತಾದವುಗಳಲ್ಲಿ ಸದಸ್ಯರಾಗಿ ಅಸಾಮಾನ್ಯವಾದ ರೀತಿಯಲ್ಲಿ ಜನತಾ ಜನಾರ್ಧನನಿಗೆ ಸೇವೆಯನ್ನು ಸಲ್ಲಿಸಿ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧೀರವಾದ ಪಾತ್ರವನ್ನು ಆಸ್ಥೆಯಿಂದ ಕೈಗೊಂಡು ಕರ್ನಾಟಕ ಮಾತೆಯ ಸುಪುತ್ರರಲ್ಲಿ ಒಬ್ಬರೆಂದು ಖ್ಯಾತಿ ಗಳಿಸಿದಿರಿ. ಹಿಂದಿನ ಮೈಸೂರು ಸಂಸ್ಥಾನದಲ್ಲಿ ಪ್ರಜೆಗಳಿಗೇ ಪರಮಾಧಿಕಾರವಿರುವ ಪ್ರಭುತ್ವವನ್ನು ಸ್ಥಾಪಿಸಲೋಸುಗ ಆರಂಭವಾದ ಚರಿತ್ರಾರ್ಹವಾದ ಚಳುವಳಿಯ ಪ್ರಪ್ರಥಮ ದಿನಗಳಲ್ಲಿ ಈ ಪಟ್ಟಣದ ಉತ್ತರದ ವಿಸ್ತರಣವಾದ ಶಿವಪುರದಲ್ಲಿ ಜರುಗಿದ ಮೊಟ್ಟಮೊದಲನೆಯ ಜನತಾ ಮಹಾ ಸಭಾಧಿವೇಶನದ ಸಮಗ್ರ ಯಾಜಮಾನ್ಯವನ್ನೂ ಕೈಗೊಂಡು ನಮ್ಮ ನಾಡಿನ ಪ್ರಜಾಪ್ರಭುತ್ವ ಪದ್ಧತಿಯ ನಾಂದಿಯನ್ನು ಹಾಡಿದ ಸೂತ್ರಧಾರರೆನಿಸಿ, ನಮ್ಮ ಈ ಊರಿನ ಹೆಸರು ಅಜರಾಮರವಾಗಿ ನಿಲ್ಲುವಂತೆ ಮಾಡಿ, ತನ್ನುದರದಲ್ಲಿ ತಮಗೆ ಸ್ಥಾನವನ್ನಿತ್ತು ಪೋಷಿಸಿದ ಪುರಮಾತೆಯ ಋಣವನ್ನು ಸಲ್ಲಿಸಿ ಧನ್ಯರೆನಿಸಿದಿರಿ. ಇಂತಹ ತಮ್ಮನ್ನು ನಾವಿಂದು ಈ ಊರಿನ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖಿಸಲು ಯೋಗ್ಯವಾದ—ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀಮಾನ್ ಸಿದ್ದವನಹಳ್ಳಿ

**ಲೋಕೋಪಯೋಗಿ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ**
**ಹೆಚ್.ಕೆ. ವೀರಣ್ಣಗೌಡರಿಗೆ ಮದ್ದೂರು ಪುರಸಭೆಯ ಅಧ್ಯಕ್ಷರು ಮತ್ತು**
**ಸದಸ್ಯರುಗಳು ಕೃತಜ್ಞತಾಪೂರ್ವಕವಾಗಿ ಅರ್ಪಿಸಿರುವ ಬಿನ್ನವತ್ತಳೆ**

ನಿಜಲಿಂಗಪ್ಪ, ಬಿ.ಎ., ಎಲ್‌ಎಲ್.ಬಿ. ಅವರಿಂದ ಉದ್ಘಾಟಿಸಲ್ಪಡುವ ಜಲಸೌಕರ್ಯ ವ್ಯವಸ್ಥೆಯ ಸಮಾರಂಭ ಮತ್ತು ಅವರಿಂದಲೇ ನೆರವೇರಿಸಲ್ಪಡುವ ಈ ಊರಿನ ದಾನಶೂರರಾದ ಶ್ರೀಮತಿ ಮತ್ತು ಶ್ರೀಮಾನ್ ಗುರುಶಾಂತಪ್ಪ ಈ ಪುಣ್ಯ ದಂಪತಿಗಳ ಭಾವಚಿತ್ರಗಳನ್ನು ಅನಾವರಣಗೊಳಿಸುವ ಸಮಾರಂಭ, ಇವುಗಳಲ್ಲದೆ ಮಾನ್ಯ ಮಂತ್ರಿವರ್ಯರಾದ ಶ್ರೀಮಾನ್ ಆರ್. ಚನ್ನಿಗರಾಮಯ್ಯನವರು ಸಿಮೆಂಟ್‌ನಿಂದ ಭದ್ರಗೊಳಿಸಿದ ಅಂದವಾದ ಈ ಊರಿನ ಪ್ರಮುಖ ಮಾರ್ಗವೊಂದನ್ನು ತೆರೆಯಲಿರುವ ಸಮಾರಂಭಕ್ಕೂ ಅಧ್ಯಕ್ಷತೆಯನ್ನು ವಹಿಸಿಕೊಳ್ಳುವಂತೆ ಪ್ರಾರ್ಥಿಸಿದುದು ಬರಿಯ ಕುರುಡು ಮಮತೆಯಿಂದಲ್ಲ; ಉತ್ತಮ ಗುಣಗಳಿಗೆ ನ್ಯಾಯವಾಗಿ ಪುರಸ್ಕಾರವನ್ನು ಸಲ್ಲಿಸಬೇಕಾದ ಮಾನವತೆಗೆ ಉಚಿತವಾದ ಕರ್ತವ್ಯ ದೃಷ್ಟಿಯಿಂದ ಮಾತ್ರ. ಇದು ಅತಿಶಯೋಕ್ತಿಯಲ್ಲ, ಯಥಾರ್ಥವಾದ ಮಾತು.

ಈ ಶುಭ ಸಂದರ್ಭದಲ್ಲಿ ಈ ಪಟ್ಟಣದ ಪುರೋಭಿವೃದ್ಧಿಯನ್ನು ಅಂತರಂಗಪೂರ್ವಕವಾಗಿ ಆಶಿಸುವ ತಮ್ಮಲ್ಲಿ ಪುರ ನಿವಾಸಿಗಳ ಸೌಕರ್ಯ ದೃಷ್ಟಿಯಿಂದ ಇದು ಪರಿಪೂರ್ಣವೆನಿಸಲು ಅಡ್ಡಿಯಾಗಿರುವ ಕೆಲವು ಕುಂದು ಕೊರತೆಗಳನ್ನು ನಿವಾರಿಸಿ ಅನುಕೂಲಪಡಿಸಿಕೊಡಲು ಕೆಳಗೆ ಕಂಡಂತೆ ಕೆಲವು ಅಂಶಗಳನ್ನು ಅರಿಕೆಮಾಡಿಕೊಳ್ಳುತ್ತೇವೆ.

ಈ ಊರಿನ ರಸ್ತೆಗಳನ್ನು ಧೂಳೇಳದಂತೆ ಕೀಲೆಣ್ಣೆಯಿಂದ ಗಟ್ಟಿಮಾಡಿಸಲು 50,000 ರೂ. ಗಳನ್ನು ಸಹಾಯದ್ರವ್ಯದ ರೂಪದಲ್ಲಿತ್ತು ನೆರವಾಗಲೆಳಸುತ್ತೇವೆ.

ಆದಷ್ಟು ಶೀಘ್ರವಾಗಿ ಈ ಊರಿಗೆ ಭೂಮ್ಯಂತರ್ಗತವಾದ ಚರಂಡಿ ವ್ಯವಸ್ಥೆಯನ್ನು ಅಳವಡಿಸಿಕೊಡಲು ಪ್ರಭುತ್ವದವರು 'ನೈರ್ಮಲ್ಯ ವಿಭಾಗ' (Sanitary Division) ದವರಿಂದ ಅಂದಾಜನ್ನೂ, ನಕ್ಷೆಯನ್ನೂ ಸಿದ್ಧಪಡಿಸಿಕೊಟ್ಟು ಅದು-ಕಾರ್ಯತಃ ನೆರವೇರಲು ಅವಶ್ಯಕವಾದ ಸಹಾಯದ್ರವ್ಯವನ್ನು ಧಾರಾಳವಾಗಿ ದಯಪಾಲಿಸಬೇಕೆಂದು ವಿಜ್ಞಾಪಿಸಿಕೊಳ್ಳುತ್ತೇವೆ.

ಈ ಊರಿನ ವಿಸ್ತರಣದಿಂದ ಒಳಚರಂಡಿಯನ್ನು ಏರ್ಪಡಿಸಿ ಅದು ಕೆಮ್ಮಣ್ಣು ಕಾಲುವೆಯ ಕೆಳಗಡೆ ಹಾದು ಊರೊಳಗಿನ ಒಳಚರಂಡಿಯೊಂದಿಗೆ ಸೇರುವಂತೆ ಸೂಕ್ತವಾದ ವ್ಯವಸ್ಥೆಯನ್ನು ಕೈಗೊಳ್ಳಲು ಅವಶ್ಯಕವಾದ ಸುಮಾರು 50,000 ರೂ. ಗಳನ್ನು ಸಹಾಯದ್ರವ್ಯರೂಪವಾಗಿ ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇವೆ.

ಇಲ್ಲಿ ಹಾದುಹೋಗುವ 'ನರಿ ಕಾಲುವೆ'ಯನ್ನು ಸಾರ್ವಜನಿಕ ಕಾರ್ಯವಿಭಾಗ (P.W.D.) ದವರು ಭದ್ರಗೊಳಿಸಿ, ಅಚ್ಚುಕಟ್ಟುಮಾಡಿಸಿಕೊಡುವಂತೆ ಪ್ರಭುತ್ವದವರು ಏರ್ಪಡಿಸಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇವೆ.

ಶಿವಪುರದಲ್ಲಿರುವ ಗುಂಡಿಗಳನ್ನು ಮುಚ್ಚಲು ತನ್ನ ಪಾಲಿನ 4,160 ರೂ. ಗಳನ್ನು ಈ ಪೌರಸಭೆಯು ಕಟ್ಟಿ ಒಂದು ವರ್ಷ ಕಳೆದಿದ್ದರೂ ಇನ್ನೂ ಆ ಕಾರ್ಯವು ಆರಂಭವಾಗಿಲ್ಲದಿರುವುದರಿಂದ ಆದಷ್ಟು ಶೀಘ್ರವಾಗಿ ಮೇಲ್ಕಂಡ ಗುಂಡಿಗಳನ್ನು ಮುಚ್ಚಿಸಿಕೊಡಬೇಕೆಂದು ಮನವಿ ಮಾಡಿಕೊಳ್ಳುತ್ತೇವೆ.

ಈ ಊರಿನ ಪಶು ವೈದ್ಯಶಾಲೆಯ ಪಕ್ಕದಲ್ಲಿ, ಮೈಸೂರು–ಬೆಂಗಳೂರು ರಾಜ ಮಾರ್ಗದಲ್ಲಿರುವ ಪೆಟ್ರೋಲ್ ಬಂಕಿನಿಂದ ರೈಲ್ವೇ ಸ್ಟೇಷನ್ನಿಗೆ ಸೇರುವಂತೆ ಒಂದು ಹೊರಚ್ಚಾದ ಮಾರ್ಗವನ್ನು (Sivapura South Deviation Road) ಮಾಡಿಸಿಕೊಡಬೇಕಾಗಿ ಪ್ರಾರ್ಥಿಸುತ್ತೇವೆ. ಈ ವಿಷಯವನ್ನು ಸ್ವರ್ಗೀಯರಾದ ಶ್ರೀ ಕೆ. ಟಿ. ಭಾಷ್ಯಂ ಅವರು ಮಂತ್ರಿಗಳಾಗಿದ್ದಾಗಲೇ ಅರಿಕೆಮಾಡಿಕೊಂಡಿದ್ದೆವು. ಇದನ್ನು ಆದಷ್ಟು ಜಾಗ್ರತೆಯಾಗಿ ರಚಿಸಿಕೊಡಬೇಕಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇವೆ.

ಮಾನ್ಯರೇ, ನಮ್ಮ ಒಲವಿನ ಕರೆಗೆ ಓಗೊಟ್ಟು ಇಲ್ಲಿಯವರೆವಿಗೆ ಆಗಮಿಸಿ ಇಂದಿನ ಈ ಶುಭ ಸಮಾರಂಭದಲ್ಲಿ ನಮ್ಮೊಂದಿಗೆ ಭಾಗವಹಿಸಿ ಸೌಜನ್ಯವನ್ನೂ, ಬಂಧುಪ್ರೇಮವನ್ನೂ ಮೆರೆದ ತಮಗೆ ಹೃತ್ಪೂರ್ವಕವಾದ ಅನೇಕ ಧನ್ಯವಾದಗಳನ್ನು ಅರ್ಪಿಸುವುದಲ್ಲದೆ ತಾವು ಹೊತ್ತಿರುವ ಗುರುತರವಾದ ಕಾರ್ಯಭಾರವನ್ನು ಯಶಸ್ವಿಯಾಗಿ ನೆರವೇರಿಸಲು ತಕ್ಕುದಾದ ಸಾಮರ್ಥ್ಯವನ್ನೂ, ಆಯುರಾರೋಗ್ಯ ಐಶ್ವರ್ಯಾದಿ ಸಂಪದವನ್ನೂ ಆ ಕರುಣಾಸಾಗರನಾದ ಪರಮಾತ್ಮನು ಅನುಗ್ರಹಿಸಲೆಂದೂ ತುಂಬು ಮನಸ್ಸಿನಿಂದ ಪ್ರಾರ್ಥಿಸಿಕೊಳ್ಳುತ್ತೇವೆ.

ಮದ್ದೂರು,
ತಾ|| 31–1–1958.

ಇತಿ, ತಮ್ಮ ವಿಶ್ವಾಸಿಗಳಾದ,
ಮದ್ದೂರು ಪುರಸಭೆಯ ಅಧ್ಯಕ್ಷರು ಮತ್ತು ಸದಸ್ಯರುಗಳು.

ಮೈಸೂರು ಸಂಸ್ಥಾನದ ಮರಾಮತ್ ಶಾಖಾ ಸಚಿವರಾದ

# ಮಾನ್ಯ ಶ್ರೀ ಎಚ್. ಕೆ. ವೀರಣ್ಣಗೌಡರವರ ದಿವ್ಯ ಸನ್ನಿಧಿಯಲ್ಲಿ

ಮಂಡ್ಯ ತಾಲ್ಲೂಕು ಬಸರಾಳು ಮತ್ತು ದುದ್ದಾ ಹೋಬಳಿ, ನಾಗಮಂಗಲ ತಾಲ್ಲೂಕು
ದೊಡ್ಡಗಂಗವಾಡಿ ಗ್ರಾಮಾಂತರ ಜನರು

ಲೋಕಪಾವನಿಯ ಅಣೆಕಟ್ಟಿನ ಶಂಕುಸ್ಥಾಪನಾ ಮಹೋತ್ಸವ ಸಮಾರಂಭದಲ್ಲಿ

ಅರ್ಪಿಸಿದ

# ಮನವಿಪತ್ರ

ಮಾನ್ಯರೇ,

ನಮ್ಮ ಪ್ರಾರ್ಥನೆಗೆ ಮನ್ನಣೆಯಿತ್ತು ತಮ್ಮ ಅವಿರತ ಕಾರ್ಯಕಲಾಪಗಳ ಮಧ್ಯೆ ಬಿಡುವು ಮಾಡಿಕೊಂಡು ಈ ಅಣೆಕಟ್ಟಿನ ಅಸ್ತಿಭಾರ ಶಿಲಾಸ್ಥಾಪನ ಸಮಾರಂಭವನ್ನು ನೆರವೇರಿಸಲು ಒಪ್ಪಿ ದಯಮಾಡಿದ್ದಕ್ಕಾಗಿ ತಮಗೆ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇವೆ.

ತಾವು ಹಳ್ಳಿಗಾಡು ರೈತರ ಗೌರವಯುತ ಮನೆತನದಲ್ಲಿ ಜನಿಸಿ ವಿದ್ಯಾರ್ಜನೆಮಾಡಿ ವಿದ್ಯಾರ್ಥಿದೆಸೆಯಲ್ಲೇ ಕ್ರಾಂತಿಕಾರಪುರುಷನೆಂದು ಕಾಣಿಸಿಕೊಂಡು ಭಾರತದ ಸ್ವಾತಂತ್ರ ಸಂಗ್ರಾಮದಲ್ಲಿಯೂ ಮತ್ತು ಸಂಸ್ಥಾನದ ಜವಾಬ್ದಾರಿ ಸರಕಾರದ ಹೋರಾಟದಲ್ಲೂ ಅಹರ್ನಿಶಿ ದುಡಿದು ದೇಶದ ಆಬಾಲವೃದ್ಧರಾದಿಯಾಗಿ ಎಲ್ಲರ ಮೆಚ್ಚುಗೆ, ಪ್ರೀತಿ, ವಿಶ್ವಾಸ ಗೌರವಗಳಿಗೆ ಪಾತ್ರರಾಗಿದ್ದೀರಿ.

ಕೃಷ್ಣರಾಜಸಾಗರದ ಜಲಾಶಯದಿಂದ ವಿಶ್ವೇಶ್ವರಯ್ಯ ನಾಲಾ ಮೂಲಕ ರೈತರಿಗೆ ನೀರು ಒದಗಿಸಿದ ಕಾಲದಲ್ಲಿ ಆಗಿನ ಸರ್ಕಾರ ರೈತರ ಮೇಲೆ ಹೇರಿದ್ದ ದುಬಾರಿಯಾದ ಕಂಟ್ರ್ಯಿಬ್ಯೂಷನ್, ನೀರು ತೆರಿಗೆ, ಮತ್ತು ಹೊರಲಾರದ ಬಡ್ಡಿದರ ಇದನ್ನು ಕಂಡ ತಾವು ವಿಶ್ವೇಶ್ವರಯ್ಯ ನಾಲಾ ಪ್ರಾಂತದ ರೈತರನ್ನು ಸಂಘಟಿಸಿ, ರೈತ ತಂಡದ ಪಾದಯಾತ್ರೆ ನಡೆಸಿದುದು ಚರಿತ್ರೆಯಲ್ಲಿ ಉಲ್ಲೇಖಿಸಬಹುದಾಗಿದೆ.

ತಾವು ರಾಜಕೀಯ ಜೀವನದಲ್ಲಿ ತೋರುತ್ತಿರುವ ನೈಪುಣ್ಯತೆ, ಪ್ರತಿಭೆ, ಕೆಚ್ಚೆದೆಯ ಧೈರ್ಯ, ಕಾಂಗ್ರೆಸ್ ಸಂಸ್ಥೆಯ ಅಧ್ಯಕ್ಷರಾಗಿ ಸಾಧಿಸಿದ ಸಂಘಟನೆ ಇವುಗಳನ್ನು ದೇಶದ ಪ್ರಜಾಕೋಟಿ ಮೆಚ್ಚಿ ತಲೆದೂಗಿದೆ.

ಭಾರತದಲ್ಲಿ ಪ್ರಾಂತ್ಯದ ಪುನರ್ವಿಂಗಡನೆಯಾದ ಮೇಲೆ ಎಲ್ಲಾ ಪ್ರದೇಶಗಳ ಜಟಿಲ ಸಮಸ್ಯೆಗಳನ್ನು ಬಿಡಿಸಬಲ್ಲ ದಕ್ಷರೂ, ರೈತಬಂಧುವೂ ಆದ ತಮ್ಮನ್ನು ಮಂತ್ರಿಮಂಡಲಕ್ಕೆ ಆಹ್ವಾನಿಸಿದ ಶ್ರೀ ನಿಜಲಿಂಗಪ್ಪನವರ ದೂರದರ್ಶಿತ್ವ ಅಭಿನಂದನೀಯವಾಗಿದೆ.

ತಾವು ರಾಜ್ಯಸೂತ್ರವನ್ನು ಹಿಡಿದ ಕೇವಲ ಅಲ್ಪಕಾಲದಲ್ಲಿಯೇ ದೇಶದಲ್ಲಿ ದೊಡ್ಡ ದೊಡ್ಡ ನೀರಾವರಿ ಯೋಜನೆಗಳನ್ನು ಕಾರ್ಯಗತ ಮಾಡುವುದರಲ್ಲಿ ತೋರಿಸುತ್ತಿರುವ ಆಸಕ್ತಿ, ಮೇಧಾವಿತನ ಇಡೀ ಜನತೆಯ ಕುತೂಹಲವನ್ನು ಕೆರಳಿಸಿದೆ. ಪ್ರಜಾಸರ್ಕಾರದ ವಿಷಯದಲ್ಲಿ ಪ್ರಜೆಗಳ ಮನಸ್ಸಿನಲ್ಲಿ ಅಂಕುರಿಸಿದ್ದ ಭೀತಿ, ಅಶ್ರದ್ಧೆ ಅಳಿಸಿ, ಗೌರವ, ಮೆಚ್ಚುಗೆ ಮತ್ತು ಪೂಜ್ಯಭಾವ ಉದಯವಾಗುವಂತೆ ಮನಸ್ಸನ್ನು ಪರಿವರ್ತಿಸಬಲ್ಲ ಕೃಷಿಗಾರ ತಾವಾಗಿದ್ದೀರಿ.

ಈ ಪ್ರಾಂತ್ಯದ ರೈತಾಪಿ ಜನಗಳ ಆರ್ಥಿಕ, ಸಾಮಾಜಿಕ ಮತ್ತು ನೈತಿಕ ಸ್ಥಿತಿಗಳನ್ನು ಉತ್ತಮಪಡಿಸುವ ಧ್ಯೇಯೋದ್ದೇಶದಿಂದ ಈ ಅಣೆಕಟ್ಟಿನ ನೆರವು ಮುಂಬರುವ ದಿನಗಳಲ್ಲಿ ಹಿರಿದಾಗಿ ಬೆಳೆದು ಶಾಂತಿ, ಸಂವೃದ್ಧಿ, ಅಭ್ಯುದಯಗಳನ್ನು ತಂದುಕೊಡುವಂತೆ ಹರಸಿ ಆಶೀರ್ವದಿಸ ಬೇಕಾಗಿ ಅತಿ ವಿನಯದಿಂದ ಬೇಡುತ್ತೇವೆ.

ಸ್ವಾಮಿ, ಇನ್ನು ನಾವು ತಮ್ಮ ಅಮೂಲ್ಯವಾದ ಕಾಲವನ್ನು ವ್ಯಯಗೊಳಿಸದೆ ಈ ಪ್ರಾಂತ್ಯದ ಜನರಿಗೆ ಆಗಬೇಕಾದ ಕೆಲವು ಬೇಡಿಕೆ ಗಳನ್ನು ತಮ್ಮ ಅವಗಾಹನೆಗೆ ತರಲು ಅಪ್ಪಣೆ ಬೇಡುತ್ತೇವೆ.

(1) ಲೋಕಪಾವನಿ ನದಿಯಲ್ಲಿ ಪ್ರತಿವರ್ಷ ಅಗಾಧ ಪ್ರವಾಹ ಬರುವುದನ್ನು ತಡೆದು ಈ ಪ್ರಾಂತ್ಯದ ಜನರಿಗೆ ಹೆಚ್ಚು ಪ್ರಯೋಜನ ವಾಗುವಂತೆ ದೊಡ್ಡ ಪ್ರಮಾಣದ ಜಲಾಶಯ ನಿರ್ಮಾಣ (Reservoier) ಮಾಡಲು ಅಸ್ತಿಭಾರಕ್ಕೆ ಅಪ್ಪಣೆಮಾಡಬೇಕಾಗಿ ಬೇಡುತ್ತೇವೆ.

(2) ಆಗಾಗ ಅಭಾವಕ್ಕೆ ಸಿಕ್ಕುತ್ತಿರುವ ಬಸರಾಳು ಮತ್ತು ದುದ್ದ ಹೋಬಳಿ ಸರ್ವೆಮಾಡಿಸಿ ಸೌಲಭ್ಯ ದೊರೆಯುವ ಕಡೆ ನೀರಾವರಿ ಅನುಕೂಲತೆಯನ್ನು ಕಲ್ಪಿಸಿಕೊಡಬೇಕಾಗಿ ಪ್ರಾರ್ಥಿಸುತ್ತೇವೆ.

(3) ಈಗಾಗಲೆ ಅಂದಾಜು ತಯಾರಿಸಿರುವ (1) ಹೊನ್ನೇಮಡುಕೆರೆ, (2) ಕರಿಕಲ್ ಆಣೆ, (3) ಹೊಡಾಘಟ್ಟಕೆರೆ, (4) ಮುತ್ತೇಗೆರೆ ಹಟ್ಟಿಕೆರೆ, (5) ಕೊಡಗಹಳ್ಳಿ ಕೆರೆ ಮತ್ತು ಹಟ್ನಚಾಮೀ ಕೆರೆ ಇವುಗಳನ್ನು ಮಂಜೂರು ಮಾಡಿಸಿಕೊಡಬೇಕೆಂದು ಕೋರುತ್ತೇವೆ.

(4) ಈ ಪ್ರಾಂತ್ಯದ ರೈತರ ಮಕ್ಕಳು ಪ್ರೌಢಶಾಲೆ ವಿದ್ಯಾಭ್ಯಾಸಮಾಡಲು ಮಂಡ್ಯವು ಹದಿನೈದು ಮೈಲಿ ದೂರವಿರುವುದರಿಂದ ನಮ್ಮ ಬಡತನದ ಪರಿಚಯವುಳ್ಳ ತಾವು, ಸರ್ಕಾರವು ಯಾವ ಪ್ರತಿಫಲಾಪೇಕ್ಷೆಯನ್ನು ನಮ್ಮಿಂದ ನಿರೀಕ್ಷಿಸದೆ ಹೋಬಳಿ ಕೇಂದ್ರವಾದ ಬಸರಾಳು ಗ್ರಾಮಕ್ಕೆ ಒಂದು ಸರ್ಕಾರಿ ಪ್ರೌಢಶಾಲೆಯನ್ನು ಮಂಜೂರು ಮಾಡಿಸಿಕೊಡಬೇಕಾಗಿ ವಿನಯದಿಂದ ಬೇಡುತ್ತೇವೆ.

ಸ್ವಾಮಿ, ಈ ಅಣೆಕಟ್ಟಿನ ಅಸ್ತಿಭಾರ ಶಿಲಾಸ್ಥಾಪನೆಯನ್ನು ನೆರವೇರಿಸಿಕೊಟ್ಟ ತಮ್ಮನ್ನು ಮತ್ತೊಮ್ಮೆ ಅಭಿನಂದಿಸಿ ರೈತರ ಜೀವನಾಡಿ ಯಂತಿರುವ ಮರಾಮತ್ ಶಾಖಾ ಜವಾಬ್ದಾರಿಯನ್ನು ನಿರ್ವಹಿಸಲು ಸರ್ವಶಕ್ತನಾದ ಭಗವಂತನು ತಮಗೆ ಸಕಲ ಸನ್ಮಂಗಳವನ್ನು ಉಂಟುಮಾಡಿ ಕರ್ಮಜ್ಞಾನಗಳ ಮಧುರ ಸಂಯೋಗದಿಂದ ಕೂಡಿದ ಸರಳಬಾಳ್ವೆ ನಿಷ್ಕಾಮ ಕರ್ಮಮಯ ನಡತೆಯು ಜನತಾ ಸೇವೆಯ ದೀಕ್ಷೆಯಾಗಿ ಪ್ರಜ್ವಲಿಸುವಂತೆ ಕರುಣಿಸಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

— ಜೈಹಿಂದ್ —

ತಮ್ಮ ವಿಶ್ವಾಸಿಗಳು,

ತಾ॥ 27—4—1958

ಸ್ವಾಗತಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು.

ಲೋಕೋಪಯೋಗಿ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಮಂಡ್ಯ ತಾಲ್ಲೂಕು ಬಸರಾಳು ಮತ್ತು ದುದ್ದಾ ಹೋಬಳಿ, ನಾಗಮಂಗಲ ತಾಲ್ಲೂಕು ದೊಡ್ಡಗಂಗವಾಡಿ ಗ್ರಾಮಾಂತರ ಜನರು ಅರ್ಪಿಸಿದ ಬಿನ್ನವತ್ತಳೆ

# ಕಾಂಗ್ರೆಸ್ ಪ್ರಚಾರ.

ಮೈಸೂರು ಸಂಸ್ಥಾನದ ಕಾಂಗ್ರೆಸ್‌ಬೋರ್ಡ್ ಪರವಾಗಿ ಶ್ರೀಮಾನ್ ಹೆಚ್. ಕೆ. ವೀರಣ್ಣಗೌಡರೂ, ಶ್ರೀಮತಿ ತಾಯಮ್ಮ ವೀರಣ್ಣಗೌಡರೂ, ಶ್ರೀಮಾನ್ ಸೂರ್ಯ ನಾರಾಯಣ ಪಂಡಿತರೂ ಸಹ ಕಾಂಗ್ರೆಸ್ ಪ್ರಚಾರ ಕಾರ್ಯದ ಸಲುವಾಗಿ ತೀರ್ಥಹಳ್ಳಿ ತಾಲ್ಲೋಕಿನಲ್ಲಿ ಈ ಕೆಳಗಿನ ದಿನಗಳಲ್ಲಿ ಸಂಚರಿಸುವರು. ಮಹಾಜನರು ಇವರುಗಳಿಗೆ ಸ್ವಾಗತಿಸಿ ಪ್ರೋತ್ಸಾಹಿಸಬೇಕಾಗಿ ವಿನಂತಿ.

## ಕಾರ್ಯಕ್ರಮದ ವಿವರ

| | | |
|---|---|---|
| ತಾರೀಕು 23—11—1937ನೇ ಮಂಗಳವಾರ | ಬೆಳಿಗ್ಗೆ 7ಗಂಟೆಗೆ | ಶಿವಮೊಗ್ಗಾದಿಂದ ಹೊರಡುವುದು. |
| ,, | ,, 8—30ಗೆ | ಮಂಡಗದ್ದೆ. ಸಭೆ, ಭಾಷಣ. |
| ,, | ,, 10—30ಗೆ | ನಾಳೂರು. ಸಭೆ, ಭಾಷಣ. |
| ,, | ಮಧ್ಯಾಹ್ನ 12ಗಂಟೆಗೆ | ಆಗುಂಬೆ. ಊಟ, ವಿಶ್ರಾಂತಿ. |
| ,, | ,, 2ಗಂಟೆಗೆ | ಸಭೆ, ಭಾಷಣ. |
| ,, | ,, 3—30ಗೆ | ಮೇಗರವಳ್ಳಿ. ಸಭೆ, ಭಾಷಣ. |
| ,, | ಸಾಯಂಕಾಲ 5—30ಗೆ | ತೀರ್ಥಹಳ್ಳಿ, ಸಭೆ, ಭಾಷಣ. |
| ತಾರೀಕು 24—11—1937ನೇ ಬುಧವಾರ | ಬೆಳಿಗ್ಗೆ 7ಗಂಟೆಗೆ | ತೀರ್ಥಹಳ್ಳಿಇಂದ ಪ್ರಯಾಣ. |
| ,, | ,, 8 ,, | ಕೋಣಂದೂರು ಸಭೆ, ಭಾಷಣ. |
| ,, | ,, 9—30ಗೆ | ಹುಂಚದಕಟ್ಟೆ. ಸಭೆ, ಭಾಷಣ. |

ವಿ. ಸೂ:- ತೀರ್ಥಹಳ್ಳಿಯಲ್ಲಿ "ಶ್ರೀ ರಾಮ ಮಂದಿರ"ದಲ್ಲಿ ಸಭೆ ಸೇರುವುದು. ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ ಏರ್ಪಡಿಸಿದೆ.

ತಾ. 21-11-1937,
ತೀರ್ಥಹಳ್ಳಿ.

ಟಿ. ಹಾಲಪ್ಪ,
ಕಾರ್ಯದರ್ಶಿ,
ತೀರ್ಥಹಳ್ಳಿ ತಾ॥ ಕಾಂಗ್ರೆಸ್ ಕಮಿಟಿ.

ಜಯಲಕ್ಷ್ಮೀ ಮುದ್ರಾಮಂದಿರ, ತೀರ್ಥಹಳ್ಳಿ.

ಕಾಂಗ್ರೆಸ್ ಪರ ಹೆಚ್.ಕೆ. ವೀರಣ್ಣಗೌಡರು ಕೈಗೊಂಡ ಪ್ರಚಾರ ಸಭೆ, ಶಿವಮೊಗ್ಗ – ಕರಪತ್ರ

## ಬಹಿರಂಗ ಸಭೆ.

28—10—37 ನೇ ಗುರುವಾರ ಸಾಯಂಕಾಲ 6 ಘಂಟೆಗೆ

ಟವರ್‌ಹಾಲ್ ಮೈದಾನದಲ್ಲಿ ಬಹಿರಂಗ ಸಭೆ ನಡೆಯುವುದು.

ಮೈಸೂರು ಕಾಂಗ್ರೆಸ್ ಬೋರ್ಡಿನ ಪ್ರಚಾರಕರಾದ ಶ್ರೀಮಾನ್ ಎಚ್. ಕೆ. ವೀರಣ್ಣಗೌಡರೂ, ಶ್ರೀಮಾನ್ ಎಸ್. ಎಗ್. ಪಂಡಿತರೂ ಭಾಷಣ ಮಾಡುವರು. ಮಹಾಜನರು ಆ ವೇಳೆಗೆ ತಮ್ಮ ಮಿತ್ರರುಗಳೊಡನೆ ದಯಮಾಡಿಸಬೇಕಾಗಿ ಪ್ರಾರ್ಥನೆ.

ಚನ್ನಪಟ್ಣ.
28-10-37

ವಿ. ವೆಂಕಟಪ್ಪ.

ಶ್ರೀರಾಮಪ್ರೆಸ್ ಚನ್ನಪಟ್ಣ

ಕಾಂಗ್ರೆಸ್ ಪರ ಹೆಚ್.ಕೆ. ವೀರಣ್ಣಗೌಡರು ಕೈಗೊಂಡ ಪ್ರಚಾರ ಸಭೆ, ಚನ್ನಪಟ್ಟಣ – ಕರಪತ್ರ

## ಕಬ್ಬು ಬೆಳೆಯುವ ರೈತರ ಸಭೆ.

ಮದ್ದೂರು ತಾಲ್ಲೋಕು ಕಬ್ಬು ಬೆಳೆಯುವ ರೈತರ ಸಭೆಯನ್ನು 22—8—36 ನೇ ತಾ॥ ಶನಿವಾರ ಮಧ್ಯಾಹ್ನ 1 ಘಂಟೆಗೆ ಮದ್ದೂರಲ್ಲಿ ಮ॥ ರಾ॥ ಚಿಕ್ಕಮೂಡಸೆಟ್ಟರ ತೋಪಿನಲ್ಲಿ ಕಬ್ಬು ಬೆಳೆಯುವ ರೈತರ ಸಂಘದ ಪ್ರೆಸಿಡೆಂಟರಾದ ಶ್ರೀ॥ ಹೆಚ್. ಕೆ. ವೀರಣ್ಣಗೌಡರ ಅಧ್ಯಕ್ಷತೆಯಲ್ಲಿ ನಡೆಸಲು ಏರ್ಪಡಿಸಿರುತ್ತೆ. ಕಬ್ಬು ಬೆಳೆಯುವ ರೈತರೆಲ್ಲರೂ ಸಭೆಗೆ ದಯಮಾಡಿಸಬೇಕಾಗಿ ಕೋರಿದೆ.

ಎಸ್. ಪಿ. ಲಿಂಗೇಗೌಡ ನಗರಕೆರೆ.
ಪಟೇಲ್ ತಿಮ್ಮೇಗೌಡ, ಮದಳಿಗ.
ಕೆ. ಪಯ್ಯ, ಗುರುದೇವರಹಳ್ಳಿ.

ಜೋಗೀಗೌಡ ಕೊಪ್ಪ.
ಕೆ. ಪುಟ್ಟೆಶಾಮಯ್ಯ,
ಕೋಣಸಾಲೆ.

ಶ್ರೀ ರಾಧಾ ಪವರ್ ಪ್ರೆಸ್, ಮೈಸೂರು.

ರೈತ ಸಂಘಟನೆ ಅಧ್ಯಕ್ಷರಾದ ಹೆಚ್.ಕೆ. ವೀರಣ್ಣಗೌಡರು ನಡೆಸಿದ ಕಬ್ಬು ಬೆಳೆ ರೈತರ ಸಭೆಯ ಕರಪತ್ರ, ಮದ್ದೂರು

## ಆಧಾರಗ್ರಂಥಗಳು:


ಅರ್ಜುನಪುರಿ ಅಪ್ಪಾಜಿಗೌಡ: ಸಂಘಟನಾ ಚತುರ ಹೆಚ್.ಕೆ.ವೀರಣ್ಣಗೌಡ, ಬಂಧುಮಿತ್ರ ಪ್ರಕಾಶನ, ಮಂಡ್ಯ. ೨೦೦೫

ಆರ್.ಎಸ್.ಆರಾಧ್ಯ : ಮೈಸೂರು ಕಾಂಗ್ರೆಸ್ ವಿಶೇಷಾಧಿವೇಶನ ತುಮಕೂರು (ಕಾಂಗ್ರೆಸ್), ೧೯೪೬

ಕರ್ನಾಟಕ ಪತ್ರಿಕಾ ಇತಿಹಾಸ ಸಂ-೧ : ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು, ೧೯೯೯.

ಕೃಷ್ಣಶರ್ಮ ಸಿದ್ದವನಹಳ್ಳಿ (ಸಂ) : ಗಾಂಧೀ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೭೦.

ಕೃಷ್ಣಯ್ಯ. ಎಂ.ಹೆಚ್: ಚಿರಂತರ ಚೈತನ್ಯ ಶ್ರೀ ಹೆಚ್.ಕೆ.ವೀರಣ್ಣಗೌಡ. ಹೆಚ್.ಕೆ.ವೀರಣ್ಣಗೌಡ ಪ್ರತಿಷ್ಠಾನ, ಬೆಂಗಳೂರು, ೨೦೦೦.

ಕೋ.ವಸಂತಲಕ್ಷ್ಮಿ : ಕನ್ನಡದ ಗರಡಿಯಾಳು ದ.ಕೃ. ಭಾರಧ್ವಾಜ, ಲಿಪಿ ಪ್ರಕಾಶನ, ಬೆಂಗಳೂರು, ೧೯೯೬.

ಗೋವಿಂದಳ್ಳಿ ದೇವೇಗೌಡ : ವಿಧಾನಸೌಧದ ಮಹಾನ ಶಿಲ್ಪಿ ಕೆಂಗಲ್ ಹನುಮಂತಯ್ಯ, ಕನ್ನಡ ಕಣ್ಮಣಿ ಡಾ.ರಾಜ್ ಸಾಂಸ್ಕೃತಿಕ ಸಂಸ್ಥೆ, ಬೆಂಗಳೂರು, ೧೯೯೧.

ಚಂದ್ರಶೇಖರ್.ಎಸ್ : ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು (೧೮೮೧-೧೯೪೦), ಅಂಕಣ ಪ್ರಕಾಶನ, ಬೆಂಗಳೂರು, ೧೯೮೩.

ಚಂದ್ರಶೇಖರ್.ಎಸ್: ಏಕೀಕರಣ ಒಂದು ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫.

ಜವರಪ್ಪಗೌಡ ಪಿ.ಎನ್ : ಶಿವಪುರ ಧ್ವಜ ಸತ್ಯಾಗ್ರಹ, ಸಾಹಿತ್ಯ ಮಂದಿರ, ಬೆಂಗಳೂರು, ೧೯೯೬.

ಜಗದೀಶ್ ಕೊಪ್ಪ : ಕೆ.ವಿ.ಶಂಕರಗೌಡ(ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆ), ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸಭೆ, ಬೆಂಗಳೂರು, ೨೦೦೫.

ಜೀ.ಶಂ. ಪರಮಶಿವಯ್ಯ, ಕೆ.ಭೈರವಮೂರ್ತಿ(ಸಂ) ಇಕ್ಷುಗಂಗಾ, ಮಂಡ್ಯಜಿಲ್ಲಾ ಸಾಹಿತ್ಯ ಸಮ್ಮೇಳನದ ನೆನಪಿನ ಹೊತ್ತಗೆ, ೧೯೭೦.

ಜೋಯಿಸ್.ಎಂ.ಎನ್ : ಸ್ವಾತಂತ್ರ್ಯ ಸೇನಾನಿ ಎಂ.ಎನ್.ಜೋಯಿಸರ ಆತ್ಮಕಥನ, ಸಾಹಿತ್ಯ ಮಂದಿರ, ಬೆಂಗಳೂರು, ೨೦೦೦.

ಟಿ.ಡಿ.ದೇವೇಗೌಡ : ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ, ಚೇತನ್ ಬುಕ್ ಹೌಸ್, ಮೈಸೂರು, ೧೯೯೯.

ಡಿ.ಲಿಂಗಯ್ಯ : ಸತ್ಯಾಗ್ರಹಿಗಳ ನೆನಪುಗಳು, ದಿನಕರ ಪ್ರಕಾಶನ, ಬೆಂಗಳೂರು, ೧೯೯೮.

ಡಿ.ಲಿಂಗಯ್ಯ : ಶಿವಪುರ ಧ್ವಜ ಸತ್ಯಾಗ್ರಹ, ವೈಶಾಖ ಪ್ರಕಾಶನ, ಬೆಂಗಳೂರು, ೧೯೯೫.

ಡಿ.ಲಿಂಗಯ್ಯ : ಹೆಚ್.ಕೆ.ವೀರಣ್ಣಗೌಡ (ಸಂಕ್ಷಿಪ್ತ ಜೀವನ ಚರಿತ್ರೆ), ಹೆಚ್.ಕೆ.ವೀರಣ್ಣಗೌಡ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೯.

ತಂಬಂಡ ವಿಜಯ್ ಪೂಣಚ್ಚ: ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪(ಚರಿತ್ರೆ), ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

ತಿ.ತಾ.ಶರ್ಮ : ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಮೈಸೂರು ಸಂಸ್ಥಾನದ ಸರ್ಕಾರ, ಬೆಂಗಳೂರು, ೧೯೫೭.

ದೇ.ಜ.ಗೌ (ಸಂ) : ಕರ್ನಾಟಕದ ರೂವಾರಿ, ಕಲಾ ಕಂಠೀರವ ಟಿ.ಎಸ್. ಕರೀಬಸವಚ್ಚು ಟ್ರಸ್ಟ್, ಬೆಂಗಳೂರು, ೧೯೮೫.

ದಿವಾಕರ ರಂಗನಾಥ: ಕರ್ನಾಟಕದ ಏಕೀಕರಣದ ಕಥೆ, ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ, ೧೯೫೬.

ನಾರಾಯಣರಾವ್.ಪಿ.ಎಸ್: ಸ್ವಾತಂತ್ರ್ಯ ಚಳವಳಿಯಲ್ಲಿ ಶ್ರೀಸಾಮಾನ್ಯ, ಬೆಂಗಳೂರು, ೧೯೭೮/

ಪ್ರೊ.ಬಿ.ಷೇಕ್ ಅಲಿ, ಪ್ರೊ. ಎಸ್.ಚಂದ್ರಶೇಖರ್: ಕರ್ನಾಟಕದ ಚರಿತ್ರೆ ೧೯೦೦-೧೯೫೬, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಿ.ವಿ.ವೈಕುಂಠರಾಜು : ಸಂಪಾದಕರ ಡೈರಿ ಸಮಗ್ರ ಸಂ-೨. ಸನತ್ ಪ್ರಕಾಶನ, ಬೆಂಗಳೂರು.

ಬಿ.ಆರ್.ಪ್ರಾಣೇಶ್ ರಾವ್: ಭಾರತದ ಸ್ವಾತಂತ್ರ್ಯ ಹೋರಾಟದ ಮೇರು ವ್ಯಕ್ತಿಗಳು, ನವಭಾರತೀ ಪ್ರಕಾಶನ, ಮೈಸೂರು, ೧೯೯೯.

ಮನು ಬಳಿಗಾರ್: ಎಸ್.ಆರ್.ಕಂಠಿ ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆ, ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸಭೆ, ೨೦೦೫

ಮುದೇನೂರು ಸಂಗಣ್ಣ : ಕೊಂಡಜ್ಜಿ ಬಸಪ್ಪ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೨೦೦೦.

ಮಹಮದ್ ಜೆ. ಇಮಾಮ್ : ಮೈಸೂರು ಆಗ ಮತ್ತು ಈಗ, ಬೂಸ್‌ನೂರ್ ಪ್ರಿಂಟರ್ಸ್, ದಾವಣಗೆರೆ, ೧೯೬೬.

ಮಾಸ್ತಿ ವೆಂಕಟೇಶ್ ಅಯ್ಯಂಗಾರ್ : ಜೀವನ್(ಲೇಖನ ಸಂಪುಟ), ಸತ್ಯಾನಂದ ಪ್ರೆಸ್, ಬೆಂಗಳೂರು, ೧೯೬೭.

ಮಾಸ್ತಿ ವೆಂಕಟೇಶ್ ಅಯ್ಯಂಗಾರ್ : ಪ್ರಸಂಗ (ಲೇಖನ ಸಂಪುಟ), ಜೀವನ ಕಾರ್ಯಾಲಯ, ಬೆಂಗಳೂರು, ೧೯೬೩.

ಮೈಸೂರು ರಾಜ್ಯ ಅಸೆಂಬ್ಲಿ ವರದಿ : ಆಂಧ್ರ ರಾಜ್ಯ ಮಸೂದೆ, ೨೨ ಜುಲೈ ೧೯೫೩. ರಾಜ್ಯ ಪುನರ್ವಿಂಗಡಣೆ ಮಸೂದೆ, ೨ ಏಪ್ರಿಲ್ ೧೯೫೬.

ರಾಮಯ್ಯ.ಡಿ.ಆರ್,(ಸಂ) ; ವಜ್ರಸಂಪುಟ, ಒಕ್ಕಲಿಗರ ಸಂಘದ ವಜ್ರಮಹೋತ್ಸವ ಸಂಸ್ಮರಣ ಸಂಚಿಕೆ, ೧೯೮೨.

ರವೀಂದ್ರನಾಥ.ಆರ್.ವಿ : ಧೀಮಂತ ರಾಜತಂತ್ರಜ್ಞ ಕೆ.ಸಿ.ರೆಡ್ಡಿ, ರವಿ ಪ್ರಕಾಶನ, ಕೋಲಾರ, ೨೦೦೨.

ರಾಮಣ್ಣ.ಪಿ : ಕೆಂಗಲ್ ಹನುಮಂತಯ್ಯ, (ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆ), ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸಭೆ, ಬೆಂಗಳೂರು, ೧೯೯೮.

ವೀರತಪ್ಪ.ಕೆ : ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ, ವಿಜಯರವಿ ಪ್ರಕಾಶನ, ಬೆಂಗಳೂರು, ೧೯೭೭.

ವೆಂಕಟಪ್ಪಗೌಡ ಕೋಣಂದೂರು: ಜೀವಚಿತಜ್ವಾಲೆ, ಶಾಚಿತವೇರಿ ಗೋಪಾಲಗ್ಗಡ ಸ್ಮಾರಕ ಗ್ರಂಥ, ಬೆಂಗಳೂರು, ೧೯೮೧.
ಸಿ.ಸೇತೂಬಾಯಿ(ಅನು), : ಪ್ಲೇಟೋವಿನ ಆದರ್ಶ ಗ್ಣರಾಜ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೮.
ಸು.ತ.ರಾಮೇಗೌಡ: ಗಂಗನುಡಿ,(ಚನ್ನಪಟ್ಟಣ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ಚನ್ನಪಟ್ಟಣ, ೨೦೦೩.
ಸೂರ್ಯನಾಥ ಯು. ಕಾಮತ್: ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಕರ್ನಾಟಕ ಗ್ಯಾಸೆಟೀಯರ್ ಸಂಪುಟ-೨, ಬೆಂಗಳೂರು, ೧೯೮೩.

ಶಂಕರನಾರಾಯಣರಾವ್ ಎನ್.ಪಿ ; ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೯೧.
ಶಿವರಾಮೇಗೌಡ ನಾಗವಾರ : ಬೊಂಬೆಬೀಡು, ಬೆಂಗಳೂರು ಗ್ರಾಮಾಂತರ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೧.
ಶ್ರೀನಿವಾಸ ಕುಲಕರ್ಣಿ: ಕಿಲಕಿಲ ನಗು ಎರಡು ಹನಿ ಕಣ್ಣೀರು(ಕೈಲಾಸಂ ಅವರ ಬದುಕು ಬರಹ ಕುರಿತ ಒಂದು ಅಧ್ಯಯನ), ಕನ್ನಡ ಕಲಾಸಂಘ, ಹೊಸಪೇಟೆ, ೨೦೦೩.
ಶ್ರೀಕಂಠಯ್ಯ. ಎಲ್: ಕಮ್ಯೂನಿಸಂ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೫೭.
ಶ್ರೀಕರ ಎಲ್.ಭಂಡಾರ್ಕರ್(ಅನು), (ಮೂಲ:ರೋಲೆಚಿಡ್ ಇ ವಾಲ್‌ಸ್ಲೀ) : ಆಧುನಿಕ ಭಾರತದಲ್ಲಿ ಪತ್ರಿಕೋದ್ಯಮ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೫.
ಹೆಚ್.ಎಸ್.ಸ್ಮಜಾತಾ ; ಎಂ.ಎಸ್.ಪುಟ್ಟಣ್ಣ: ಒಂದು ಅಧ್ಯಯನ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೧.
ಹಾ.ಮಾ.ನಾಯಕ : ಡಿ.ವಿ.ಜಿ. ಕೃತಿಶ್ರೇಣಿ ಸಂ-೧-೭, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೫.
ಹ.ಕ.ರಾಜೇಗೌಡ : ಸಿಂಗಾರ(ಕೆ.ಸಿಂಗಾರಿಗೌಡ ಗೌರವಗ್ರಂಥ), ಶ್ರೀ ಕೆ.ಸಿಂಗಾರಿಗೌಡ ಅಭಿನಂದನ ಸಮಿತಿ, ಮಂಡ್ಯ, ೧೯೮೮.
ಹ.ಕ.ರಾಜೇಗೌಡ: ಚಿತ್ರಗುಪ್ತ ಸ್ಮರಣೆ, ಹೆಚ್.ಕೆ.ವೀರಣ್ಣಗೌಡ ಸ್ಮಾರಕ ಪ್ರಕಾಶನ, ಮದ್ದೂರು, ೧೯೯೪.
ಹಾಲಪ್ಪ.ಜಿ.ಎಸ್ : ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಮೈಸೂರು ಸರ್ಕಾರ. ಬೆಂಗಳೂರು,೧೯೬೪.
ಹೆಚ್.ಎಸ್.ಪಾರ್ವತಿ : ಜಿ.ನಾರಾಯಣ ವಿಚಾರ, ಜಿ.ನಾರಾಯಣ ಅಭಿನಂದನ ಸಮಿತಿ, ಬೆಂಗಳೂರು, ೧೯೮೪.
ಹೆಚ್.ಎಸ್.ಗೋಪಾಲರಾವ್: ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು, ೧೯೯೬.
ಹೆಚ್.ಎಸ್.ದೊರೆಸ್ವಾಮಿ : ಸ್ವಾತಂತ್ರ್ಯ ಸಂಗ್ರಾಮ ಕರ್ನಾಟಕ, ಸಾಹಿತ್ಯ ಮಂದಿರ, ಬೆಂಗಳೂರು, ೧೯೯೫.

ಹೆಚ್.ಎಸ್.ದೊರೆಸ್ವಾಮಿ: ಹೋರಾಟದ ದಿಟ್ಟ ಹೆಜ್ಜೆಗಳು, ಯೋಧರ ಮೇಳ ಪಬ್ಲಿಕೇಶನ್ಸ್, ಬೆಂಗಳೂರು, ೧೯೭೨.

ಹೆಚ್.ಕೆ.ವೀರಣ್ಣಗೌಡ : ಶಿವಪುರ ರಾಷ್ಟ್ರಕೂಟ ನೆನಪು, ಹೆಚ್.ಕೆ.ವೀರಣ್ಣಗೌಡ ಸ್ಮಾರಕ ಪ್ರಕಾಶನ, ಮದ್ದೂರು, ೧೯೯೫.

ಹೆಚ್.ಕೆ.ವೀರಣ್ಣಗೌಡ: ಬದುಕು-ಮೆಲುಕು, ಪ್ರಬುದ್ಧ ಪ್ರಕಾಶನ, ಮೈಸೂರು-೨, ೧೯೭೪.

## ಪತ್ರಿಕೆಗಳು:

ಪ್ರಜಾವಾಣಿ

ಬಹುಜನ ಕನ್ನಡಿಗರು

ಒಕ್ಕಲಿಗರ ಪತ್ರಿಕೆ

ವಾರ್ತಾ ಪತ್ರಿಕೆ

ಮೈಸೂರು ಸ್ಟಾರ್

ಚಿತ್ರಗುಪ್ತ ಪತ್ರಿಕೆ

ಸಂಯುಕ್ತ ಕರ್ನಾಟಕ

ವಕ್ತೃಗಳ ಪಟ್ಟಿ :

| ಹೆಸರು | ಪರಿಚಯ | ಸಂದರ್ಶನದ ದಿನಾಂಕ |
|---|---|---|
| ಡಾ.ಡಿ.ಲಿಂಗಯ್ಯ | ಲೇಖಕರು ಮತ್ತು ವಿ.ವಿ.ಪುರಂ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಬೆಂಗಳೂರು | ೨-೬-೨೦೦೩<br>೨೧-೮-೨೦೦೬ |
| ಕೆ.ಟಿ.ಚಂದು | ಹೆಚ್.ಕೆ.ವೀರಣ್ಣಗೌಡ ಕಾಲೇಜಿನ ವ್ಯವಸ್ಥಾಪಕ ನಿರ್ದೇಶಕರು, ಮತ್ತು ಹೆಚ್.ಕೆ.ವೀರಣ್ಣಗೌಡರ ಸಂಬಂಧಿ, ಮದ್ದೂರು | ೩-೬-೨೦೦೩<br>೧೮-೧-೨೦೦೫ |
| ಜಿ.ನಾರಾಯಣ | ಕರ್ನಾಟಕ ಜಾನಪದ ಪರಿಷತ್ ಅಧ್ಯಕ್ಷರು, ಬೆಂಗಳೂರು | ೧೯-೬-೨೦೦೩ |
| ಹ.ಕ. ರಾಜೇಗೌಡ | ಸಂಶೋಧಕರು, ಹೆಚ್.ಕೆ.ವೀರಣ್ಣಗೌಡರ ಸ್ನೇಹಿತರು | ೧೨-೧-೨೦೦೫ |


| ಹೆಸರು | ಪರಿಚಯ | ಸಂದರ್ಶನದ ದಿನಾಂಕ |
|---|---|---|
| ಡಾ.ಡಿ.ಲಿಂಗಯ್ಯ | ಲೇಖಕರು ಮತ್ತು ವಿ.ವಿ.ಪುರಂ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಬೆಂಗಳೂರು | ೨-೬-೨೦೦೩<br>೨೧-೮-೨೦೦೬ |
| ಕೆ.ಟಿ.ಚಂದು | ಹೆಚ್.ಕೆ.ವೀರಣ್ಣಗೌಡ ಕಾಲೇಜಿನ ವ್ಯವಸ್ಥಾಪಕ ನಿರ್ದೇಶಕರು, ಮತ್ತು ಹೆಚ್.ಕೆ.ವೀರಣ್ಣಗೌಡರ ಸಂಬಂಧಿ, ಮದ್ದೂರು | ೩-೬-೨೦೦೩<br>೧೮-೧-೨೦೦೫ |
| ಜಿ.ನಾರಾಯಣ | ಕರ್ನಾಟಕ ಜಾನಪದ ಪರಿಷತ್ ಅಧ್ಯಕ್ಷರು, ಬೆಂಗಳೂರು | ೧೯-೬-೨೦೦೩ |
| ಹ.ಕ. ರಾಜೇಗೌಡ | ಸಂಶೋಧಕರು, ಹೆಚ್.ಕೆ.ವೀರಣ್ಣಗೌಡರ ಸ್ನೇಹಿತರು | ೧೨-೧-೨೦೦೫ |


| ಹೆಸರು | ಪರಿಚಯ | ಸಂದರ್ಶನದ ದಿನಾಂಕ |
|---|---|---|
| ಡಾ. ಹೆಚ್.ಕೆ.ಮರಿಯಪ್ಪ | ಹೆಚ್.ಕೆ.ವೀರಣ್ಣಗೌಡರ ಕಿರಿಯ ಸಹೋದರ, ಅನಿವಾಸಿ ಭಾರತಿಯರು | ೧೮-೧೦-೨೦೦೬ |
| ವೀರಮಲ್ಲೇಶ್ | ಹೆಚ್.ಕೆ.ವೀರಣ್ಣಗೌಡರ ಸಂಬಂಧಿ, ಬೆಂಗಳೂರು | ೧೫-೯-೨೦೦೬ |
| ಸು.ತ.ರಾಮೇಗೌಡ | ಪತ್ರಕರ್ತರು, ಚನ್ನಪಟ್ಟಣ | ೧೬-೯-೨೦೦೬ |
| ಶ್ರೀನಿವಾಸಯ್ಯ | ಶಿವಪುರ ಧ್ವಜ ಸತ್ಯಾಗ್ರಹ ಸೌಧದ ಕಾರ್ಯದರ್ಶಿ, ಮದ್ದೂರು | ೬-೮-೨೦೦೫ |

